# ರಾಜೇಂದ್ರನಾಮೆ.

ಅಂದರೆ

## ಹಾಲೇರಿ ವೀರರಾಜೇಂದ್ರ ಒಡೆಯರು ಬರಸಿದ

## ಕೊಡಗಿನ ಚರಿತ್ರವು.

ಮದ್ರಾಸಿನ ಆದಿಪತ್ಯದ ಅಪ್ಪಣೆಯಿಂದ ಪ್ರಕಟಿಸಿದ್ದು.

---

---



ಮಂಗಳೂರು:

ಜರ್ಮನ್ ಮಿಶನ್ ಪ್ರೆಸ್.

೧೮೫೭.




16. ೬೩. ೭

ನಮಸ್, ತುಂಗಶಿರಶ್ಚುಂಬಿಚಂದ್ರಚಾಮರಚಾರವೇ, ತ್ರೈಲೋಕ್ಯನಗರಾರಂಭಮೂಲಸ್ತಂಭಾಯಶಂಭವೇ! ಸ್ವಸ್ತಿ. ಶ್ರೀವಿಜಯಾಭ್ಯುದಯ ಕಲಿಯುಗ ಸಂದ ವರುಷ ೪೯೧೯ನೇ, ಶಾಲಿವಾಹನ ಶಕ ಸಂದ ೧೭೪೦ನೇ, ವರ್ತಮಾನಕ್ಕೆ ಸಲುವ ನಳ ಸಂವತ್ಸರದಲ್ಲು ಶ್ರೀಮದ್ರಾಜಾಧಿರಾಜ, ರಾಜಪರಮೇಶ್ವರ, ಪ್ರೌಢಪ್ರತಾಪ, ಅಪ್ರತಿಮವೀರ, ಸ್ವಸ್ತಿ, ಕೊಡಗಿನ ಸಂಸ್ಥಾನದ ಶ್ರೀರತ್ನಸಿಂಹಾಸನಾರೂಢರಾಗಿ, ಪೃಥ್ವೀಸಾಮ್ರಾಜ್ಯಂಗೆಯ್ಯುತಿಪ್ಪ, ಭಾರದ್ವಾಜಗೋತ್ರರಾದ, ಆಶ್ವಲಾಯನಸೂತ್ರರಾದ, ಋಕ್ಶಾಖಾನುಯಾಯಿಯು, ವೀರಶೈವಮತಸ್ಥರಾದ, ಅಪ್ಪಾಜಿರಾಜೇಂದ್ರರ ಪೌತ್ರರಾದ, ಲಿಂಗರಾಜೇಂದ್ರರ ವಡೆಯರವರ ಪುತ್ರರಾದ, ವೀರರಾಜೇಂದ್ರರ ವಡೆಯರವರು ಕೊಡಗಿನ ಸಂಸ್ಥಾನದ ರಾಜ್ಯಾಧಿಪತ್ಯವನ್ನು ಮಾಡಿ ಕೊಂಡು ಇರುವಾಗ್ಯೆ, ತಮ್ಮ ಕೊಡಗಿನ ಸಂಸ್ಥಾನದ ದೊರೆಗಳ ವಂಶಾವಳಿ ಪಾರಂಪರ್ಯವಾಗಿ [1]ಪ್ರಾರಂಭ್ಯದಿಂದ ನಡದು ಬಂದಂಥಾ ವೃತ್ತಾಂತಗಳನ್ನು ಬರದ ಶಾಸನಗಳ ಜೀರ್ಣೋದ್ಧಾರ ಮಾಡಿ ಬರೆಸಿ[2], ಇತ್ತಲಾಗಿ ನಡದಂಥಾ ಅಭಿಪ್ರಾಯಗಳನ್ನು ಅದಕ್ಕೆ[3] ಬರೆಸ ಬೇಕೆಂಬದಾಗಿ, ಪುರಾಣಸಾಧನಗಳನ್ನು ತೆಗಿಸಿ[4] ನೋಡಿಸಲಲ್ಲಿ, ಕಲಿ ಸಂದ ೪೭೩೪ನೇ ಆಂಗೀರಸ ಸಂವತ್ಸರದ ಆಚೆಗೆ ನಡದ ವೃತ್ತಾಂತ ಬರದ ಸಾಧನಗಳು ನವಾಬ ಹೈದರಲ್ಲೀ ಖಾನ ಬಹಾದ್ದರವರು ಅವರ ಮಗ ಟೀಪೂ ಸುಲ್ತಾನರ ದಿವಸದಲ್ಲಲಿ ಸಹಾ ಅಶಾಂತರವಾಗಿ ಹೋಯಿದ್ದು ಹೋಗಲಾಗಿ, ಆ ಆಂಗೀರಸ ಸಂವತ್ಸರದ ಇತ್ತಲಾಗಿ ತಮ್ಮ ತಂದೆಯವರಾದ ಲಿಂಗರಾಜೇಂದ್ರರ ವಡೆಯರವರ ದಿವಸ ಪರಿಯಂತರ[5] ಆದ ವಿದ್ಯಮಾನ ಬರದ ಸಾಧನಗಳು ಉಳಿದು ಇದ್ದದರಿಂದ, ಅದರಲ್ಲಿ ಬರದು ಇದ್ದ ವಿವರ, ತಮ್ಮ ಕಾಲದಲ್ಲಿ ನಡದಂಥಾ ರಾಜಕಾರ್ಯಕಾರ್ಯಂಗಳ ಸಹಾ, ಸಮಸ್ತರು ತಿಳಿಯುವ ಬಗ್ಗೆ, ನಳ ಸಂವತ್ಸರದ ಮಾಘ ಶು. ೧೫, ಭಾನುವಾರ, ಅಪ್ಪಣೆ ಕೊಟ್ಟು ಬರಸಿದ ಕ್ರಮವೆಂತೆಂದರೆ—

ಆಂಗೀರಸ ಸಂವತ್ಸರದಲ್ಲಿ ವೀರರಾಜ ವಡೆಯರ ಪೌತ್ರರಾದ, ಅಪ್ಪಾಜಿ ವಡೆಯರ ಪುತ್ರರಾದ, ಮುದ್ದರಾಜ ವಡೆಯರವರು, ಪೂರ್ವಾರಭ್ಯ ದೊರೆತನ ಮಾಡಿ ಬಂದಂಥಾ ಸಿಂಹಾಸನದ ಜಾಗ ಹಾಲೇರಿ ಅರಮನೆ ಆದ್ದರಿಂದ, ಅಲ್ಲಿ ಇದ್ದು ಕೊಂಡು, ರಾಜ್ಯಭಾರ ಮಾಡುತ್ತಾ ಇದ್ದರು. ಅನಂತರಕ್ಕೆ ಇವರ ವಂಶಭೂತರಲ್ಲಿ ಪ್ರಬಲರು ಮೊದಲಾರಭ್ಯದಿಂದಲೇ ಪಿರಿಯಾಪಟ್ಟಣದಲ್ಲಿ ಇದ್ದು, ಅಲ್ಲಿ ರಾಜ್ಯಭಾರ ಮಾಡಿ ಕೊಂಡು, ಯೇಕಚ್ಛತ್ರಾಧಿಪತ್ಯವಾಗಿ ನಡೆಯುತ್ತಾ ಇದ್ದರು.

---

1 correct ಪ್ರಾರಂಭ್ಯ or ಪ್ರಾರಂಭದಿಂದ. 2 ಬರಸಿ or ಬರೆಸಿ. 3 ಅದಕ್ಕೆ. 4 ತೆಗಿಸಿ or ತೆಗೆಸಿ. 5 ಪರ್ಯಂತರ.

ಈ ಕೊಡಗಿನ ಸಂಸ್ಥಾನದ ಸಿಂಹಾಸನಪತಿಗಳಾಗಿ ಇದ್ದ ಮುದ್ದರಾಜ ವಡೆಯರ ಪಟ್ಟದ ಸ್ತ್ರೀಯಾದ ದೇವಂಮಾಜಿಯವರ ಗರ್ಭದಲ್ಲಿ ರಾಜಶ್ರೇಷ್ಠರಾದ ಶ್ರೀಮಾಯಿ ದೊಡ್ಡವೀರಪ್ಪ ವಡೆಯರವರು ಕಲಿ ನಂದ ೪೭೫೮ನೇ ಹೇವಿಳಂಬಿ ನಾಮ ಸಂವತ್ಸರದಲ್ಲಿ ಜನಿಸಿದರು. ಅವರ ಬೆಂನ ಹಿಂದೆ ಅಪ್ಪಾಜಿರಾಜೇಂದ್ರರು, ಅವರ ಬೆಂನ ಹಿಂದೆ ನಂದರಾಜ ಅರಸುಗಳು ಸಹಾ ಜನಿಸಿದರು. ಅವರಲ್ಲಿ ಹಿರಿಯ ಕುಮಾರರಾದ ಶ್ರೀಮಾಯಿ ದೊಡ್ಡವೀರಪ್ಪ ವಡೆಯರವರಿಗೆ ಮುದ್ದಂಮಾಜಿಯವರೂ ದೇವಂಮಾಜಿಯವರೂ ಯೆಂಬ ಇಬ್ಬರು ರಾಣಿಯವರ ವಿವಾಹ ಮಾಡಿ, ಮುದ್ದರಾಜ ವಡೆಯರವರು ಮಡಿಕೇರಿ ಯೆಂಬ ಜಾಗ ಪಸಂದು ಮಾಡಿ, ಅಲ್ಲಿ ನೂತನವಾಗಿ ಕೋಟೆಯಂನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗಿಸಿ, ತಯಾರು ಮಾಡಿಸಿ, ಕಲಿ ನಂದ ೪೮೧೭ನೇ ದುರ್ಮುಖಿ ಸಂವತ್ಸರದಲ್ಲಿ ತಂಮ ಜ್ಯೇಷ್ಠ ಪುತ್ರರಾದ ದೊಡ್ಡವೀರಪ್ಪ ವಡೆಯರವರಿಗೆ ರಾಜಪಟ್ಟಾಭಿಷೇಕವಂನು ಮಾಡಿ, ರಾಜ್ಯಾಧಿಪತ್ಯವಂನು ಕೊಟ್ಟು, ಆ ಮೇಲೆ ಯೆರಡನೇ ಕುಮಾರರಾದ ಅಪ್ಪಾಜಿರಾಜೇಂದ್ರರಿಗೆ ರಾಜಂಮ್ಮಾಜಿ ಯೆಂಬವರ ವಿವಾಹವಂ ಮಾಡಿ, ಅವರಂನು ಮುದ್ದರಾಜ ವಡೆಯರು ತಂಮ ಬಳಿಯ ಹಾಲೇರಿ ಅರಮನೆಯಲ್ಲು ಇಟ್ಟು ಕೊಂಡರು. ಮೂರನೇ ಮಗನಾದ ನಂದರಾಜ ಅರಸುಗಳಿಗೆ ನಂಜಂಮ್ಮಾಜಿ ಯೆಂಬವರ ವಿವಾಹ ಮಾಡಿ, ಅವರಿಗೆ ಹೊರಮಲೆ ನಾಡಂನು ಜಹಾಗೀರಿ ಕೊಟ್ಟು, ಅಲ್ಲಿ ಇಟ್ಟರು. ಆ ಮೇಲೆ ಕಲಿ ನಂದ ೪೮೪೭ನೇ ಕ್ಷಯ ಸಂವತ್ಸರದಲ್ಲಿ ಮುದ್ದರಾಜ ವಡೆಯರವರು ಶಿವಾಧೀನವಾದರು. ದೊಡ್ಡವೀರಪ್ಪ ವಡೆಯರವರು ಅದೇ ಮೇರೆ ರಾಜ್ಯಭಾರ ಮಾಡಿ ಕೊಂಡು ಇರುತ್ತಾ ಇದ್ದರು. ಅವರಿಗೆ ಅಪ್ಪಾಜಿರಾಜರು ಯೆಂಬ ಕುಮಾರರು ಜನಿಸಿದರಿಂದ, ಅವರಿಗೆ ವಿವಾಹ ಮಾಡಿದರು. ಅದೇ ರಾಣಿಯವರ ಗರ್ಭದಲ್ಲಿ ಚಿಕ್ಕವೀರಪ್ಪ ವಡೆಯರು ಯೆಂಬ ಕುಮಾರರು ಜನಿಸಿದರು. ಹಾಲೇರಿ ಅರಮನೆಯಲ್ಲು ಇದ್ದ ಅಪ್ಪಾಜಿರಾಜೇಂದ್ರರಿಗೆ ಐದು ಮಂದಿ ಕುಮಾರರು ಜನಿಸಿದರು. ಅವರಲ್ಲಿ ಹಿರಿಯ ಕುಮಾರರಾದ ಮುದ್ದಯರಾಜರಿಗೆ ನಂಜಂಮ್ಮಾಜಿ ಯೆಂಬವರ ವಿವಾಹವಂ ಮಾಡಿದರು. ಯೆರಡನೇ ಕುಮಾರರಾದ ಲಿಂಗರಾಜೇಂದ್ರ ವಡೆಯರವರಿಗೆ ದೇವಾಂಬಿಕೆ ಅಂಮನವರ ವಿವಾಹ ಮಾಡಿದರು. ಉಳಿಕೆ ಮೂರು ಮಂದಿ ಕುಮಾರರು ಕೆಲವು ದಿವಸದ ವಳಗಾಗಿ ಶಿವಾಧೀನವಾಗಿ ಹೋದರು. ಆ ಮುದ್ದಯರಾಜರಿಗೆ ಅಪ್ಪಾಜಿರಾಜರು ಯೆಂಬ ಕುಮಾರರು ಜನಿಸಿದರು. ಲಿಂಗರಾಜೇಂದ್ರ ವಡೆಯರವರಿಗೆ ಕಲಿ ನಂದ ವರುಷ ೪೮೬೪ನೇ ಸ್ವಭಾನು ಸಂವತ್ಸರದ ಜ್ಯೇಷ್ಠ ಬ. ೩೦ಯು ಶುಕ್ರವಾರ ಘಳಿಗೆ ೪೩ಲ್ಲಿ ವೀರರಾಜೇಂದ್ರ ವಡೆಯರವರು ಯೆಂಬ ಕುಮಾರರು ಜನಿಸಿದರು. ಹೊರಮಲೆಯಲ್ಲು ಇರುವ ನಂದರಾಜ ಅರಸುಗಳಿಗೆ ಮುದ್ದಯ ಅರಸುಗಳು ಯೆಂಬ ಕುಮಾರರು ಜನಿಸಿದ್ದರಿಂದ, ಆ ಮುದ್ದಯ ಅರಸುಗಳಿಗೆ ವಿವಾಹ ಮಾಡಿದರು. ಅವರಿಗೆ ಮಲ್ಲಯ ಅರಸುಗಳು ಜನಿಸಿದರು.

ಈ ಮೇರೆ ಇರುತ್ತಿದ್ದಲ್ಲಿ, ಆವಾಗ್ಯೆ ಮೈಸೂರ ಸಂಸ್ಥಾನದಲ್ಲಿ ಚಿಕ್ಕದೇವರಾಜ ವಡೆಯರು, ಇಕ್ಕೇರಿ ಸಂಸ್ಥಾನದಲ್ಲಿ ದೊಡ್ಡಚಂನಂಮಾಜಿಯವರು, ಸೋಮಶೇಖರ ನಾಯಕರವರ ಸಾಕಿ ಕೊಂಡು, ದೊರೆತನ ಮಾಡುತ್ತಾ ಇದ್ದರು. ಸೋದೆ ಸಂಸ್ಥಾನದಲ್ಲಿ ದೊಡ್ಡಸದಾಶಿವರಾಜರು, ಬೇಲೂರ ಸಂಸ್ಥಾನದಲ್ಲಿ ವೆಂಕಟಾದ್ರಿ ನಾಯಕರು, ಚಿರಕಲ ಸಂಸ್ಥಾನದಲ್ಲಿ ರವಿವರ್ಮರಾಜರು, ಈ ಮೇರೆ ತಂಮ ತಂಮ ರಾಜ್ಯಭಾರ ಮಾಡಿ ಕೊಂಡು ಇದ್ದರು.

ಆವಾಗ್ಯೆ ಪಿರಿಯಾಪಟ್ಟಣದ ಸೀಮೆಯು ಕೊಡಗಿನ ಸೀಮೆಯು ಹಿಂದೇ ಸೀಮೆಯಾಗಿ ನಡದು ಬರುತ್ತಾ ಇತ್ತು. ಕೊಡಗಿನ ಸೀಮೆ ಸರಹದ್ದೂ ಮೈಸೂರ ಸೀಮೆ ಸರಹದ್ದೂ ಕೂಡಿದ ಪಿರಿಯಾಪಟ್ಟಣ ತಾಲೂಕು ಕಟ್ಟೇ ಮಳಲವಾಡಿ ಸಮೀಪ, ಉದ್ದೂರು ಕೊಡಗರ ಹಳ್ಳಿ ಯೆಂಬಲ್ಲಿ, ಕೊಡಗಿನ ನಿಶಾನಿಕಲ್ಲು ನೆಟ್ಟು ಇದೆ.

ಮೈಸೂರ ಸಂಸ್ಥಾನದವರಿಗೂ ಕೊಡಗಿನ ಸಂಸ್ಥಾನದವರಿಗೂ ಮೊದಲಾಗಿ ವಿರುದ್ಧವಾದ ಕಾರಣವೇನು ಯೆಂದರೆ: ಪಿರಿಯಾಪಟ್ಟಣದ ನಂಜುಂಡ ಅರಸುಗಳ ಕಡೇ ಕೆಲು[1] ಚಾಕರ ಜನರು ಫಿತೂರಿಯಿಂದ, "ಈಗ ನಿಂಮ ಫವುಜ ಕಳುಹಿಸಿ ಕೊಟ್ಟರೆ, ಈ ಕೋಟೆ ನಿಂಮ ಕೈವಶ ಮಾಡಿ ಕೊಡುತ್ತೇವೆ," ಯೆಂಬದಾಗಿ ಮೈಸೂರ ಚಿಕ್ಕದೇವರಾಜ ವಡೆಯರವರ ಬಳಿಗೆ, ಅನುಸಂಧಾನ ನಡಿಸಿ, ಹೇಳಿ ಕಳುಹಿದರಿಂದ, ಆ ಚಿಕ್ಕದೇವರಾಜ ವಡೆಯರು ಪಿರಿಯಾಪಟ್ಟಣದ ಕೋಟೆ, ಆ ಸೀಮೆ ಸಹಾ, ಸಾಧಿಸಿ ಕೊಳ್ಳ ಬೇಕೆಂಬದಾಗಿ, ಫವುಜ ಜಮಾಯಿಸಿ ತಯಾರಾಗುತ್ತಾ ಇದ್ದರು. ಈ ಫವುಜ ತ

[1] ಕೆಲವು.

ಯಾಗುವ ಸಮಾಚಾರ ನಂಜುಂಡ ಅರಸುಗಳು ತಿಳಿದು, ಪಿರಿಯಾಪಟ್ಟಣದ ಕ್ವಾಟೆಯಲ್ಲಿ ತಂಮ ಮಗನಾದ ವೀರರಾಜ ಅರಸುಗಳ ಮಡಗಿ, ತಾವು ಫವುಜ ತೆಗದು ಕೊಂಡು ಹೋಗುವ ಬಗ್ಯೆ ಮಡಿಕೇರಿಗೆ ಬಂದು, ಈ ಸಮಾಚಾರವಂನು ದೊಡ್ಡವೀರಪ್ಪ ವಡೆಯರವರಿಗೆ ಹೇಳಿದಲ್ಲಿ, ಅವರು ತಂಮ ಕೊಡಗು ಮಂದಿ ಯಾವತ್ತು ಜಮಾಯಿಸುತ್ತಾ ಇದ್ದರು. ಅಷ್ಟರಲ್ಲಿ, "ಈ ಮೇರೆ ನಂಜುಂಡ ಅರಸುಗಳು ಫವುಜ ತೆಗದು ಕೊಂಡು ಬರುವ ಬಗ್ಯೆ ಮಡಿಕೇರಿಗೆ ಹೋಗ್ಯಾ ಇದ್ಧಾರೆ. ಆ ಫವುಜ ಇಲ್ಲಿಗೆ ಬಂದರೆ, ಬಲ ಹೆಚ್ಚಾಗುತ್ತದೆ; ಆ ಬಳಿಕ ಕ್ವಾಟೆ ನಿಮಗೆ ಸಾಧ್ಯವಾಗದು. ಅದರಿಂದ ಆ ಫವುಜು ಬರುವದಕ್ಕಿಂತ ಮೊದಲೇ ನಿಂಮ ಫವುಜ ಬಂದರೆ, ಸುಲಭದಲ್ಲಿ ಕ್ವಾಟೆ ನಿಂಮ ಕೈವಶ ಮಾಡಿ ಕೊಡುತ್ತೇವೆ" ಯೆಂಬದಾಗಿ, ಆ ಪಿರಿಯಾಪಟ್ಟಣದಲ್ಲು ಇದ್ದ ಫಿತೂರಿಯವರು ಮೈಸೂರ ಚಿಕ್ಕದೇವರಾಜ ವಡೆಯರವರ ಬಳಿಗೆ ಹೇಳಿ ಕಳುಹಿದಲ್ಲಿ, ಈ ವರ್ತಮಾನ ಕೇಳುತ್ತಲೇ ಚಿಕ್ಕದೇವರಾಜ ವಡೆಯರವರು ರಾತ್ರೆ ಹಗಲಾಗಿ ಫವುಜ ಕಳುಹಿಸಿ, ಪಿರಿಯಾಪಟ್ಟಣದ ಕ್ವಾಟೆಗೆ ಮುತ್ತಿಗೆ ಹಾಕಿಸಿ, ಜಗಳ[1] ಮಾಡಿಸುತ್ತಾ ಇದ್ದರು. ದೊಡ್ಡವೀರಪ್ಪ ವಡೆಯರವರು ತಂಮ ಮಂದಿ ಯಾವತ್ತು ಜಮಾಯಿಸಿ ಕೊಂಡು ಹೋಗ್ಯಾ, ಶಿದ್ಧೇಶ್ವರನ ಬೆಟ್ಟದ ಬಳಿಗೆ ತಲಪುವಷ್ಟರಲ್ಲಿ, ಆ ಫಿತೂರಿ ಜನರ ಸಹಾಯದಿಂದ[2] ಪಿರಿಯಾಪಟ್ಟಣದ ಕ್ವಾಟೆಯಂನು ಫೈಸಲಾ ಮಾಡಿ, ಮೈಸೂರವರು ತೆಗದು ಕೊಂಡರು. ಆವಾಗಯೆ "ಅಲ್ಲಿ ಇದ್ದ ವೀರರಾಜ ಅರಸುಗಳು, ತಂಮ ಬಹುಮಾನ ಕೀರ್ತಿ ಮೇಲೆ ದೃಷ್ಟಿ ಮಡಗಿ, ತಂಮ ಕುಟುಂಬ ಮಕ್ಕಳು ಯಾವತ್ತಂನು ಕೊಂದು ಹಾಕಿ, ಅವರು ಅಲ್ಲೇ ಜಗಳ ಮಾಡಿ ಸತ್ತಾ ಬಿಟ್ಟರು" ಯೆಂಬದಾಗಿ, ದೊಡ್ಡವೀರಪ್ಪ ವಡೆಯರವರಿಗೆ ವರ್ತಮಾನ ಬಂದದರಿಂದ, "ಆ ಕ್ವಾಟೆಯಂನು ಮೈಸೂರವರು ತೆಗದು ಕೊಂಡು, ತಂಮ ಮಂದಿ ಠಾಣ್ಯ ಇಟ್ಟು, ಬಲು ಕಾಯಿಸಿ ಕೊಂಡರು; ಇಂನೂ ನಾವು ಅಲ್ಲಿಗೆ ಹೋದರೆ, ಫಲವೇನದೆ? ಇಂನೂ ಆ ಮೈಸೂರವರು ಬಡಾಯಿಸಿ, ಕೊಡಗಿನ ಶೀಮೆ ಒಳನುಗ್ಗಿ[3] ಬಂದಾರು" ಯೆಂಬದಾಗಿ, ತಂಮ ಮನಸಿನಲ್ಲು[4] ಗರಹಿಸಿ, ಕೊಡಗಿನ ಸರಹದ್ದು, ಶಿದ್ಧೇಶ್ವರನ ಬೆಟ್ಟದ ಬಳಿಯ ಮುಂತಾಗಿ ಸರಹದ್ದು ಬಂದ ಹಾಗೆ, ಅಲ್ಯಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದುಬಸ್ತು[5] ಮಾಡಿಸಿ, ತಾವು ಪುನಹಾ ಮಡಿಕೇರಿಗೆ ಬಂದು, ಪಿರಿಯಾಪಟ್ಟಣದಲ್ಲಿ ನಡದಂಥಾ ವೃತ್ತಾಂತ ಯಾವತ್ತು ನಂಜುಂಡ ಅರಸುಗಳಿಗೆ ಹೇಳಿದಲ್ಲಿ, ಅವರು ಬಹು ಚಿಂತಾಕ್ರಾಂತರಾಗಿ ದುಃಖಪಟ್ಟುಗೊಂಡದರಿಂದ, "ನಿಂಮ ಕುಮಾರರು ತೀರಿ ಹೋದಾಗ್ಯೂ, ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬು ಕೊಡುವ ಬಗ್ಯೆ ನಿಂಮ ಅಣ್ಣನ ಮಗನಾಗಿ ನಾವು ಹಾಜರು ಇದ್ದೇವೆ; ಇದರ ಮೇಲೆ ನಂಮ ಅರಮನೆಯಲ್ಲು ಇರುವಂತಾ ಚಿಕ್ಕವರೂ ದೊಡ್ಡವರೂ ಯೆಲ್ಲಾ ತಂಮ ಮಕ್ಕಳ್ಯಾಹಾದಿ ಇದ್ಧಾರೆ; ತಾವು ಯೆಲ್ಲಾ ಬಗೆಯಲ್ಲು ನಿಶ್ಚಿಂತರಾಗಿ ಇರ ಬೇಕು" ಯೆಂಬದಾಗಿ ಹೊಡಂಬಡಿಸಿದರು. ಆವಾಗ್ಯೆ ಆ ನಂಜುಂಡ ಅರಸುಗಳು ಹೇಳಿದ್ದು: "ನಮಗೆ ಮುಪ್ಪಿನ ಕಾಲವಾದದರಿಂದ, ನಂಮ ಮಗನಿಗೆ[6] ಪಿರಿಯಾಪಟ್ಟಣದ ದವಲತ್ತಿನಲ್ಲಿ ನಿಂಮ ಹೊಡಂಬಡಿಕೆಯಿಂದ ಕೂರಿಸಿ, ನಾವು ಈ ಲೋಕದ ಆಶೆ ತೊರದು, ಶಿವಧ್ಯಾನ ಮಾಡಿ ಕೊಂಡು ಇರುತ್ತಿದ್ದೇವು. ಇಂಥಾ ಮುಪ್ಪಿನ ವೇಳೆಯದಲ್ಲಿ ನೋಡ ಬಾರದಂಥಾ ಅವಸ್ಥೆ ಮಹಾದೇವನು ತೋರಿಸಿದಾ. ನಂಮ ಕೈಯಿಂದ ಬಿಟ್ಟು ಹೋದಂಥಾ ಶೀಮೆಯಂನು ನೀವು ಸಾಧಿಸಿ ಕೊಳ್ಳ ಬೇಕು. ನಂಮ ಆಯುಷ್ಯ ತೀರುವ ಪರಿಯಂತರ ಇರುವ ಬಗ್ಯೆ, ಹೊಂದು ಮನೆ, ನಂಮ ಮನೇ ದೇವರಾದ ವೀರಭದ್ರ ದೇವರಿಗೆ ಹೊಂದು ದೇವಸ್ಥಾನ ಸಹಾ, ಕಟ್ಟಿಸಿ ಕೊಡ ಬೇಕು. ಇದಲ್ಲದೆ ನಂಮ ಹೆಸರಲ್ಲಿ ಹೊಂದು ಲಿಂಗ ಪ್ರತಿಷ್ಟೆ ಮಾಡ ಬೇಕು ಯೆಂಬದಾಗಿ, ನಂಮ ಮನಸಿನಲ್ಲು ಇದೆ. ಈ ಬಗ್ಯೆ ಕಾವೇರಿ ಹೊಳೆ ಕರೆಯಲ್ಲಿ ಹೊಂದು ದೇವಸ್ಥಾನವಂನು ಕಟ್ಟಿಸಿ, ಅದರಲ್ಲಿ ನಂಮ ಹೆಸರಿಂದ ಲಿಂಗ ಪ್ರತಿಷ್ಟೆ ಮಾಡಿಸಿ, ನಂಮ ಆಯುಷ್ಯತೀರಿದ ಮೇಲೆ, ಆ ದೇವಸ್ಥಾನದ ಮುಂದೆ ನಂಮ ಸಮಾಧಿ ಮಾಡಿಸಿ, ಅದರ ಮೇಲೆ ಕಲ್ಲುಮಂಟಪ ಕಟ್ಟಿಸಿ, ಅದರ ವಳಗೆ ಬಸವೇಶ್ವರ ದೇವರ ಪ್ರತಿಷ್ಟೆಮಾಡಿಸ ಬೇಕು" ಯೆಂಬದಾಗಿ ಹೇಳಿದರಿಂದ, ಅದೇ ಮೇರೆ ಕಾವೇರಿ ಹೊಳೇ ಬಳಿಯ ಹಾಗಳಹಳ್ಳಿಯಲ್ಲಿ ಅವರಿಗೆ ಹಿಡಿದ ಸ್ಥಳದಲ್ಲಿ ದೊಡ್ಡವೀರಪ್ಪ ವಡೆಯರವರು ಹೊಂದು ಅರಮನೆಯಂನು ಕಟ್ಟಿಸಿ, ಅದರ ಸುತ್ತ ಕಂದಕ ಮುಂತಾಗಿ ತೆಗಿಸಿ, ಅವರಂನು ಅಲ್ಲಿ ಮಡಗಿ, ಅದಕ್ಕೆ ನಂಜರಾಯಪಟ್ಟಣಯೆಂಬ ಹೆಸರು ಮಡಗಿ, ಅವರ ಮೊಗಾವಲಿನ ಬಗ್ಯೆ

[1] ಯುದ್ಧ. [2] ಸಹಾಯದಿಂದ. [3] ಒಳ. [4] ಮನಸ್ಸಿನಲ್ಲಿ. [5] ಬಂದೋಬಸ್ತು. [6] ಗೆ. [7] better ಮಗನಂನು.

ಯೇಳು ನೂರು ಜನ ಕೊಡಗರಂನು ನೇಮಿಸಿ ಕೊಟ್ಟು, ಅವರು ಹೇಳಿದ ಮೇರೆ ಹೊರಳ್ಳ ದಾವಯಿ ಹೆಚ್ಚಾ ಮಾಡಿ ವೀರಭದ್ರ ದೇವರ ದೇವಸ್ಥಾನವಂನು ಕಟ್ಟಿಸಿ, ಅದರಲ್ಲಿ ವೀರಭದ್ರ ದೇವರ ಪ್ರತಿಷ್ಟೆ ಮಾಡಿ, ಮತ್ತೊಂದು ದೇವಸ್ಥಾನವಂನು ಕಲ್ಲಿನಿಂದ ಕಟ್ಟಿಸಿ, ಅದರ ವಳಗೆ ಲಿಂಗಪ್ರತಿಷ್ಟೆ ಮಾಡಿಸಿ, ಅದಕ್ಕೆ ನಂಜುಂಡೇಶ್ವರ ಯೆಂಬ ಹೆಸರು ಮಡಗಿದರು. ಆ ಬಳಿಕ ಕೆಲು ದಿವಸದ ಮೇಲೆ, ಆ ನಂಜುಂಡ ಅರಸುಗಳವರು ಶಿವಾಧೀನವಾದದರಿಂದ, ಅವರು ಹೇಳಿದ ಪ್ರಕಾರ ದೊಡ್ಡವೀರಪ್ಪ ವಡೆಯರವರು ಆ ದೇವಸ್ಥಾನದ ಮುಂದೆ ಸಮಾಧಿ ಮಾಡಿಸಿ, ಅದರ ಮೇಲೆ ಕಲ್ಲುಮಂಟಪವಂನು ಕಟ್ಟಿಸಿ, ಅದರ ವಳಗೆ ದೊಡ್ಡದಾಗಿ ವಂದು ಬಸವೇಶ್ವರ ದೇವರ ಪ್ರತಿಷ್ಟೆ ಮಾಡಿಸಿ, ಆ ದೇವಸ್ಥಾನದ ಹೆಚ್ಚದ ಬಗ್ಯೆ, ಆಚಂದ್ರಾರ್ಕವಾಗಿ ಧರ್ಮ ನಡದು ಬರುವ ಬಗ್ಯೆ, ಕೆಲು ಭೂಮಿಯಂನು ಉತ್ತಾರ ಬಿಟ್ಟು ಕೊಟ್ಟರು. ಆ ಬಳಿಕ ಕೆಲು ಕಾಲದ ಮೇಲೆ ಕೊಡಗಿನ ಸಂಸ್ಥಾನವಂನು ಕಟ್ಟಿ ಕೊಳ್ಳ ಬೇಕೆಂಬದಾಗಿ, ಮೈಸೂರ ಸಂಸ್ಥಾನದಿಂದ ಭಾರಿ ದಂಡು ಬಂದಲ್ಲಿ, ದೊಡ್ಡವೀರಪ್ಪ ವಡೆಯರವರು ತಂಮ ಫವುಜು ಯಾವತ್ತು ತೆಗದು ಕೊಂಡು, ಸರಹದ್ದು ಬಂದುಬಸ್ತು ಮಾಡಿ, ಅವರ ಸಂಗಡ ಜಗಳ ಮಾಡುವದಕ್ಕೆ ತಯಾರಾಗಿ ಇದ್ದರು.

ಈ ತರುವಾಯದಲ್ಲಿ ಕೊಡಗಿನ ಶೀಮೆ ವಳತವಾದ ಬೆಪ್ಪುನಾಡ ನಾಯಕನ ಉತ್ತ ಯೆಂಬ ಕೊಡಗ ಕಾರಕಾರ[1] ಉಪ್ಪಿಗೆ ಹರಾಮನಾಗಿ, ಕೋಟಂಗಡಿ ಅರಸಿನ ಬಳಿಗೆ ವೋಡಿ ಹೋಗಿ, ಆ ಅರಸಿಗೆ ಹೇಳಿದ ವಿವರ: "ಮೊದಲು ಮೈಸೂರವರು ಕೊಡಗಿಗೆ ಶೇರಿದ ಪೆರಿಯಾಪಟ್ಟಣದ ಕೋಟೆಯಂನು ತೆಗದು ಕೊಂಡು, ಈಗ ಕೊಡಗಿನ ಶೀಮೆಯಂನು ಕಟ್ಟಿ ಕೊಳ್ಳ ಬೇಕೆಂಬದಾಗಿ, ಹೇರಳ ಫವುಜು ತೆಗದು ಕೊಂಡು ಬಂದಿದ್ಧಾರೆ; ಅದರಿಂದ ದೊಡ್ಡವೀರಪ್ಪ ವಡೆಯರವರು ಯಾವತ್ತು ಮಂದಿಯಂನು ತೆಗದು ಕೊಂಡು, ಸರಹದ್ದು ಬಂದುಬಸ್ತು ಮಾಡಿ ಕೊಂಡು ತಯಾರಾಗಿ ಇದ್ಧಾರೆ. ಅವರ ಶೀಮೆಯ ಜನರು ಯೆಲ್ಲಾ ಘಾಬರಿ ಆಗಿ ಇದ್ಧಾರೆ. ಈ ಸಮಯದಲ್ಲಿ ನೀವು ಯಾವತ್ತು ನಾಯಿಮಾರರಂನು ಕರದು ಕೊಂಡು, ಕೊಡಗಿನ ಶೀಮೆಯಂನು ಸಾಧಿಸುವ ಬಗ್ಯೆ ಗಟ್ಟಾ[2] ಹತ್ತಿ ಬಂದರೆ, ನಾನು ಕೆಲವು ಕೊಡಗರಂನು ನಿಂಮ ಕುಮುಕಿಗೆ ಸಹಾ ಮಾಡಿ ಕೊಡುತ್ತೇನೆ" ಯೆಂತ ಹೇಳಿದಲ್ಲಿ, ಆ ಮಾತಂನು ಆ ಕೋಟೆ ಅರಸು ನಂಬಿ ಕೊಂಡು, ನಾಲ್ಕು ಐದು ಸಾವಿರ ನಾಯಿಮಾರರಂನು ಕರದು ಕೊಂಡು, ಗಟ್ಟದ ಮೇಲೆ ಕೋಮಾರಯೆಂಬ ಗ್ರಾಮಕ್ಕೆ ಬಂದು, ಅಲ್ಲಿ ವಂದು ಲಕಡಿ ಕೋಟೆ ಹಾಕಿ, ತಂಮ ಫವುಜು ಸಹಾ ಆ ಕೋಟೆಯೊಳಗೆ ಇದ್ದು ಕೊಂಡು, "ನಂಮ ಕುಮ್ಮಕಿಗೆ ಕೊಡಗರ ಕೂಡಿಸಿ ಕೊಡುತ್ತೇನ ಯೆಂತಾ ಹೇಳಿ ಇದ್ದಿಯಷ್ಟೆ; ಆ ಕೊಡಗರು ಯೆಲ್ಲಿ ಇದ್ಧಾರೆ?" ಯೆಂತಾ, ಆ ಕೋಟೆ ಅರಸು ಕೇಳಿದಲ್ಲಿ, ಆ ನಿಂಮಕು ಹರಾಮ ಹೇಳಿದ್ದು: "ಆ ಜನರು ದೊಡ್ಡವೀರಪ್ಪ ವಡೆಯರವರ ಸಂಗಡ ಮೈಸೂರವರ ಫವುಜಿನ ಮೇಲೆ ಜಗಳ ಮಾಡುವ ಬಗ್ಯೆ ಹೋಗಿ ಇದ್ಧಾರೆ; ಈಗ ಕದನುವದಕ್ಕೆ[3] ಸಂಗತಿ ಇಲ್ಲಾ; ಮೈಸೂರವರು ಕೊಡಗಿನ ಶೀಮೆ ವಳಗೆ ಬಂದರೆ, ಆ ಜನರು ಚಲ್ಲಾಪಿಲ್ಲಿಯಾಗಿ ಶೀಮೆಗೆ ಬರುತ್ತಾರೆ; ಆವಾಗಯೆ ನನಗೆ ಬೇಕಾದವರ ನಾನು ಕರದರೆ, ಬಂದಾರು. ಆ ಮೇಲೆ ಕೆಲವು ಕೊಡಗಿನ ಶೀಮೆಯಂನು ಸುಲಭದಲ್ಲಿ ಸಾಧಿಸಿ ಕೊಳ್ಳ ಬಹುದು" ಯೆಂಬದಾಗಿ ಹೇಳಿದಲ್ಲಿ, ಆ ಮಾತಂನು ನಂಬಿ ಕೊಂಡು ಆ ಕೋಟೆ ಅರಸುಗಳು, ತಂಮ ಮಂದಿ ಸಹಾ, ಆ ಲಕಡಿ ಕೋಟೆಯಲ್ಲಿ ಇರುತ್ತಿದ್ದಲ್ಲಿ, ಈ ಸಮಾಚಾರ ದೊಡ್ಡವೀರಪ್ಪ ವಡೆಯರವರು ಕೇಳಿ, ಅಪ್ಪಣೆ ಕೊಟ್ಟದ್ದು: "ಈಗ ಬಂದಿರುವ ಮೈಸೂರವರ ಭಾರಿ ಫವುಜಂನು ಮಹಾದೇವನ ಕಟಾಕ್ಷದಿಂದ ನಾವು ಜಯಿಸಿದರೆ, ಈ ನಾಲ್ಕು ಐದು ಸಾವಿರ ನಾಯಿಮಾರರ ನಿಗ್ರಹಿಸುವಂಥಾದ್ದು ದೊಡ್ಡದಲ್ಲಾ; ಸದ್ಯಕ್ಕೆ ಸಾವಿರದ ಐನೂರು ಕೊಡಗ ಜನರು ಹೋಗಿ, ಆ ಕೋಮಾರದ ಲಕಡಿ ಕೋಟೆಗೆ ಮುತ್ತಿಗೆ ಹಾಕಿ, ಆ ಕೋಟಂಗಡಿ ಅರಸುಗಳು, ಅವರ ಕಡೆ ಜನ ಸಹಾ, ಮಲೆಯಾಳಕ್ಕೆ ಹೋಗದಂತೆ ಮಾರ್ಗಗಳ ಯಾವತ್ತು ಬಂದು ಮಾಡಿ" ಯೆಂಬದಾಗಿ, ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಆ ಕೊಡಗು ಮಂದಿಯು ಅದೇ ಮೇರೆ ಬಂದು, ಆ ಲಕಡಿ ಕೋಟೆಗೆ ಮುತ್ತಿಗೆ ಹಾಕಿ ಕೊಂಡು ಇದ್ದರು.

ಆ ತರುವಾಯ ಮೈಸೂರವರು ಭಾರಿ ಫವುಜು ತೆಗದು ಕೊಂಡು, ಬಾಳೆಲೆ ಮಾರ್ಗವಾಗಿ ಶೀಮೆ ವಳನುಗ್ಗಿ ಬಂದು, ಹಾಲುಹರೆ ಯೆಂಬ ಮೈದಾನದಲ್ಲು ಇಳುದು[4] ಕೊಂಡಲ್ಲಿ, ಆ ಬೆಳಿಗ್ಯೆ ಅರುಣೋದಯದ ಸಮಯದ

1 ಕಾರುಬಾರ. 2 ಘಟ್ಟ. 3 ಕಾದುವದಕ್ಕೆ. 4 ಇಳಿದು.

ಲ್ಲಿ ಕೊಡಗಿನ ಮಂದಿಯು ಹೋಗಿ, ಮೈಸೂರವರ ದಂಡಿನ ಮೇಲೆ ಬಿದ್ದಲ್ಲಿ, ಹೋರಳ ಲಡಾಯಿಯಾಗಿ, ಅವರ ಕಡೇ ಹದಿನೈದು ಸಾವಿರ ಜನ ಪರಿಯಂತರ ಮೃತವಾಗಿ, ಯಿಪ್ಪತ್ತೇಳು ಅಂದಳದ ಸರದಾರರ ಸಹಾ ಕಡುದು[1] ಹಾಕಿದರು. ಅದರಲ್ಲಿ ಕೆಲವು ಜನ ಪಲಾಯನವಾಗಿ ಚಿಕ್ಕದೇವರಾಜ ವಡೆಯರ ಬಳಿಗೆ ಹೋದರು. ಈ ಮೇರೆ ಆ ಮೈಸೂರವರ ದಂಡಂನು ಮುಳುಗಿಸಿ, ತಂಮ ಮಂದಿ ಯಾವತ್ತು ತೆಗದು ಕೊಂಡು, ಆ ಕೋಟೆ ಅರಸುಗಳು ಇದ್ದ ಅರಕಡಿ ಕೋಟೆಗೆ ಬಂದು, ಮುತ್ತಿ ಕೊಂಡು, ಅದರ ಒಳಗೆ ಇದ್ದ ನಾಯಿಮಾರರ, ಆ ಕೋಟೆ ವೀರಮ್ಮಾಜಿ ಅರಸುಗಳ ಸಹಾ ಹೊಡದು ಹಾಕಿ ಬಿಟ್ಟರು. ಆ ಆಶ್ಚರ್ಯದಿಂದ ಮೈಸೂರವರು, ಮಲೆಯಾಳದವರು ಸಹಾ, ಇಂಥಾ ಜಗಳ ಕೊಡಗಿನ ಶೀಮೆ ಸರಹದ್ದಿನ ಒಳಗೆ ಮಾಡಲಿಲ್ಲಾ. ಇತ್ತಗೆ ದೊಡ್ಡವೀರಪ್ಪ ವಡೆಯರವರು ಹದಿನೆಂಟು ವರುಷ ಪರಿಯಂತರ ಕೊಡಗಿನ ರಾಜ್ಯದ ಒಳಗೆ ಯಾವತ್ತು ಕಡಂಗ ಕಂದುಕ ಮುಂತಾಗಿ ತೆಗಸಿ, ಕೋಳ್ವೇರಿ ಬಕ್ಕಬಾಗಿಲು ಮುಂತಾಗಿ ತಯಾರು ಮಾಡಿಸಿ, ಈ ರಾಜ್ಯದಲ್ಲಿ ಇರುವ ಜಗಳದ ಆಗಳು ಯಾವತ್ತು ತೆಗಸಿ, ಕೊಡಗಿನ ರಾಜ್ಯವಂನು ಬಂದುಬಸ್ತು ಮಾಡಿ ಕೊಂಡು ಸ್ವಸ್ಥದಲ್ಲು ರಾಜ್ಯಭಾರ ಮಾಡಿ ಕೊಂಡು ಇರುತ್ತಿದ್ದಲ್ಲಿ, ಕೆಲವು ದಿವಸದ ಮೇಲೆ ಮೈಸೂರ ಚಿಕ್ಕದೇವರಾಜ ವಡೆಯರು, ಬೇಲೂರ ವೇಂಕಟಾದ್ರಿ ನಾಯಕರ ಶೀಮೆಯಂನು ಸಾಧಿಸಿ ಕೊಳ್ಳುವ ಬಗ್ಯೆ, ಫವುಜ ತೆಗದು ಕೊಂಡು ಹೋದರು.

ಈ ಸಮಾಚಾರ ದೊಡ್ಡವೀರಪ್ಪ ವಡೆಯರವರು ಕೇಳಿ, ಅವರ್ಗೆ ತೋಚಿದ್ದು: "ಬೇಲೂರ ವೇಂಕಟಾದ್ರಿ ನಾಯಕರ ಶೀಮೆಯಂನು ಆಕ್ರಮಿಸಿ ಕೊಳ್ಳುವ ಬಗ್ಯೆ, ಮೈಸೂರ ಚಿಕ್ಕದೇವರಾಜ ವಡೆಯರು ಭಾರಿ ದಂಡು ಸಮೇತ ಬೇಲೂರ ಕಡೆಗೆ ಹೋಗಿ ಇದ್ಧಾರೆ; ಈ ಸಮಯದಲ್ಲಿ ಕೊಡಗಿನ ಶೀಮೆ ಸರಹದ್ದಿನ ಸಮೀಪದ ಬೇಲೂರ ಶೀಮೆಯಲ್ಲಿ ಕೆಲವು ಕಟ್ಟಿ ಕೊಳ್ಳುವ ಬಗ್ಯೆ ನಾವು ಮಂದಿ ಕಳುಹಿಸಿ, ಅದಂನು ಸಾಧಿಸಿ, ಬಂದುಬಸ್ತು ಮಾಡಿ ಕೊಳ್ಳ ಬೇಕು," ಯೆಂಬದಾಗಿ, ಮನಸುಬ ಮಾಡಿ, ಅದೇ ಮೇರೆ ಕೆಲವು ಮಂದಿಯಂನು ಕಳುಹಿಸಿ, ಕೊಡಗಿನ ಸರಹದ್ದಿಗೆ ಮುಟ್ಟಿ ಇರುವ ಬೇಲೂರ ಒಳತವಾದ ಯೆಳುಸಾವಿರಶೀಮೆಯಂನು ತೆಗದು ಕೊಂಡು, ಕೊಡಗಿನ ಶೀಮೆಗೆ ಶೇರಿಸಿ ಕೊಂಡರು; ಉಳಿಕೆ ಬೇಲೂರ ಶೀಮೆ, ಕೋಟೆ ಸಹಾ, ಮೈಸೂರ ಅರಸುಗಳು ಕಟ್ಟಿ ಕೊಂಡರು. ಆ[2] ತದನಂತರದಲ್ಲಿ ಬೇಲೂರು ವೇಂಕಟಾದ್ರಿ ನಾಯಕರು ನಿಸ್ತರಿಸಲಾರದೆ ಪ್ರೋದಿ ಹೋಗಿ, ತಂಮ ಶೀಮೆ ಒಳತವಾದ ಗಿಡಸಂಹದ್ದು ಐಗೂರ ಶೀಮೆ ಬಂದುಬಸ್ತು ಮಾಡಿ ಕೊಂಡು, ಕಾಲಕ್ಷೇಪ ಮಾಡಿ ಕೊಂಡು ಇದ್ದರು.

ಈ ಮೇರೆ ಇರುತ್ತಿದ್ದಲ್ಲಿ, ಕೆಲು ದಿವಸದ ಮೇಲೆ ಮೈಸೂರ ಅರಸುಗಳು: "ಬೇಲೂರ ಸಂಸ್ಥಾನ ನಾವು ಕಟ್ಟಿ ಕೊಂಡು ಇದ್ಧೇವೆ. ಅದಕ್ಕೆ ಶೇರಿದ ಯೆಳುಸಾವಿರಶೀಮೆ ನಮಗೆ ಸಲ ಬೇಕು. ನೀವು ಹ್ಯಾಗೆ ಕಟ್ಟಿ ಕೊಂಡಿರಿ? ಬಿಟ್ಟು ಕೊಡಿ!" ಯೆಂಬದಾಗಿ, ದೊಡ್ಡವೀರಪ್ಪ ವಡೆಯರವರ ಕೇಳಿದಲ್ಲಿ, ಅವರು ಹೇಳಿದ ವಿವರ: "ಬೇಲೂರ ಸಂಸ್ಥಾನ ಪರತಯ್ಯೆಕ ವೆಂಕಟಾದ್ರಿ ನಾಯಕರು ಆಳಿ ಕೊಂಡು ಇದ್ದದ್ದೇ ಹೊರತು, ಮೈಸೂರ ಸಂಸ್ಥಾನಕ್ಕೂ ಶೇರಿದ್ದು ಅಲ್ಲಾ, ಕೊಡಗಿನ ಸಂಸ್ಥಾನಕ್ಕೂ ಶೇರಿದ್ದು ಅಲ್ಲಾ. ಈಗ ಹಾಸ್ತಾಗಿ ನೀವು ಬೇಲೂರು ನಾಯಕರ ಮೇಲೆ ಜಗಳ ಮಾಡಿ, ಅವರ ಶೀಮೆ ಕಟ್ಟಿ ಕೊಂಡಿರಿ. ನಿಂಮಂತೆ ನಾವು ಜಗಳ ಮಾಡಿ, ಯೆಳುಸಾವಿರಶೀಮೆಯಂನು ನಾವು ಕಟ್ಟಿ ಕೊಂಡೆವು. ಈ ಮೇರೆ ಇರುವಲ್ಲಿ, ಈ ಯೆಳುಸಾವಿರಶೀಮೆ ನಾವು ಬಿಡಲಿಕ್ಕಿಲ್ಲಾ," ಯೆಂಬದಾಗಿ, ದೊಡ್ಡವೀರಪ್ಪ ವಡೆಯರವರು ಹೇಳಿದಲ್ಲಿ, ಆ ಮೈಸೂರವರಿಗೂ ವೀರಪ್ಪ ವಡೆಯರವರಿಗೂ ಜಗಳವಾಗಿ, ಆ ಮೈಸೂರವರು ಯೆಳುಸಾವಿರಶೀಮೆ ಒಳನುಗ್ಗಿ ಬಂದಲ್ಲಿ, ಆ ಯೆಳುಸಾವಿರಶೀಮೆಯಲ್ಲಿ ಗಿಡಸರಹದ್ದಿನ ಶೀಮೆ ಒಳನುಗ್ಗುವದಕ್ಕೆ ಬಿಡದೆ ಹೊಡದಲ್ಲಿ, ಒಳನುಗ್ಗಲಾರದೆ, ಅವರು ಯೆಳುಸಾವಿರಶೀಮೆ ಬಿಟ್ಟು, ಇದಕ್ಕೆ ಶೇರಿದ ಮಲ್ಲಿಪಟ್ಟಣ, ಬೆಂಮತ್ತಿ, ಹೊಸೂರು ಯೆಂಬದಂನು ತಂಮ ಕಡೆ ಮಾಡಿ ಕೊಂಡು, ಬೆಂಮತ್ತಿ ಮಲ್ಲಿಪಟ್ಟಣ ಯೆಂಬಲ್ಲಿ ಕೋಟೆಗಳ ಕಟ್ಟಿ, ಠಾಣ್ಯ ಇಟ್ಟು, ಮೈಸೂರವರು ಹೋದ್ದಲ್ಲಿ, ಕೊಡಗು ಜನ ಹೋಗಿ, ಅಲ್ಲಿ ರೈತರ ನಿಲ್ಲುವದಕ್ಕೆ ಬಿಡದೆ, ಲೂಟಿ ಮಾಡಿ, ಶೀಮೆ ಹಾಳು ಮಾಡುತ್ತಾ ಇದ್ದಲ್ಲಿ, ದೊಡ್ಡವೀರಪ್ಪ ವಡೆಯರವರಿಗೆ ಚಿಕ್ಕದೇವರಾಜ ವಡೆಯರು ಬರದು ಕಳುಹಿದ ಕಾಗದ[3] ವಿವರ: "ನಾವು ನೀವು ಜಗಳಾ ಮಾಡಿ ಕೊಂಡು, ಶೀಮೆ ಹಾಳು ಮಾಡಿದ್ದುಂಟಾದರೆ, ಉಭಯಸ್ತರಿಗೂ ನಷ್ಟವೇ ಸರಿ. ಈ ಬ

[1] ಕಡಿದು. [2] ಆ pleonast. [3] ಕಾಗದದ.

ಗೆಯೆ ನೀವು ಕಟ್ಟಿ ಕೊಂಡು ಇರುವ ಯೆಳುಸಾವಿರಶೀಮೆ ವಳಿತವಾದ ಕೆಲು ಶೀಮೆ ನಾವು ಕಟ್ಟಿ ಕೊಂಡು ಇರುವಂಥಾದ್ದಂನು ನಿಂಮ ಕಡೆಗೆ ಮಾಡಿ ಕೊಂಡು, ಅದರಿಂದ ವಸೂಲಾಗುವಂಥಾ ಹಣವಂನು ನಮಗೆ ಕೊಡಿ" ಯೆಂಬದಾಗಿ, ಬರದು ಕಳುಹಿಸಿದರಿಂದ, ಆ ಮಾತಿಗೆ ಒಪ್ಪಿ ಕೊಂಡು, ಆ ಹೋಬಳಿಗಳಂನು ಯೆಳುಸಾವಿರಶೀಮೆಗೆ ಸೇರಿಸಿ ಕೊಂಡರು. ಆ ಹೋಬಳಿಗಳಿಂದ ವಸೂಲಾದ ಹಣವಂನು ಯೆಳುಸಾವಿರಶೀಮೆಯ ಪಾರುಪತ್ಯಗಾರನು ದೊಡ್ಡವೀರಪ್ಪ ಒಡೆಯರವರ ಅಪ್ಪಣೆ ಪ್ರಕಾರ ಮೈಸೂರವರಿಗೆ ಕೊಡುತ್ತಾ ಇದ್ದನು. ಅದರಿಂದ ಆ ಯೆಳುಸಾವಿರಶೀಮೆಗೆ ಇತ್ತೆರಿಗೆ ಶೀಮೆಯಂತ ಹೆಸರಾಯಿತು.

ಹೀಗೆ ಇರುತ್ತಿದ್ದಲ್ಲಿ, ಕೆಲು ದಿವಸದ ಮೇಲೆ ಚಿಕ್ಕದೇವರಾಜ ಒಡೆಯರು ತೀರಿ ಹೋಗಿ, ದೊಡ್ಡಕೃಷ್ಣರಾಜ ಒಡೆಯರಿಗೆ ಪಟ್ಟವಾಯಿತು. ಅದೇ ತರುವಾಯ ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರು ಚರಕಲ ಶೀಮೆ ಕಟ್ಟಿ ಕೊಳ್ಳ ಬೇಕೆಂಬ ಅಪೇಕ್ಷೆಯಿಂದ ದಂಡು ಸಮೇತ ನೀಲೇಶ್ವರ ಮಾರ್ಗವಾಗಿ ಬಂದು, ಜಗಳಾ ಮಾಡಿ, ಚರಕಲ ಅರೆವಾಳಿ ಶೀಮೆಯಂನು ಸಾಧಿಸಿ ಕೊಂಡು, ಅಲ್ಯಲ್ಲಿ ಲಕಡಿ ಕೋಟೆಗಳ ಹಾಕಿಸಿ, ಠಾಣ್ಯ ಇಟ್ಟು, ಮತ್ತೂ ಬಾಕಿ ಶೀಮೆಯಂನು ಆಕ್ರಮಿಸಿ ಕೊಳ್ಳ ತಕ್ಕ ಬಗ್ಯೆ[1] ಉಂಟಾಯಿಸಿದಲ್ಲಿ, ಆ ಚರಕಲ ರವಿವರ್ಮ ರಾಜರು ಜಗಳ ಮಾಡಲಾರದೆ, ಬಹಳ ದೈನ್ಯೋಕ್ತಿಯಿಂದ ದೊಡ್ಡವೀರಪ್ಪ ಒಡೆಯರವರಿಗೆ ಕಾಗದ ಬರದು ಕಳುಹಿದ್ದು: "ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕರು ಭಾರಿ ದಂಡು ತೆಗದು ಕೊಂಡು ಬಂದು, ನಂಮ ಅರೆವಾಳಿ ಶೀಮೆಯಂನು ಕಟ್ಟಿ ಕೊಂಡು, ಅಲ್ಯಲ್ಲಿ ಲಕಡಿ ಕೋಟೆಗಳ ಹಾಕಿ, ಠಾಣ್ಯ ಇಟ್ಟು ಕೊಂಡು, ಮತ್ತೂ ಮುಂದೆ ಬಡಾಯಿಸಿ ಬರುತ್ತಾರೆ. ಅವರ ಸಂಗಡ ಜಗಳಾ ಮಾಡಿ, ನಿಸ್ತರಿಸುವದಕ್ಕೆ ತೀರದು. ಈ ಬಗ್ಯೆ ತಾವು ಅವರು ಸಪಕ್ಷೀಯಸ್ಥರಾದ್ದರಿಂದ, ತಂಮ ಮೆಹರಬಾನಿಗಿ ಮಾರ್ಗದಿಂದ, ಸೋಮಶೇಖರ ನಾಯಕರು ನಂಮ ಶೀಮೆ ಬಿಟ್ಟು ಕೊಟ್ಟು, ಅವರ ದಂಡು ಸಮೇತ ಇಕ್ಕೇರಿಗೆ ಹೋಗುವಂತೆ ಉಪಕಾರ ಮಾಡಿಸಿ ಕೊಡ ಬೇಕು" ಯೆಂಬದಾಗಿ ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬು ಕೊಟ್ಟದ್ದು: "ಈ ಬಗ್ಯೆ ನಂಮಿಂದ ಆಗ ತಕ್ಕ ಪ್ರಯತ್ನ ಮಾಡಿಯೇವು. ಅದರ ಮೇಲೆ ಮಹಾದೇವನ ಅಪ್ಪಣೆ ಇದ್ದಂತೆ ಆದೀತು. ತಾವು ಖಾತಿರಜಮೆ ಆಗಿ ಇರ ಬೇಕು" ಯೆಂಬದಾಗಿ, ಬರೆಸಿ ಕಳುಹಿ, ಈ ವಿವರ ಸೋಮಶೇಖರ ನಾಯಕರಿಗೆ ಹೇಳಿ ಕಳುಹಿದಲ್ಲಿ, ಅವರು ಜವಾಬು ಹೇಳಿ ಕಳುಹಿದ್ದು: "ನಾವು ಹೇರಳ ಫವುಜ ತೆಗದು ಕೊಂಡು ಬಂದು, ಚರಕಲ ರಾಜರ ಸಂಗಡ ಜಗಳಾ ಮಾಡಿ, ಅವರ ಕಡೆ ನಾಯಿಮಾರರಂನ್ನು, ನಿಗ್ರಹಿಸಿ, ಅವರ ಅರೆವಾಳಿ ಶೀಮೆಯಂನು ಸಾಧಿಸಿ, ಅಲ್ಯಲ್ಲಿ ಠಾಣ್ಯ ಇಟ್ಟು, ಮಜಬೂತು ಮಾಡಿ ಇದ್ದೇವೆ. ಈ ಲಡಾಯಿಯಲ್ಲಿ ನಂಮ ಕಡೆ ಹೇರಳ ಮಂದಿ ಮೃತಪಟ್ಟು ಹೋಯಿತು. ಇದಲ್ಲದೆ ದಂಡಿನ ಖರ್ಚು ಬಹಳ ಮುಟ್ಟಿ ಇದೆ. ಆದ್ದರಿಂದ ನಾವು ಸಲ್ಲಾ ಮಾಡಿ, ಅವರ ಶೀಮೆ ಬಿಟ್ಟು ಕೊಡಲಿಕ್ಕಿಲ್ಲಾ" ಯೆಂಬದಾಗಿ, ಹೇಳಿ ಕಳುಹಿದಲ್ಲಿ, ಈ ವಿವರವಂನು ದೊಡ್ಡವೀರಪ್ಪ ಒಡೆಯರವರು ಚರಕಲ ರಾಜರಿಗೆ ಹೇಳಿ ಕಳುಹಿದಲ್ಲಿ, ಮತ್ತು ಆ ರಾಜರು ಆಣೆ[2] ಭಾಷೆ ಹಾಕಿ, ಕರಾರುನಾಮಾ ದಸ್ಕತು ಮೊಹರದಿಂದ ಬರದ್ದರಲ್ಲಿ; "ಅವರ ದಂಡಿನ ಖರ್ಚಿನ ಬಗ್ಯೆ ಹದಿನೆಂಟು ಲಕ್ಷ ರೂಪಾಯಿ ನಾವು ಕೊಡುತ್ತೇವೆ. ಈ ಮಾತಿಗೆ ತಾವು ಹೊಣೆ ಆಗಿ, ಸೇರಿಸಿ ಕೊಡ ಬೇಕು" ಯೆಂಬದಾಗಿ, ಬರದು ಕಳುಹಿದರಿಂದ, ದೊಡ್ಡವೀರಪ್ಪ ಒಡೆಯರವರು ಆ ಕರಾರುನಾಮೆಯಂನು ನಂಬಿ, ಸೋಮಶೇಖರ ನಾಯಕರಿಗೆ ತಿಳುಹಿಸಿದಲ್ಲಿ, ಅವರು ಜವಾಬು ಹೇಳಿದ್ದು: "ಮಲೆಯಾಳದ ರಾಜರು ಮೋಸಗಾರರು. ಆಡಿದ ಮಾತು ಕೊಟ್ಟ ನಂಬಿಗೆಗೆ ಸರಿಯಾಗಿ ನಡವವರಲ್ಲಾ[3]; ಅವರ ಕರಾರುನಾಮೆಯಂನು ನಂಬಿ, ಈ ಹಣವಿಗೆ ನೀವು ಹೊಣೆಯಾಗ ಬೇಡ" ಯೆಂಬದಾಗಿ, ಹೇಳಿದಲ್ಲಿ, ದೊಡ್ಡವೀರಪ್ಪ ಒಡೆಯರವರು ಹೇಳಿದ್ದು: "ಚರಕಲ ರಾಜರು ಈ ಹಣವಿಗೆ ಕೈಕಾಗದ, ಬಹಳ ಬಗೆ ಆಣೆ ಭಾಷೆ ಹಾಕಿ, ಬರದು ಕಳುಹಿಸಿ ಇದ್ದಾರೆ. ಈ ಬಗೆ ಹಣ ನಾವು ಯೇನಾ ಬಗೆಯಿಂದಲಾದರೂ ಬರ ಮಾಡಿ, ತಮಗೆ ಸಂದಾಯ ಮಾಡಿ ಕೊಡುತ್ತೇವೆ" ಯೆಂಬದಾಗಿ ಹೇಳಿದಲ್ಲಿ, ಸೋಮಶೇಖರ ನಾಯಕರವರು ಒಡಂಬಟ್ಟು, ಈ ಹಣವಿಗೆ ದೊಡ್ಡವೀರಪ್ಪ ಒಡೆಯರವರ ಕೈಯಿಂದ ಕೈಕಾಗದ ಬರಸಿ ತೆಗದು ಕೊಂಡು, ಆ ಚರಕಲ ಶೀಮೆಯಲ್ಲಿ ಇಟ್ಟು ಇದ್ದ ಠಾಣ್ಯ ಯೆಬ್ಬಿಸಿ ಕೊಂಡು, ಫವುಜ ಸಮೇತ ತಂಮ ಶೀಮೆಗೆ ಹೋಗುವಾಗ್ಯೆ, ದೊಡ್ಡವೀರಪ್ಪ ಒಡೆಯರವರ ಭೇಟಿ ಆಗುವ ಬ

[1] ಕೊಳ್ಳ ತಕ್ಕ ಬಗ್ಯೆ for ಕೊಳ್ಳುವ ಬಗ್ಯೆ. [2] ಆಣೆ ಭಾಷೆ pleonasm. [3] ನಡೆಯುವವರಲ್ಲ.

ಗೆಯೆ, ಸುಬ್ರಹ್ಮಣ್ಯಕ್ಕೆ ಬಂದು, ಇಳಿದು ಕೊಂಡು, ಹೇಳಿ ಕಳುಹಿದಲ್ಲಿ, ದೊಡ್ಡವೀರಪ್ಪ ವಡೆಯರವರು ಸುಬ್ರಹ್ಮಣ್ಯಕ್ಕೆ ಹೋಗಿ, ಅವರ ಕಂಡು, ಭೇಟಿ ಆಗಿ, ಪುನಹಾ ಬಂದು, ಕೆಲು ತೋರೆಗಾರು ಹಾರೆಗಾರು ಕೊಡಗ ಜನ ಮುಂತಾಗಿ ಚಿರಕಲ ರಾಜರ ಬಳಿಗೆ, ಹಣ ತರುವ ಬಗ್ಗೆಯೆ, ಕಳುಹಿದಲ್ಲಿ, ಆ ಅರಸುಗಳು "ಈ ಹಣ ನಾಲ್ಕು ಐದು ಗಡುಬದಲ್ಲಿ ಸಂದಾಯತ[1] ಮಾಡಿ ಕೊಡುತ್ತೇವೆ" ಎಂಬದಾಗಿ ಹೇಳಿ, ಇಲ್ಲಿಂದ ಹೋದಂಥಾ ಜನರಂನು ಇಟ್ಟು ಕೊಂಡು, ಯೆರಡು ಮೂರು ಗಡುಬದಲ್ಲಿ ಅರೆವಾಶಿ ಹಣ ಸಂದಾಯತ ಮಾಡಿ ಕೊಟ್ಟು, ಬಾಕಿ ಹಣಕ್ಕೆ ವರಾತ ಮಾಡಿದಲ್ಲಿ ಹೋದಂಥಾ ಜನರಂನು ತಳ್ಳಿ ಬಿಟ್ಟದರಿಂದ, ಆ ಜನರು ಬಂದು, ಆ ವಿವರವಂನು ದೊಡ್ಡವೀರಪ್ಪ ವಡೆಯರವರಿಗೆ ತಿಳುಹಪಡಿಸಿದಲ್ಲಿ, ದಳವಾಯಿ ಬ್ಯಾನಿ ಮುತ್ತಣ್ಣನ ಸಂಗಡ ಐದು ಸಾವಿರ ಜನ ಕೊಡಗರ ಕೂಡಿಸಿ, ಚಿರಕಲ ರಾಜರ ಬಳಿಗೆ ಕಳುಹಿದಲ್ಲಿ, ಆ ದಳವಾಯಿ ಮುತ್ತಣ್ಣನು ಹಣಕ್ಕೆ ವರಾತ ಮಾಡಿದಲ್ಲಿ, ಆ ರಾಜರು ಇಂದು ನಾಳೆ ಕೊಡುತ್ತೇವೆ ಯೆಂತಾ[2] ದಿನಾಹಾರಣ ಮಾಡಿದರಿಂದ, "ಈ ಮೇರೆ ತಡಕು ಮಾಡುವದು ಹೊಳ್ಳೆದಲ್ಲಾ; ಕರಾರು ಮೇರೆ ಹಣ ಕೊಡಿ!" ಯೆಂತಾ ಖಸಕು ವರಾತ ಹತ್ತಿಸಿದಲ್ಲಿ, ಇವಂದಿರಂನು ಹೊಡೆಯ ಬೇಕು ಯೆಂಬದಾಗಿ, ಆ ಅರಸುಗಳು ಯೋಚಿಸಿ, ಗುಟ್ಟಿನಿಂದ ಅವರ[3] ಮಂದಿಯಂನು ಜಮಾಯಿಸುತ್ತಾ ಇದ್ದಲ್ಲಿ, ಈ ಸಮಾಚಾರ ಕಂಣೂರ ಆಲಿರಾಜರು ಕೇಳಿ, ಕೆಲು ಮಾಪಿಳ್ಳೆರಂನು ಆ ದಳವಾಯಿ ಬಳಿಗೆ ಕಳುಹಿಸಿ, "ಚಿರಕಲ ರಾಜರು ನಿಮಗೆ ಕರಾರು ಮೇರೆ ಹಣ ಕೊಡುವದಿಲ್ಲಾ. ಅವರ ಕಡೆ ಜನರಿಂದ ನಿಂಮ ಜನರ ಯಾವತ್ತೂ, ಹೊಂದೂ ಉಳಿಯದೆ, ಹೊಡೆಯ ಬೇಕೆಂತಾ, ಯೋಚಿಸಿ ಇದ್ದಾರೆ. ನೀವು ಅಲ್ಲಿ ನಿಲ್ಲ ಬೇಡ!" ಯೆಂತಾ ತಿಳಿಸಿದರಿಂದ, ಇನ್ನೂ ಇಲ್ಲಿ ನಿಂತರೆ, ಮೋಸ ಮಾಡ್ಯಾರು; ಈ ಬಗ್ಗೆಯೆ ಕೊಡಗೆ ಹೋಗುವ ಬಗ್ಗೆಯೆ ಮಾರ್ಗ ಬಂದು ಮಾಡಿ ಇದ್ದಾರು; ಆದ್ದರಿಂದ ಕಂಣೂರಿಗೆ ಹೋಗಿ ವಿಚಾರಿಸಿ ಕೊಂಡು ಹೋಗ ಬಹುದು ಯೆಂಬದಾಗಿ, ದಳವಾಯಿ ಬ್ಯಾನಿ ಮುತ್ತಣ್ಣನು ತನ ಸಂಗಡದ ಕೊಡಗು ಜನರ ಯಾವತ್ತೂ ತೆಗದು ಕೊಂಡು, ರಾತಾರಾತ್ರಿಯ್ಯೆ ಕಂಣೂರಿಗೆ ಹೊರಟು ಹೋಗುವಲ್ಲಿ, ಚಿರಕಲ ರಾಜರ ಕಡೆ ಜನ ಬಂದು ಮಾರ್ಗದಲ್ಲಿ ತಡದರಿಂದ, ಅವರಿಗೆ ದಕ್ಕದೆ, ಜನಾಮ[4] ತೆಗೆದು ಕೊಂಡು ರಾತಾರಾತ್ರಿಯ್ಯೆ ಕಂಣೂರಿಗೆ ತಲಪಿದರಿಂದ, ಕೊಡಗೆ ಬರುವಂಥಾ ಮಾರ್ಗಕ್ಕೆಲ್ಲಾ ಮಂದಿ ಇಟ್ಟು, ಚಿರಕಲ ರಾಜರು ಮಾರ್ಗ ಕಟ್ಟಿ ಇದ್ದರು. ಈ ವರ್ತಮಾನ ಕಂಣೂರ ಆಲಿರಾಜರು ತಿಳಿದು, "ಈ ಮಾರ್ಗವಾಗಿ ನೀವು ಹೋದ್ದು ಉಂಟಾದರೆ, ನಿಮಗೆ, ನಿಂಮ ಸಂಗಡ ಇರುವ ಜನರಿಗೆ ಸಹಾ, ಮೋಸ ಮಾಡ್ಯಾರು" ಯೆಂಬದಾಗಿ ಹೇಳಿ, ಆ ದಳವಾಯಿಗೂ ಆ ಐದು ಸಾವಿರ ಕೊಡಗರಿಗೂ ಪತ್ತೇಮಾರಿ ಮೇಲೆ ಹತ್ತಿಸಿ, ಇಕ್ಕೇರಿ ವಳಿತವಾದ ಮಂಗಳೂರ ಮೇಶಿ ಕುಂಬಳೆ ತಾಲೂಕಿನಲ್ಲಿ ಇಳಿಸಿ ಬಿಟ್ಟರು. ಆ ಬಳಿಕ ಆ ದಳವಾಯಿ ಮುತ್ತಣ್ಣನು, ಆ ಜನರ ಕರದು ಕೊಂಡು, ತುಳುವನಾಡ ಮಾರ್ಗವಾಗಿ ಕೊಡಗಿನ ಸೀಮೆಗೆ ಬಂದನು.

ಚಿರಕಲ ರಾಜರಿಂದ ಕರಾರು ಮೇರೆ ಬರ ತಕ್ಕ ಹಣದಲ್ಲಿ ಬಾಕಿ ನಿಂತು ಇದ್ದ ಅರೆವಾಶಿ ಹಣವಂನು ದೊಡ್ಡವೀರಪ್ಪ ವಡೆಯರವರು ತಂಮ ಕೈಯಿಂದ ಕಳುಹಿಸಿ ಕೊಟ್ಟು, ಆ ಚಿರಕಲ ರಾಜರು ಅರೆವಾಶಿ ಹಣ ಕೊಡದೆ, ದಗಾ ಮಾಡಿದ ವಿವರ ಸೋಮಶೇಖರ ನಾಯಕರಿಗೆ ಬರೆಸಿ ಕಳುಹಿದಲ್ಲಿ, ಅವರು ಕೇಳಿ, ದೊಡ್ಡವೀರಪ್ಪ ವಡೆಯರವರ ಇಕ್ಕೇರಿಗೆ ಕರಸಿ ಕೊಂಡು, "ಮಲೆಯಾಳದ ಅರಸುಗಳು ಮೋಸಗಾರರು; ಅವರ ಮಾತ ನಂಬ ಬಾರದು ಯೆಂಬದಾಗಿ, ಮೊದಲೇ ನಾವು ಹೇಳಿದ್ದ ಕೇಳದೆ, ಅವರ ಮಾತ ನಂಬಿ ಕೊಂಡು, ನಾವು ಕಟ್ಟಿ ಕೊಂಡು ಇದ್ದ ಸೀಮೆಯಂನು ಅವರಿಗೆ ಬಿಡಿಸಿ ಕೊಟ್ಟು, ಅವರ ಕಡೆಯಿಂದ ಬರ ತಕ್ಕ ಬಾಕಿ ಹಣ ತಂಮ ಕೈಯಿಂದ ಕೊಟ್ಟರಿ" ಯೆಂಬದಾಗಿ, ಬಹಳ ನೊಂದು ಕೊಂಡು, ಆವಾಗ್ಯೆ "ನೀವು ನಮಗೆ ಸ್ವಕೀಯಸ್ಥರ್ಯೆ ಹೊರ್ತು ಬೇರೊಂದಲ್ಲಾ" ಯೆಂಬದಾಗಿ, ಯೆಕ್ಕೇರ ಮಾರ್ಗದಿಂದ ತುಳುವನಾಡ ವಳಿತವಾದ ಮೂಡ[5] ಪಂಜತ್ತು ಮಾಗಣೆಯಿಂದ ಈ ಕೊಡಗಿನ ಗಟ್ಟದ ಸರಹದ್ದಿಗೆ ಮುಟ್ಟಿ ಇರುವಂಥಾ ಕೆಲವು ಮಾಗಣೆಗಳಿಂದ ಕೆಲವು ಗ್ರಾಮುಗಳ ವಿಂಗಡಿಸಿ, ದೊಡ್ಡವೀರಪ್ಪ ವಡೆಯರವರಿಗೆ ಹಾಲು ಬೆಣ್ಣೆಗೆ ಯೆಂಬದಾಗಿ, ಅದಕ್ಕೆ ಅಮ್ಮಖುತ ಉದ್ದಿಶ್ಯವಾಗಿ ಕೊಟ್ಟಂಥಾದ್ದು. ಇದರ ಹೆಸರು ಅಮರ ಯೆಂಬದಾಗಿ ಆವಾಗ್ಯೆ[6] ನೂತನವಾಗಿ ಸೋಮಶೇಖರ ನಾಯಕರು ಹೆಸರು ಇಟ್ಟು ಕೊಟ್ಟರು. ಆ ತದನಂತರ "ಕಾವೇರಿ

---

1 ಸಂದಾಯ. 2 the terminating vowel of ಯೆಂತ sound has a peculiar pronounciation as clear as the long ಆ but short. 3 better ತಂಮ. 4 ಜನವಂನು. 5 ಮೂಡಣ. 6 ಆಗಲೆ.

ಅಂಮ ದೇವರ ಪೂಜೆ ಬಗ್ಯೆ ಈ ಕೊಡಗಿನ ಶೀಮೆಯಲ್ಲಿ ತೆಂಗಿನ ಕಾಯಿ ಫಲ ಇಲ್ಲದರಿಂದ, ಆ ದೇವರ ಪೂಜೆ ಬಗ್ಯೆ ಕಾಯಿ ಬೇಕಾಗುತ್ತದೆ; ಸೂಳ್ಯದ ಮಾಗಣೆಯು ಆ ದೇವಸ್ಥಾನಕ್ಕೆ ಸಮೀಪವಾಗಿ ಇದೆ; ಇದಂನು ಕೊಡಿಸಿ ಕೊಡ ಬೇಕು; ಆ ಮಾಗಣೆಗೆ ಆದ ಕೆರಯದ ಹಣವಂನು ಕೊಡುತ್ತೇವೆ" ಯೆಂಬದಾಗಿ, ಸ್ವಾಮಶೇಖರ ನಾಯಕರ ಸಂಗಡ ಕೇಳಿದಲ್ಲಿ, ಅವರು ಒಪ್ಪಿದರಿಂದ, ಕಾವೇರಿ ಅಂಮನವರ ಬಂಡಾರದಿಂದ ಅದಕ್ಕೆ ಸಲುವ ಹಣ ಕೊಟ್ಟರು. ಆವಾಗ್ಯೆ ಸೂಳ್ಯದ ಮಾಗಣೆಯಂನು ವಿಂಗಡಿಸಿ, ಬೇಗಮಲೆ ಒಡ್ಡಿನಲ್ಲಿ ಕೊತ್ತಳ ಕಟ್ಟಿಸಿ, ಕೊಡಗಿನ ಶೀಮೆಗೆ ಸೇರಿಸಿ ಕೊಟ್ಟರು. ಅಮರ ಸೂಳ್ಯ ಸಹಾ ಕೊಡಗಿನ ಸಂಸ್ಥಾನಕ್ಕೆ ಸೇರಿ, ಕೊಡಗಿನ ಕೂಡೆ ಯೆಕವಾಗಿ ನಡದು ಬರುತ್ತಾ ಇದೆ.

ಈ ಮೇರೆ ಇರುತ್ತಿದ್ದಲ್ಲಿ, ಇಕ್ಕೇರಿ ಸಂಸ್ಥಾನದ ಸ್ವಾಮಶೇಖರ ನಾಯಕರವರು ತೀರಿ ಹೋಗ್ಯ, ಬೂದಿ ಬಸವಪ್ಪ ನಾಯಕರಿಗೆ ಪಟ್ಟವಾಯಿತು. ಇತ್ತಲಾಗಿ ದೊಡ್ಡವೀರಪ್ಪ ಒಡೆಯರವರು ಕುಮಾರರಾದ ಅಪ್ಪಾಜಿರಾಜರವರಿಗೆ ಮದುವೆ ಮಾಡಿ ಕೊಟ್ಟಂಥಾ ಪಟ್ಟದ ಸ್ತ್ರೀ ಇದ್ದಂತೆ, ಒಂದು ಸಾಮಾನ್ಯ ಸ್ತ್ರೀಯಂನು ಇಟ್ಟು ಕೊಂಡು, ಆಕೇ ಮಾತ ಕೇಳಿ, ತಂಮ ರಾಣಿಗೆ ಕಿರುಕುಳ ಮಾಡುತ್ತಾ ಇದ್ದಲ್ಲಿ, ಈ ಕಿರುಕುಳ ತಡೆಯಲಾರದೆ, ಆ ಅಂಮನವರು ಸ್ವೇಚ್ಛಾಬಾವಿಗೆ ಬಿದ್ದು, ಮೃತಪಟ್ಟದರಿಂದ, ಈ ವಿವರ ದೊಡ್ಡವೀರಪ್ಪ ಒಡೆಯರವರು ತಿಳಿದು, ಆ ಅಪ್ಪಾಜಿ ಅರಸುಗಳಿಗೂ[1] ಅವರ ಪಟ್ಟದ ಸ್ತ್ರೀಯವರ ಗರ್ಭದಲ್ಲಿ ಜನಿಸಿದಂಥಾ ಕುಮಾರರಾದ ಚಿಕ್ಕವೀರಪ್ಪ ಒಡೆಯರವರಿಗೂ[1] ಸೆರೆಮನೆಯಲ್ಲಿ ಹಾಕಿಸ್ತರು.[2] ಈ ಮೇರೆ ಹಂನೆರಡು ವರುಷ ಪರಿಯಂತರ ಸೆರೆಯೊಳಗೆ ಇದ್ದು, ಅದರೊಳಗೆ ಅಪ್ಪಾಜಿ ರಾಜರು ಮೃತವಾದರು. ಆ ಬಳಿಕ ಕೆಲವು ಆಪ್ತರಾದಂಥ ಕೊಡಗರು ದೊಡ್ಡವೀರಪ್ಪ ಒಡೆಯರವರಿಗೆ ಅರಿಕೆ ಮಾಡಿ ಕೊಂಡ ವಿವರ: "ಅಪ್ಪಾಜಿ ರಾಜರು ಅಪರಾಧ ಮಾಡಿ, ಸೆರೆಯೊಳಗೆ ಬಿದ್ದು, ಮೃತವಾದರು. ಅವರ ಕುಮಾರರು ನಿರಾಪರಾಧವಾಗಿ ಸೆರೆಯಲ್ಲಿ ಬಿದ್ದು ಇದ್ದಾರೆ. ತಾವಾದರೆ ಮುಪ್ಪಿನವರಾದಿರಿ. ಮುಂದೆ ಈ ರಾಜ್ಯಭಾರ ಮಾಡಿ ಕೊಂಡು, ನಂಮ ಸರ್ವೇಜನರಂನು ರಕ್ಷಣೆಯ ಮಾಡುವದಕ್ಕೆ ಕರ್ತರು ಯಾರು? ಈ ಬಗ್ಯೆ ಸೆರೆಯೊಳಗೆ ಇರುವ ಆ ಕುಮಾರರಂನು ಸೆರೆಯಿಂದ ಬಿಟ್ಟು ರಕ್ಷಿಸಿ, ತಂಮ ದೊರೆತನದಲ್ಲಿ ನಿಲ್ಲಿಸ ಬೇಕು" ಯೆಂಬದಾಗಿ, ಅರಿಕೆ ಮಾಡಿ ಕೊಂಡದರಿಂದ, ದೊಡ್ಡವೀರಪ್ಪ ಒಡೆಯರು ಆ ಮಾತಿಗೆ ಒಡಂಬಟ್ಟು, ಆ ಸೆರೆಯೊಳಗೆ ಇದ್ದ ತಂಮ ಮೊಂಮಗನಾದ ಚಿಕ್ಕವೀರಪ್ಪ ಒಡೆಯರಂನು ಸೆರೆಯಿಂದ ಬಿಟ್ಟು, ಕಲಿ ಸಂದ ೪೮೩೧ನೆ ಸಾಧಾರಣ ಸಂವತ್ಸರದಲ್ಲಿ ಆ ಚಿಕ್ಕವೀರಪ್ಪ ಒಡೆಯರವರಿಗೆ ಪಟ್ಟಾಭಿಷೇಕವಂನು ಮಾಡಿಸಿದರು. ಆ ಚಿಕ್ಕವೀರಪ್ಪ ಒಡೆಯರವರು, ಚಿಕ್ಕಂದಿನಾರಭ್ಯ ಸೆರೆಮನೆ ಒಳಗೆ ಇದ್ದದರಿಂದ, ಶರೀರದಲ್ಲಿ ಅದರುವಾಯು ಸಂಭವಿಸಿ ಕೊಂಡು ಇತ್ತು. ಈ ಮೇರೆ ಇರುತ್ತಿದ್ದಲ್ಲಿ, ಕಲಿ ಸಂದ ೪೮೩೬ನೆ ಆನಂದ ಸಂವತ್ಸರದಲ್ಲಿ ದೊಡ್ಡವೀರಪ್ಪ ಒಡೆಯರವರು ಶಿವಾಧೀನವಾದರು. ಇವರ ಸಂಗಡಲೇ ಇವರ ಪಟ್ಟದ ರಾಣಿಯವರಾದ ಇಟಬರು ಅಂಮನವರು ಸಹಗಮನ ಮಾಡಿದರು.

ಆ ತರುವಾಯದಲ್ಲಿ ಮೈಸೂರ ಸಂಸ್ಥಾನದಲ್ಲಿ ದೊಡ್ಡಕೃಷ್ಣರಾಜ ಒಡೆಯರವರು, ಇಕ್ಕೇರಿ ಸಂಸ್ಥಾನದಲ್ಲಿ ಬೂದಿಬಸವಪ್ಪ ನಾಯಕರು ಸಹಾ, ಆಯಾಯ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿ ಕೊಂಡು ಇದ್ದರು. ಈ ಮೇರೆ ಇರುತ್ತಿದ್ದಲ್ಲಿ, ದೊಡ್ಡವೀರಪ್ಪ ಒಡೆಯರವರ ತಂಮಂದಿರಾಗಿ ಹಾಲೇರಿಯಲ್ಲು ಇದ್ದಂಥಾ ಅಪ್ಪಾಜಿ ರಾಜರು ಸ್ವರ್ಗಸ್ಥರಾದರು. ಅದೇ ಕೆಲವು ದಿವಸದಲ್ಲಿ ಹೊರಮಲೆಯಲ್ಲು ಇದ್ದ ನಂದರಾಜ ಅರಸುಗಳು ಮೃತವಾದರು. ಅದೇ ತದನಂತರದಲ್ಲಿ ಮೈಸೂರ ಕೃಷ್ಣರಾಜ ಒಡೆಯರು ತೀರಿ ಹೋಗ್ಯ, ಚಾಮರಾಜ ಒಡೆಯರಿಗೆ ಪಟ್ಟವಾಗಿದ್ದಲ್ಲಿ, ಅವರು ಆ ತೀರಿ ಹೋದ ಕೃಷ್ಣರಾಜ ಒಡೆಯರವರ ಪಟ್ಟದ ಸ್ತ್ರೀಯರ ಮೇಲೆ ಕಂಣು ಇಟ್ಟದರಿಂದ, ಈ ವಿವರ ಆ ರಾಣಿಯವರು ದಳವಾಯಿ ದೇವರಾಜರಿಗೆ ಹೇಳಿ ಕಳುಹಿದಲ್ಲಿ, "ಈ ನಡತೆ ಒಳ್ಳೇದಲ್ಲಾ. ಅಪಕೀರ್ತಿ ಬಂದೀತು" ಯೆಂಬದಾಗಿ, ಆ ದಳವಾಯಿಯು ಚಾಮರಾಜ ಒಡೆಯರಿಗೆ ಹೇಳಿದಲ್ಲಿ, ಈ ಮೇರೆ ಹೇಳುವಂಥಾದ್ದು ಚಾಕರರ ಮರಿಯಾದೆ ಅಲ್ಲಾ ಯೆಂಬದಾಗಿ, ಅವರ ಮೇಲೆ ಚಾಮರಾಜ ಒಡೆಯರು ಸಿಟ್ಟು ಮಾಡಿ, "ನೀವು ಪಟ್ಟಣದಲ್ಲಿ ಇರ ಬೇಡ; ಒಂದು ಗಡಿ ಒಳಗೆ ಹೋಗಿ ಇದ್ದು ಕಾ

1 Dative case instead of accusative. 2 ಹಾಕಿಸಿದರು.

ಳ್ಳಿ!" ಯೆಂಬದಾಗಿ, ದಳವಾಯಿ ದೇವರಾಜರಿಗೆ ಹೇಳಿದರಿಂದ, ಅವರು ಬೆಂಗಳೂರ ನಂದರಾಜ ಅರಸುಗಳು ಮದ್ದಗಿರಿ ನಂದರಾಜ ಅರಸುಗಳು ಸಹಾ ಕೂಡಿ, ಚಾಮರಾಜ ವಡೆಯರನ್ನು ಕಪಾಲದುರ್ಗಕ್ಕೆ ಹಾಕಿ ಬಿಟ್ಟರು. ಆವಾಗ್ಯೆ ಅವರಿಗೆ ಪಟ್ಟವಾಗಿ ಹದಿನೆಂಟು ತಿಂಗಳು ಆಗಿ ಇತ್ತು.

ಆ ಮೇಲೆ ಚಿಕ್ಕ ಕೃಷ್ಣರಾಜ ವಡೆಯರಿಗೆ, ಹಾತು ವರುಷದ ಪ್ರಾಯದಲ್ಲಿ ತಂದು, ಪಟ್ಟಾ ಕಟ್ಟಿದರು. ಅದೇ ತದನಂತರದಲ್ಲಿ ಇಕ್ಕೇರಿ ಸಂಸ್ಥಾನದ ಬೂದಿಬಸವಪ್ಪ ನಾಯಕರು ತೀರಿ ಹೋಗಿ, ಅವರ ಕುಟುಂಬವಾದ ವೀರಂಮಾಜಿ[1] ಯೆಂಬ ರಾಣಿಯವರು ದೊರೆತನ ಮಾಡಿ ಕೊಂಡು ಇದ್ದರು. ಆವಾಗ್ಯೆ ಈ ಮೂರು ಸಂಸ್ಥಾನದಲ್ಲಿಯೂ ರಾಜಕಾರ್ಯಕಾರ್ಯಂಗಳು ಇರಲಿಲ್ಲಾ.

ಈ ಮೇರೆ ಇರುತಿದ್ದಲ್ಲಿ, ಚಿಕ್ಕ ಕೃಷ್ಣರಾಜ ವಡೆಯರವರಿಗೆ ದಳವಾಯಿ ದೇವರಾಜ ಅರಸುಗಳ ತಂಮನಾದ ಕರಾಚೂರಿ[2] ನಂದರಾಜ ಅರಸುಗಳ ಮಗಳನ್ನು ಮದುವೆ ಮಾಡಿದರು. ಆವಾಗ್ಯೆ ಕರಾಚೂರಿ ನಂದರಾಜ ಅರಸುಗಳು ಸರ್ವಾಧಿಕಾರ ಮಾಡಿ ಕೊಂಡು ಇದ್ದರು. ಇವರ ಬಳಿಯಲ್ಲಿ ಹೈದರನಾಯಕನು, ಕೆಲವು ಮಂದಿ ಸಹಿತವಾಗಿ, ಚಾಕರಿ ಮಾಡಿ ಕೊಂಡು ಇದ್ದನು.

ಆ ತದನಂತರದಲ್ಲಿ ನವಾಬ್ ಚಂದಸಾಹೇಬರು ಯೆಂಬುವರು ತಿರುಚನಾಪಳ್ಳಿ[3] ಕೋಟೆ ತೆಗದು ಕೊಳ್ಳ ಬೇಕೆಂಬದಾಗಿ, ಆ ಕೋಟೆಗೆ ಮುತ್ತಿಗೆ ಹಾಕಿ ಇದ್ದದರಿಂದ ಮೊಹಂಮದಲ್ಲೀಖಾನರು ಕರಾಚೂರಿ ನಂದರಾಜ ಅರಸುಗಳಿಗೆ ಬರಸಿ ಕಳುಹಿದ ವಿವರ: "ನೀವು, ನಿಂಮ ಫೌಜ ತೆಗದು ಕೊಂಡು ಬಂದು, ಸಹಾಯ ಮಾಡ ಬೇಕು" ಯೆಂಬದಾಗಿ, ಬರಸಿ ಕಳುಹಿದಲ್ಲಿ ಈ ಮಾತು ಕೇಳಿ, ಇವರು ಫೌಜ ತೆಗದು ಕೊಂಡು, ಗುತ್ತಿ ಮುರಾರಿರಾವು ಕಡೆ ಕೆಲವು ಫೌಜ ಸಹಾ ಕುಮುಕಾಗಿ ತೆಗದು ಕೊಂಡು, ತಿರುಚನಾಪಳ್ಳಿಗೆ ಹೋದರು. ಆವಾಗ್ಯೆ ಹೈದರನಾಯಕನು ಕರಾಚೂರಿ ನಂದರಾಜರ ಸಂಗಡ ಇದ್ದನು. ಮೊಹಂಮದಲ್ಲೀಖಾನರು ಕುಮುಕಿಗೆ ಇಂಗ್ರೇಜಿ ಬಹಾದೂರ[4] ಸರಕಾರದ ಫೌಜ ಕರಸಿ ಕೊಂಡು, ಚಂದಸಾಹೇಬರ ಸಂಗಡ ಲಡಾಯಿ[5] ಮಾಡಿ, ಆ ಚಂದಸಾಹೇಬರ ಫೌಜ ಯಾವತ್ತು ಮುಳುಗಿಸಿದರು. ಆ ಮೇಲೆ ಅವರು ಓಡಿ ಹೋಗಿ, ಜಂಬುಕೇಶ್ವರ ದೇವರ ಗುಡಿ ಹೊಕ್ಕೊಂಡು ಇದ್ದದರಿಂದ, ಅವರಿಗೆ ಮೊಹಂಮದಲ್ಲೀಖಾನರು ಹಿಡತರಿಸಿ, ತಲೆ ಹೊಡದು ಬಿಟ್ಟರು.

ಆ ಬಳಿಕ ಕೆಲವು ದಿವಸ ಕರಾಚೂರಿ ನಂದರಾಜ ಅರಸುಗಳು ಅಲ್ಲಿ ಇದ್ದು, ಪುನಹಾ ಶ್ರೀರಂಗಪಟ್ಟಣಕ್ಕೆ ಬಂದರು. ಆ ಚಂದಸಾಹೇಬರ ಲಡಾಯಿವ ಸಮಯದಲ್ಲಿ ಹೈದರನಾಯಕನು ಕೆಲವು ಸಾಮಾನು ಫಿರಂಗಿ ಮುಂತಾಗಿ ಲೂಟಿ ಮಾಡಿ ಕೊಂಡು, ಸ್ವಲ್ಪ ಪ್ರಬಲಿಸಿದನು.

ಆ ಬಳಿಕ "ಕರಾಚೂರಿ ನಂದರಾಜ ಅರಸುಗಳು ತಿರುಚನಾಪಳ್ಳಿ ಲಡಾಯಿಕ್ಕೆ ಹೋಗಿ, ಹೇರಳ ದ್ರವ್ಯ ಕರ್ಚು ಮಾಡಿದರು. ಕಾರ್ಯವು ಕೂಡಿ ಬರಲಿಲ್ಲಾ" ಯೆಂಬದಾಗಿ, ಚಿಕ್ಕಕೃಷ್ಣರಾಜ ವಡೆಯರು ಪರಿಹಾಸ ಮಾಡಿದರಿಂದ, ಅದನ್ನು ಕರಾಚೂರಿ ನಂದರಾಜ ಅರಸುಗಳು ತಿಳಿದು, ತಿರುಗಿ ಬಂದು, ಆ ಕೃಷ್ಣರಾಜ ವಡೆಯರ ಅರಮನೆಗೆ ಗುಂಡು ಹೊಡದು, ಅವರ ಸಾಮಾಧಿಕರನ್ನು ಹಿಡಿದು, ಆಗ್ಘ್ರ ಮಾಡಿಸಿ, ಅವರ ಅರಮನೆಗೆ ಪಹರೆ ಇಟ್ಟು, ಬಂದೋಬಸ್ತು[6] ಮಾಡಿದರು. ಈ ಮೇರೆ ನಾಲ್ಕು ವರುಷ ಕಳಿಯಿತು.

ಅಷ್ಟರಲ್ಲಿ ಮೈಸೂರ ದೊಡ್ಡ ದಳವಾಯಿ ದೇವರಾಜರು ತೀರಿ ಹೋಗಿದ್ದರಿಂದ, ಅವರ ಕುಟುಂಬವಾದ ಚಲುವಾಜಂಮ ಯೆಂಬವಳು, ಅಲ್ಲಿ ಬರವಣಿಗೆಯಲ್ಲು ಇದ್ದ ಕಂಡೇರಾವು[7] ಯೆಂಬ ಬ್ರಾಮ್ಹಣನ ಕೂಡೆ ವ್ಯಭಿಚಾರ[8] ಮಾಡಿ ಕೊಂಡು, ಅವಳು ದೊಡ್ಡಕೃಷ್ಣರಾಜ ವಡೆಯರ ಕುಟುಂಬವಾದ ದೊಡ್ಡಂಮಾಜಿಯವರಿಗೆ ಹೇಳಿ, ಆ ಕಂಡೇರಾಯನಿಗೆ ಸರ್ವಾಧಿಕಾರವನ್ನು ಕೊಡಿಸಿದರಿಂದ, ಕರಾಚೂರಿ ನಂದರಾಜ ಅರಸುಗಳು ಈ ಅನ್ಯಾಯ ತಿಳಿದು, ಕಂಡೇರಾಯನ ಹಿಡಿದು, ಶಿಕ್ಷೆ ಮಾಡ ಬೇಕೆಂಬದಾಗಿ, ಕಂಡೇರಾಯನ ಸಂಗಡ ಜಗಳ ಮಾಡಿದಲ್ಲಿ ಕಂಡೇರಾವು ಸಿಕ್ಕಲಿಲ್ಲಾ. ಆ ಬಳಿಕ ಹೈದರಲ್ಲೀ ನಾಯಕನಿಗೆ ಕರಾಚೂರಿ ನಂದರಾಜರು, ಕೆಲು ಫೌಜ ಕೂಡಿಸಿ ಕೊಟ್ಟು, ಕಂಡೇರಾಯನ ನಿಗ್ರಹಿಸು ಯೆಂಬದಾಗಿ ಹೇಳಿ, ಮೈಸೂರಿಗೆ ಹೋದರು. ಹೈದರನಾಯಕರು ಕಂಡೇರಾಯನ ಸಂಗಡ ಜಗಳ ಮಾಡಿ, ಅವನನ್ನು ಹಿಡಿದು, ಕಬ್ಬಿಣದ ಪಿಂಜರದ[9] ವಳಗೆ ಹಾಕಿ, ಕೊಂದು ಹಾಕಿ ಬಿಟ್ಟು, ದೊಡ್ಡಕೃಷ್ಣರಾಜ ವಡೆ

1 ವೀರಂಮಾಜಿ. 2 ಕರಾಚೂರಿ. 3 ತಿರುಚನಾಪಳ್ಳಿ. 4 ಬಹಾದ್ದರ. 5 ಲಡಾಯಿ. 6 ಬಂದೋಬಸ್ತು. 7 ಕಂಡೇರಾವು. 8 ವ್ಯಭಿಚಾರ. 9 ಪಂಜರ.

ಯರ ಕುಟುಂಬವಾದ ದೊಡ್ಡಂಮಾಜಿ ಯಂಬ ಮುದ್ದಂಮಾಜಿಯವರು, ಚಿಕ್ಕಕೃಷ್ಣರಾಜ ವಡೆಯರು ಸಹಾ, ಇದ್ದ ಅರಮನೆ ಸಹಿತ ಹಾಗೆ ಇಟ್ಟು, ಶ್ರೀರಂಗಪಟ್ಟಣದ ಕೋಟೆಯಂನು ತಂನ ಕೈವಶ ಮಾಡಿ ಕೊಂಡು, ಹೈದರಲ್ಲೀಖಾನ್ ಬಹಾದುರ ಯಂಬದಾಗಿ ಹೆಸರು ಇಟ್ಟು ಕೊಂಡು, ಆ ವ್ಯಬಿಚಾರಿ ಚೆಲುವಾಜಂಮ ಯಂಬವಳಂನು ದಳವಾಯಿಯವರ ಮನೆಯಿಂದ ತೆಗದು, ಬೇರೆ ಒಂದು ಮನೆ ವಳಗೆ ಮಡಗಿ ಬಿಟ್ಟು, ಆ ದಳವಾಯಿಯವರ ಮನೆಯಲ್ಲಿ ಹೈದರಲ್ಲೀಖಾನರು ಇಳುಕೊಂಡರು.

ಆ ತದನಂತರದಲ್ಲಿ, ಇತ್ತಲಾಗಿ ಇಕ್ಕೇರಿ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿ ಕೊಂಡು ಇದ್ದ ಬೂದಿಬಸವಪ್ಪ ನಾಯಕರ ಕುಟುಂಬವಾದ ವೀರಂಮಾಜಿ[1] ಯಂಬವಳು, ನಿಂಬೆಯಣ್ಣ ಯಂಬ ಚಾಕರನ ಸಂಗಡ ವ್ಯಬಿಚಾರ ಮಾಡಿ ಕೊಂಡು, ಪಟ್ಟಕ್ಕೆ ಸಲುವಂತ[2] ದೊರೆ ಮಗನ ಜಟ್ಟಿಗಳ ಕೈಯಿಂದ ಕುತ್ತಿಗೆ ಮುರಿಸಿ, ಕೊಂದು ಹಾಕಿ, ತಂನ ಮಿಂಡನಾದ ನಿಂಬೆಯಣ್ಣನಿಗೆ ಸರ್ವಾಧಿಕಾರವಂನು ಕೊಟ್ಟು ಮಡಗಿದ್ದಳು. ಈ ಸಮಾಚಾರ ಹೈದರಲ್ಲೀಖಾನರು ಕೇಳಿ, ಇಕ್ಕೇರಿ ಸಂಸ್ಥಾನವಂನು ಆಕ್ರಮಿಸಿ ಕೊಳ್ಳುವ ಬಗ್ಯೆ, ಯಾವತ್ತು ಫೌಜ ತೆಗದು ಕೊಂಡು, ಚಿತ್ರಕಲ್ಲು ಬರಮನಾಯಕರು ಅವರ ಫೌಜ ಸಹಾ ಕರದು ಕೊಂಡು ಹೋಗಿ, ಇಕ್ಕೇರಿ ಸಂಸ್ಥಾನದ ಕೋಟೆಗೆ ಮುತ್ತಿಗೆ ಹಾಕಿ, ಕಿಂಚಿತವಾಗಿ ಜಗಳ ಮಾಡಿ, ಅಲ್ಲಿ ಇದ್ದ ಜನರ ತಂನ ವಶೀಕರ ಮಾಡಿ ಕೊಂಡು, ಮೋಸದಿಂದಾ ಲಡಾಯಿ ಮಾಡಿ, ಕಲಿ ಸಂದ ೪೮೬೪ನೆ ಚಿತ್ರಭಾನು ಸಂವತ್ಸರದಲ್ಲಿ ಇಕ್ಕೇರಿ ಸಂಸ್ಥಾನವಂನು ತೆಗದು ಕೊಂಡು, ಆ ನಿಂಬೆಯಣ್ಣ ಯಂಬವನಿಗೆ ಹಿಡಿದು, ಕೊಂದು ಹಾಕಿ ಬಿಟ್ಟು, ಆ ವೀರಂಮಾಜಿ ಯಂಬವಳಂನು ಕೌಲ್ ದುರ್ಗದ ಮ್ಯಾಲೆ ಸೆರೆ ಹಾಕಿ ಬಿಟ್ಟು, ಇಕ್ಕೇರಿ ಸಂಸ್ಥಾನದ ಹೆಸರು ಹೈದರನಗರ ಯೆಂಬದಾಗಿ ಇಟ್ಟು, ತಂಮ ಹೆಸರಂನು ನವಾಬ ಹೈದರಲ್ಲೀಖಾನ್ ಬಹಾದ್ದರ ಯಂಬದಾಗಿ ಪರುತವಿಸಿ ಕೊಂಡು, ಆ ಸಂಸ್ಥಾನಕ್ಕೆ ಶೇರಿದ ಶೀಮೆ ವಿಚಾರಿಸಿ, ಲೆಕ್ಕ[3] ಕೇಳುವಾಗ್ಯೆ, ಮಂಗಲೂರ ತಾಲೂಕು ಮೂಡ ವಂಬತ್ತು[4] ಮಾಗಣೆಯಿಂದ ಅಮರದ ಮಾಗಣೆ ಒಂದು, ಸೂಳ್ಯದ ಮಾಗಣೆ ಒಂದು ಸಹಾ, ಮೊದಲು ಸೋಮಶೇಖರ ನಾಯಕರು ಕೊಡಗಿನ ಸಂಸ್ಥಾನಕ್ಕೆ ದೊಡ್ಡ ವೀರಪ್ಪ ವಡೆಯರವರಿಗೆ ಬಿಟ್ಟು ಕೊಟ್ಟು ಇದ್ದಾರೆ ಯಂತ, ಆ ಸ್ಥಳದ ಜನ ಹೇಳಿದಲ್ಲಿ, ಅದಂನು ವಿಚಾರಿಸಿ ಕೇಳಿ ಸಹಜವಾದ್ದರಿಂದ, ಈ ಯೆರಡು ಮಾಗಣೆ ವಿನಹಾ, ಇಕ್ಕೇರಿ ಸಂಸ್ಥಾನಕ್ಕೆ ಶೇರಿದ ಶೀಮೆ ಗಡಿ ಬಂದ ಹಾಗೆ, ಬಂದುಬಸ್ತು ಮಾಡಿಕೊಂಡು, ಪುನಹಾ ಪಟ್ಟಣಕ್ಕೆ ಬಂದು, ದೊಡ್ಡಕೃಷ್ಣರಾಜ ವಡೆಯರವರ ರಾಣಿಯಾದ ಮುದ್ದಂಮಾಜಿಯವರು, ಚಿಕ್ಕಕೃಷ್ಣರಾಜ ವಡೆಯರು ಸಹಾ, ಇದ್ದ ಅರಮನೆಯಲ್ಲಿ ಇದ್ದ ಚಾಕನ ಬಂಡಾರ[5] ಯಾವತ್ತು ತೆಗದು ಕೊಂಡು, ತಂನ ಮಾತಿಗೆ ಅನುಕೂಲವಾಗದಂಥ ಹಳೆ ಸರದಾರರಂನು ಪರಿಹರಿಸಿ ಬಿಟ್ಟು, ತಂನ ಬಂಧುವರ್ಗದವರ ಫೌಜಿಗೆ ಸರದಾರರ ಮಾಡಿ ಕೊಂಡು, ದಿನ ದಿನಕ್ಕೆ ಫೌಜ ಹೆಚ್ಚಾಗಿ ಜಮಾಯಿಸುತ್ತಾ, ಯಾವತ್ತು ಫೌಜ ತೆಗದು ಕೊಂಡು ಬಂದು, ಮೈಸೂರ ಕೋಟೆಗೆ ಮುತ್ತಿಗೆ ಹಾಕಿ, ಜಗಳ ಮಾಡಿ, ಆ ಕೋಟೆಯಂನು ತೆಗದು ಕೊಂಡು, ಕರಾಚೂರಿ ನಂದರಾಜರಂನು ಹಿಡತಂದು, ಪಟ್ಟಣದ ಕೋಟೆ ವಳಗೆ ಸೆರೆ ಹಾಕಿ, ಮೈಸೂರ ಶೀಮೆ ಯಾವತ್ತು ಸ್ವಾಧೀನ ಮಾಡಿ ಕೊಂಡರು. ಆ ತದನಂತರದಲ್ಲಿ ಚಿಕ್ಕಕೃಷ್ಣರಾಜ ವಡೆಯರು ತೀರಿ ಹೋದ್ದರಿಂದ, ಅವರ ಸಂತತಿ ವಳಗೆ ಕೃಷ್ಣರಾಜರು ಯಂಬವರ ತಂದು, ನವಾಬ ಹೈದರಲ್ಲೀಖಾನ್ ಬಹಾದ್ದರವರು ಪಟ್ಟಾ ಕಟ್ಟಿ, ಹೆಸರಿಗೆ ಮಡಗಿ ಇದ್ದರು.

ಕೊಡಗಿನ ಸಂಸ್ಥಾನದಲ್ಲಿ ದೊರೆತನ ಮಾಡುತ್ತಾ ಇದ್ದ ಚಿಕ್ಕವೀರಪ್ಪ ವಡೆಯರವರಿಗೆ ನವಾಬ ಹೈದರಲ್ಲೀಖಾನ್ ಬಹಾದ್ದರವರು ಬರಸಿ ಕಳುಹಿದ ವಿವರ: "ಯೆಳು ಸಾವಿರ ಶೀಮೆ ಕೊಡಗಿನ ಸಂಸ್ಥಾನಕ್ಕೂ ಮೈಸೂರ ಸಂಸ್ಥಾನಕ್ಕೂ ಇತ್ತಿಬಿಗೆ ಆಗಿ ಇದೆಯಲ್ಲಾ? ಅದರಲ್ಲಿ ಕೆಲವು ಮೈಸೂರವರಿಗೆ ಕೊಡುವ ಹಾಗಾ ತಾವು ತೆಗದು ಕೊಡುವದು ನಮಗೆ ಕೆಲಸವಿಲ್ಲಾ. ನಮಗೆ ಸಲತಕ್ಕಂಥ ಶೀಮೆಯಂನು ಬಿಟ್ಟು ಕೊಡಿ! ನಾವು ಬಂದುಬಸ್ತು ಮಾಡಿ ಕೊಳ್ಳುತ್ತೇವೆ" ಯಂಬದಾಗಿ, ಬರದು ಕಳುಹಿದರಿಂದ, ಅದ್ಯೇ ಮ್ಯಾರೆ ಚಿಕ್ಕವೀರಪ್ಪ ವಡೆಯರು ಆ ಯೆಳು ಸಾವಿರ ಶೀಮೆಯಲ್ಲಿ ಅವರಿಗೆ ಸಲುವಂಥ ಬೆಂಮತ್ತಿ, ಮಲ್ಲಿಪಟ್ಟಣಾ, ಹಾಸೂರು ಯಂಬ ಈ ಹೋಬಳಿಗಳಂನು ವಿಂಗಡಿಸಿ ಬಿಟ್ಟು ಕೊಟ್ಟಲ್ಲಿ, ಮಲ್ಲಿಪಟ್ಟಣಾ ಯಂಬಲ್ಲಿ ಒಂದು ಕೋಟೆ ಕಟ್ಟಿ, ಅಮಲುದಾರನ ಇರಿಸಿ, ಬಂ

---

[1] ವೀರಂಮಾಜಿ. [2] ಸಲುವಂಥ. [3] ಲೆಖ್ಖ. [4] ಒಂಬತ್ತು. [5] ಚಾಕಣ ಭಂಡಾರ.

ದುಬಸ್ತು ಮಾಡಿ ಕೊಂಡರು. ಈ ಕಡೆ ಸಲುವಂಥ ಶೀಮೆಯನ್ನು ಕೊಡಗಿನ ರಾಜರು ಬಂದುಬಸ್ತು ಮಾಡಿ ಕೊಂಡರು.

ಕೆಲವು ದಿವಸದ ಮೇಲೆ ನವಾಬು ಹೈದರಲ್ಲೀಖಾನರು, ಫರುಜಲ್ಲಾಖಾನನ ಸಂಗಡ ದಂಡು ಕೂಡಿಸಿ ಕೊಟ್ಟು, ಕೊಡಗಿನ ಸಂಸ್ಥಾನದ ಮೇಲೆ ಜಗಳಕ್ಕೆ ಕಳುಹಿದರಿಂದ, ಆ ಫರುಜಲ್ಲಾಖಾನನು, ಕಲಿ ಸಂದ ೪೮೭೦ನೆ ಪಾರ್ಥಿವ ಸಂವತ್ಸರದಲ್ಲಿ, ಉಬ್ಬಲ್ಗಂಡಿ ಮೊಳದಲ್ಲಿ ಬಂದು ಇಳಿದಲ್ಲಿ, ಅವನಿಗೂ ಈ ಸಂಸ್ಥಾನದವರಿಗೂ ಹೋರಳಿ ಅದಾಯವಾಗಿ, ಫರುಜಲ್ಲಾಖಾನನು ಮುರಿದು ಹೋಗಿ, ಬಿಗೂರು ಶೀಮೆಯಲ್ಲಿ ಇಳುಕೊಂಡನು. ಆ ಬಳಿಕ ನವಾಬು ಹೈದರಲ್ಲೀಖಾನರು ಫರುಜಲ್ಲಾಖಾನನ ಮುಖಾಂತರ ಹೇಳಿಸಿದ್ದು: "ಮಹಾರಾಜನದುರ್ಗದ ತಾಲೂಕಿನಿಂದ ಉಚ್ಚಂಗಿ ಮುಂತಾದ ಕೆಲು ಶೀಮೆ ನಿಂಮ ಸರಹದ್ದಿಗೆ ಮುಟ್ಟಿ ಇರುವದನ್ನು ವಿಂಗಡಿಸಿ, ನಿಂಮ ಸಂಸ್ಥಾನಕ್ಕೆ ಬಿಟ್ಟು ಕೊಡುತ್ತಾ ಇದ್ದೇವೆ. ಫರುಜಲ್ಲಾಖಾನನ ದಂಡಿನ ಕಟ್ಟು ಹೋರಳಿ ಮುಟ್ಟಿ ಇದೆ. ಆ ಬಗ್ಯೆ ಮೂರು ಲಕ್ಷ ವರಹ ಕೊಡ ಬೇಕು. ಅದರಿಂದ ನಿಂಮ ನಂಮ ಸ್ನೇಹ ಅನಂತ ಕಾಲ ಪರಿಯಂತರ ಶಾಶ್ವತವಾಗಿ ಇದ್ದೀತು" ಯಂಬದಾಗಿ, ಹೇಳಿ ಕಳುಹಿದರಿಂದ, ಕೊಡಗಿನ ಸಂಸ್ಥಾನದ ಚಿಕ್ಕವೀರಪ್ಪ ವಡೆಯರು ಜವಾಬು ಕೊಟ್ಟ ವಿವರ: "ನೀವು ಹೇಳಿದ ಮೇರೆ ಸದರಿ ಬರದ ಶೀಮೆ ಈ ಕಡೆಗೆ ಬಿಟ್ಟು ಕೊಡುವಂತಾದು[1] ಯಾವಾಗ ಬಿಟ್ಟು ಕೊಡುತ್ತೀರಿ?" ಯಂತ ಕೇಳಿದಲ್ಲಿ, ಆ ಫರುಜಲ್ಲಾಖಾನನು ಹೇಳಿದ್ದು: "ಈ ಮೂರು ಲಕ್ಷ ವರಹದಲ್ಲಿ ಕಾಲುವಾಶಿ ಹಣ ನೀವು ಕೊಟ್ಟು, ಬಾಕಿ ಹಣವಿಗೆ ನಿಂಮ ದಳವಾಯಿಯನ್ನು ಹೋಣೆ ಕೊಟ್ಟಲ್ಲಿ, ಆ ಶೀಮೆ ವಿಂಗಡಿಸಿ ಕೊಡುತ್ತೇವೆ. ಆ ಮೇಲೆ ಅಲ್ಲಿ ನಿಂಮ ಠಾಣ್ಯೆಯ[2] ಇಟ್ಟುಕೊಳ್ಳಿ" ಯಂಬದಾಗಿ ಹೇಳಿದರಿಂದ, ಈ ಅರ್ಥಕ್ಕೆ ಉಭಯ ಕಡೆಯಿಂದಲೂ ಒಪ್ಪಿ, ನಂಬಿಗೆ ಭಾಷೆ ಮಾಡಿ, ಕರಾರುನಾಮೆ ಉಭಯ ಕಡೆಯವರು ಬರಶಿ ಕೊಂಡರು. ಅದೇ ಪ್ರಕಾರ ಕೊಡಗಿನ ಸಂಸ್ಥಾನದಿಂದ ಕಾಲುವಾಶಿ ಹಣ, ಬಾಕಿ ಹಣವಿಗೆ[3] ಹೋಣೆ ಆಗಿ ದಳವಾಯಿ ತಂಮ ಬಿರಮಣ್ಣ ಯಂಬವನ ಸಹಾ, ಫರುಜಲ್ಲಾಖಾನನ ಬಳಿಗೆ ಕಳುಹಿಸಿ ಕೊಟ್ಟು, ನೀವು ಕರಾರು ಮೇರೆ ಶೀಮೆ ಬಿಟ್ಟು ಕೊಡಿ ಯಂತ ಕೇಳಿದಲ್ಲಿ, ಈ ವಿವರಕ್ಕೆ ಅರ್ಜಿ ಬರಕೊಂಡು, ಆ ಬಗೆ ಹಣ ಆ ಬಿರಮಣ್ಣನ ಸಹಾ ನವಾಬು ಹೈದರಲ್ಲೀಖಾನರ ಬಳಿಗೆ ಕಳುಹಿಸಿ ಕೊಟ್ಟನು.

ಈ ಪ್ರಕಾರ ಜವಾಬ ಸವಾಲ್ ಆಗುತ್ತಾ ಇರುವಾಗ್ಯೆ, ಚಿಕ್ಕವೀರಪ್ಪ ವಡೆಯರವರು ಕಲಿ ಸಂದ ೪೮೭೧ನೆ ವ್ಯಯ ಸಂವತ್ಸರದಲ್ಲಿ ಸ್ವರ್ಗಸ್ಥರಾದರು. ಈ ಚಿಕ್ಕವೀರಪ್ಪ ವಡೆಯರವರಿಗೆ ಅದ್ರುವಾಯು ಸಂಭವಿಸಿ ಕೊಂಡು ಬಂದದರಿಂದ, ಮಕ್ಕಸಂತಾನವಿಲ್ಲದೆ ಹೋಯಿತು. ಅದರಿಂದ ದೊಡ್ಡವೀರಪ್ಪ ವಡೆಯರವರ ಸಂತತಿ, ಮೂರು ತಲೆಯಾಂತರದ ಚಿಕ್ಕವೀರಪ್ಪ ವಡೆಯರು ಕಾಲವಾದಾಗ್ಯೆ[4], ಸಮಾಪ್ತವಾಯಿತು.

ಆ ಬಳಿಕ ನಿಂತ ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳು, ಹಾರಮಲೆ ಅರಮನೆಯಲ್ಲು ಇದ್ದ ನಂದರಾಜ ಅರಸುಗಳ ಮಗ ಮುದ್ದಯ್ಯ ಅರಸುಗಳು ಸಹಾ, ಅನ್ಯೋನ್ಯವಾಗಿ ಯೈಕ್ಯಕರದಿಂದ ಕೊಡಗಿನ ರಾಜ್ಯಭಾರ ಮಾಡಿ ಕೊಂಡು ಇರುವಾಗ್ಯೆ, ಇವರು ಫರುಜಲ್ಲಾಖಾನನ ಸಂಗಡ ಕೇಳಿದ್ದು: "ನಿಗದಿ ಮಾಡಿದ ಪ್ರಕಾರ, ನಂಮ ಸಂಸ್ಥಾನದಿಂದ ಕಾಲುವಾಶಿ ಹಣ ಕೊಟ್ಟು, ಬಾಕಿ ಹಣಕ್ಕೆ ನಂಮ ದಳವಾಯಿ ತಂಮನನ್ನು ಹೋಣೆ ಕೊಟ್ಟು ಇದ್ದೇವಷ್ಟೆ. ಇನ್ನು ಕರಾರು ಮೇರೆ ಶೀಮೆ ಯಾಕೆ ಬಿಟ್ಟು ಕೊಡುವದಿಲ್ಲಾ?" ಯಂತ ಕೇಳಿದಲ್ಲಿ, ನವಾಬು ಹೈದರಲ್ಲೀಖಾನರು ಫರುಜಲ್ಲಾಖಾನನ ಮುಖಾಂತರ ಜವಾಬು ಹೇಳಿಸಿದ್ದು: "ಈ ವರಿಗೆ ಮೊತುಕಥೆ ಮಾಡಿದ ಚಿಕ್ಕವೀರಪ್ಪ ವಡೆಯರವರು ಕಾಲವಾದರು. ಈಗ ಬದಲು ರಾಜರು[5] ಇದ್ದಾರೆ. ಅದರಿಂದ ನೀವು ಶಿರ ಹಣ ಕೊಟ್ಟರೆ, ಶೀಮೆ ಬಿಟ್ಟು ಕೊಡುತ್ತೇವೆ" ಯಂತ ಹೇಳಿಸಿದರಿಂದ, "ಕಾಲುವಾಶಿ ಹಣ ಕೊಟ್ಟು, ಬಾಕಿ ಹಣವಿಗೆ ದಳವಾಯಿಯನ್ನು ಹೋಣೆ ಕೊಟ್ಟರೆ, ಶೀಮೆ ಕೊಡುತ್ತೇನೆ ಯಂತ ಹೇಳಿ, ಈಗ ಯಾವತ್ತು ಹಣ ಕೊಟ್ಟರೆ, ಶೀಮೆ ಕೊಡುತ್ತೇನೆ ಯಂತ, ಹೇಳುತ್ತೀಯೇ? ಇನ್ನು ನಾವು ಬಾಕಿ ಹಣ ಕೊಟ್ಟರೆ, ಅದನ್ನು ತೆಗದು ಕೊಂಡು, ಕಡೆಗೆ ಶೀಮೆಯನ್ನು ಕೊಡದೆ ದಗಾ ಮಾಡುವ ಹಾಗೆ ಕಾಣುತ್ತ ಇದೆ. ನಾವು ನಿಗದಿ ಮೇರೆ ಹಣ ಕೊಟ್ಟು ಇದ್ದೇವೆ. ಇನ್ನು ಶೀಮೆ ಕೊಡು. ಬಾಕಿ ಹಣ ಕೊಡುತ್ತೇವೆ" ಯಂತ, ಹೇಳಿದಲ್ಲಿ; "ಅ

[1] ಕೊಡುವಂಥಾದ್ದು. [2] ಠಾಣ್ಯ. [3] ಹಣಕ್ಕೆ. [4] ಕಾಲವಶವಾದಾಗ್ಯೆ. [5] ರಾಜರು.

ದು ಆಗದು. ಹಣ ಮುಂದಾಗಿ ಕೊಡಿ" ಯಂತ, ಹೇಳಿದಾ. ಇವರು, "ಶೀಮೆ ಮುಂದಾಗಿ ಕೊಡು" ಯಂತ, ಹೇಳಿದರು.

ಈ ಮೇರೆ ಮಾತು ಬಂದು, ಆದ್ರೆ ವ್ಯಯ ಸಂವತ್ಸರದಲ್ಲಿ ಸಲ್ಲಾ ಮುರಿದು, ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳ ತಂಮಂದಿರಾದ ಲಿಂಗರಾಜೇಂದ್ರ ಒಡೆಯರವರಿಗೂ ಫರುಜಲ್ಲಾಖಾನನಿಗೂ ಯೆಳು ಸಾವಿರ ಶೀಮೆ ಬಳಿಯ ಜಗಳವಾಗಿ, ಫರುಜಲ್ಲಾಖಾನನ ದಂಡಿಗೆ ಬಹಳ ಪೆಟ್ಟಾಗಿ, ಅಲ್ಲಿಂದ ಅವನು ಮೊಕತಂಗಿತವಾಗಿ[1] ಬಿಸಲೆ ಗಟ್ಟಾ ಇಳಿದು ಹೋಗ ಬೇಕೆಂಬದಾಗಿ ಹೋಗುವಾಗ್ಯೆ, ಲಿಂಗರಾಜೇಂದ್ರ ಒಡೆಯರವರು ಮಂದಿ ತೆಗದು ಕೊಂಡು ಹೋಗಿ, ಬಿಸಲೆ ಗಟ್ಟದಲ್ಲು ಅಡ್ಡಗಟ್ಟಿ, ಜಗಳಾ ಮಾಡಿದಲ್ಲಿ ಫರುಜಲ್ಲಾಖಾನನ ದಂಡಿಗೆ ಬಹಳ ಪೆಟ್ಟಾಗಿ, ಅರೆವಾಶಿ ದಂಡು ಮುಳುಗಿ ಹೋಗಿ, ಆ ದಂಡಿನ ಸಾಮಾನು, ಸರಂಜಾಮು, ತೋಶಿಖಾನೆ, ಫಿರಂಗಿ ಮುಂತಾಗಿ, ಆ ಗಟ್ಟದಲ್ಲು ಬಿಟ್ಟು ಕೊಟ್ಟು, ಉಳಿಕೆ ದಂಡು ತೆಗದು ಕೊಂಡು ಹೋದನು. ಆ ಸಾಮಾನು, ಫಿರಂಗಿ, ತೋಶಿಖಾನೆ ಮುಂತಾಗಿ, ಕೊಡಗಿನ ಸಂಸ್ಥಾನದವರು ತೆಗದು ಕೊಂಡರು. ಕೊಡಗಿನ ಸಂಸ್ಥಾನದಿಂದ ಹೋಗಿ ಕೊಟ್ಟು ಇದ್ದ ದಳವಾಯಿ ತಂಮ ಚಿರಮಂಗಾ ಯಂಬವನು ಪೆಟ್ಟಿನಾದಲ್ಲಿ ಶಿಡುಬು ಆಗಿ, ಅಲ್ಲಿಯೇ ಮೃತವಾದನು. ಆ ಬಳಿಕ ಈ ಫರುಜಲ್ಲಾಖಾನನ ದಂಡು ಯಾವತ್ತು ಮುರಿದು ಫುಟಾಫುಟಿ ಆದ ವರ್ತಮಾನ ನವಾಬು ಹೈದರಲ್ಲೀಖಾನರು ಕೇಳಿ, ಕೊಡಗಿನ ಸಂಸ್ಥಾನದವರಿಗೂ ನಮಗೂ ಮುಂದೆ ಕಜಿಯಾ[2] ಇಲ್ಲದೆ ಸಲ್ಲಾ ಮಾಡಿ, ದೋಸ್ತಿ ನಡಸ ಬೇಕು, ಯಂತ ನಿಶ್ಚೈಸಿ, "ಹೆರಾಕು ನಗರದ ದಾರಿಗಳು ಅಮರಸೂಳ್ಯವಂನು ಕೊಡಗಿನ ಸಂಸ್ಥಾನಕ್ಕೆ ಶೇರಿಸಿ ಕೊಟ್ಟು ಇದ್ದರಷ್ಟೆ. ಈಗ ನಾವು ಅದರ ಸಮೀಪದಲ್ಲಿ ಇರುವ ಪಂಜೆಯ ಬೆಳ್ಳಾರೆ ಯಂಬ ಯರಡು ಮಾಗಣೆಯಂನು ಬಿಟ್ಟು ಕೊಡುತ್ತೇವೆ. ಇಂನು ಮುಂದೆ ನೀವು ನಾವು ದೋಸ್ತಿಯಿಂದ ಇರ ಬೇಕು" ಯಂಬದಾಗಿ, ಕಾಗದ ಬರಸಿ ಕಳುಹಿಸಿ, ಅದೇ ಮೇರೆ ಪಂಜೆಯ ಬೆಳ್ಳಾರೆ ಯಂಬ ಯರಡು ಮಾಗಣೆಯಂನು ನಗರದ ಶೀಮೆಯಿಂದ ಬಿಂಗಡಿಸಿ, ಕೊಡಗಿನ ಸಂಸ್ಥಾನಕ್ಕೆ ಶೇರಿಸಿ, ಸರ್ವ ಹಾಳೆ ಬಳಿಯ ತೋರಣ ಕಟ್ಟಿಸಿ, ಕಲಿ ಸಂದ ೪೮೬೧ನೆ ವಿಕ್ರಮ ಸಂವತ್ಸರದಲ್ಲಿ ಬಿಟ್ಟು ಕೊಟ್ಟರು. ಆ ಬಳಿಕ ಉಭಯ ಕಡೆಯಿಂದಲು ದೋಸ್ತಿಯಿಂದ ನಡದು ಬರುತ್ತಾ ಇದ್ದರು.

ಆ ತರುವಾಯದಲ್ಲಿ ಕೊಡಗಿನ ಸಂಸ್ಥಾನ ವಿಚಾರಿಸಿ ಕೊಂಡು, ಹಾಲೇರಿ ಅರಮನೆಯಲ್ಲು ಇದ್ದ ಮುದ್ದರಾಜ ಅರಸುಗಳು, ಹೊರಮಲೆ ಅರಮನೆಯಲ್ಲು ಇದ್ದ ನಂದರಾಜ ಅರಸುಗಳ ಮಗ ಮುದ್ದಯ್ಯರಾಜರು ಸಹಾ, ಯೆರಡು ವರುಷದ ವಳಗೆ ಮೃತವಾಗಿ ಹೋದರು.

ಆ ಬಳಿಕ ಕಲಿ ಸಂದ ೪೮೬೧ನೆ ವಿಕ್ರಮ ಸಂವತ್ಸರದಲ್ಲಿ ಕೊಡಗಿನ ಸಂಸ್ಥಾನದ ಪಟ್ಟವಾಗ ಬೇಕಾದರೆ, ಹಾಲೇರಿ ಅರಮನೆಯಲ್ಲಿ ಲಿಂಗರಾಜೇಂದ್ರ ಒಡೆಯರವರು ತಂಮ ಅಂಗನ ಮಗನಿಗೆ ಪಟ್ಟವಾಗ ಬೇಕೆಂಬದಾಗಿಯೂ, ಹೊರಮಲೆ ಅರಮನೆಯಲ್ಲು ಮಲ್ಲಯ್ಯ ಅರಸುಗಳು ತಂಮ ಮಗನಿಗೆ ಪಟ್ಟವಾಗ ಬೇಕೆಂಬದಾಗಿಯೂ, ಸಂವಾದಗಳ ಮಾಡಿ, ಗ್ರಹಚಾರದಿಂದ ಇವರು ಜಗಳಾ ಮಾಡಿದಲ್ಲಿ, ಹೊರಮಲೆ ಮಲ್ಲಯ್ಯರಾಜರ ಕಡೆ ಬಲ ಹೆಚ್ಚಾಗಿ, ಬಲಾತ್ಕಾರದಿಂದ ತಂಮ ಮಗನಾದ ದೇವಪ್ಪರಾಜರಿಗೆ ಮಡಿಕೇರಿಯಲ್ಲಿ ಪಟ್ಟವಂನು ಕಟ್ಟಿ, ಈ ಕೊಡಗಿನ ರಾಜ್ಯದ ಆಳಿಕೆಯಂನು ಮಾಡಿ ಕೊಂಡು, ಆ ಬಳಿಕ ಹಾಲೇರಿಯಲ್ಲು ಇದ್ದ ಲಿಂಗರಾಜೇಂದ್ರ ಒಡೆಯರವರಿಗೆ ಹೇರಳ ತಿರುಕುಳ ಮಾಡಿದರಿಂದ, ಇವರ ತಿರುಕುಳದಲ್ಲಿ ನಿಸ್ತರಿಸಲಾರದೆ, ಲಿಂಗರಾಜೇಂದ್ರ ಒಡೆಯರವರು ತಂಮ ಕುಮಾರರಾದ ವೀರರಾಜೇಂದ್ರ ಒಡೆಯರವರಂನು, ತಂಮ ಅಂಗನ ಮಗ ಅಪ್ಪಾಜಿರಾಜರು, ಅವರ ಮಕ್ಕಳ ಇಬ್ಬರ ಸಹಾ ಕರದು ಕೊಂಡು, ಐಗೂರ ಶೀಮೆಗೆ ಹೋಗಿ, ಅಲ್ಲಿ ಇದ್ದು, "ಹೈದರಲ್ಲೀಖಾನರು, ನಂಮ ಸಂಸ್ಥಾನದ ದೋಸ್ತಿ ಇರ ಬೇಕೆಂಬದಾಗಿ, ಪಂಜೆಯ ಬೆಳ್ಳಾರೆ ಯರಡು ಮಾಗಣೆಯಂನು ತಂಮ ಕಡೆಯಿಂದ ನಂಮ ಶೀಮೆಗೆ ಬಿಟ್ಟು ಕೊಟ್ಟು, ದೋಸ್ತಿ ಇಟ್ಟು ಇದ್ಧಾರೆ. ಈ ಸಮಯದಲ್ಲಿ ನಂಮ ದಾಯಾದ್ಯರು ನಂಮ ರಾಜ್ಯ ಆಕ್ರಮಿಸಿ ಕೊಂಡು ಇರುವಂಥಾ ವಿವರ ಇವರಿಗೆ ಹೇಳಿದರೆ, ನಮಗೆ ಕುಮುಕು ಮಾಡಿ, ಆ ದಾಯಾದ್ಯರ ಕೈಯಿಂದ ನಂಮ ರಾಜ್ಯ ಬಿಡಿಸಿ ಕೊಟ್ಟಾರು" ಯಂಬದಾಗಿ ಗ್ರಹಿಸಿ, ಈ ವಿವರವಾಗಿ ಹೈದರಲ್ಲೀಖಾನರಿಗೆ ಕಾಗ

[1] ಮುಖಭಂಗಿತವಾಗಿ. [2] ಖಜೀಯ.

ದವಂನು ಬರದು, ಮುಟ್ಟನ ಹೊಳ್ಳೆ ಬಸವನ ಕೈಯ ಕೊಟ್ಟು, ಅವನ ಸಂಗಡ ಹಾಸಿಕಾರರ ಕೂಡಿಸಿ ಕಳುಹಿದಲ್ಲಿ, ಹೈದರಲ್ಲೀಖಾನರು ಆ ಕಾಗದವಂನು ನೋಡಿ, ಬಹಳ ಸಂತೋಷ ಪಟ್ಟು, "ಯಾವ ಬಗ್ಯೆಯೂ ಚಿಂತೆ ಮಾಡ ಬೆಯಾಡ.[1] ಬೇಕಾದ ಕುಮುಕು ಮಾಡಿ, ನಿಂಮ ಮನಸಿನಲ್ಲಿರುವ[2] ಪ್ರಕಾರ ಮಾಡಿ ಕೊಡುವಲ್ಲಿ ಅಂತರವಿಲ್ಲಾ" ಯಂಬದಾಗಿ, ನಂಬಿಗೆ ಭಾಷೆಯಿಂದ ಜವಾಬು ಬರೆಸಿ ಕಳುಹಿದರಿಂದ, ಆವಾಗ್ಯೆ ಲಿಂಗರಾಜೇಂದ್ರ ವಡೆಯರವರು ಆ ಮಾತ ನಂಬಿ, ನವಾಬ ಹೈದರಲ್ಲೀಖಾನರ ಬಳಿಗೆ ಹೋಗಿ ಭೇಟಿ ಆದಲ್ಲಿ: "ನಿಂಮ ರಾಜ್ಯ ಬಿಟ್ಟು, ಯೇನು ಉದ್ದಿಶ್ಯ ನಂಮ ಬಳಿಗೆ ಬಂದಿರಿ?" ಯಂಬದಾಗಿ, ಹೈದರಲ್ಲೀಖಾನರು ಕೇಳಿದಲ್ಲಿ, ಸದರಿ ಬರದ ವಿವರ ಯಾವತ್ತು ಹೇಳಿದರು. "ಆ ಬಗ್ಯೆ ಚಿಂತೆ ಯೇನದೆ? ನಿಂಮ ದೇಶವಂನು ನಾವು ಬಿಡಿಸಿ ಕೊಟ್ಟೇವು. ನೀವು ಚಿಂತೆ ಮಾಡ ಬೇಡಿ" ಯಂಬದಾಗಿ, ನಂಬಿಗೆ ಭಾಷೆ ಕೊಟ್ಟು, ಬಹಳ ಬಗೆ ಹೇಳಿ, ತಂಮ ಬಳಿಯ ಇಟ್ಟು ಕೊಂಡು ಇದ್ದಲ್ಲಿ, ಕಲಿ ಸಂದ ೪೮೭೨ನೆ ಖರ ಸಂವತ್ಸರದಲ್ಲಿ ಮಹಾರಾಷ್ಟ್ರದಿಂದ ತ್ರಿಯಂಬಕ ಮಾಮನು, ಹೇರಳ ಫೌಜು ತೆಗದು ಕೊಂಡು, ನವಾಬ ಹೈದರಲ್ಲೀಖಾನರ ಮೇಲೆ ಜಗಳಕ್ಕೆ ಬಂದು, ಮೈಸೂರ ಸಂಸ್ಥಾನದ ಶೀಮೆ ಯಾವತ್ತು ದವುಡುದಾಳಿ ಮಾಡಿ ಹಾಳು ಮಾಡುತ್ತಾ ಇದ್ದಲ್ಲಿ, ನವಾಬ ಹೈದರಲ್ಲೀಖಾನರಿಗೂ ತ್ರಿಯಂಬಕ ಮಾಮಗೂ ಚಿನುಕುಳ್ಳಿ ಬಳಿಯ ಹೇರಳ ಲಡಾಯಿವಾಗಿ, ಹೈದರಲ್ಲೀಖಾನರ ದಂಡು ಯಾವತ್ತು ಮುಳುಗಿ ಹೋಗಿ, ಒಂದು ಕುದುರೆ ಮೇಲೆ ಹತ್ತಿ ಕೊಂಡು, ಹೈದರಲ್ಲೀಖಾನರು ಪಟ್ಟಣಕ್ಕೆ ಹೋದರು. ಆ ಬಳಿಕ ತ್ರಿಯಂಬಕ ಮಾಮನ ದಂಡು ಖರ ನಂದನ ಯೆರಡು ವರುಷ ಹೈದರಲ್ಲೀಖಾನರ ಶೀಮೆ ಯಾವತ್ತು ಸೂರೆಸುಲಿಗೆ ಮಾಡುತ್ತಾ ಇದ್ದದರಿಂದ, ನವಾಬ ಹೈದರಲ್ಲೀಖಾನರು ತ್ರಿಯಂಬಕ ಮಾಮನ ಸಂಗಡ ಸಲ್ಲದ[3] ಸವಾಲು ಜವಾಬು ಮಾಡಿ ಕೊಂಡು, ಹೇರಳ ದ್ರವ್ಯ ಕೊಟ್ಟದರಿಂದ, ಅವರು ತಂಮ ಫೌಜು ಯಾವತ್ತು ತೆಗದು ಕೊಂಡು, ಹೈದರಲ್ಲೀಖಾನರಿಗೆ ಶೇರಿದ ಶೀಮೆ ಬಿಟ್ಟು, ಮಹಾರಾಷ್ಟ್ರಕ್ಕೆ ಹೋದರು.

ಈ ತ್ರಿಯಂಬಕ ಮಾಮನ ಅತಂತ್ರದಿಂದ ಹೈದರಲ್ಲೀಖಾನರ ಶೀಮೆ ಯಾವತ್ತು ಬರ ಹತ್ತಿ, ಶೀಮೆ ರೈತರಿಗೂ ದಂಡಿನ ಮಂದಿಗೂ ಅಂನವಿಲ್ಲದೆ, ಹೇರಳ ಜನ ಮೃತವಾಗುತ್ತಾ ಇದ್ದಲ್ಲಿ, ಲಿಂಗರಾಜೇಂದ್ರ ವಡೆಯರವರು ಹೈದರಲ್ಲೀಖಾನರ ಸಂಗಡ ಹೇಳಿದ್ದು: "ತ್ರಿಯಂಬಕ ಮಾಮನ ಅತಂತ್ರದಿಂದ ತಂಮ ಶೀಮೆ ಯಾವತ್ತು ಕೆಟ್ಟು ಹೋಗಿ, ಬರ ಹತ್ತಿ, ಹೇರಳ ಜನ ಅಂನವಿಲ್ಲದೆ ಮೃತವಾಗಿ ಹೋಗುತ್ತಾ ಇದ್ದಾರೆ. ಈ ಸಮಯದಲ್ಲಿ ನಂಮ ಕೊಡಗಿನ ಶೀಮೆಗೆ ದಂಡು ತೆಗದು ಕೊಂಡು ಹೋದದ್ದೆ ಉಂಟಾದರೆ, ಆ ಶೀಮೆಯಲ್ಲಿ ಹೇರಳ ಧಾನ್ಯ ಶಿಕ್ಕುತ್ತ ಇದೆ. ನಿಂಮ ಶೀಮೆ ಜನಕ್ಕೆ ಅಂನವಾಗುತ್ತ ಇದೆ. ಈ ಬರಗಾಲವು ಕಳದು ಹೋಗುತ್ತದೆ" ಯಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಹೈದರಲ್ಲೀಖಾನರು ಒಡಂಬಟ್ಟು, ತಂಮ ದಂಡಂನು ತೆಗದು ಕೊಂಡು, ಲಿಂಗರಾಜೇಂದ್ರ ವಡೆಯರಂನು ಕರದು ಕೊಂಡು, ಕಲಿ ಸಂದ ೪೮೭೪ನೆ ವಿಜಯ ಸಂವತ್ಸರದಲ್ಲಿ, ಅರಕಲಗೋಡ ಕಡೆಯಿಂದ ಕೊಡಗಿನ ಶೀಮೆ ಒಳತವಾದ ಬೆಟ್ಟತ್ತಗುವೆ ಮಾರ್ಗವಾಗಿ ಕೊಡಗಿನ ಶೀಮೆ ಒಳಕ್ಕೆ ಬಂದಲ್ಲಿ, ಯಡವನಾಡ ಬಳಿಯ ಹೈದರಲ್ಲೀಖಾನ್ ಬಹಾದ್ದರವರ ದಂಡಿಗೂ ಕೊಡಗ ಜನಕ್ಕೂ ಜಗಳವಾಗಿ, ಹೈದರಲ್ಲೀಖಾನರ ದಂಡಿಗೆ ಬಹಳ ಪೆಟ್ಟಾಗಿ, ಮುರುದು ಹಿಂದಕ್ಕೆ ಹೋಗಿ, ಅರಕಲಗೋಡ ಬಳಿಯಲ್ಲು ಇಳುದು ಕೊಂಡು;—"ಈ ಮೇರೆ ನಂಮ ದಂಡು ಒಳನುಗ್ಗುವದಕ್ಕೆ ಕೊಡಗರು ಆಸ್ಪದ ಕೊಡದೆ ಹೋದರು. ನಿಂಮ ಶೀಮೆ ಮಾರ್ಗವಾದರೆ, ಬಹಳ ಇಕ್ಕಟ್ಟು. ಇಂನು ಮುಂದೆ ಯೇನು ಉಪಾಯ?" ಯಂತ, ಹೈದರಲ್ಲೀಖಾನರು ಲಿಂಗರಾಜೇಂದ್ರ ವಡೆಯರವರ ಕೇಳಿದಲ್ಲಿ ಅವರು ಹೇಳಿದ್ದು: "ನಂಮ ಕೊಡಗಿನ ಶೀಮೆಯಲ್ಲಿ ಬಹಳ ಜನ ಕೊಡಗರು ನಮಗೆ ಆಪ್ತರು ಇದ್ದಾರೆ. ಅವರಿಗೆಲ್ಲಾ ನಾವು ಅಂತರಂಗದಲ್ಲಿ ಬರದು ಕಳುಹಿಸಿ, ಕೆಲ ಕೊಡಗ ಜನರ ನಂಮ ಕಡೆ ಸಹಾಯ ಮಾಡಿ ಕೊಂಡು, ಹೇರಳ ಲಡಾಯಿ ಬೀಳದಂತೆ, ಸರಾಗ ಮಾರ್ಗದಲ್ಲಿ ಕೊಡಗಿನ ಶೀಮೆ ಒಳಗೆ ದಂಡಂನು ತೆಗದು ಕೊಂಡು ಹೋಗುತ್ತೇವೆ" ಯಂಬದಾಗಿ ಹೇಳಿದಲ್ಲಿ, "ಅದೇ ಮೇರೆ ಮಾಡಿ!" ಯಂಬದಾಗಿ ಹೇಳಿದರು. ಆ ಬಗ್ಯೆ ತಮಗೆ ಆಪ್ತರಾದಂಥ ಕೊಡಗರಿಗೆ ಬರದು ಕಳುಹಿದ ವಿವರ:" ನಂಮ ನಂಮ ಗ್ರಹಹಾಟದ್ರವಾಗಿ, ಅಂಣತಂಮಂದಿರು ಜಗಳಾ ಮಾಡಿ ಕೊಂಡು, ನಾವು ನವಾಬ ಹೈದರಲ್ಲೀಖಾನರ ಬಳಿಗೆ ಹೋಗಿ ಹೇಳಿದಲ್ಲಿ, "ನಿಂಮ ಅಂಣತಂಮಂದಿರ ನ್ಯಾಯ

[1] ಬೇಡ. [2] ಮನಸಿನಲ್ಲಿ. [3] ಸಲ್ಲದ.

ಯ ತೀರಿಸಿ, ನಿಂಮ ರಾಜ್ಯ ನಿಮಗೆ ದಾಯಾದ್ಯರ ಕೈಯಿಂದ ಬಿಡಿಸಿ ಕೊಡುತ್ತೇವೆ," ಯಂಬದಾಗಿ ಹೇಳಿ, ಭಾರಿ ಫೌಜ ತೆಗದು ಕೊಂಡು ಬಂದು ಇದ್ದಾರೆ. ಅದರಿಂದ ನಂಮ ದಾಯಾದ್ಯರ ಮಾತಿನ ಮೇಲೆ ನೀವು ನಂಮ ಸಂಗಡ ಜಗಳಾ ಮಾಡಿದ್ದುಂಟಾದರೆ, ನಿಮಗೆ ಬಹಳ ದಗ ತೋರೀತು "ಯಂಬದಾಗಿ, ನಯ ಭಯ ತೋರಿ ಬರದು ಕಳುಹಿದಲ್ಲಿ, ಆ ಮಾತಿಗೆ ಕೆಲು ಕೊಡಗರು ರಾಜರಿಗೆ ಅಪಕಾರದಂಥಾವರು ಪಡಂಬಟ್ಟರು," ನೀವು ಬಾಳೆಲೆ ಮಾರ್ಗವಾಗಿ ಬಂದರೆ, ನಾವು ಅಲ್ಪ ಸ್ವಲ್ಪ ಲಡಾಯಿ ಮಾಡಿ, ನಿಂಮ ಸಂಗಡ ಕೂಡುತ್ತೇವೆ "ಯಂಬದಾಗಿ, ಬರಸಿ ಕಳುಹಿಸಿದರಿಂದ, ಈ ವಿವರ ಲಿಂಗರಾಜೇಂದ್ರ ವಡೆಯರವರು ನವಾಬ ಹೈದರಲ್ಲೀಖಾನರಿಗೆ ಹೇಳಿದಲ್ಲಿ, ಆ ಮಾತಿಗೆ ಪಡಂಬಟ್ಟು, ಬಾಳೆಲೆ ಮಾರ್ಗವಾಗಿ ದಂಡು ತೆಗದು ಕೊಂಡು ಬಂದಲ್ಲಿ, ಅಲ್ಲಿ ಇದ್ದಂಥ ಕೊಡಗರು ಅಪಕಾರದಂಥವರು, ಅಲ್ಪ ಸ್ವಲ್ಪ ಲಡಾಯಿ ಮಾಡಿ, ಲಿಂಗರಾಜೇಂದ್ರ ವಡೆಯರವರ ಕಡೆಗೆ ಬಂದು ಕೂಡಿ, ದಂಡಂನು ವಳಕ್ಕೆ ಬಿಟ್ಟು ಕೊಂಡ ಕಾರಣ, ಆ ದೇವಪ್ಪರಾಜರು ಈ ಸೀಮೆಯಲ್ಲಿ ನಿಲ್ಲಲಾರದೆ, ಗಟ್ಟಾ ಇಳಿದು, ಮಲೆಯಾಳಕ್ಕೆ ಹೋದರು. ಆ ಬಳಿಕ ಆ ದೇವಪ್ಪರಾಜರ ಕುಟುಂಬ ಮಕ್ಕಳು ಅವರ ಸಂತತಿ ಯಾವತ್ತು, ಪಟ್ಟಣಕ್ಕೆ ಹಿಡಿದು ಕೊಂಡು ಹೋಗಿ, ಸೆರೆ ಹಾಕಿದರು. ಮಲೆಯಾಳಕ್ಕೆ ಹೋದ ದೇವಪ್ಪರಾಜರ ಕೋಟೆ ಅರಸುಗಳು ನಂಬಿಗೆ ಕೊಟ್ಟು ಕರಸಿ, "ನಿಂಮ ಹಿರಿಯರಾದ ದೊಡ್ಡವೀರಪ್ಪ ವಡೆಯರವರು ನಂಮ ಕಾರಣವರಾದವರ ಶ್ರಾಮರದಲ್ಲಿ ತಲೆ ಹೊಡದು ಹೋಗಿದ್ದಾರೆ. ಅದರ ಬದಲಿಗೆ ನಿಂಮ ತಲೆ ಕೊಡಿ! ಅಲ್ಲದಿದ್ದರೆ ತಲೆಬೆಲೆ ದ್ರವ್ಯ ಕೊಡಿ!" ಯಂಬದಾಗಿ ಕೇಳಿದರಿಂದ, ಆ ದೇವಪ್ಪರಾಜರು ಲಾಚಾರಾಗಿ, ನಾಲ್ವತ್ತು ಸಾವಿರ ಹಣ ತಲೆಬೆಲೆ ಕೊಟ್ಟು, ಅಲ್ಲಿ ನಿಲ್ಲಲಾರದೆ, ಸಂಗಡ ಇದ್ದ ಜನವಂನೆಲ್ಲಾ ಅಲ್ಲಿ ಬಿಟ್ಟು, ಬದಲು ವೇಷ ಹಾಕಿ ಕೊಂಡು, ನಾಲ್ಕು ಜನರ ಸಂಗಡ ಕರದು ಕೊಂಡು, ಮರಾಟಿ ಸೀಮೆಗೆ ಹೋದಿ ಹೋಗುತ್ತಿದ್ದಲ್ಲಿ, ಹಾದಿಯಲ್ಲಿ ಹೈದರಲ್ಲೀಖಾನರ ಕಡೆಯವರು ಹಿಡಿದು ಶ್ರೀರಂಗಪಟ್ಟಣಕ್ಕೆ ಕಳುಹಿಸಿ ಕೊಟ್ಟದರಿಂದ, ಆ ದೇವಪ್ಪ ರಾಜರ ಪಟ್ಟಣದಲ್ಲಿ ಸೆರೆ ಹಾಕಿ, ಇವರಂನೂ ಇವರ ಕುಟುಂಬ ಮಕ್ಕಳು ಹೊರಮಲೆಯವರ ಸಂತತಿ ಯಾವತ್ತನ್ನೂ ಕೊಂಡು ಹೋಗಿ ಬಿಟ್ಟದರಿಂದ, ದೊಡ್ಡವೀರಪ್ಪ ವಡೆಯರವರ ಯರಡನೇ ಚಿಕ್ಕ ತಂಮಂದಿರಾಗಿ ಹೊರಮಲೆಯಲ್ಲಿ ಇದ್ದ ನಂದರಾಜ ಅರಸುಗಳ ಸಂತಾನ ಯಾವತ್ತೂ ಇವರ ಮಗನಾದ ದೇವಪ್ಪರಾಜರ ಕಾಲಕ್ಕೆ, ಕಲಿ ನಂದ ೪೮೭೭ನೇ ಜಯ ಸಂವತ್ಸರಕ್ಕೆ, ಸಮಾಪ್ತವಾಯಿತು.

ಆ ಬಳಿಕ ನವಾಬ ಹೈದರಲ್ಲೀಖಾನರು ಲಿಂಗರಾಜೇಂದ್ರ ವಡೆಯರವರ ಸಂಗಡ ಹೇಳಿದ್ದು: "ನಿಂಮ ಸೀಮೆ ನಿಂಮ ದಾಯಾದ್ಯರ ಕೈಯಿಂದ ತಪ್ಪಿತು. ನಿಂಮ ದಾಯಾದ್ಯರಾದ ದೇವಪ್ಪರಾಜರು ನಂಮ ಕೈಗೆ ಸಿಕ್ಕಿದರು. ಸೀಮೆ ಬಿಡಿಸಿ ಕೊಡುವ ಬಗ್ಯೆ ನಂಮ ದಂಡು ತೆಗದು ಕೊಂಡು ಬಂದದರಿಂದ, ನಂಮ ದಂಡಿನ ಹೇರಳ ಮಂದಿಯು ಮೃತವಾದರು. ಈ ದಂಡಿನ ಖರ್ಚು ಹೇರಳ ಮುಟ್ಟಿ ಇದೆ. ಕರಾರು ಮೇರೆ ನಿಂಮ ಸೀಮೆಯಂನು ನಿಂಮ ವಶ ಮಾಡಿಕೊಂಡು, ಈ ಬಗೆ ಖರ್ಚು ಆಗಿರುವ ದ್ರವ್ಯ ನಮಗೆ ಕೊಡ ಬೇಕು," ಯಂಬದಾಗಿ ಹೇಳಿದಲ್ಲಿ, ಲಿಂಗರಾಜೇಂದ್ರ ವಡೆಯರವರು ಹೇಳಿದ್ದು: "ಈ ವರಿ ಪರಿಯಂತರಕ್ಕೆ ನಂಮ ದಾಯಾದಿ ದೇವಪ್ಪರಾಜರು ದೊರೆತನ ಮಾಡಿ ಕೊಂಡು, ನಂಮ ಸಂಸ್ಥಾನದ ದ್ರವ್ಯ ಯಾವತ್ತು ಅವರು ತೆಗದು ಕೊಂಡು ಹೋದರು. ಈಗ ನಮಗೆ ಹಣ ಯೆಲ್ಲಿ ಇದೆ?" ಯೆಂತ ಹೇಳಿದಲ್ಲಿ, ಆವಾಗ್ಯೆ ಹೈದರಲ್ಲೀಖಾನರು ಹೇಳಿದ್ದು: "ನಿಂಮ ಸೀಮೆ ನಿಮಗೆ ಬಿಟ್ಟು ಕೊಡುತ್ತಾ ಇದ್ದೇವೆ. ನಂಮ ದಂಡಿನ ಖರ್ಚಿನ ಉದ್ದಿಶ್ಯವಾಗಿ ಕಾಲಂಪ್ರತಿಯಲ್ಲಿ ಇಪ್ಪತ್ತುನಾಲ್ಕು ಸಾವಿರ ರೂಪಾಯಿ ಕೊಟ್ಟು ಬರ ಬೇಕು," ಯಂಬದಾಗಿ ಹೇಳಿದಲ್ಲಿ, ಲಿಂಗರಾಜೇಂದ್ರ ವಡೆಯರವರು ಹೇಳಿದ್ದು: "ನಂಮ ಸಂಸ್ಥಾನಕ್ಕೆ ವರಾಕು ಕಲ್ಪಾತಿ ಪರಿಯಂತರಕ್ಕು ಕೆಲು ಬೈನಾಡ ಸೀಮೆ ಸೇರಿ ಇತ್ತು. ಈಚೆಗೆ ಕೆಲು ದಿವಸದಿಂದ ಅದಂನು ಕೋಟೆ ಅರಸುಗಳು ಆಕ್ರಮಿಸಿ ಕೊಂಡು ಇದ್ದಾರೆ. ಅವರ ಕೈಯಿಂದ ಬಿಡಿಸಿ, ನಮಗೆ ಕೊಟ್ಟು, ಕಲ್ಪಾತಿ ಪರಿಯಂತರ ನಂಮ ಟಾಂಗೆಯ[1] ಮಡಗಿ ಕೊಟ್ಟರೆ, ಸದರಿ ಹೇಳಿದ ಮೇರೆ ಹಣವಂನು ಕಾಲಂಪ್ರತಿಯಲ್ಲಿ ತಂಮ ಸರಕಾರಕ್ಕೆ ಸಂದಾಯ ಮಾಡಿ ಕೊಟ್ಟೇವು. ನಾವು ಖುಷಿಯಿಂದ ನಂಮ ಸೀಮೆಯಲ್ಲಿ ಇದ್ದೇವು," ಯಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಹೈದರಲ್ಲೀಖಾನರು ಹೇಳಿದ್ದು: "ಕೊಡಗಿನ ಸೀಮೆ ಬಂದುಬ

[1] ಠಾಣ್ಯ.

ಸ್ತು ಮಾಡಿ ಕೊಂಡು, ಇರ ತಕ್ಕ ಬಗ್ಯೆ ಮಡಿಕೇರಿಯಲ್ಲು ನಿಂಮ ಅಂಣನ ಮಗನಿಗೆ[1] ಮದ್ವೆ, ನೀವು ನಂಮ ಸಂಗಡ ಪಟ್ಟಣಕ್ಕೆ ಬಂದರೆ, ಕಲ್ಪಾತಿ ಪರಿಯಂತರ ಬೈನಾಡು ನಿಂಮ ಶೀಮೆಯಂನು ಕೋಟೆ ಅರಸುಗಳು ಈಗ ಆ ಕ್ರಮಿಸಿ ಕೊಂಡು ಇರುವಂಥಾದ್ದು ವಿಚಾರಮುಖದಿಂದ ಕೊಡಗಿನ ಶೀಮೆಗೆ ಶೇರಿದ್ದು ಶಾಕ್ಷಿಯು ಪಾವುದಾದರೆ, ಅಲ್ಲಿ ನಿಂಮ ಠಾಣ್ಯೆಯು ಇರಿಸಿ ಕಾದಲಾದೀತು," ಯಂಬದಾಗಿ ಪೇಳಿದಲ್ಲಿ, ಆ ಮಾತಿಗೆ ವಡಂಬಟ್ಟು, ಲಿಂಗರಾಜೇಂದ್ರ ವಡೆಯರವರು ತಂಮ ಅಂಣನ ಮಗನಾದ ಅಪ್ಪಾಜಿ ಅರಸುಗಳಿಗೆ ಪಟ್ಟಾ ಕಟ್ಟಿ, ಮಡಿಕೇರಿಯಲ್ಲು ಇಟ್ಟು, ನವಾಬು ಪೈದರಲ್ಲೀಖಾನರ ಸಂಗಡ ಪಟ್ಟಣಕ್ಕೆ ಹ್ಯಾದಲ್ಲಿ, ಆ ನವಾಬರು ಕಲ್ಪಾತಿ ಸಮೀಪದಲ್ಲಿರುವಂಥ ಪಾಳೆಬರಂನು ಕರಸಿ ವಿಚಾರಿಸಿದಲ್ಲಿ, ಆ ಜನರು ಹೇಳಿದ್ದು: "ಅತಃಪೂರ್ವ ಕಲ್ಪಾತಿ ಪರಿಯಂತರಕ್ಕು ಕೊಡಗಿನ ಸಂಸ್ಥಾನಕ್ಕೆ ಶೇರಿ ಇತ್ತು. ಕೆಲವು ಕಾಲದಿಂದ ಕೋಟೆ ಅರಸುಗಳು ಪಾತಿ ಕೊಂಡು ಇದ್ಧಾರೆ." ಯಂಬದಾಗಿ, ಆ ಜನರು ಹೇಳಿದಲ್ಲಿ, ಈ ವಿವರ ಹೈದರಲ್ಲೀಖಾನರು ಕೇಳಿದು, ಲಿಂಗರಾಜೇಂದ್ರ ವಡೆಯರವರಿಗೆ ಹೇಳಿದ್ದು: "ನೀವು ಕೊಡಗಿನ ರಾಜ್ಯಕ್ಕೆ ಹ್ಯಾಗಿ, ಕೊಡಗಿನ ಶೀಮೆಗೆ ಶೇರಿದ ಕಲ್ಪಾತಿ ಸರಹದ್ದಿನಲ್ಲಿ ನಿಂಮ ಠಾಣ್ಯೆಯು ಇಟ್ಟು, ಬಂದುಬಸ್ತು ಮಾಡಿ ಕೊಳ್ಳಿ!" ಯಂಬದಾಗಿ ಹೇಳಿದ್ದರಿಂದ, ಅದ್ದೇ ಮೇರೆ ಲಿಂಗರಾಜೇಂದ್ರ ವಡೆಯರವರು ಕೊಡಗಿನ ಶೀಮೆಗೆ ಬಂದು, ಮೂರು ಸಾವಿರ ಪರಿಯಂತರ ಕೊಡಗು ಮಂದಿಯಂನು ತಂಮ ಸಂಗಡ ತೆಗದು ಕೊಂಡು ಪ್ಯಾಗಿ, ಕಲ್ಪಾತಿ ಸರಹದ್ದಿನಲ್ಲಿ, ಲಕ್ಕಡಿ[2] ಕೋಟೆ ತಯಾರು ಮಾಡಿಸಿ, ವಂದು ವರುಷ ಅಲ್ಲಿ ಇದ್ದು, ಆ ಬಳಿಕ ಆ ಕೋಟೆಯಲ್ಲಿ ಯರಡು ಸಾವಿರ ಕೊಡಗ ಮಂದಿಯಂನು ಗಡಿ ಬಂದುಬಸ್ತಿನ ಬಗ್ಯೆ ಇಟ್ಟು, ಆ ಮಂದಿಗೆ ಸರದಾರ ಕಾಗ್ಗಾಡಲ ನಾಡ ಅಂಣಪ್ಪನ ಅಪ್ಪೆಯನ ನೇಮಿಸಿ ಇಟ್ಟು, ಆ ಲಕ್ಕಡಿ ಕೋಟೆ ಕಿಲ್ಲೆದಾರಿಕೆಯಂನು ಯಡವಾಲಕುನಾಡ ಮಂಜರ ಅಪ್ಪೆಯಗೆ ನೇಮಿಸಿ, ಉಳಿಕೆ ವಂದು ಸಾವಿರ ಕೊಡಗ ಮಂದಿಯಂನು ತೆಗದು ಕೊಂಡು, ಲಿಂಗರಾಜೇಂದ್ರ ವಡೆಯರವರು ಕೊಡಗಿನ ಶೀಮೆಗೆ ಬಂದು ಇರುತ್ತಿದ್ದಲ್ಲಿ, ಕಲಿ ಸಂದ ೪೮೭೭ನೆ ಮನ್ಮಥ ಸಂವತ್ಸರದಲ್ಲಿ, ಈ ರಾಜ್ಯಭಾರ ಮಾಡುತ್ತಿದ್ದ ಅಪ್ಪಾಜಿ ರಾಜರು ಮೃತವಾದ್ದರಿಂದ, ಆ ಬಳಿಕ ಲಿಂಗರಾಜೇಂದ್ರ ವಡೆಯರವರು, ತಂಮ ಮಕ್ಕಳು, ತಂಮ ಅಂಣನ ಮಗ ಅಪ್ಪಾಜಿರಾಜರ ಮಕ್ಕಳು ಮೂವರ ಸಹಾ, ಸಲಹಿ ಕೊಂಡು, ರಾಜ್ಯಭಾರ ಮಾಡಿ ಕೊಂಡು ಇರುತ್ತಾ ಇದ್ದಲ್ಲಿ, ಕಲ್ಪಾತಿ ಲಕ್ಕಡಿ ಕೋಟೆಯಲ್ಲಿ ಕೊಡಗ ಜನ ಆ ಸರದಾರ ಕಿಲ್ಲೆದಾರ ಸಹಾವಾಗಿ, ಕಲಿ ಸಂದ ೪೮೭೬ನೆ ಜಯ ಸಂವತ್ಸರದಾರಭ್ಯ, ಕಲಿ ಸಂದ ೪೮೮೦ನೆ ವಿಳಂಬಿ ಸಂವತ್ಸರದ ವರಿಗೆ ಐದು ವರುಷ ಆ ಕಲ್ಪಾತಿಯಂನು ಬಲುಕಾಯಿಸಿ ಕೊಂಡು ಇರುತ್ತಿದ್ದಲ್ಲಿ, ಆ ಕೋಟೆಯಲ್ಲಿ ಇದ್ದಂಥಾ ರಸ್ತು ಮುಸ್ತೆದೆ ಯಾವತ್ತು ತೀರಿ ಹ್ವಾದ್ದರಿಂದ, ಕೋಟೆ ಅರಸುಗಳು ಆ ಕೋಟೆ ವಳಗೆ ಠಾಣ್ಯೆಯು ಇರುವ ಜನಕ್ಕೆ ರಸ್ತು ಬರುವಂಥಾ ಪಥಮಾರ್ಗ ಮುಟ್ಟಿಸಿ, ಆ ಶೀಮೆಯಲ್ಲಿ ಹೇರಳ ಕಿರುಕುಳ ಮಾಡಿದರಿಂದ, ಕೊಡಗು ಮಂದಿಗೆ ಸಾಮಾನು ಶಿಕ್ಕದೆ, ಬೇಜಾರಾಗಿ ಆ ಕಲ್ಪಾತಿ ಲಕ್ಕಡಿ ಕೋಟೆಯಲ್ಲಿ ಠಾಣ್ಯೆಯು ಇದ್ದ ಮಂದಿಯಂನು ಯಬ್ಬಿಸಿ ಕೊಂಡು, ಇಬ್ಬರು ಕೊಡಗು ಸರದಾರರು, ಕಲಿ ಸಂದ ೪೮೮೧ನೆ ವಿಕಾರಿ ಸಂವತ್ಸರದ ಚೈತ್ರ ಮಾಸದಲ್ಲಿ, ಕೊಡಗಿನ ಶೀಮೆಗೆ ಬಂದು, ಈ ವಿವರ ಯಾವತ್ತು ಲಿಂಗರಾಜೇಂದ್ರ ವಡೆಯರವರಿಗೆ ಅರಿಕೆ ಮಾಡಿದಲ್ಲಿ, ಅದ ಕೇಳಿ, ಆ ಬಳಿಕ ಲಿಂಗರಾಜೇಂದ್ರ ವಡೆಯರವರು ತಂಮ ಅಂಣನ ಮಗ ಅಪ್ಪಾಜಿ ಅರಸುಗಳ ಮಕ್ಕಳು ಇಬ್ಬರ ಸಂಗಡ ಯರಡು ಸಾವಿರ ಕೊಡಗು ಮಂದಿಯಂನು ಕೂಡಿಸಿ, ಕಲ್ಪಾತಿ ಗಡಿ ಬಂದುಬಸ್ತು ಮಾಡಿ ಕೊಂಡು, ಠಾಣ್ಯೆಯು ಇರುವದಕ್ಕೆ ಕಳುಹಿದಲ್ಲಿ, ಈ ಮಂದಿ ಹ್ವಾಗುವಂಥ ಮಾರ್ಗವಂನು ಕೋಟೆ ಅರಸುಗಳು ಮಂದಿ ಇಟ್ಟು ಕಟ್ಟಿ, ರಾತ್ರೆಕಾಲದಲ್ಲಿ ಮರೆಮೋಸದಿಂದ ಬಿದ್ದು, ಈ ಕೊಡಗ ಜನರ ಯಾವತ್ತು ಕಡುದು ಪಾಕಿ, ವಬ್ಬ ದೊರೆ ಮಗನಂನು ಕಡುದು ಪಾಕಿ, ಮತ್ತೊಬ್ಬ ದೊರೆಮಗಂನ ಕೆಶರೆ ಹಿಡಿದು ಕೊಂಡು ಹ್ವಾಗಿ, ಕದನೂರುಕೂಲಾ ಯಂಬಲ್ಲಿ ಶೆರೆ ಪಾಕಿ, ಕೊಂದು ಬಿಟ್ಟರು.

ಆ ಬಳಿಕ ಇದ್ದೇ ಮಾಘ ಬ. ೧೦ ಬುಧವಾರ, ಘಳಿಗೆ ೨೬ಕ್ಕೆ ಮಹಾದೇವಪುರದಲ್ಲಿ ಲಿಂಗರಾಜೇಂದ್ರ ವಡೆಯರವರು ಶಿವಾಧೀನವಾದರು. ಆ ಮೇಲೆ ಉಳಿದ ದೊರೆಮಕ್ಕಳು ಚಿಕ್ಕವರಾದ್ದರಿಂದ, ನವಾಬ ಹೈದರಲ್ಲೀಖಾನರು ಪೇಳಿದ್ದು: "ಈ ಶೀಮೆ ಬಂದುಬಸ್ತು ಮಾಡುವ ಬಗ್ಯೆ ನೀವು ಚಿಕ್ಕವರು. ನಿಂಮಿಂದ ತೀರದು. ನೀವು

[1] ಮಗನಂ. [2] ಲಕ್ಕಡಿ.

ದೊಡ್ಡವರಾದ ಮೇಲೆ ನಿಂಮ ರಾಜ್ಯ ನಿಮಗೆ ಕೊಡುತ್ತೇವೆ," ಯಂಬದಾಗಿ ಹೇಳಿ, ಕೊಡಗಿನ ರಾಜ್ಯವಂನು ಅಪಹರಿಸಿ ಕೊಂಡು, ಮೊದಲು ಈ ಕೊಡಗಿನ ಸಂಸ್ಥಾನದ ಕರ್ಣೀಕನಾಗಿ ಇದ್ದ ಸುಬ್ಬರಸಯ್ಯಗೆ ಕೊಡಗಿನ ಶೀಮೆ ಅಮಲು ಕೊಟ್ಟು, ಕಲಿ ಸಂದ ೪೮೮೧ನೇ ಶಾರ್ವರಿ ಸಂವತ್ಸರದಲ್ಲಿ ನವಾಬ ಹೈದರಲ್ಲೀಖಾನರು ದಂಡು ತೆಗದು ಕೊಂಡು ಅರಕಾಡಿಗೆ[1] ಹೋದರು. ಈ ಶೀಮೆಯಲ್ಲು ಇರುವ ಕೊಡಗಿನ ಜನರು ಮನಸುಬ ಮಾಡಿದ್ದು: "ಕೊಡಗಿನ ಸಂಸ್ಥಾನದ ದೊರೆಮಕ್ಕಳಿಗೆ ರಾಜ್ಯ ಕೊಡದೆ, ಹೈದರಲ್ಲೀಖಾನರು ಒಬ್ಬ ಬ್ರಾಹ್ಮಣನಿಗೆ ಅಮಲು ಕೊಟ್ಟು, ಇವನ ಕೈಕೆಳಗೆ ನಂಮ ಇಟ್ಟನಲ್ಲಾ? ದೊರೆಕುಮಾರರು ಇರುವ ಹಾಗೆ, ಈ ಬ್ರಾಹ್ಮಣನ ಕೈಕೆಳಗೆ ಇರುವದು ಯುಕ್ತವಲ್ಲ," ಯಂಬದಾಗಿ, ಕೊಡಗ ಜನರು ಈ ಅಮಲು ಮಾಡುವವನ ಮೇಲೆ, ಕಲಿ ಸಂದ ೪೮೮೪ನೇ ಶುಭಕೃತು ಸಂವತ್ಸರದ ಜೇಷ್ಟ[2] ಮಾಸದಲ್ಲಿ, ತಿರುಗಿ ಬಿದ್ದು, ತಕರಾರು ಮಾಡಿದರು. ಈ ವಿವರವಂನು ಈ ಅಮಲು ಮಾಡುವವನು ನವಾಬ ಹೈದರಲ್ಲೀಖಾನರಿಗೆ ಬರದು ಕಳುಹಿದಲ್ಲಿ, ಅದಕ್ಕೆ ಜವಾಬು ಅವರು ಬರದು ಕಳುಹಿದ್ದು: "ಕೊಡಗಿನ ದೊರೆಮಕ್ಕಳು ಮಹಾರಾಜನ ದುರ್ಗದ ತಾಲೂಕು ಗೊರೂರಲ್ಲಿ ಇರಲಿ. ನಾವು ಅರಕಾಡಿನಿಂದ ಪಟ್ಟಣಕ್ಕೆ ಬಂದ ಮೇಲೆ ಕೊಡಗರ ತುಂಟತನ ನಿಲ್ಲಿಸಿ, ಅವರ ಶೀಮೆ ಅವರಿಗೆ ಕೊಟ್ಟು, ಅಲ್ಲಿಗೆ ಕಳುಹಿಸಬಹುದು," ಯಂಬದಾಗಿ ಬರೆಸಿ ಕಳುಹಿದ್ದರಿಂದ, ಆ ಅಮಲುದಾರನು ಅದೇ ಹುಕುಂ ಮೇರೆ, ಇದೇ ಸಂವತ್ಸರದ ಭಾದ್ರಪದ ಮಾಸದಲ್ಲಿ, ಅರಮನೆ ಕುಟುಂಬ ಮಕ್ಕಳು ಸಹಾವಾಗಿ ಗೊರೂರಲ್ಲಿ ಮಡಗಿಸ್ತನು[3].

ಈ ತದನಂತರ ಕೊಡಗರು ಯಾವತ್ತು ಹುಂಡು ಯೆದ್ದು, ಕೊಡಗಿನ ಶೀಮೆಯಲ್ಲಿ ಇರುವಂಥ ಹೈದರಲ್ಲೀಖಾನರ ಕಡೆ ಠಾಣ್ಯದ ಮಂದಿಗಳ ಯಾವತ್ತೂ ಹೊರಡಿಸಿ ಬಿಟ್ಟು, ಕ್ವಾಟೆ ಕೊತ್ತಳ ಯಾವತ್ತಂನು ತೆಗದು ಕೊಂಡು, ಈ ಕೊಡಗ ರೈತರೇ ಶೀಮೆ ಕಟ್ಟಿ ಕೊಂಡು ಇರುತ್ತಿದ್ದಲ್ಲಿ, ಇದೇ ವರುಷ ನವಾಬ ಹೈದರಲ್ಲೀಖಾನರು, ಬೆಂನಿನಲ್ಲಿ ರಾಜಹುಣ್ಣು ಯದ್ದು, ಆರಕಾಡಿನಲ್ಲೆ ಮೃತವಾದರು.

ಈ ಸಮಾಚಾರ ಕೇಳಿ, ಮುಂಬಾಯಿಯಿಂದ ಇಂಗರೇಜಿ ಬಹಾದ್ದರರ ಫೌಜ ತೆಗದು ಕೊಂಡು, ಜನರಾಲ್ ಮೆತ್ತಯುಸರವರು[4] ಬಂದು, ನಗರ ಕೊಡೆಯಾಲದ ಕ್ವಾಟೆ ಮುಂತಾಗಿ ತೆಗದು ಕೊಂಡು, ಕೊಡೆಯಾಲದ ಕ್ವಾಟೆಯಲ್ಲಿ ಒಬ್ಬ ಸರದಾರ ಕೆಲವು ಫೌಜ ಸಹಾ ಠಾಣ್ಯ ಇಟ್ಟು, ನಗರದ ಕ್ವಾಟೆಯಲ್ಲಿ ತಾನ ಜನರಾಲ್ ಮೆತ್ತಯುಸ ಬಹಾದ್ದರವರು ಫೌಜ ಸಮೇತ ಇರುತ್ತ ಇದ್ದಲ್ಲಿ, ಈ ಸಮಾಚಾರವಂನು ನವಾಬ ಹೈದರಲ್ಲೀಖಾನರ ಮಗ ಟೀಪುಸುಲ್ತಾನರು ಕೇಳಿ, ತಂಮ ಫೌಜ ಯಾವತ್ತು ತೆಗದು ಕೊಂಡು, ಆ ಇಂಗರೇಜಿ ಬಹಾದ್ದರವರ ಫೌಜಿನ ಸಂಗಡ ಜಗಳಕ್ಕೆ ಹೋಗುವಾಗಯೆ, ಗೊರೂರಲ್ಲಿ ಇದ್ದ ಕೊಡಗಿನ ಸಂಸ್ಥಾನದ ದೊರೆಮಕ್ಕಳ ಕುಟುಂಬ ಯಾವತ್ತಂನು, ಇದೇ ಸಂವತ್ಸರದ ಪುಷ್ಯ ಮಾಸದಲ್ಲಿ, ಪೆರಿಯಪಟ್ಟಣದ ಕೋಟೆ ವಳಗೆ ಮಡಗಿಸಿ, ಕೋಟೆಗಾವಲಂನು ಮಾಡಿಸ್ತರು.[5]

ಆ ಬಳಿಕ ಅರಮನೆ ಕುಟುಂಬ ಮಕ್ಕಳಿಗೆ ಯಾವತ್ತೂ ತಿಡುಬಿನ ಹುಂಣಾಗಿ, ರಸ್ತು ಮುನಸೀದೆಯು ಇಲ್ಲದೆ, ಬಹಳ ಕುಟುಂಬ ಮಕ್ಕಳು ಮೃತವಾಗಿ ಹೋದರು. ಆವಾಗಯೆ ವೀರರಾಜೇಂದ್ರ ಒಡೆಯರವರ ಮಾತುಶ್ರೀ ದೇವಾಂಬಿಕೆ ಅಂಮನವರು, ಇದೇ ಶುಭಕೃತು ಸಂವತ್ಸರದ ಪುಷ್ಯ ಶು ೧೪ಯು ಭಾನುವಾರ ಘಳಿಗೆ ೧೫ಕ್ಕೆ ಶಿವಾಧೀನವಾದರು. ಅದರಲ್ಲಿ ವೀರರಾಜೇಂದ್ರ ಒಡೆಯರವರು, ಇವರ ಬಲಿ ಅಂಣನ ಚಿಕ್ಕ ಕುಮಾರರು ಒಬ್ಬರು, ಕೆಲವು ಕುಟುಂಬ ಮಕ್ಕಳು ಸಹಾ, ಉಳುಕೊಂಡು, ಪೆರಿಯಪಟ್ಟಣದಲ್ಲು ಇರುತ್ತ ಇದ್ದರು.

ಟೀಪುಸುಲ್ತಾನರು ನಗರಕ್ಕೆ ಹೋಗಿ, ಇಂಗರೇಜಿ ಬಹಾದ್ದರ[6] ಫೌಜಿನ ಸಂಗಡ ಜಗಳ ಮಾಡಿ, ಸಾಧ್ಯವಿಲ್ಲದೆ, ನಂಬಿಗೆ ಕೊಟ್ಟು, ಕ್ವಾಟೆ ವಳಗೆ ಇದ್ದ ಇಂಗರೇಜಿ ಫೌಜ ಜನರಾಲ್ ಮೆತ್ತಯುಸ ಸಾಹೇಬ ಬಹಾದ್ದರವರ ಸಹಾ, ಸಲ್ಲಾದ ಮೇಲೆ ಇಳಿಸಿ, ನಂಬಿ ಬಂದು ಕೈಗೆ ಶಿಕ್ಕಿದವರ ಗಾತ[7] ಮಾಡಿ, ಶೆರೆ ಹಾಕಿ, ನಗರದ ಕ್ವಾಟೆಯಂನು ಸ್ವಾಧೀನ ಮಾಡಿ ಕೊಂಡು, ಅಲ್ಲಿಂದ ಕೊಡೆಯಾಲಕ್ಕೆ ಹೋಗಿ, ಆ ಕ್ವಾಟೆಗೆ ಮುತ್ತಿಗೆ ಹಾಕಿ, ಹೇರಳ ಲಡಾಯಿ ಮಾಡಿದಾಗ್ಯೂ, ಟೀಪುಸುಲ್ತಾನರಿಗೆ ಸಾಧ್ಯವಿಲ್ಲದೆ ಹೋಗಿ, ಆ ಕ್ವಾಟೆ ವಳಗೆ ಇದ್ದ ಇಂಗರೇಜಿಯವರ ಸಂಗಡ ಸಲ್ಲಾ ಮಾಡಿದಲ್ಲಿ, ಅವರು ಇಳಿದು ಬಾಜ ಹಾಕಿ ಹೋದರು.

---

1 ಆರ್ಕಾಡಿಗೆ. 2 ಜ್ಯೇಷ್ಠ. 3 ಮಡಗಿಸಿದನು. 4 General Matthews. 5 ಮಾಡಿಸಿದನು. 6 ಬಹಾದ್ದರರ. 7 ಘಾತ.

ಆ ಬಳಿಕ ಟೀಪುಸುಲ್ತಾನನು ಆ ಕೊಡೆಯೊಲದ ಕೋಟೆಯಂನು ಕೆಡಗಿಸಿ ಬಿಟ್ಟು, ಆ ಮೇಲೆ ತಂಮ ಫೌಜ ಯಾವತ್ತು ತೆಗದು ಕೊಂಡು, ಕಲಿ ಸಂದ ೪೮೮೬ನೇ ಕ್ರೋಧಿ ಸಂವತ್ಸರದಲ್ಲಿ ಕೊಡಗಿಗೆ ಬಂದು, ಈ ಶರಾರತ್ತು ಮಾಡುವ ಕೊಡಗರಿಗೆಲ್ಲಾ ನಂಬಿಗೆ ಬರವಸ[1] ಕೊಟ್ಟು, ನಯ ಭಯದಿಂದ ಕೌಲು ಕರಾರು ಮಾಡಿ, ಪಟ್ಟಣಕ್ಕೆ ಹೋದರು.

ಆ ಬಳಿಕ, ಕಲಿ ಸಂದ ೪೮೮೭ನೇ ವಿಶ್ವಾವಸು ಸಂವತ್ಸರದ ಶ್ರಾವಣ ಮಾಸದಲ್ಲಿ, ಇದ್ದೇ ಮಾತಿನ ಬಗ್ಗೆ ಮನಶ್ಶೆಟ್ಟ ಕೊಡಗು ಜನ ಯಾವತ್ತು ತಿರುಗಿ ಬಿದ್ದು, ಶರಾರತ್ತು ಮಾಡಿದರಿಂದ, ಟೀಪುಸುಲ್ತಾನನು, ಈ ಶರಾರತ್ತು ನಿಲ್ಲಿಸುವ ಬಗ್ಗೆಯ, ಜೈನುಲ್ಲಾಬದ್ದೀನು ಸೂಸ್ತರಿಯಂನು, ಹದಿನೈದು ಸಾವಿರ ಫೌಜ ಸಹಾ, ಕೊಡಗಿಗೆ ಕಳುಹಿದಲ್ಲಿ, ಆ ಫೌಜ ಕೊಡಗಿನ ಶೀಮೆ ವಳಿಕ್ಕೆ ಬಂದು, ಉಲುಗುಲಿಸಂತೆ ಮೊಳದಲ್ಲಿ ಇಳುಕೊಂಡು ಇದ್ದಲ್ಲಿ, ನಾಲ್ಕು ಐದು ಸಾವಿರ ಕೊಡಗರು ಹೋಗಿ, ಮುತ್ತಿಗೆ ಹಾಕಿ ಕೊಂಡು, ಲಡಾಯಿ ಮಾಡಿ, ಆ ಲಶ್ಕರಿನ[2] ಬಹಳ ಜನರ ಕಡುದು[3] ಹಾಕಿದರು. ಆ ಸೂಸ್ತರಿಯು ಮಡಿಕೇರಿ ಕೋಟೆ ಪರಿಯಂತರ ಬಂದು, ತನ ಜೋರು ಇಲಾಜು ಯೇನೂ ನಡೆಯದೆ, ಲಾಚಾರಾಗಿ ತಿರುಗಿ, ಬೆಟ್ಟದಪುರದ ಕಡೆಗೆ ಹೋಗುತ್ತಿದ್ದಲ್ಲಿ, ಅದ್ದೇ ಉಲುಗುಲಿಸಂತೆ ಮೊಳದಲ್ಲಿ ಕೊಡಗರು ಹೋಗಿ, ಲಡಾಯಿ ಮಾಡಿದಲ್ಲಿ, ಅವನ ಕಡೆ ಕೆಲು ಮಂದಿ ಮಫೂತವಾಗಿ, ಸಾಮಾನು ಸರಂಜಾಮು ಅಲ್ಲಿ ಬಿಟ್ಟು, ಬಾಕಿ ಫೌಜ ತೆಗದು ಕೊಂಡು, ಬೆಟ್ಟದಪುರಕ್ಕೆ ಹೋಗಿ ಇಳು ಕೊಂಡನು.

ಆ ಬಳಿಕ ಈ ವರ್ತಮಾನವಂನು ಟೀಪುಸುಲ್ತಾನಿಗೆ ಬರದು ಕಳುಹಿದರಿಂದ, ಆ ಟೀಪುಸುಲ್ತಾನನು ಫೌಜ ತೆಗದು ಕೊಂಡು, ಕೊಡಗಿನ ಶೀಮೆ ವಳಿಕ್ಕೆ ಬಂದು, ಅದ್ದೇ ಉಲುಗುಲಿ ಮೊಳದಲ್ಲಿ, ಇದ್ದೇ ವರುಷದ[4] ಆಶ್ವೀಜ ಮಾಸದ ಬಹುಳ ೩೦ ಲ್ಲು ಇಳುಕೊಂಡು, ಅಲ್ಲಿ ಇರುವಂಥಾ ಕೊಡಗರಿಗೆ ನಂಬಿಗೆ ಭಾಷೆ ಹೇಳಿ, ಕೌಲಿಗೆ ಇಳಿಸುತ್ತಾ, ಕಾರ್ತಿಕ ಶು ೧೫ ಪರಿಯಂತರ ಹದಿನೈದು ದಿವಸ ಅಲ್ಲಿ ಇದ್ದು, ಆ ಬಳಿಕ ಮಡಿಕೇರಿಗೆ ಬಂದು, ಅಲ್ಲಿರುವಂಥಾ ಯಾವತ್ತು ಕೊಡಗರಿಗೂ ನಂಬಿಗೆ ಕೊಟ್ಟು ಇಳಿಸಿ, ಅಲ್ಲಿಂದ ಮಾರ್ಗಶಿರ ಶು ೧ ದಿವಸ ಭಾಗಮಂಡಲಕ್ಕೆ ಹೋಗಿ, ಅದರ ಸಮೀಪದಲ್ಲು ಇರುವ ದೇವಟ್ಟುಪರಂಬು ಯೆಂಬ ಮೈದಾನದಲ್ಲಿ ಇಳುಕೊಂಡು, ಅಲ್ಲಿರುವಂತ[5] ಕೊಡಗರಿಗೆಲ್ಲಾ ನಂಬಿಗೆ ಕೊಟ್ಟು, ಕೌಲಿಗೆ ಇಳಿಸಿ, ಮಾರ್ಗಶಿರ ಬ ೫ ದಿವಸ ಇದ್ದಂತ ಕೊಡಗು ಜನ, ಇವಂದಿರ ಕುಟುಂಬ ಮಕ್ಕಳು ಯಾವತ್ತು, ಬಳಿಶಿ ಹಿಡಿದು, ಪಹರೆ ಹಾಕಿ, ತೆಗದು ಕೊಂಡು ಹೋಗಿ, ತಂಮ ಶೀಮೆ ಗಡಿಗಳಿಗೆಲ್ಲಾ ಹಂಚಿ ಹಾಕಿ, ಅಲ್ಲಲ್ಲಿಗೆ ಕಳುಹಿಸಿ, ಕೊಡಗು ಜನರಂನೆಲ್ಲಾ ಮುಂಜಿ ಮಾಡಿ, ಕುಲ ಗೆಡಿಸಿ, ಚೇಲೆಯರ ಮಾಡಿ ಇಟ್ಟು ಕೊಂಡು, ಆ ಬಳಿಕ ತಂಮ ಜಾತಿ ಶೇಕ್, ಸೈಯದ್, ಮೊಗಲ್, ಪಠಾಣ ಯೆಂಬ ಮುಸಲ್ಮಾನ ಜಾತಿಯವರಿಗೆ ಕೊಡಗಿನ ಶೀಮೆಗೆ ಕಳುಹಿಸಿ, ಕೊಡಗರ ಭೂಮಿ ಮನೆಯಂನು ಆ ಮುಸಲ್ಮಾನರಿಗೆ ಜಹಗೀರಿ ಆಗಿ ಕೊಟ್ಟು, ಆ ಬದುಕು ಮಾಡುವ ಬಗ್ಗೆಯ ವರಕು ಕೊಡಗರ ಬದುಕು ಮಾಡುತ್ತಾ ಇದ್ದ ಹೊಲೆಯರಂನು ಈ ಮುಸಲ್ಮಾನರಿಗೆ ಕೊಟ್ಟು, ಇವರಿಂದ ಸಾಗದೆ ಹೋದ ಭೂಮಿ ಮನೆಗೆ ಆದವಾನಿ ಶೀಮೆ ರೈತರ ಹಿಡಿತಂದು, ಕೊಡಗಿನ ಶೀಮೆಯಲ್ಲಿ ರೈತಾಪಿಗೆ ಇಟ್ಟು, ಅವರಿಗೆ ಬೇಕಾದದ್ದಂನು ಕೊಟ್ಟು, ಬಿಡಾಯಿಸುವ ಬಗ್ಗೆಯ[6] ವರಕು ಈ ಸಂಸ್ಥಾನದ ಕರ್ಯೋಕತನ ಮಾಡಿ ಕೊಂಡು ಇದ್ದವನ ತಂಮ ನಾಗಪ್ಪಯ್ಯ ಯೆಂಬವನ ನೇಮಿಸಿ ಇಟ್ಟು ಇದ್ದಲ್ಲಿ, ಈ ನಾಗಪ್ಪಯ ಯೆಂಬವನು ಆ ರೈತರಿಗೆ ಸಲುವಂತ ಕೆಲವು ಹಣ ದವಸ ಧಾನ್ಯ ಕಟಮಟ ಮಾಡಿ ತಿಂದದರಿಂದ, ಇದು ವಿನಹಾ ಕೆಲವು ರೈತರ ಕೈಯಿಂದ ಲಂಚ ತೆಗದು ಕೊಂಡು, ಅವರಂನು ಬಿಟ್ಟು ಬಿಡುತ್ತ ಇದ್ದದರಿಂದ, ಮಧ್ಯ ಮಾಗದಲ್ಲಿ ಆ ಆದವಾನಿಗೆ ಕದ್ದು ಹೋಗುತ್ತಿದ್ದಂತ ರೈತರಲ್ಲಿ ಕೆಲವರು ಗಡಿ ಪಹಾರದವರಿಗೆ ಶಿಕ್ಕಿದ್ದರಿಂದ, ಆ ಪಹಾರದವರು ಟೀಪುಸುಲ್ತಾನರ ಬಳಿಗೆ ಕಳುಹಿದಲ್ಲಿ, ಅವರ ಸಂಗಡ ವಿಚಾರಿಸುವಾಗಯ, ಆ ನಾಗಪ್ಪಯ್ಯನ ದಗಲುಬಾಜಿತನ ತಿಳಿದ್ದರಿಂದ,[7] ಆ ನಾಗಪ್ಪಯ್ಯನಂನು ಹಿಡಿದು ಶೂಗ ಹಾಕಬೇಕು ಯೆಂಬದಾಗಿ, ಟೀಪುಸುಲ್ತಾನರು ಅಪ್ಪಣೆ ಕೊಟ್ಟದರಿಂದ, ಆ ನಾಗಪ್ಪಯ್ಯನು ಈ ವರ್ತಮಾನ ತಿಳಿದು ಕೊಂಡು, ವೋಡಿ ಹೋಗಿ, ಕೋಟೆ ಅರಸುಗಳ ಶೇರಿ ಕೊಂಡಲ್ಲಿ, ಅವರ ಕಡೆ ಐವತ್ತು ಜನ ನಾಯಿಮಾರರಂನು ಕೂಡಿಸಿ, ಪೆಂಯೊಟ್ಟುಚಂದು ಯೆಂಬವನ ಗೊತ್ತು ಮಾಡಿ, ಕೋಟೆ ಅರಸುಗಳು ಕೊಟ್ಟಲ್ಲಿ, ಅವಂದ್ಯರ ಕರದು ಕೊಂಡು, ಕೊಡಗಿಗೆ ಬಂದು, ಕಾಡಲ್ಲಿ ಶೇರಿ ಕೊಂಡು ಇರುವಂತ ಕಾ

[1] ಭರವಸ. [2] ಲಷ್ಕರಿನ. [3] ಕಡಿದು. [4] ವರುಷದ. [5] ಅಲ್ಲಿರುವಂಥ. [6] ಬಿಡಾಯಿಸುವ ಬಗ್ಗೆ. [7] ತಿಳಿದದರಿಂದ.

ಡಗು ಜನರಿಂದಲೂ, ಹಿಂದೆಯಾದ ಹಾಲೆಯರಿಂದ ಸಹಾ ಕೂಡಿಸಿ, ಯೆಲ್ಲಾ ನೂರು ಜನ ಪರಿಯಂತರ ಜಮಾಯಿಸಿ ಕೊಂಡು, ಕಾಡು ಸೇರಿ ಕೊಂಡು, ಈ ಸೀಮೆಯಲ್ಲಿ ರುಹಾಮಿ ಮಾಡಿ ಕೊಂಡು ಇರುವ ಆದವಾನಿ ರುತರ ಮನೆಮಾರು ಲೂಟಿ ಮಾಡಿ ಕೊಂಡು, ತರಾರತು ಮಾಡಿ ಕೊಂಡು ಇದ್ದಲ್ಲಿ, ಈ ಸಮಾಚಾರವನು ಈ ಸೀಮೆಯಲ್ಲಿ ಕಾಡು ಸೇರಿ ಕೊಂಡು ಇದ್ದಂತ[1] ಕೊಡಗು ಜನರಲ್ಲಿ ವೀರರಾಜೇಂದ್ರ ಒಡೆಯರವರಿಗೆ ಆಪ್ತರಾದಂತವರು ಪೆರಿಯಾಪಟ್ಟಣಕ್ಕೆ ವೀರರಾಜೇಂದ್ರ ಒಡೆಯರವರಿಗೆ ಹೇಳಿ ಕಳುಹಿ ಬಿಟ್ಟಲ್ಲಿ, ರಾಜರು ಅಲ್ಲಿಂದ ಕುಟುಂಬ ಮಕ್ಕಳ ತೆಗೆದುಕೊಂಡು, ಶಲಿನಂದ ೧೭೩೧ನೆ ಕೀಲಕ ಸಂವತ್ಸರದ ಮಾರ್ಗಶಿರ ಬ ೭ಯಲ್ಲು ಬ್ರಹಸ್ಪತಿವಾರ ರಾತ್ರೆ ಘಳಿಗೆ ೧೫ಕ್ಕೆ, ಪೆರಿಯಾಪಟ್ಟಣದ ಕೋಟೆ ಇಳಿದು, ತಂಮ ಕೊಡಗಿನ ಸೀಮೆಗೆ ಬಂದು, ಕೊಡಗಿನ ಸೀಮೆ ಒಳತವಾದ ಕುರಟಿ ಯೆಂಬ ಗ್ರಾಮದಲ್ಲಿ ಕುಟುಂಬ ಮಕ್ಕಳ ಮಡಗಿ, ತಾವು ಶಿಗಟ್ಟುನಾಡಲ್ಲು ಇರುತ್ತ ಇದ್ದಲ್ಲಿ, ಈ ನಾಗಪ್ಪಯ್ಯ ಯೆಂಬವನು ಕೋಟೆ ಅರಸುಗಳ ಬಳಿಗೆ ಹೋಗಿ: "ಕೊಡಗಿನ ದೊರೆಗಳು ಪೆರಿಯಾಪಟ್ಟಣದಿಂದ ಕೊಡಗಿನ ಸೀಮೆಗೆ ಬಂದು ಇದ್ಧಾರೆ, ಗಡ ಸೇರಿ ಕೊಂಡು ಇರುವಂತವರ[2] ಜಮಾಯಿಸುತ್ತ ಇದ್ಧಾರೆ," ಯೆಂಬದಾಗಿ ಹೇಳಿದಲ್ಲಿ, ಕೋಟೆ ಅರಸುಗಳು ಹೇಳಿದ್ದು: "ನೀನು ಅವರ ಕದೀಮ್ ಚಾಕರನಿದ್ಧೀಯೆ.[3] ನೀನು ಹೇಳಿದ ಮಾತು ಅವರು ಪರಮಾರ್ಥವಾಗಿ ನಂಬುತ್ತಾ ಇದ್ಧಾರೆ. ಯೇನಾ ಬಗೆಯಿಂದಾದರೂ ಉಪಾಯತಂತ್ರದಿಂದ ಅವರಂನ ಇಲ್ಲಿಗೆ ಕರದು ಕೊಂಡು ಬಾ. ಆ ಮೇಲೆ ಯಾವ ತಕು ಕಾರ್ಯವು ವಹಿಸ ಬಹುದು," ಯೆಂಬದಾಗಿ ಹೇಳಿದ್ದರಿಂದ, ಆ ನಾಗಪ್ಪಯ್ಯನು ವೀರರಾಜೇಂದ್ರ ಒಡೆಯರವರ ಬಳಿಗೆ ಬಂದು, ಹೇಳಿದ್ದು: "ತಾವು ತಂಮ ರಾಜ್ಯಕ್ಕೆ ಬಂದ ವರ್ತಮಾನ ಕೋಟೆ ಅರಸುಗಳು ಕೇಳಿ, ಬಹಳ ಹರುಷಿತರಾದರು. ತಂಮ ಬೇಟಿ ಆಗ ಬೇಕು ಯೆಂಬದಾಗಿ, ಅವರಿಗೆ ಬಹಳ ಅಪೇಕ್ಷೆ ಇದೆ," ಯೆಂಬದಾಗಿ, ನಾನಾ ಪ್ರಕಾರ ಹೇಳಿ ನಂಬಿಸಿ, ಮಹಾರಾಜರ ಕರದು ಕೊಂಡು ಹೋಗಿ, ಆರಳ ಯೆಂಬ ಗ್ರಾಮದಲ್ಲಿ ಇಳಿಸಿ, ತಾನು ಕೋಟೆ ಅರಸುಗಳ ಬಳಿಗೆ ಪಾಳೆಗೆ ಹೋಗಿ, ಯೇನೇನೋ ಮಾತನಾಡಿ ಕೊಂಡು, ಅಲ್ಲಿಂದ ನಾಲ್ವತ್ತು ಐವತ್ತು ಜನ ಪರಿಯಂತರ ಆಯುಧಪಾಣಿ ನಾಯಿಮಾರರಂನು ಕರದು ಕೊಂಡು ಬಂದು, ರಾಜರು ಇಳಿದು ಇರುವ ಆರಳ ಯೆಂಬ ಗ್ರಾಮದ ಸುತ್ತ ಹಾರಾ ನಿಲ್ಲಿಸಿ ಬಿಟ್ಟನು. ಆ ಮೇಲೆ, "ಅವರ ಕಂಡು, ಬೇಟಿ ಆಗ ಬೇಕು," ಯೆಂಬದಾಗಿ ಹೇಳಿದಲ್ಲಿ; "ಯೆರಡು ದಿವಸ ಒಳ್ಳೇದಲ್ಲ, ಆ ಮೇಲೆ ಕಾಣ ಬಹುದು," ಯೆಂಬದಾಗಿ ಹೇಳಿದಾ. ಆ ಯೆರಡು ದಿವಸ ಕಳದ ಮೇಲೆ, "ಬೇಟಿ ಆಗ ಬೇಕು," ಯೆಂಬದಾಗಿ ಹೇಳಿದ್ದಲ್ಲಿ, ಆವಾಗಯೂ ಅದೇ ಮೇರೆ ನೆವನ ಹೇಳಿ, ನಾಗಪ್ಪಯ್ಯನು ಹೋದನು. ಆ ಬಳಿಕ ಮೂರನೇ ದಿವಸದಲ್ಲಿ ಬಂದು, ಹೇಳಿದ್ದು: "ನನಗೆ ಶಿಥಿಪರಸ್ತ ಇದ್ದದರಿಂದ ಯೆರಡು ಮೂರು ದಿವಸ ಕುಟುಂಬ ಮಕ್ಕಳ ಬಳಿಯು ಇದ್ದೆ. ಕೋಟೆ ಅರಸುಗಳ ಬಳಿಯು ಹೋಗುವದಕ್ಕೆ ಸಮಯವಾಗಲಿಲ್ಲಾ," ಯೆಂಬದಾಗಿ ಹೇಳಿದಾ. ಆ ಬಳಿಕ ಮತ್ತೊಂದಾವರ್ತಿ ಈ ನಾಗಪ್ಪಯ್ಯನ ಸಂಗಡ ಹೇಳಿ ಬಿಟ್ಟಲ್ಲಿ, ಅವನು ಹೋಗಿ, ಕೋಟೆ ಅರಸುಗಳ ಬಳಿಯು ಐದಾರು ದಿವಸ ಕುಳಿತು ಕೊಂಡು, ಈ ಮೇರೆ ಬೇಟಿ ಆಗುವ ಸಂಗತಿಯೂ, ಅಲ್ಲಿಂದ ಬಿಡುಗಡೆ ಆಗಿ ಪುನಹಾ ಬರುವ ಸಂಗತಿಯೂ, ಕಾಣಲಿಲ್ಲಾ. ಈ ಮೇರೆ ಹದಿನೈದು ದಿವಸ ಕಾಲಹರಣ ಮಾಡಿ ಬಿಟ್ಟಾ. ಅಷ್ಟರಲ್ಲಿ ಟೀಪುಸುಲ್ತಾನರು ತಂಮ ಕಡೆ ಕೆಲವು ಫೌಜಂನು ವೀರರಾಜೇಂದ್ರ ಒಡೆಯರವರ ಹುಡುಕುವ ಬಗ್ಯೆ ಮೊಕರರು ಮಾಡಿ ಕಳುಹಿದ್ದರಿಂದ, ಈ ಸಮಾಚಾರ, ರಾಜರ ಕುಟುಂಬ ಮಕ್ಕಳ ಬಳಿಯು ಇದ್ದ ಜನರು ಬಂದು, ರಾಜರ ಸಂಗಡ ಹೇಳಿದ್ದಲ್ಲಿ, ಮಹಾರಾಜರು ಆ ಬಂದ ಮನುಷ್ಯರ ಸಂಗಡ ಕೋಟೆ ಅರಸುಗಳಿಗೆ ಹೇಳಿ ಕಳುಹಿದ ವಿವರ: "ನಂಮಂನ ಹುಡುಕಿ ತಲಾಷು ಮಾಡುವ ಬಗ್ಯೆ ಟೀಪೂಸುಲ್ತಾನರ ದಂಡು ಬಂದು ಇದೆ. ನಾವು ಇಲ್ಲಿಗೆ ಬಂದು ಇಪ್ಪತ್ತು ದಿವಸವಾಯಿತು. ಈಗ ನಂಮಂನ ಬಿಟ್ಟರೆ, ನಂಮ ಕುಟುಂಬ ಮಕ್ಕಳ ಬಳಿಗೆ ಹೋಗಿ, ಅವರಂನು ಬಂದುಬಸ್ತಿನ ಜಾಗದಲ್ಲಿ ಇಟ್ಟು, ಆ ಬಳಿಕ ತಂಮ ಬೇಟಿಗೆ ಬಂದೇವು," ಯೆಂಬದಾಗಿ ಹೇಳಿ ಕಳುಹಿದಲ್ಲಿ, ಆ ಬಳಿಕ ಕೋಟೆ ಅರಸುಗಳು ಅದೇ ನಾಗಪ್ಪಯ್ಯನ ಸಂಗಡ ಹೇಳಿ ಕಳುಹಿದ್ದು: "ನಿಂಮ ಹಿರಿಯ ಅಜ್ಜೆಯನವರಾದ ದೊಡ್ಡ ವೀರಪ್ಪ ಒಡೆಯರು ನಂಮ ಹಿರಿಯ ಕಾರ್ಣವರ ಹಬ್ಬರಂನು ಕೊಂದು ಬಿಟ್ಟು ಇದ್ದಾರೆ.[4] ಅದಕ್ಕೆ ನೀವು ತಲೆಗೆ ತಲೆ ಕೊಟ್ಟಲ್ಲದೆ, ನಿಂಮ ಬೇಟಿ ಆಗಲಿಕ್ಕಿಲ್ಲ," ಯೆಂಬದಾಗಿ ಹೇಳಿ ಬಿಟ್ಟಲ್ಲಿ, ಈ ಮಾತಿಗೆ ಮಹಾರಾಜರು ಹೇಳಿದ್ದು: "ಈಗ ನೂರು ವರುಷಕ್ಕೆ ಮುಂ

1 ಇದ್ದಂಥ. 2 ಇರುವಂಥಾವರ. 3 ಚಾಕರನಾಗಿದ್ದೀಯೆ. 4 ಇದ್ದಾರೆ.

ದೆ ನಿಂಮ ಹಿರಿಯವರು ನಂಮ ಅಜ್ಜೆಯನವರ ಕೂಡೆ ಜಗಳ ಮಾಡಿ, ತ್ಯಾಮರದ ಮೊಕಾಮಿನಲ್ಲಿ ತೀರಿ ಹೋದರು. ಅದಕ್ಕೆ ಬದಲು ಈಗ ತಲೆ ಕೊಡ ಬೇಕು ಯೆಂದರೆ, ಮಾಡ ತಕ್ಕದ್ದೇನು? ನಾವು ನಿಂಮ ಮಾತ ನಂಬಿ, ಬಂದು, ನಿಂಮ ಕೈಗೆ ಶಿಕ್ಕಿ ಇದ್ದೇವೆ. ತಾವು ಪಾಪ ಪುಂಣ್ಯ ಬಲ್ಲಂಥವರಿದ್ದೀರಿ. ಯೆಲ್ಲಾ ನಿಂಮಂನೆ ಕೂಡಿ ಇದೆ," ಯೆಂಬದಾಗ ಹೇಳಿದಲ್ಲಿ, ಆ ಮಾತಿಗೆ ನಾಗಪ್ಪಯ್ಯನು ಹೇಳಿದ್ದು: "ಮನಸಿನಲ್ಲಿ[1] ಕರಕರೆ ಮಾಡ ಬಾರದು. ನಾನು ಕೋಟೆ ಅರಸುಗಳ ಬಳಿಗೆ ಹೋಗಿ, ಈ ವಿವರ ಯಾವತ್ತು ಅವರಿಗೆ ಹೇಳಿ, ನಾಳೆ ದಿವಸ ಯೇನಾ ಬಗೆಯಿಂದಾದರೂ ತಂಮ ಅವರ ಭೇಟಿ ಆಗುವ ಹಾಗೆ, ಮಾಡುತ್ತೇನೆ," ಯೆಂಬದಾಗ ಹೇಳಿ ಹೋದನು. ಮಾರನೆ ದಿವಸ ಬೆಳಿಗ್ಗೆಯೆ, ರಾಜರಂನು ಭೇಟಿ ಆಗುವ ಬಗ್ಗೆಯೆ, ತರೆ ಬಿಟ್ಟಲ್ಲಿ, ರಾಜರು, ಭೇಟಿಗೆ ಯೆಂಬದಾಗ, ಕೋಟೆ ಅರಸುಗಳ ಮೊಕಾಮ್ ಪಾಳೆಗೆ ಹೋಗುತ್ತಿದ್ದಲ್ಲಿ, ನಾಗಪ್ಪಯ್ಯನು ಬಂದು ಹೇಳಿದ್ದು: "ಪರಾಕಾರಕ್ಷೆಯ ನಮಗೂ ಅವರಿಗೂ ಇರುವ ಹಾಗೆತನ ತೀರಿತು, ಯೆಂಬದಾಗ ಕೋಟೆ ಅರಸುಗಳು ಒಂದು ಕಾಗದ ಬರೆಸಿ ಮಡಗಿ ಇದ್ದಾರೆ.[2] ಭೇಟಿ ಆದ ತರುವಾಯ, ಆ ಕಾಗದಕ್ಕೆ ದಸ್ತಖತ್ತು ಮಾಡಿ ಕೊಡಿ ಯೆಂತ, ಕೋಟೆ ಅರಸುಗಳು ತಂಮ ಕೈಯ ಕೊಟ್ಟಾರು. ದಸ್ತಖತ್ತು ಮಾಡುವ ಬಗ್ಗೆಯ ತಾಮಸ ಮಾಡಿದರೆ, ತಾವು ಕಾಡಿಗೆ ಹೋಗುವಂತಾದ್ದು ಪ್ರಯಾಸವಾಗಿ ಕಾಣುತ್ತದೆ," ಯೆಂಬದಾಗ ಹೇಳಿ, ಕರಕೊಂಡು ಹೋಗಿ, ಭೇಟಿ ಮಾಡಿಸಿದ. ಆ ಬಳಿಕ ಕೋಟೆ ಅರಸುಗಳು ಆ ಬರೆಸಿ ಇಟ್ಟು ಇದ್ದ ಕಾಗದವಂನು ರಾಜರ ಕೈಯ ಕೊಟ್ಟು: "ಇದಕ್ಕೆ ದಸ್ತಖತ್ತು ಮಾಡಿ ಕೊಟ್ಟರೆ, ಹಿರಾಕಿನ ಹಾಗೆತನ ತೀರುತ್ತ ಇದೆ. ಇಲ್ಲದಿದ್ದರೆ ಕಾಲಿಗೆ ಕಾಲ ನಿಂಮಿಂದ ತೆಗದು ಕೊಂಡೇವು," ಯೆಂಬದಾಗ ಹೇಳಿದಲ್ಲಿ, ದೊರೆಗಳು ತಂಮ ಮನಸಿನಲ್ಲಿ ಗ್ರಹಿಸಿದ್ದು: ಈ ಕಾಗದಕ್ಕೆ ಗುರ್ತು ಹಾಕಿ ಕೊಟ್ಟು, ಯೇನಾ ಬಗೆಯಿಂದಾದರೂ ಇವರ ಕೈಯಿಂದ ತಪ್ಪಿ, ನಂಮ ರಾಜ್ಯಕ್ಕೆ ಹೋಗಿ, ಆ ಮೇಲೆ ಬೇಕಾದ ಹಾಗೆ ಮಾಡ ಬಹುದು ಯೆಂಬದಾಗ, ಆ ಕಾಗದಕ್ಕೆ ಗುರ್ತು ಹಾಕಿ ಕೊಟ್ಟರು. ಆ ಕಾಗದವಂನು ಕೋಟೆ ಅರಸುಗಳು ನಾಗಪ್ಪಯ್ಯನ ಕೈಯ ಕೊಟ್ಟು: "ಈ ಕಾಗದದ ಅಭಿಪ್ರಾಯ ಯಾವತ್ತು ದೊರೆಗಳಿಗೆ ಹೇಳು," ಯೆಂಬದಾಗ ಹೇಳಿದಲ್ಲಿ, ಅವನು ವ್ಯಾದಿ ತಿಳಿಯಪಡಿಸಿದ ವಿವರ: ಕೀಲಕ ಸಂವತ್ಸರದ ಪುಷ್ಯ ಮಾಸದಲ್ಲು ಹಾಲೆ ವೀರವರ್ಮ ರಾಜರಿಗೆ ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ಒಡೆಯರು ಬರೆಸಿ ಕೊಟ್ಟ ಕಾಗದದ ಕ್ರಮ ಹೇಗೆಂದರೆ: ಪರಾಕು ನಿಂಮ ಕಾರ್ಣವರಂನು ನಂಮ ಕಾರ್ಣವರು ಕೊಂದ ಪಾಪ ಪರಿಹಾರ ಉದ್ದಿಶ್ಯ ಹೆಮ್ಮಾಳ ಭಗವತಿಗೆ ನಾವು ಬಿಟ್ಟು ಕೊಟ್ಟದ್ದು: ಶಿಗಗಟ್ಟು ಹತ್ತುನಾಡು, ಅಂಮತ್ತಿನಾಡು, ಯೆಡೆನಾಲ್ಕುನಾಡು, ನಿಂಮ ಕಾರ್ಣವರು ಬಿದ್ದು ಹೋದ ತ್ಯಾಮರದಲ್ಲಿ ಒಂದು ಕೋಟೆಗೆ ಸ್ಥಾನ ಕೊಡುತ್ತ ಇದ್ದೇವೆ. ಈ ದಿವಸ ನಿಂಮ ಹಗೆತನ ತೀರಿತು. ಇಂನು ಮುಂದೆ ನಮಗೆ ನಿಮಗೆ ಅಂನ್ಯೋಂನ್ಯವೇ ಸರಿ ಯೆಂಬದಾಗ, ಬರದು ಇತ್ತು. ಈ ಹೇರೆ ಕೋಟೆ ಅರಸುಗಳು ನಾಗಪ್ಪಯ್ಯನ ಕೈಯಲ್ಲಿ ಬರೆಸಿ ಇಟ್ಟು ಇದ್ದ ಕಾಗದಕ್ಕೆ ಅಂಕೆಯಲ್ಲಿ ಒಂದು ಗುರ್ತು ಹಾಕಿಸಿ, ತೆಗದು ಕೊಂಡದ್ದೇ ಹೋಯಿತು, ರಾಜರು ತಂಮ ಸಂಸ್ಥಾನದ ರಾಜಮೋಹರವಂನು ಹತ್ತಿ, ತಂಮ ಹೆಸರ ಸಹಿ ಹಾಕಿ, ರಜಾವಂದಿಯಿಂದ ಕಾಡದೆ, ರಾಜರವರು ಅವನ ಹಪಾರದಿಂದ ಬಿಡುಗಡೆ ಆಗಿ, ತಂಮ ಕೊಡಗಿನ ಶೀಮೆ ಒಳಗೆ ಬಂದು, ತಂಮ ಅರಮನೆ ಕುಟುಂಬ ಮಕ್ಕಳು ಇದ್ದ ಕುರ್ಚಿ ಯೆಂಬಲ್ಲಿಗೆ ತಲಪಿದರು. ಅಲ್ಲಿ ಚಳಿಗೆ ಚೂಕರವಾದ್ದರಿಂದ, ಕೆಲವು ಕುಟುಂಬ, ತಂಮ ಅಂಣನ ಮಗನ ಸಹಾ, ಕುಚ್ಚಿ ಗ್ರಾಮದಲ್ಲಿ ಮಡಿಗಿ, ಕೆಲವು ಅರಮನೆ ಕುಟುಂಬ ತಂದು, ಬರಪೊಳೆ ಯೆಂಬಲ್ಲಿ ಇಟ್ಟು ಇರುತ್ತಿದ್ದರು. ಆ ಬಳಿಕ ಹತ್ತು ಹದಿನೈದು ದಿವಸದ ಮೇಲೆ, ಈ ಕೋಟೆ ಅರಸುಗಳು ಮುಂನೂರು ನಾಯಮಾರರಂನು ಕರಕೊಂಡು, ಘಟ್ಟಾ ಹತ್ತಿ, ಶಿಗಗಟ್ಟುನಾಡ ಒಳತವಾದ ಮರೇನಾಡಿಗೆ ಬಂದು, ಇಳುಕೊಂಡು ಇರುವ ಸಮಾಚಾರ ರಾಜರು ಕೇಳಿ, ಈ ವಿವರವಂನು ತಮಗೆ ಆಪತ್ತರಾದ ಕಡಿಯತ್ತಮೂನಾಡ ಅಪ್ಪಂನೆರವನ ಅಚ್ಚೆಯಪಟ್ಟ ಬರವನ ಬಾಳುಕನಿಗೆ ಸಹಾ ಹೇಳಿ ಕಳುಹಿದಲ್ಲಿ, ಅವರು ಕಡಿಯತ್ತಮೂನಾಡಲ್ಲು ಇದ್ದ, ಆಯುಧಪಾಣಿ ಕೊಡಗ ಜನ ಯಾವತ್ತು ಕರಕೊಂಡು, ಬರಪೊಳೆಗೆ ಬಂದಲ್ಲಿ, ಈ ಮಂದಿ ಮತ್ತು ಕೆಲವು ಕೊಡಗ ಜನ ಇವರ ಸಂಗಡ ಕೂಡಿಸಿ, ಐನೂರು ಜನಕ್ಕೆ ಚೀಟಿ ಮಾಡಿಕೊಂಡು, ಈ ಜನವಂನು ಕರಕೊಂಡು, ರಾಜರು ಮರೆನಾಡಿಗೆ ಕೋಟೆ ಅರಸುಗಳು ಇದ್ದಲ್ಲಿಗೆ ಹೋಗಿ, ಕೇಳಿದ ವಿವರ: "ನೀವು ನಂಮ ಕೊಡಗಿನ ಶೀಮೆಗೆ ಘಟ್ಟಾ ಹತ್ತಿ, ಮಂದಿ ತೆಗದು ಕೊಂಡು, ನಂಮ ಅಪ್ಪಣೆ ಇಲ್ಲದೆ ನಿಂಮ ಹಾದು

[1] ಮನಸ್ಸಿನಲ್ಲಿ. [2] ಇದ್ದಾರೆ. [3] ಚೀಟಿ.

ದಾಟಿ, ನಂಮ ಅದ್ದಿಗೆ[1] ಬರುವದಕ್ಕೆ ಕಾರಣವೇನು?" ಯೆಂಬದಾಗಿ ಕೇಳಿದಲ್ಲಿ, ಅವರು ಹೇಳಿದ ವಿವರ: "ನಂಮ ಹಿರಿಯವರ ನಿಂಮ ಹಿರಿಯವರು ತಂದು ಹಾಕಿದ ಕಲೆ ಬೆಲೆ ಉದ್ದಿಶಯವಾಗಿ ಬರಸಿ ಕೊಂಡಂತ ಈ ನಾಡುಗಳಂನು ಹಿಡಾಯಿಸುವ ಬಗ್ಯೆ ಬಂದೆವು" ಯೆಂಬದಾಗಿ, ಕೋಟೆ ಅರಸುಗಳು ಹೇಳಿದ್ದಕ್ಕೆ, ದಾರೆಗಳವರು ಹೇಳಿದ ಜವಾಬು: "ಹಾಗಾದರೆ ಬೇನಾಡಲ್ಲಿ ನಂಮ ಅಂಣ ತಂಮಂದಿರಾದ ದಾರೆ ಮಕ್ಕಳು ಇಟ್ಟಬರಂನು ನೀವು ಹಿಡಿದು, ತಂದು ಹಾಕಿ ಇದ್ದಿರಷ್ಟೆ. ಈ ಯೆರಡು ಕಲೆ ಬೆಲೆ ನಮಗೆ ನೀವು ಯೇನು ಕೊಟ್ಟು, ಈ ನಂಮ ಹಾಗೆ ತೀರಿಸಿ ಕೊಂಡು ಇದ್ಧೀರಿ?" ಯೆಂತ, ಕೇಳಿದಲ್ಲಿ ಅವರು ಹೇಳಿದ ವಿವರ: "ತಾವು ಪಾಳೆಗೆ ಬಂದು ಇದ್ದಾಗ್ಯೆ, ನಂಮ ಹಿರಿಯವರ ನಿಂಮವರು ತಂದ ಮಾತ[2] ನಾವು ತೀರಿಸಿ ಕೊಂಡೆವಷ್ಟೆ. ಆವಾಗ್ಯೆ ನಿಂಮ ಮಾತು ನೀವು ತೀರಿಸಿ ಕೊಳ್ಳ ಬೇಕೆ ಹೊತುಕಿ, ಈಗ ಕೇಳುವದಕ್ಕೆ ಸಂಗತಿ ಯೇನು?" ಯೆಂತ, ಕೋಟೆ ಅರಸುಗಳು ಕೇಳಿದಲ್ಲಿ, ಹಿಂದಕ್ಕೆ ನೂರು ವರುಷದ ಆಚೆಗೆ ನಿಂಮ ಹಿರಿಯವರು ಜಗಳದಲ್ಲಿ ಬಿದ್ದು ಹೋದ್ದದಂನು ಈ ವರಿ ಪರಿಯಂತರಕ್ಕೂ ನಂಮ ಸಂಸ್ಥಾನದ ದಾರೆ ಮಕ್ಕಳ ಕೂಡೆ ತೀರಿಸಿ ಕೊಳ್ಳದೆ, ಈಗ ನಮಗೆ ನಂಬಿಗೆ ಕೊಟ್ಟು, ಪಾಳೆಗೆ ಕರಸಿ ಕೊಂಡು, ಕಲೆ ಬೆಲೆ ಕೊಡಿ ಯೆಂಬದಾಗಿ, ನಿಮಗೆ ಹಾಪಿದಂತೆ ಬರದು, ನಂಮ ಕೂಡೆ ಗುತ್ತು ಹಾಕಿಸಿ ಕೊಳ್ಳುವದಕ್ಕೆ ಕಾರಣವೇನು" ಯೆಂತ ಕೇಳಿದಲ್ಲಿ, "ಇಷ್ಟು ದಿವಸ ನಮಗೆ ಸಮಯವು ಶಿಕ್ಕಲಿಲ್ಲಾ. ನಮಗೆ ಶಿಕ್ಕಿದಾಗ್ಯೆ, ನಾವು ತೀರಿಸಿ ಕೊಂಡೆವು" ಯೆಂಬದಾಗಿ, ಹೇಳಿದರು. ಆ ಮಾತಿಗೆ ರಾಜರು ಹೇಳಿದ್ದು: "ನೂರು ವರುಷದ ಆಚೆಗೆ ಆದ ಮಾತಂನು ನೀವು ಇಂದು[3] ಪರಿಯಂತರ ಸಾಧಿಸಿ ಇದ್ದಿರಷ್ಟೆ. ನಾವು ನಿಂಮ ಕೆಳಗೆ ಪಾಳೆಯಲ್ಲಿ ಶಿಕ್ಕಿ ಕೊಂಡು ಈ ಮಾತು ಹೇಳಿದರೆ, ನಮಗೆ ನೀವು ದಗಾ ಮಾಡ್ಯಾರಿ ಯೆಂಬದರಿಂದ, ನಿಂಮ ಶೀಮೆ ಬಿಟ್ಟು, ನಂಮ ಶೀಮೆಗೆ ಬಂದ ಮ್ಯಾಲೆ ನಿಂಮ ಕೇಳ ಬಹುದು ಯೆಂಬದಾಗಿ ಕುರಿತು, ನಾವು ಹದಿನೆದು ದಿವಸ ಸಮಯ ಸಾಧಿಸತೆವು.[4] ಈ ಬಗ್ಯೆ ನೀವು ನಂಮ ಸ್ಥಳಕ್ಕೆ ಬಂದು ಇದ್ಧೀರಷ್ಟೆ; ಈಗ, ನಂಮ ಮಾತಂನು ತೀರಿಸಿ ಕೊಟ್ಟು ಹೋಗಿ! ಅಲ್ಲದಿದ್ದರೆ, ನಿಂಮ ಕಾರಣವರ ಕಲೆ ಚಿನದಾದರೆ, ನಂಮ ಸಂಸ್ಥಾನದ ದಾರೆ ಮಕ್ಕಳ ಕಲೆ ಮಂಗಿಂದಲಲವಷ್ಟೆ" ಯೆಂಬದಾಗಿ ಕೋಟೆ ಅರಸುಗಳಿಗೆ ಕೇಳಿದಲ್ಲಿ, ಇದಕ್ಕೆ ಪ್ರತಿಜವಾಬು ಕೊಡುವದಕ್ಕೆ ಅವರಿಗೆ ಮಾತು ಶಿಕ್ಕದೆ, ಸುಂಮನೆ ಇದ್ದರು. ಆ ಬಳಿಕ ರಾಜರು ಹೇಳಿದ್ದು: "ಬೇನಾಡಲ್ಲು ಬಿದ್ದು ಹೋದ, ನಂಮ ಸಂಸ್ಥಾನದ ದಾರೆ ಮಕ್ಕಳ ಕಲೆ ಯೆರಡರಲ್ಲಿ ವಂದು ಕಲೆ ನಿಂಮ ಕಾರಣವರ ಕಲೆಗೆ ಸಮವಾಯಿತು; ಮತ್ತೊಂದು ಕಲೆಗೆ ನಿಂಮ ಕಲೆ ಕೊಡಿ" ಯೆಂಬದಾಗಿ ಕೇಳಿದಲ್ಲಿ, ಆ ಮಾತಿಗೆ ಕೋಟೆ ಅರಸುಗಳು ಹೇಳಿದ ವಿವರ: "ತಾವು ಹೇಳಿದ ಹಾಗೆ ನಂಮ ಕಾರಣವರ ಕಲೆ ವಂದಕ್ಕೆ ನಿಂಮ ಸಂಸ್ಥಾನದ ಪಟ್ಟ ದಾರೆ ಮಗನ ಕಲೆ ವಂದಕ್ಕೆ ಸಮವಾಯಿತು. ಮತ್ತೊಂದು ದಾರೆ ಮಗನ ಕಲೆಗೆ, ಬೇನಾಡು ಕಲ್ಪಾತಿ ಪರಿಯಂತರಕ್ಕು ನಂಮದು ನಿಂಮದು ಯೆಂಬದಾಗಿ, ನಿಮಗೆ ನಮಗೆ ವಿವಾದ ಬಿದ್ದು ಇದೆಯಷ್ಟೆ. ಅದಕ್ಕೆ, ನಾವು ಇಂನು ಮುಂದೆ ವಿವಾದ ಮಾಡುವದಿಲ್ಲಾ" ಯೆಂಬದಾಗಿ ಹೇಳಿದರು. ಆ ಮಾತಿಗೆ ರಾಜರವರು ಹೇಳಿದ್ದು: "ನೀವು ಬಾಯಿಂದ ಹೇಳಿದರೆ, ಈ ಮಾತು ತೀರಲಿಕ್ಕೆ ಇಲ್ಲಾ. ಆ ಬಗ್ಯೆ ಬರದು ಕೊಡಿ" ಯೆಂಬದಾಗಿ ಹೇಳಿದಲ್ಲಿ, ಅದಕ್ಕೆ ವಡಂಬಟ್ಟು, ಕೋಟೆ ಅರಸುಗಳು ದಾರೆಗಳಿಗೆ ಬರದು ಕೊಟ್ಟ ಕಾಗದದ ಕ್ರಮವೆಂತೆಂದರೆ: ಕೀಲಕ ಸಂವತ್ಸರದ ಮಾಘ ಶುಕ್ಲಲ್ಲು, ಶ್ರೀಮತು ಕೊಡಗಿನ ಸಂಸ್ಥಾನದ ಹಾಲೇರಿ ವೀರಪ್ಪ ವಡೆಯರವರಿಗೆ, ಪಾಲೆ ವೀರವರ್ಮರಾಜರು ಬರಸಿ ಕೊಟ್ಟ ಕಾಗದದ ಕ್ರಮಮವೆಂತೆಂದರೆ: ತಂಮ ಸಂಸ್ಥಾನದ ದಾರೆ ಮಕ್ಕಳ ಇಟ್ಟಬರಂನು ಬೇಲಾಡಿನಲ್ಲಿ ಕೊಂದು ಹಾಕಿದ್ದಕ್ಕೆ, ಈ ಯೆರಡು ಕಲೆಯಲ್ಲಿ ಪಟ್ಟ ದಾರೆಮಗನ ಕಲೆಗೂ, ಪರಾತು ಕಾಮರದಲ್ಲಿ ನಂಮ ಕಾರಣವರ ನಿಂಮ ಕಾರಣವರು ಹೋದದ ಕಲೆಗೂ, ವಂದಕ್ಕೊಂದು ಸಮವಾದ್ದು ಹೋಗಲಾಗಿ, ಬಾಕಿ ಮತ್ತೊಂದು ನಿಂಮ ಸಂಸ್ಥಾನದ ದಾರೆಮಗನ ಕಲೆಗೆ ಬೇನಾಡು ಕಲ್ಪಾತಿ ಪರಿಯಂತರವು ನಿಂಮದು ನಂಮದು ಯೆಂಬದಾಗಿ, ನಿಮಗೆ ನಮಗೆ ವಿವಾದ ಬಿದ್ದು ಇದೆಯಷ್ಟೆ, ಅದಕ್ಕೆ ನಾವು ಇಂನು ಮುಂದೆ ವಿವಾದ ಮಾಡುವದಿಲ್ಲಾ, ಆ ಕಲ್ಪಾತಿ ಗಡಿ ಪರಿಯಂತರಕ್ಕು ನಿಂಮದೆ ಸರಿ; ನಮಗೆ ಸಂಮಂಧವಿಲ್ಲ. ನಾವು ಪಾಳೆಯಲ್ಲಿ ಬರಸಿ, ನಿಂಮ ಕೈಯಲ್ಲು ಗುತ್ತು ಹಾಕಿಸಿ, ತೆಗದು ಕೊಂಡ ಕಾಗದಕ್ಕೆ ಇಂನು ಮುಂದೆ ಕಾರಣವಿಲ್ಲಾ. ಈ ದಿವಸ ನಂಮ ನಿಂಮ ಉಭಯಸ್ತರ[5]

[1]ಹದ್ದಿಗೆ. [2]ಮಾತಂನು. [3]ಇಂದಿನ. [4]ಸಾಧಿಸಿದೆವು. [5]ಉಭಯಸ್ಥರ.

ಕುಶುಹಿಯು ಕ್ಷಿರಿತು. ಇಂನು ಮುಂದೆ ನಮಗೆ ನಿಮಗೆ ಅನ್ಯೋನ್ಯವೇ ಸರಿ" ಯೆಂಬದಾಗಿ, ಕ್ಯಾತೆ ಅರಸುಗಳು ಕಾಗದ ಬರದು, ತಂಮ ಕೈವಶಹಿತಾ ಹಾಕಿ, ಆ ಕಾಗದವಂನು ಕ್ಯಾತೆ ಅರಸುಗಳು ಕೊಡಗಿನ ರಾಜರ ಕೈಯಲ್ಲಿ ಕೊಟ್ಟರು. ಆ ಕಾಗದ ತೆಗದು ಕೊಂಡು, ದೊರೆಗಳು ಬಿಡಾರಕ್ಕೆ ಹೋಗಿ, ಇಳು ಕೊಂಡರು. ಆ ದಿವಸ ಸಮರಾತ್ರೆಯಲ್ಲು, ಈ ಕ್ಯಾತೆ ಅರಸುಗಳು ರಾಜರವರಿಗೆ ತಿಳಿಯದಂತೆ, ಅವರ ಕಡೆ ನಾಯಿಮೂರ ಜನರಂನು ಕರಕೊಂಡು, ಗಟ್ಟಾ ಇಳಿದು, ಕೊಡಗಿನ ಶೀಮೆ ಸರಹದ್ದು ದಾಟಿ, ಅವರ ಶೀಮೆಗೆ ಹಾದಿ ಹೋದರು. ಆ ಬೆಳಗಯೆ ಈ ಸಮಾಚಾರ ಮಹಾರಾಜರು ಕೇಳಿ, ನೂರು ಜನ ಪರಿಯಂತರ ಕೊಡಗರಂನು "ಅದ್ರು[1] ಪರಿಯಂತರಕ್ಕೂ ಹೋಗಿ ಹಾದಿ ಕೊಂಡು ಬನ್ನಿ" ಯೆಂಬದಾಗಿ, ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಇವರು ಹೋಗುವಾಗಯೆ, ನಡು ಮಾರ್ಗದಲ್ಲಿ, ನಾಗಪ್ಪಯ್ಯನು, ಸಿಕ್ಕಿದರಿಂದ, ಅವನಿಗೆ ಪಹರೆ ಹಾಕಿ ಕೊಂಡು, ಈ ಜನ ಹೋಗಿ ಕೊಡಗಿನ ಶೀಮೆ ಅದ್ದಿ[2] ಪರಿಯಂತರ ಹಾದಿದಲ್ಲಿ, ಕ್ಯಾತೆ ಅರಸುಗಳು ಕೊಡಗಿನ ಶೀಮೆ ಅದ್ದಿ ದಾಟಿ ರಾತ್ರಾತ್ರಿಯೇ ತಂಮ ಶೀಮೆಗೆ ಹೋಗಿ ಇದ್ದದರಿಂದ, ಈ ಕೊಡಗ ಜನರು ಪುನಹಾ ಬಂದು, ಈ ವರ್ತಮಾನವಂನು ತಿಳುಸಗೊಳಿಸಿ, ಈ ನಾಗಪ್ಪಯ್ಯನಂನು ಒಪ್ಪಿಸಿದರಿಂದ, ರಾಜರವರು ಅವನಂನು ತೆಗದು ಕೊಂಡು, ಮರನಾಡಿಂದ ಅರಮನೆ ಕುಟುಂಬ ಇದ್ದ ಕುರ್ಚಿ ಗ್ರಾಮ ಸಮೀಪವಾದದರಿಂದ, ಅಲ್ಲಿಗೆ ಹೋಗಿ, ಆ ಕ್ಯಾತೆ ಅರಸುಗಳು ಬರದು ಕೊಟ್ಟಂಥಾ ಕೈಕಾಗದವಂನು ಸಂದೂಕದ ಒಳಗೆ ಹಾಕಿ, ಅಲ್ಲಿ ಇಟ್ಟು, ಐದು ದಿವಸ ಅಲ್ಲಿ ಇದ್ದು, ಆ ಬಳಿಕ ಆ ನಾಗಪ್ಪಯ್ಯನಂನು ತೆಗದು ಕೊಂಡು ಬಿರಿಹಾಳಿಗೆ ಬಂದು, ಅಲ್ಲಿ ಇದ್ದ ತಂಮ ಕುಟುಂಬವಂನು, ಅವರ ಗರ್ಭದಲ್ಲಿ ಜನಿಸಿದ ತಂಮ ಕುಮಾರತಿ ರಾಜಂಮಾಜಿಯವರಂನು ಸಹಾ ಕರಕೊಂಡು, ಪಾಡಿನಾಲ್ಕುನಾಡ ಒಳತವಾದ ಯವಕಪಾಡಿ ಯೆಂಬ ಗ್ರಾಮಕ್ಕೆ ಇದೇ ಸಂವತ್ಸರದ ಮಾಘ[3] ಶು ೧೩ ದಿವಸ ಬಂದು, ಕೆಟ್ಟುವಳ್ಳಿ ಮನೆ ಬಿಡಾರ ಮಾಡಿಸಿ, ಕುಟುಂಬ ಸಮೇತಾ ಅಲ್ಲಿ ಇಳುಕೊಂಡು, ಆ ನಾಗಪ್ಪಯ್ಯ ಯೆಂಬ ನಿಂಮಕ ಹರಾಮನ ಕಾಲಿಗೆ ಸಂಕೋಲೆ ಹಾಕಿ, ಅಲ್ಲಿ ಶೆರೆಮನೆ ಕೂಡಿಸಿ ಬಿಟ್ಟು. ಹತ್ತು ದಿವಸ ಅಲ್ಲಿ ಇದ್ದು, ವೀರರಾಜೇಂದ್ರ ಒಡೆಯರವರು ಕೂಡಿ ಇದ್ದ ಜನರ ಕರದು ಕೊಂಡು ಹೋಗಿ, ತಂಮ ರಾಜ್ಯದಲ್ಲಿ ಟಿಪ್ಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂಥಾ ಸೈಕ ಸೈಯದ ಮೊಗಲ್ ಪಠಾಣ ಯೆಂಬ ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ, ಅವರಂನು ಪಲಾಯನ ಮಾಡಿ, ಆದವಾನಿ ಶೀಮೆ ಹರಜೋಳಂನು ಸೆರೆ ಬಿಡಿಸಿ ಬಿಟ್ಟು, ಕಾಡು ಶೇರಿ ಕೊಂಡು ಇದ್ದಂಥಾ ಕೊಡಗು ಜನರಂನು ಕರೆಸಿ, ಅವರವರ ಭೂಮಿ ಮನೆ ಅವರವರಿಗೆ ಕೊಡಿಸಿ, ಆ ಭೂಮಿಯಿಂದ ಮುಸಲ್ಮಾನರು ಬೆಳದು ಕೂಡಿಸಿ ಇದ್ದಂಥಾ ಸವಧಾನ್ಯ, ದನ, ಕರ, ಪಂಚಲೋಹ ಮುಂತಾಗಿ ಆಯಾಯ ಮನೆಯಲ್ಲು ಇದ್ದದದಂನೂ, ಆಯಾ ಭೂಮಿ ಮನೆ ಜಂಮಗಾರರಿಗೆ ಕೊಡಿಸಿ "ನಿರ್ಭಯದಿಂದ ನಿಂಮ ನಿಂಮ ಮನೆಯಲ್ಲಿ ವಕ್ಕಲಾಗಿ ಬಾಳುತ್ತಾ ಇರಿ" ಯೆಂದು, ಅಭಯವಂನು ಕೊಟ್ಟು, ಕೊಡಗು ಶೀಮೆ ಸರಹದ್ದು ಶಿದ್ಧೇಶ್ವರನ ಬೆಟ್ಟ ಆಶ್ರಯದಲ್ಲಿ ವೀರರಾಜೇಂದ್ರ ಒಡೆಯರವರು ಇದ್ದು ಕೊಂಡು, ಮೈಸೂರ ಶೀಮೆ ಸರಹದ್ದು ಬಂದ ಹಾಗೆ ಬಿಸಲೆ ಗಟ್ಟದಿಂದ ಬೈನಾಡು ಸರಹದ್ದು ಪರಿಯಂತರ ಸಂಚಾರ ಮಾಡುತ್ತಾ ದಿವಸದಲ್ಲಿ ದುಸುಮಾನರ ಕಡೆ ಮುಸಲ್ಮಾನರ ಸಂಗಡ ಲಡಾಯಿ ಮಾಡಿ, ಅವರಂನು ತಂಮ ಶೀಮೆಯಿಂದ ಹೊರಗೆ ಹಾಕುತ್ತಾ, ರಾತ್ರೆಕಾಲದಲ್ಲು ಮೈಸೂರ ಶೀಮೆಗೆ ಹೋಗಿ, ಅನಾಜ ಹಗೆರೆ ಲೂಟಿ ಮಾಡಿ ಕೊಂಡು ಬಂದು, ತಂಮ ಕಡೆ ಮಂದಿಗೆ ಊಟದ ಬಗ್ಯೆ ಕೊಡಿಸುತ್ತಾ, ಈ ಮೇರೆ ಕಾಲಕ್ಷೇಪ ಮಾಡುತ್ತಾ ಇರಲಾಗಿ, ಆ ಮುಸಲ್ಮಾನರು ಈ ವಿವರವಂನು ಟಿಪ್ಪುಸುಲ್ತಾನರಿಗೆ ಫಿರಿಯಾದಿಯಾಗಿ ಜಾಹಿರು ಮಾಡಿದರಿಂದ, ಈ ವರ್ತಮಾನ ಟಿಪ್ಪುಸುಲ್ತಾನರು ಕೇಳಿ, ಕಂದಾಚಾರದ ಬಕ್ಷಿ ಸರ್ದಾರ ಗುಲಾಮಲ್ಲೀ ಗಾಜಿಖಾ ದಲ್ಯೇರ ದಿಲ್ಖಾ ಇವರ ಸಂಗಡ ಭಾರಿ ಫೌಜು, ಕುದುರೆ ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ, ಆ ಗುಲಾಮಲ್ಲಿಯು ಶಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಕೊಡಗಿನ ಶೀಮೆ ಒಳನುಗ್ಗುವಲ್ಲಿ, ಕೊಡಗರಿಗೂ ಅವರಿಗೂ ಜಗಳವಾಗಿ, ಈ ಕಡೆ ಜನರ ಮದ್ದು ಗುಂಡು ತೀರಿ ಹೋಗಿ, ಜಗಳ ನಿಂತದರಿಂದ, ಗುಲಾಮಲ್ಲಿ ಬಕ್ಷಿಯು ಒಳನುಗ್ಗಿ ಬಂದು, ಈ ಶೀಮೆಯಲ್ಲಿ ಇದ್ದ ದವಸ ಧಾನ್ಯ ಯಾವತ್ತೂ ಸೂರೆ ಮಾಡುತ್ತಾ, ದನ ಕರ ಯಾವತ್ತೂ ಹಿಡಿದು ಕೊಂಡು, ಕೊಡಗು ಜನದ ಕುಟುಂಬ ಮಕ್ಕಳ ಹಿಡಿಯ ಬೇಕೆಂಬದಾಗಿ, ಮಾರ್ಗ ಕಾಯಿಸುವ ಬಗ್ಯೆ ಈ ಶೀಮೆ ಜೀತಗಾರ ಹೊಲೆಯರ ಹಿಡುದು[4] ಕೊಂಡು, ಅವರ ಕೂಡೆ ದಾರಿ ತ್ಯೋರಿಸಿ ಕೊಳ್ಳು

1 ಹದ್ದಿನ. 2 ಸರಹದ್ದಿನ. 3 ಮಾಸ. 4 ಹಿಡಿದು.

ತ್ತಾ, ಮಲೆ ಪಕ್ಕಿನಲ್ಲಿ, ಇಕ್ಕಟ್ಟಿನ ಸ್ಥಳದಲ್ಲಿ, ಕೊಡಗು ಜನದ ಕುಟುಂಬ ಮಕ್ಕಳು ಇದ್ದದ್ದ[1] ಹಿಡಿಯುವ ಬಗ್ಯೆ, ದಂಡಂನು ವಂದೊಂದು ತುಕ್ಕಡಿ ಮಾಡಿ, ವಂದೊಂದು ಕಡೆಗೆ ಕಳುಹುತ್ತಾ ಇದ್ದನು. ಅಷ್ಟರಲ್ಲಿ ಇವರಿಗೆ ಕುಮುಕಾಗಿ ಬಡಕಲ ರಾಜರವರು, ಕೆಲವು ನಾಯಮಾರರಂನು ತಂಮ ಕಡೆ ಕಾರೆಕಾರರ ಸಂಗಡ ಕೂಡಿಸಿ ಕಳುಹಿದಲ್ಲಿ, ಅವರು ಬಂದು, ಗುಲಾಮಲ್ಲಿ ಸರ್ದಾರನ ಕಂಡಲ್ಲಿ, ನಂಮ ಕಡೆಯಿಂದಲೂ ಕೆಲವು ಫೌಜಂನು ಕೊಡುತ್ತೇವೆ, ಅವರು ನೀವು ಕೂಡಿ ಕಾಡ ವಳಗೆ ಶೇರಿ ಕೊಂಡು ಇರುವಂಥ ಕೊಡಗರ ಕುಟುಂಬ ಮಕ್ಕಳ ಹಿಡಿದು ತರ ಬೇಕೆಂಬದಾಗ, ಕೆಲವು ಫೌಜಂನು ಕೊಟ್ಟಲ್ಲಿ, ಆ ನಾಯಿಮಾರರು ಆ ಫೌಜ ಸಹಾ ವಟ್ಟಾಗ, ಪಾಡಿನಾಲ್ಕುನಾಡ ದೇವಸ್ಥಾನದ ಬಳಿಗೆ ಹೋದಲ್ಲಿ, ಅಲ್ಲಿ ಕೊಡಗರು ಜಗಳಾ ಮಾಡಿದಲ್ಲಿ, ಆ ನಾಯಿಮಾರರು ಪೆಟ್ಟು ತಡೆಯಲಾರದೆ, ಆ ದೇವಸ್ಥಾನಕ್ಕೆ ಬೆಂಕಿ ಹಾಕಿ ಸುಟ್ಟು, ಮಲೆಯಾಳಕ್ಕೆ ವೋಡಿ ಹೋದರು. ಗುಲಾಮಲ್ಲೀ ಕಡೆ ಜನರು ಅವನ ದಂಡಿಗೆ ಕೂಡಿ ಕೊಂಡು, ಕೊಡಗರ ಕುಟುಂಬ ಮಕ್ಕಳ ಹಿಡಿಯುವ ಬಗ್ಯೆ ಪ್ರಾರಂಭಿಸಿದಲ್ಲಿ, ಆ ಕುಟುಂಬದ ಬಳಿಯ ಇದ್ದ ಕೊಡಗ ಜನ ಯಿಪ್ಪತ್ತು, ಅವರು ಬರುವಂಥ ಇಕ್ಕಟ್ಟಿನ ಮಾರ್ಗ ಕಟ್ಟಿ ಕೊಂಡು, ಮದ್ದು ಗುಂಡು ತೀರುವ ಪರಿಯಂತರ ಗುಂಡಿನಿಂದ ಹೊಡದು, ತೀರುತ್ತಲೆ ಕತ್ತಿ ತೆಗದು ಕೊಂಡು, ಮೇಲೆ ಬಿದ್ದು ಕಡಿಯುತ್ತ, ದಿನ ವಂದಕ್ಕೆ ಅವರ ಕಡೆ ಐವತ್ತು ಅರುವತ್ತು ಜನದ ಮೇಲೆ ಜಾಯ ಜಖಮಿ ಮಾಡುತ್ತಾ ಇರಲಾಗಿ, ಈ ಕಾಳಗದಿಂದ, ಲೂಟಿಯಿಂದ ಗುಲಾಮಲ್ಲೀ ಬಕ್ಷಿ ತಂನ ಕಡೆ ದಂಡಿನ ಜನ ಯಾವತ್ತೂ ವಟ್ಟು ಗೂಡಿ ಕೊಂಡು, ಮಲೆಪಕ್ಕಿನ ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ, ನಡು ಶೀಮೆಯಲ್ಲಿ ಮೈದಾನವಾಗಿರುವಂಥಾ ಜಾಗದಲ್ಲಿ ಇರುವ ರೈತರ ಮನೆ ಮಾರು ಲೂಟಿ ಮಾಡಿ, ಬೆಂಕಿ ಹಾಕುತ್ತ ಇದ್ದನು. ಅಷ್ಟರಲ್ಲಿ, ಟೀಪುಸುಲ್ತಾನರ ಕೈವಳಗೆ ಇದ್ದಂಥಾ ಮಲೆಯಾಳರು ಯಾವತ್ತು ಈ ಕೊಡಗಿನ ಸಮಾಚಾರ ಕೇಳಿ, ಹುಂಡಾಗಿ ಕಾಡು ಶೇರಿ ಕೊಂಡು, ಹರಕತ್ತು ಮಾಡುತ್ತಾ ಇದ್ದದರಿಂದ, ಟೀಪುಸುಲ್ತಾನರು ತಿಳಿದು, ಗುಲಾಮಲ್ಲೀ ಸರ್ದಾರನಿಗೆ ಬರೆದು ಕಳುಹಿದ್ದು: "ನೀನು ಕೊಡಗಿನ ಶೀಮೆಯಿಂದ ಹೊರಟು, ಮಲೆಯಾಳಕ್ಕೆ ಹೋಗಿ, ಅಲ್ಲಿ ಹರಕತ್ತು ಮಾಡುವಂಥಾ ಜನಕ್ಕೆ ತಂಬಿ ಪಹುಂಚಾಯಿಸಿ, ಬಂದುಬಸ್ತು ಮಾಡು" ಯೆಂಬದಾಗಿ, ಬರೆಸಿ ಕಳುಹಿದ್ದರಿಂದ, ಆ ಗುಲಾಮಲ್ಲೀ ಬಕ್ಷಿಯು ತಂನ ಫೌಜು ಸಮೇತ ಕೊಡಂತೂರದ ಮಾರ್ಗವಾಗಿ ಹೋಗುತ್ತಿದ್ದಲ್ಲಿ, ಕೊಡಗರು ಹೋಗಿ, ಮಧ್ಯ ಘಟ್ಟದಲ್ಲಿ ಲಡಾಯಿ ಮಾಡಿದಲ್ಲಿ, ಈ ಜನದ ಮದ್ದು ಗುಂಡು ತೀರಿ ಹೋಗಿ, ಜಗಳ ಸಂತ್ರನವಾದ್ದರಿಂದ, ಆ ಗುಲಾಮಲ್ಲೀಯು ಅಲ್ಲಿಂದ ಹೋಗಿ, ಮೈಯಾಪೂರಲ್ಲು ಇಳುಕೊಂಡು, ಮೈಯಾಪೂರು ದೇವಸ್ಥಾನಕ್ಕೆ ಬೆಂಕಿ ಹಾಕಿ, ಆ ಶೀಮೆ ರೈತರ ಮನೆ ಮಾರು ಲೂಟಿ ಮಾಡುತ್ತಾ ಇದ್ದಲ್ಲಿ, ಪೇಟೆಯಲ್ಲಿ ಇದ್ದ ಪಾಲೆ ಅರಸುಗಳ ಅಂಣನು, ತಾನು ಟೀಪುಸುಲ್ತಾನರ ಕಂಡು ಕೊಂಡು ಇದ್ದದನೆ.[2] ತಂನ ತಂಮನಾದ ಪಾಲೆ ವೀರವರ್ಮ ಅರಸು ಟೀಪುಸುಲ್ತಾನರ ಸಂಗಡ ತಿರುಗಿ ಬಿದ್ದು, ಕಾಡು ಶೇರಿ ಕೊಂಡು ಇದ್ದಾನೆ. ಈಗ ಅವರ ಫೌಜ ಬಂದು ಇದೆ ಇಂನೂ ನನಗೆ ಯೇನು ಆದೇಶಾ ಯೆಂಬದಾಗ, ಛುಯಸತ್ಸವಾಗಿ,[3] ತಂನ ಕುಟುಂಬ ಮಕ್ಕಳಂನು ತೆಗದು ಕೊಂಡು ರಾತ್ರಾರಾತ್ರಿಯೇ ಅನಂತಶಯನದ ಕಡೆಗೆ ವೋಡಿ ಹೋದರು. ಈ ವಿವರ ಗುಲಾಮಲ್ಲೀ ಸರ್ದಾರನು ಟೀಪುಸುಲ್ತಾನರಿಗೆ ಬರದು ಕಳುಹಿದ್ದರಿಂದ, ಕುಮುಕಿನ ಬಗ್ಯೆ ಮಹಂಮದರಾಜಾ ಬಕ್ಷಿ, ಆಜಮಲ್ಲೀ ಖಾನಬಕ್ಷಿ, ಫಾಜಲ್‌ಖಾನ್, ಹರಾಸೀನ್ ಮಾನೆ, ಜಾನ್ ಕಸ್ತೂರಿ, ಅವನ ಸಂಗಡ ಮೂರು ಜನ ಕಪ್ತಾನರು, ಇವರ ಸಂಗಡ ಖಾಸಿ ಫೌಜ ಸಹಾ ರವಾನೆ ಮಾಡಿದರು.

ಆ ಸರದಾರರು ದಂಡು ಸಮೇತ ಮಲೆಯಾಳಕ್ಕೆ ಹೋಗುವ ಬಗ್ಯೆ, ಕೊಡಗಿನ ಶೀಮೆ ಮಾರ್ಗವಾಗಿ ಬಂದು, ಹೆಗ್ಗಳದ ಘಟ್ಟದ ಮೇಲೆ ಇಳುಕೊಂಡಲ್ಲಿ, ಆ ದಿವಸವೇ ವೀರರಾಜೇಂದ್ರ ವಡೆಯರವರು ಮಂದಿ ತೆಗದು ಕೊಂಡು ಹೋಗಿ, ಘಟ್ಟ ಇಳಿದು ಹೋಗುವ ಮಾರ್ಗಗಳ ಕಟ್ಟಿ, ದುಷ್ಮಾನನ ಲಷ್ಕರಿನ ಸಂಗಡ ಲಡಾಯಿ ಮಾಡುವ ಬಗ್ಯೆ, ಹಾರಿ ನೋಡುತ್ತ ಇದ್ದಲ್ಲಿ, ಆ ಮಾರನೆ ದಿವಸ ಬೆಳಿಗ್ಗೆಯೆ ಫಾಜಲಖಾನನು ತಂನ ದಂಡು ತೆಗದು ಕೊಂಡು, ಅಗಾಡಿಗೆ ಆಗಿ ಕೊಂಡು, ಪಿಛಾಡಿಗೆ ಜಾನ್ ಕಸ್ತೂರಿ ಆಗಿ ಕೊಂಡು, ಮಧ್ಯ ಗುಸಗು ಹಾಕಿ ಕೊಂಡು, ಮಲೆಯಾಳದ ಕಡೆಗೆ ಹೋಗುತ್ತ ಇದ್ದಲ್ಲಿ, ಲಡಾಯಿವಾಗಿ ಪೆಟ್ಟು ತಾಳಲಾರದೆ, ಅಗಾಡಿ ಇದ್ದ ಫಾಜಲ್‌ಖಾನ ದಂಡು ಸಹಾ ಘಟ್ಟ ಇಳಿದು ವೋಡಿ ಹೋದನು. ಜಾನ್ ಕಸ್ತೂರಿಯು ಕೊಡಗು ಜನರ ಬಳಿಗೆ ಶಿಕ್ಕಿ, ಜಗಳವಾಗಿ ಬಹಳ ಜನಕ್ಕೆ

1 ಇದ್ದವರಂನು. 2 ಇದ್ದೇನೆ. 3 ಬಹಿರ್ದೆಸವಾಗಿ.

ಜಾಯ ಜಖಮಿ ಆದ್ದರಿಂದ ಲಚಾರಾಗಿ, ರಸ್ತು ಗುನುಗು ಬಿಟ್ಟು, ಅಗಾಡಿ ಇದ್ದ ಫೌಜಿಗೆ ಕೂಡ ತಕ್ಕ ಬಗಾಯೆ,[1] ಧೈರ್ಯ ಗುಂದಿ ಹೋಗುತ್ತಿದ್ದಲ್ಲಿ. ಕೊಡಗು ಮಂದಿಯು ಕಾದು ನಿಂತು ಇದ್ದ ಬಳಿಯಿಂದ ಅವನ ದಂಡಿನ ಮೇಲೆ ಬಿದ್ದು, ಯೆಂಟು ನೂರು ಜನದ ತಲೆ ಕೊಯಿದರು. ನಾನೂರು ಜನಕ್ಕೆ ಜಖಮಿ ಆಯಿತು. ಜಾನ್ ಕಸ್ತೂರಿ ಅವನ ಸಂಗಡ ಇದ್ದ ಫರಾಸೀಸ ಸರ್ದಾರರನು ತಲೆ ಕೊಯಿದರು. ಅಷ್ಟರಲ್ಲಿ ಕೊಡಗು ಜನರು ಸಾಮಾನು ಸರಂಜಾಮು ಸೂರೆ ಮಾಡುವದಕ್ಕೆ ಪ್ರಾರಂಭಿಸಿದ್ದರಿಂದ, ಕೆಲವು ಜಖಮಿ ಆದಂಥ ಜನ ಮುಂತಾಗಿ ಕಾಡು ಬಿದ್ದು, ಓಡಿ ಹೋಗಿ, ಹಾಜಲ್ಖಾನನ ದಂಡಿಗೆ ಕೂಡಿದರು. ಆ ಬಳಿಕ ದಂಡಿನಲ್ಲಿ ಸಿಕ್ಕಿದಂಥ ಸಾಮಾನು ಸರಂಜಾಮು ಯಾವತ್ತು ದಂಡಿನಲ್ಲಿ ಕೈಸೆರೆ ಸಿಕ್ಕಿದಂಥ ಜನರ ಕೂಡೆ ಹೊರಸಿ, ಹೆಗ್ಗಳಕ್ಕೆ ಹೋಗಿಸಿ ಕೊಂಡು, ಆ ಜನರನು ಕೈಸೆರೆ ಬಿಟ್ಟು, ಬಾಳೆಲೆ ಮಾರ್ಗವಾಗಿ ತಳ್ಳಿಸಿ, ಆ ಮೂರನೆ ದಿವಸ ಈ ಸಿಕ್ಕಿದಂತಾದ್ದರಲ್ಲಿ ಕತ್ತಿ, ಕೋವಿ, ಮದ್ದು, ಗುಂಡು ಅರಮನೆಗೆ ಸೇರ ತಕ್ಕಂತಾದ್ದಾದರಿಂದ, ಅದನು ತೆಗದು ಕೊಂಡು, ಉಳಿಕೆ ಸರಂಜಾಮು ಕೊಡಗರಿಗೆಲ್ಲ ಹಂಚಿ ಕೊಡಿಸಿದರು.

ಆ ಬಾಳೆಲೆ ಮಾರ್ಗವಾಗಿ ಹೋದ ಜನ ಬಾಳೆಲೆ ಲಕಡಿ ಕೋಟೆಗೆ ಹೋಗಿ, ಈ ವಿವರ ಯಾವತ್ತು ಅಲ್ಲಿ ಠಾಣೆಯು ಇದ್ದ ಸರ್ದಾರ ಕಾಡಮರಿಮಲ್ಲಪ್ಪನಾಯಕ ಯೆಂಬುವನಿಗೆ ಹೇಳಿದಲ್ಲಿ, ಆ ಠಾಣೆಯದವನು ಈ ಲಡಾಯಿವಾದ ವರ್ತಮಾನ ಕೇಳಿ, ಹೆದರಿ, ಮದ್ದು ಗುಂಡು ಮುಂತಾದ ಸಾಮಾನು ಅಲ್ಲಿಯೇ ಬಿಟ್ಟು, ರಾತಾರಾತ್ರಿಯೇ ತನ್ನ ಮಂದಿಯನು ತೆಗದು ಕೊಂಡು, ಪೆರಿಯಾಪಟ್ಟಣಕ್ಕೆ ಓಡಿ ಹೋದನು.

ಆ ಬಳಿಕ ಈ ಸಮಾಚಾರವನು ಟೀಪುಸುಲ್ತಾನರು ಕೇಳಿ, ಮಹಾ ಕೋಪದಿಂದ ತಮ್ಮ ಭಾವಮೈದುನನಾದ ಬುರಾನ್ದೀನರು ಯೆಂಬುವರಿಗೆ ಮಡಿಕೇರಿ ಕೋಟೆ, ಕುಶಾಲಿನಗರದ ಕೋಟೆ, ಬೆಪ್ಪುನಾಡು ಲಕಡಿ ಕೋಟೆ, ಭಾಗಮಂಡಲದ ಲಕಡಿ ಕೋಟೆ, ಈ ನಾಲ್ಕು ಕೋಟೆಗೆ ರಸ್ತು ತಲಪಿಸುವ ಬಗಾಯೆ, ಭಾರಿ ಫೌಜ ಕೊಟ್ಟು ಕಳುಹಿದಲ್ಲಿ, ಆ ಬುರಾನ್ದೀನರು ಫೌಜ ಸಮೇತ ಕುಶಾಲಿನಗರ ಯೆಂಬ ಮುಳ್ಳುಸೋಗೆ ಹತ್ತರ ಇಳಿದು ಕೊಂಡು, ಆ ಕೋಟೆಗೆ ಬೇಕಾದ ರಸ್ತು ತುಂಬಿ, ಉಳಿಕೆ ಮೂರು ಕೋಟೆಗೆ ಇದ್ದ ರಸ್ತು ತೆಗದು ಕೊಂಡು, ದಂಡು ಸಮೇತ ಮಡಿಕೇರಿಗೆ ಬರುತ್ತಿದ್ದಲ್ಲಿ, ಮಧ್ಯ ಮಾರ್ಗಕ್ಕೆ ಮಹಾರಾಜರು ತಮ್ಮ ಮಂದಿ ತೆಗದು ಕೊಂಡು ಹೋಗಿ, ಲಡಾಯಿ ಮಾಡಿದಲ್ಲಿ, ಆ ಬುರಾನ್ದೀನರ ದಂಡಿಗೆ ಬಹಳ ಪೆಟ್ಟಾಗಿ, ಮೂರು ಕೋಟೆಗೆ ಇದ್ದ ರಸ್ತಿನಲ್ಲಿ ಅರವಾಸಿ ಅಲ್ಲಿ ಬಿಟ್ಟು, ಅರವಾಸಿ ರಸ್ತು ಸಾಗಿಸಿ ಕೊಂಡು ಹೋಗಿ ಮಡಿಕೇರಿ ಕೋಟೆಗೆ ಹಾಕಿದರು.

ಉಳಿಕೆ ಆ ಯೆರಡು ಲಕಡಿ ಕೋಟೆಗೆ ಇದ್ದ ರಸ್ತು ಕೊಡಗರಿಗೆ ಸಿಕ್ಕಿ ಹೋದ್ದರಿಂದ, ಬುರಾನರು ದಂಡು ಸಮೇತ ಸಹಾ ಪಟ್ಟಣಕ್ಕೆ ಹೋಗಿ, ಕೊಡಗಿನಲ್ಲಿ ಆದ ಹಕೀಕತ್ತಾಂತ ಟೀಪುಸುಲ್ತಾನರಿಗೆ ಹೇಳಿದಲ್ಲಿ, ಅವರು ಬುರಾನ್ದೀನರ ಸಂಗಡ ಹುಕುಮ್ ಕೊಟ್ಟದ್ದು: "ಈಗ ಕೋಟೆ ಅರಸುಗಳು ರಾಮರಾಜರ ಸೀಮೆ ಕಡೆಗೆ ಓಡಿ ಹೋಗಿ ಇದ್ದಾರೆ. ಮಲೆಯಾಳದ ಸೀಮೆ ಯಾವತ್ತು ಹುಂಡು ಆಗಿ ಅದೆ. ಅದನು ನಿಲ್ಲಿಸಿ, ಬಂದುಬಸ್ತು ಮಾಡ ತಕ್ಕ ಬಗಾಯೆ, ನಾವು ಅರವಾಸಿ ಫೌಜ ತೆಗದು ಕೊಂಡು, ಗೆಜ್ಜಲಹಟ್ಟಿ ಮಾರ್ಗವಾಗಿ ಬೆಂಗಾಟು ಅಂಗಡಿಗೆ ಬರುತ್ತ ಇದ್ದೇವೆ. ಅರವಾಸಿ ಫೌಜನು ನಿಮ್ಮ ಕಟಿಗೆ ಕೊಡುತ್ತೇವೆ. ಆ ದಂಡು ಮೂರು ತುಕಡಿ ಮಾಡಿ, ಮೂರು ಮಾರ್ಗದಿಂದ ಕೊಡಗಿನ ಸೀಮೆ ಹಳನುಗಗಿಸಿ, ಕೊಡಗರಿಗೆ ಯಾವತ್ತಕ್ಕೂ ಹೋಗದು, ಆ ನಾಲ್ಕು ಕೋಟೆಗೆ ಮಳೆಗಾಲ ಆರು ತಿಂಗಳಿಗೆ ಬೇಕಾದ ರಸ್ತು ಹಾಕಿ, ಹೆಗ್ಗಳದ ಗಟ್ಟದ ಮಾರ್ಗವಾಗಿ ನಾವು ಇರುವಲ್ಲಿಗೆ ಬಾ" ಯೆಂಬದಾಗಿ, ಹುಕುಮ್ ಕೊಟ್ಟು, ಟೀಪುಸುಲ್ತಾನರು ಅದೇ ಮೇರೆ ಅರವಾಸಿ ಫೌಜನು, ಸೆದ್ಹಾಮದ ಸಿಪಾದಾರ, ಶೇಕ ಅನ್ಸರ ಸಿಪಾದಾರ, ರಸ್ತು ಸಾಮಾನು ಸರಂಜಾಮು ಮುಂತಾಗಿ ಬುರಾನದ್ದಿನ್ ಸಿಪಾಸಾಲರರ ಕಟಿ ಮಾಡಿ, ಬಾಕಿ ಅರವಾಸಿ ಫೌಜನು ಖಾಸ ತಮ್ಮ ಸಂಗಡ ತೆಗದು ಕೊಂಡು, ಕಲಿ ಸಂದ ೪೮೯೧ನೇ ಸೌಮ್ಯ ಸಂವತ್ಸರದ ವೈಶಾಖ ಮಾಸದಲ್ಲಿ, ಪಟ್ಟಣದಿಂದ ಹೊರಟು, ಗೆಜ್ಜಲಹಟ್ಟಿ ಗಟ್ಟ ಇಳಿದು, ಕೋಟೆ ಅರಸುಗಳ ಸೀಮೆ ಮಾರ್ಗವಾಗಿ ಬೆಂಗಾಟು ಅಂಗಡಿಯಲ್ಲಿ ಇಳುದು[2] ಕೊಂಡು, "ಮಲೆಯಾಳದ ರಾಜರು ತುಂಟರಿದ್ದಾರೆ[3]. ಇವರನೆಲ್ಲ ಹಿಡಿಯ ಬೇಕು" ಯೆಂಬದಾಗಿ ವಿಚಾರಿಸಿದಲ್ಲಿ, ಈ ಸೂಕ್ಷ್ಮವನು ಚಿರಕಲ ರಾಜರು ತಿಳುದು[4], "ಕೋಟೆ ಅರಸುಗಳು ದಗಾ ಮಾಡಿ ಓಡಿ ಹೋದ್ದರಿಂದ, ಟೀ

1 ಕೂಡುವ ಹಾಗೆ. 2 ಇಳಿದು. 3 ಇದ್ದಾರೆ. 4 ತಿಳಿದು.

ಪುಸುಲ್ತಾನರಿಗೆ ಮಲೆಯಾಳದ ರಾಜರ ನಂಬಿಗೆ ಇಲ್ಲದೆ ಹೋಗಿ ಇದೆ. ಆದರಿಂದ ನಂಮ ಅರ್ಥ ಪ್ರಾಣ ಯಾವ ಮೇರೆ ಉಳುದೀತು ಯೆಂಬದಾಗಿ ಗ್ರಹಿಸಿ, ತಂಮ ಕುಟುಂಬ ಮಕ್ಕಳಂನು ನಂಬಿಗಸ್ಥ ಜನರ ಸಂಗಡ ಕೂಡಿಸಿ, ರಾತ್ರಾರಾತ್ರಿಯೇ ತಲಚೇರಿಗೆ ಸಾಗಿಸಿ, ಈ ವರ್ತಮಾನ ರಾತ್ರೆಯೇ ಬಂದು ಹೇಳಿದರೆ, ನಾವು ಈ ರಾತ್ರೆ ಮೂರನೆ ಝಾವದಲ್ಲಿ ಹೊರಟು, ತಲಚೇರಿಗೆ ಬರುತ್ತೇವೆ" ಯೆಂಬದಾಗಿ, ತಾಕೀದಿ ಮಾಡಿ ಕಳುಹಿದಲ್ಲಿ, ಆ ಜನರು ಕುಟುಂಬ ಮಕ್ಕಳ ತಲಚೇರಿ ಸರಹದ್ದಿಗೆ ದಾಟಿಸಿ, ಆ ರಾತ್ರೆಯೇ ಪುನಹ ಬಂದು, ಈ ವರ್ತಮಾನ ಹೇಳುವದಕ್ಕೆ ಯತ್ತದರಿಂದ, ಕೆಲವು ಮಾಪಿಳ್ಳೇರು ಈ ವರ್ತಮಾನ ತಿಳಿದು ಕೊಂಡು, ಟಿಪುಸುಲ್ತಾನರ ಬಳಿಗೆ ಬಂದು, ಚಿರಕಲ ರಾಜರು ಕುಟುಂಬ ಮಕ್ಕಳ ತಲಚೇರಿಗೆ ಸಾಗಿಸಿ ಇದ್ದಾರೆ. ಈಗ ಅವರು ಅಲ್ಲಿಗೆ ಹ್ಯಾದಿ ಹೋಗುವವರಾಗಿ ಇದ್ದಾರೆ, ಯೆಂಬದಾಗಿ ಹೇಳಿದ್ದರಿಂದ, ಈ ವಿವರ ಕೇಳಿ, ಟಿಪುಸುಲ್ತಾನರು ತಂಮ ಕಡೆ ಆಪಾತಾಂ ಪಯಾದ್ಯೇರಿಗೆ ತಯಾರು ಮಾಡಿ, ಆ ಚಿರಕಲ ರಾಜರ ಹಿಡಿಯುವ ಬಗೆಯ ಕಳುಹಿದಲ್ಲಿ, ಆ ಪಯಾದ್ಯೇರು ಅದೇ ಮೇರೆ ಚಿರಕಲ ರಾಜರು ಇದ್ದ ಹೇಟಿ ಜಾಗಾ ಬಳಸುವದರೊಳಗೆ, ಈ ವಿವರವಂನು ಅಲ್ಲಿ ಇದ್ದ ನಾಯಮಾರರು ಚಿರಕಲ ರಾಜರಿಗೆ ಹೇಳಿದ್ದರಿಂದ, ಆ ರಾಜರು ಹೆದರಿ, ಆ ತಕ್ಷಣ ಗಿಡ ಬಿದ್ದು ಹ್ಯಾಡುತ್ತ ಇದ್ದಲ್ಲಿ, ಆ ಪಾಳೆಗಾರ ಜನರು ಕಂಡು, ಆ ರಾಜರ ಬೆಂನಟಿ ಹೋಗಿ ಹಿಡಿಯುವಷ್ಟರಲ್ಲಿ, ಆ ರಾಜರು ಇಂನೂ ಅವರ ಕೈಗೆ ಸಿಕ್ಕಿದರೆ ತಮಗೆ ಸುಖ ಬಾರದು ಯೆಂಬದಾಗಿ ತಿಳಿದು, ತಂಮ ಪ್ರಾಣ ತಂಮ ಕೈಯಿಂದ ಕಳದು ಕೊಂಡರು.

ಆ ಬಳಿಕ, ಪಾಳೇಗಾರರು ಆ ರಾಜರ ಶರೀರವಂನು ಟಿಪುಸುಲ್ತಾನರ ಬಳಿಗೆ ತೆಗದು ಕೊಂಡು ಹೋದಲ್ಲಿ, ಟಿಪುಸುಲ್ತಾನರು ಆ ಶರೀರದ[1] ಕಾಲಿಗೆ ಹಗ್ಗ ಹಾಕಿ, ದಂಡಿನ ಸುತ್ತ ಯೆಳಸಿ, ಆ ಬಳಿಕ ಹೊಂದು ಮರಕ್ಕೆ ತೂಗಿಸಿ ಬಿಟ್ಟರು. ಆದ್ದರಿಂದ ಆ ಮಲೆಯಾಳದ ಕೆಲವು ಅರಸುಗಳು, ನಾಯರರು, ನಂಬೂಯಾರು ಮುಂತಾಗಿ ಹೆದರಿ, ಅನಂತ ಶಯನದ ರಾಮರಾಜರ ಸೀಮೆಗೆ ಹ್ಯಾಡಿ ಹೋದರು.

ಈ ಸಮಾಚಾರವಂನು ಟಿಪುಸುಲ್ತಾನರು ಕೇಳಿ, "ಈ ಮೇರೆ ನಂಮ ಸರಕಾರಕ್ಕೆ ಸೇರಿದ ಮಲೆಯಾಳದ ಜನರು ಮುಂತಾಗಿ ನಿಂಮ ಸೀಮೆ ಕಡೆಗೆ ಹ್ಯಾಡಿ ಬಂದು ಇದ್ದಾರೆ. ಆ ಜನರ ಯಾವತ್ತು ಹಿಡಿದು ಕಳುಹಿ ಕೊಡ ಬೇಕು. ಇಲ್ಲದಿದ್ದರೆ, ನಿಂಮ ಸೀಮೆ ಯಾವತ್ತು ಲೂಟಾಯಿಸಿ, ಆಕ್ರಮಿಸಿ ಕೊಳ್ಳುತ್ತೇವೆ" ಯೆಂಬದಾಗಿ, ತಂಮ ಕಡೆ ಹರಿಕಾರ ಮುಂತಾದವರ ಸಂಗಡ ಹೇಳಿ ಕಳುಹಿದಲ್ಲಿ, ಈ ಮಾತಿಗೆ ರಾಮರಾಜರು ಒಡಂಬಡದೆ, ಆ ಜನರಂನು ಬಿಟ್ಟು ಕೊಡದೆ, ಹರಿಕಾರ ಮುಂತಾದವರಂನು ಹಿಂತಿರುಗಿಸಿ ಬಿಟ್ಟದರಿಂದ, ಆ ಜನ ಬಂದು, ಈ ಮಾತು ಟಿಪುಸುಲ್ತಾನರಿಗೆ ಹೇಳಿದಲ್ಲಿ, ಟಿಪುಸುಲ್ತಾನರು "ಮಳೆಗಾಲ ಆರು ತಿಂಗಳು ಕಳದ ಬಳಿಕ, ಅನಂತಶಯನದ ರಾಮರಾಜರ ಸೀಮೆಯಂನು ಆಕ್ರಮಿಸಿ ಕೊಳ್ಳ ಬೇಕು" ಯೆಂಬದಾಗಿ, ಕೊಯಂಮುತ್ತೂರಿಗೆ ಹೋಗಿ, ಛಾವಣಿ ಮಾಡಿ, ಜಗಳಕ್ಕೆ ಬೇಕಾದ ಸಂನಾಹ ಮಾಡುತ್ತ ಇದ್ದರು.

ಇತ್ತಲಾಗಿ ಟಿಪುಸುಲ್ತಾನರು ಮಾಡುವಂತ ಅನ್ಯಾಯತ ಯಾವತ್ತಂನು ಆ ರಾಮರಾಜರು ಇಂಗರೇಜಿ ಬಹಾದುರ[2] ಕುಂಪನಿ ದೊಡ್ಡ ಸ್ಥಾನವಾಗಿ ಇರುವ ಬಂಗಾಳದ ಜನರಾಲ್ ಮಹಾರಾಜಶ್ರೀ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ ಬಹಾದುರವರಿಗೂ, ಮದುರಾಸಿನ ಜನರಾಲ್ ಮೆಂಡೂಸ ಸಾಹೇಬ ಬಹಾದುರವರಿಗೂ, ಬಾಂಬಾಯಿ ಗವುನರ ಮೇಜರ ಜನರಾಲ್ ರಾಬರ್ಟ್ ಆಬರಕಂಬಿ ಸಾಹೇಬ ಬಹಾದುರವರಿಗೂ[3] ಸಹಾ, ಬರೆಸಿ ಕಳುಹಿದಲ್ಲಿ, ಈ ಮೂವರು ದೊಡ್ಡ ಸರದಾರ ಸಾಹೇಬ ಬಹಾದುರವರು, "ನೀವು ಅಂಜ ಬೇಡ" ಯೆಂಬದಾಗಿ, ರಾಮರಾಜರಿಗೆ ಜವಾಬು ಬರೆಸಿ ಕಳುಹಿ, ಅವರು ಲಡಾಯಿಕ್ಕೆ ಸಂನದ್ಧರಾಗುತ್ತಾ ಇದ್ದರು. ಹೀಗೆ ಇರುತ್ತಿದ್ದಲ್ಲಿ, ಕೊಡಗಿನ ಒಳಗೆ ಇರುವ ನಾಲ್ಕು ಕೋಟೆಗೆ ರಸತು ಹಾಕುವ ಬಗೆಯ ಬೇಕಾದ ಸಾಮಾನು ಜಮಾಯಿಸುತ್ತ ಇದ್ದಂತ ಸಮಾಚಾರ ಕೊಡಗಿನ ರಾಜರು ಕೇಳಿ, ಅವರು ರಸತು ತೆಗದುಕೊಂಡು ಬರುವದಕ್ಕೆ ಮುಂಚಿತವಾಗಿ ಕೊಡಗಿನ ಒಳಗೆ ನಾಲ್ಕು ಕೋಟೆಯಂನು ಮಳೆಗಾಲದ ಒಳಗೆ ಸಾಧಿಸ ಬೇಕು ಯೆಂಬದಾಗಿ, ಜ್ಯೇಷ್ಠ ಶು ೧೦ ದಿವಸ ಸಾವಿರದ ಐನೂರು ಕೊಡಗು ಜನರಂನು ತೆಗದು ಕೊಂಡು ಹೋಗಿ, ನಂಜರಾಯ ಪಟ್ಟಣದ ದೇವಸ್ಥಾನದಲ್ಲು ಇಳಿದು ಕೊಂಡು[4], ನಾಲ್ಕು ದಿವಸ ಅಲ್ಲಿ ಇದ್ದು, ಟಿಪುಸುಲ್ತಾನರು ಕುಶಾಲನಗರ ಯೆಂಬ ಕೋಟೆ ಹೊಸತಾಗಿ ಕಟ್ಟಿಸುತ್ತಾರಷ್ಟೆ, ಆ ಕೋಟೆ ಸಮಾಗನೆ ಯಾವ ಮೇರೆ ಇದ್ದ,

1ಶವದ. 2ಬಹಾದ್ದರ್. 3Lord Cornwallis, Governer General of Bengal. General Meadows of Madras. Major General Abercromby, Governor of Bombay 4ಕಾದ್ದಿದ್ದು ಕೊಂಡು.

ಆ ನೆಲ ಯಾವ ಮೋರೆ ಇದೆ, ಅದರ ವಳಗೆ ಮಂದಿ ಯೆಷ್ಟು ಇದೆ, ಜಗಳ ಮಾಡುವಾಗ್ಯೆ ನಂಮ ಮಂದಿ ನಿಲ್ಲು
ವ ಬಗ್ಯೆ ಹ್ಯಾಗ, ಆ ಕೋಟೆ ವಳಗೆ ಇರುವ ಮಂದಿಗೆ ಊನವಾಗಿ, ನಮಗೆ ಅನಹಿತ[1] ಇರುವ ನೆಲ ಯಾವದು ಯೆಂ
ಬದಾಗಿ ನೋಡತಕ್ಕ ಬಗ್ಯೆಯೂ, ನಾವು ಆ ಕೋಟೆ ಸಮೀಪಕ್ಕೆ ಹೋದರೆ, ಅದರ ವಳಗೆ ಇರುವಂತ ಜನ ತಂದು, ಜ
ಗಳಕ್ಕೆ ಹೊರಟು ಬರುತ್ತಾರೋ, ಭಯಪಟ್ಟು ಕೋಟೆ ವಳಗೆ ಕೂಡಿ ಕೊಂಡು ಗುಂಡು ಹಾರಿಸುತ್ತಾರೋ ಯೆಂಬ ಅವರ
ಧೈರ್ಯ ಅಧೈರ್ಯ ನೋಡುವ ಬಗ್ಯೆಯೂ, ವೀರರಾಜೇಂದ್ರ[2] ವಡೆಯರವರು ತಂಮ ಮಂದಿ ಸಮೇತ ಆ ದಿವಸ ಮೂರನೆ
ಜಾವದಲ್ಲಿ[3] ಹೊರಟು, ಮಡಿಕೇರಿಯಿಂದ ಬರುವ ರಹದಾರಿಗಾಗಿ ಸಾಯಂಕಾಲಕ್ಕೆ ಐದು ಗಳಿಗೆ[4] ಇದ್ದಂತೆ ಕುಶಾಬಿನ
ಗರದ ಕೋಟೆ ಸಮೀಪಕ್ಕೆ ಹೋದಲ್ಲಿ, ಅಗಾಡಿ ಇದ್ದ ಸವಲ್ಪ ಮಂದಿಯಂನು ಆ ಕೋಟೆ ವಳಗೆ ಇದ್ದವರು
ಸವಲ್ಪ ಮಂದಿ ಇದೆ ಯಂತ[5] ತಿಳಿದು[6], ಆ ಕೋಟೆಯಿಂದ ಇಂನೂರು ಜನ ಪರಿಯಂತರ ವಾಲೆಕಾರರು ಈ ಕೊಡಗು
ಜನದ ಮೇಲೆ ಗುಂಡು ಹಾಕಿ ಬೆಂನಾಡಿದಲ್ಲಿ, ಈ ಅಗಾಡಿ ಇದ್ದ ಜನ ಜಗ್ಗಿ ಹಿಂತಿರುಗಿ ವೋಡಿ ಬರುತ್ತಾ ಇ
ದ್ದಲ್ಲಿ, ರಾಜರು ಆ ವೋಡಿ ಬರುವ ವೋಡಿ ಜನದ ಮೋರೆ ಮೇಲೆ ಕಡಿದು, ತಂಮ ಹಾತರ[7] ಇದ್ದ ಜನರಂನು ಅ
ವರ ಇದುರಾಗಿ[8] ಕಳುಹಿದಲ್ಲಿ, ಇವರ ಮೇಲೆ ಆ ಜನರು ಗುಂಡು ಇಟ್ಟರು. ಅದಂನು ಗುಮಾನಕ್ಕೆ ಹಾಕದೆ ಮೇ
ಲೆ ಬಿದ್ದು ಜಗಳ ಮಾಡಿದಲ್ಲಿ, ಆ ಜನರು ಪೆಟ್ಟು ತಾಳಲಾರದೆ ವೋಡಿ ಹೋಗಿ, ಕೋಟೆ ವಳಗೆ ನುಗ್ಗಿದಲ್ಲಿ,
ಆ ಜನರ ವೋಡಿಸಿ ಕೊಂಡು ಹೋಗಿ, ಕೊಡಗು ಜನವು ಕೋಟೆ ವಳಗೆ ನುಗ್ಗಿ ಕಡುದಲ್ಲಿ[9], ಆ ಕೋಟೆ ವಳಗೆ ಇದ್ದ ಯೇ
ಳು ನೂರು ಜನ ವಾಲೆಕಾರರು ಪೆಟ್ಟು ತಾಳಲಾರದೆ, ಕೋಟೆ ಬಿಟ್ಟು, ಕಾವೇರಿ ಹೊಳೆ ಬಿದ್ದು, ಬೆಟ್ಟದಪುರದ ಮೋಗ್ಯೆ
ಹಿಡಿದು ವೋಡುತಿದ್ದಲ್ಲಿ, ಈ ಕೊಡಗು ಜನರು ಬೆಂನಾಡಿ, ಕಾವೇರಿ ಹೊಳೆ ವಳಗೆ ಮುಂನೂರು ಜನ ಪರಿಯಂತರ ಕ
ಡಿದು, ಅಲ್ಲಿಂದ ಬೆಂನಾಡಿ ಬೆಟ್ಟದಪುರದ ಸಮೀಪದ ಬೆಳುಗುರಿ ಪರಿಯಂತರ ಇಂನೂರು ಜನ, ದನ ಕರ, ಕಡಿದು ಹಾ
ಕಿ, ಆ ಕುಶಾಬಿನಗರದ ಕಿಲ್ಲೇದಾರನ ತಲೆಯಂನು ಕುಲ್ಲಟ್ಟಿ ಹಾಂನಯ್ಯನು ಕಡಿದು ತಂದು, ಮಹಾರಾಜರ ಮುಂದೆ
ನಿವಾಳಿಸಿ ಹಾಕಿ ಬಿಟ್ಟನು. ದೊರೆಗಳು ಆ ದಿವಸ ಆ ಕೋಟೆ ವಳಗೆ ಇದ್ದು, ಮಾರನೆ ದಿವಸ ಬೆಳಿಗ್ಗೆ ಕೋಟೆ ವಳಗೆ
ಸಿಕ್ಕಿದಂಥ ಸಾಮಾನದಲ್ಲಿ ಅರಮನೆಗೆ ಸಲ್ಲುವಂಥ ಮದ್ದು, ಗುಂಡು, ಕೋವಿ ಮುಂತಾಗಿ ನಾಲ್ಕುನಾಡ ಅರಮನೆ
ಗೆ ಸಾಗಿಸಿ, ಉಳಿಕೆ ಬಟ್ಟೆ ಬರೆ, ದವಸ ಧಾಂನ್ಯ, ಪಂಚಲೋಹ, ದನ ಕರ ಮುಂತಾಗಿ, ತಂಮ ಮಂದಿಗೆ ಹಂಚಿ ಕೊ
ಟ್ಟು, ಆ ಲಕಡಿ ಕೋಟೆಗೆ ಬೆಂಕಿ ಹಾಕಿ ಸುಟ್ಟು ಬಿಟ್ಟು, ನಾಲ್ಕುನಾಡ ಅರಮನೆಗೆ ಬಂದು, ಇರುತ್ತಾ ಇದ್ದ
ರು. ಆ ಮೂರನೆ ತರಾವಗಿ ತಿಂಗಳಲ್ಲಿ ರಾಜರು ತಂಮ ಮಂದಿ ತೆಗದು ಕೊಂಡು ಬಂದು, ಬೆಪ್ಪುನಾಡ ಲಕಡಿ ಕೋ
ಟೆಗೆ ಮುತ್ತಿಗೆ ಹಾಕಿದಲ್ಲಿ, ಆ ಲಕಡಿ ಕೋಟೆ ವಳಗೆ ಇದ್ದ ರಾಯದುರ್ಗದ ವಾಲ್ಯೆಕಾರರು ನಿಸ್ತರಿಸಲಾರದೆ, ಸಲ್ಲಾ
ಕ್ಕೆ ಇಳಿದು ಬಂದದರಿಂದ, ಮಹಾರಾಜರು ಆ ಕಿಲ್ಲೇದಾರನಿಗೂ, ಆ ವಾಲೆಕಾರ ಜನರಿಗೂ, ಅವರ ಸಾಮಾನು ಸಮೇ
ತ ಕೊಡಗಿನ ಶೀಮೆಯಿಂದ ದಾಟಿಸಿ ಬಿಟ್ಟು, ಆ ಕೋಟೆಯಂನು ಸಾಧಿಸಿ ಕೊಂಡು, ಅದರಲ್ಲಿ ಇದ್ದ ಮದ್ದು, ಗುಂ
ಡು, ಫಿರಂಗಿ, ಕೋವಿ ಮುಂತಾದ್ದು ನಾಲ್ಕುನಾಡ ಅರಮನೆಗೆ ಸಾಗಿಸಿ, ದವಸ ಧಾಂನ್ಯ, ದನ ಕರ ಕೊಡಗು ಮಂದಿಗೆ
ಹಂಚಿ ಕೊಟ್ಟು, ಆ ಲಕಡಿ ಕೋಟೆಗೆ ಬೆಂಕಿ ಹಾಕಿ ಸುಟ್ಟು ಬಿಟ್ಟಲ್ಲಿ, ಆ ಸಮಾಚಾರ ಈ ಕೋಟೆಯಲ್ಲಿ ಇದ್ದ
ಕಿಲ್ಲೇದಾರನು, ಪಟ್ಟಣಕ್ಕೆ ಹೋಗಿ, ಬುರಾನುದ್ದೀನರ ಸಂಗಡ ಹೇಳಿದಲ್ಲಿ, ಬುರಾನುದ್ದೀನರು ತಂಮ ಸಂಗಡ
ಸೈದ್ ಹಮೀದನು ಶಿಪಾದಾರ್, ಹಜರತ್ ಖಾನ್ ಗೋರಿ ಶಿಪಾದಾರ, ಅಕಬರ್ ಮನವರಿ ಶಿಪಾದಾರ, ಹಾಫಿಜ ಮುರ್ತು
ಜ ಶಿಪಾದಾರನ ಸಹಾ ಕೂಡಿಸಿ ಕೊಂಡು, ಭಾರಿ ಫೌಜ ಸಮೇತ ಯೆರಡು ಕೋಟೆಗೆ ಇರುವ ರಸದು ತೆಗದು ಕೊಂ
ಡು ಹೊರಟು ಬಂದು, ಸೈದ್ ಹಮೀದ್ ಶಿಪಾದಾರನಂನು ಫೌಜ ಸಮೇತ ಅರಕಲ್ಗೋಡ ಮೋಗವಾಗಿ ಯ
ಡವನಾಡಿಗೆ ಕಳುಹಿ, ಶೇಕ್ ಅನ್ಸರ ಶಿಪಾದಾರನಂನು ಫೌಜ ಸಮೇತ ಬಾಳೆಲೆ ಮೋಗವಾಗಿ ಕೊಡಗಿನ ಶೀಮೆ
ವಳಿಕೆ ರವಾನೆ ಮಾಡಿ, ತಂಮ ಭಾರಿ ಫೌಜಂನು ತೆಗದು ಕೊಂಡು, ರಸದು ಸಾಮಾನು ಸಾಗಿಸಿ ಕೊಂಡು, ಸಿದ್ಧೇಶ್ವ
ರನ ಬೆಟ್ಟದ ಮೋಗವಾಗಿ ಬಂದು, ಅಂಮತಿ ಗ್ರಾಮದಲ್ಲಿ ಇಳುಕೊಂಡರು. ಶೇಕ್ ಅಂನ್ಸರನು ಕೊಂಬಾಡಿಯ
ಲ್ಲು ಬಂದು ಇಳುಕೊಂಡನು; ಸೈದ್ ಹಮೀದನು ಯಡವನಾಡಲ್ಲಿ ಇಳುಕೊಂಡನು. ಈ ಸಮಾಚಾರ ವೀರರಾ

---

1 ಅನ್ಹವ. 2 ವೀರರಾಜೇಂದ್ರ. 3 ಝಾವದಲ್ಲಿ. 4 ಘಳಿಗೆ. 5 ಯಂತ್ತ=ಎಂದು, (contracted from the pres. part ಎನುತ್ತಾ. 6 ತಿಳಿದು. 7 ಹತ್ತರ. 8 ಎದುರಾಗಿ or ಇದಿರಾಗಿ. 9 ಕಡಿದಲ್ಲಿ.

ಜೇಂದ್ರ ವಡೆಯರವರು ಕೇಳಿ, ಆ ಸೈದ್ ಹಮೀದನ ಸಂಗಡ ಜಗಳ ಮಾಡ ತಕ್ಕ ಬಗ್ಯೆ[1], ತಕ್ಕಷ್ಟು ಜನ ಯಡವನಾಡ ಕಡೆಗೆ ಕಳುಹಿಸಿ, ಬುರಾನುದ್ದೀನನ ಸಂಗಡ ಲಡಾಯಿ ಮಾಡ ತಕ್ಕ ಬಗ್ಯೆ, ವೀರರಾಜೇಂದ್ರ ವಡೆಯರವರು ಮಂದಿ ತೆಗೆದು ಕೊಂಡು ಹೋಗುತ್ತಿದ್ದಲ್ಲಿ, ಕೊಂಬಾಡಿಯಲ್ಲು ಇಳಿದು, ಇದ್ದ ಶೇಕ್ ಅನ್ಸರನ ಫೌಜಿನ ಸಂಗಡ ಜಗಳ ಮಾಡಿ, ಅವನ ಕಡೆ ಐನೂರು ಜನ ಪರಿಯಂತರ ಘಾಯ ಜಖಮಿ ಆದದರಿಂದ, ಝಗಳ ಮಾಡುವದಕ್ಕೆ ನಿರ್ವಾಹವಿಲ್ಲದೆ, ಉಳಿಕೆ ಮಂದಿಯನ್ನು ತೆಗೆದು ಕೊಂಡು ಹೋಗಿ, ಬುರಾನುದ್ದೀನನ ದಂಡು ಇದ್ದ ಅಂಮತ್ತಿಗೆ ಸಮೀಪವಾದ್ದರಿಂದ, ಆ ದಂಡಿಗೆ ಕೂಡಿದನು. ಆ ಮಾರನೆ ದಿವಸ ಬುರಾನದ್ದೀನನು ಫೌಜ ಸಮೇತ ರಸ್ತು ಸಾಮಾನು ಸಾಗಿಸಿ ಕೊಂಡು, ಭಾಗಮಂಡಲಕ್ಕೆ ಹೋಗ ತಕ್ಕ ಬಗ್ಯೆ, ಕಡಿಯತ್ತನಾಡ ಮಾರ್ಗವಾಗಿ ಹೋಗುತ್ತಿದ್ದಲ್ಲಿ, ಅಲ್ಲಿಯೂ ಲಡಾಯಿವಾಗಿ, ಅವರ ಕಡೆ ಕೆಲವು ಜನಕ್ಕೆ ಅಪಾಯವಾಗಿ, ಅಲ್ಲಿಂದ ಬಂದು, ಪಾಡಿನಾಲ್ಕುನಾಡ ವಳಿತವಾದ ನೂರಂಬಾಡದ ಮೈದಾನದಲ್ಲು ಇಳುಕೊಂಡರು. ಆ ಬಳಿಕ ವೀರರಾಜೇಂದ್ರ ವಡೆಯರವರು, ತಂಮ ಕಡೆ ಮಂದಿಯನ್ನು ಭಾಗಮಂಡಲಕ್ಕೆ ಹೋಗುವ ಮಾರ್ಗದಲ್ಲಿ ಮಾವಟ್ಟಿ ಯಂಬ ಇಕ್ಕಟ್ಟಿನ ಜಾಗದಲ್ಲು ನಿಲ್ಲಿಸಿ, ಝಗಳಕ್ಕೆ ಕಾದು ಇದ್ದರು. ಆ ಮಾರನೆ ದಿವಸ ಬೆಳಿಗ್ಯೆ ಬುರಾನುದ್ದೀನನು ಶೇಖ್ ಅನ್ಸರ ದಂಡು ಸಮೇತ ಬಂದು, ಆ ಮಾವಟ್ಟಿಗೆ ತಲಪಿದಲ್ಲಿ, ಹೋರಳ ಲಡಾಯಿವಾಗಿ, ಅವರ ದಂಡಿಗೆ ಬಹಳ ನಷ್ಟವಾಗಿ, ಮಾರ್ಗವು ಇಕ್ಕಟ್ಟಾದ್ದರಿಂದ ರಸ್ತು ಯಾವತ್ತು ಸಾಗಿಸುವದಕ್ಕೆ ಕೂಡದೆ, ಕೆಲವು ರಸ್ತು ಸಾಮಾನು ಅಲ್ಲಿಯೇ ಹಾಕಿ ಬಿಟ್ಟು, ಸಾಯಂಕಾಲಕ್ಕೆ ಭಾಗಮಂಡಲದ ಕ್ಯಾಟೆಗೆ ಸೇರಿದರು. ಅವರು ಅಲ್ಲಿ ಬಿಟ್ಟು ಹೋದ ಸಾಮಾನು ಯಾವತ್ತು ಕೊಡಗು ಜನಕ್ಕೆ ಸಿಕ್ಕಿತು. ಆ ಕ್ಯಾಟೆಗೆ ರಸ್ತು ಸಾಲದೆ ಹೋದ್ದರಿಂದ, ಪೆರಿಯಾಪಟ್ಟಣದಿಂದ ರಸ್ತು ತರುವ ಬಗ್ಯೆ ದೂರವಾದ್ದರಿಂದ, ಪರಿಯಾಸವಾದೀತು ಯೆಂಬದ ತಿಳಿದು, ಮೇಗಲಿನ ಘಟ್ಟದ ಮಾರ್ಗವಾಗಿ ಹೋಗಿ, ತುಳುವನಾಡಿಂದ ಸಾಮಾನು ತರ ಬೇಕು ಯಂತ, ಫೌಜ ಸಮೇತ ಬಂದು, ಘಟ್ಟದ ಸಮೀಪ ಪೆಟ್ಟಿ ಯಂಬಲ್ಲಿಗೆ ತಲಪಿದಲ್ಲಿ, ಕೊಡಗು ಜನಕ್ಕೂ ಆ ಬುರಾನುದ್ದೀನನ ದಂಡಿಗೂ ಲಡಾಯಿವಾಗಿ, ಐನೂರು ಜನ ಪರಿಯಂತರ ಅವರ ಕಡೆಯಲ್ಲಿ ಘಾಯ ಜಖಮಿ ಆಯಿತು. ಆದಾಗ್ಯೂ ದಕ್ಕದೆ ದಂಡನ್ನು ತೆಗೆದು ಕೊಂಡು, ತುಳುವನಾಡಿಗೆ ಹೋಗಿ, ಅಲ್ಲಿಂದ ರಸ್ತು ಸಾಗಿಸಿ ಕೊಂಡು ಪುನಹ ಬಂದಲ್ಲಿ, ಕೊಡಗು ಜನವು ನಡು ಘಟ್ಟದಲ್ಲಿ ಝಗಳಾ ಮಾಡಿದಲ್ಲಿ, ಪೆಟ್ಟು ತಾಳಲಾರದೆ, ಅರೆವಾಸಿ ರಸ್ತನ್ನು ಅಲ್ಲಿಯೇ ಬಿಸಾಟು ಬಿಟ್ಟು, ಬಾಕಿ ರಸ್ತನ್ನು ಸಾಗಿಸಿ ತಂದು, ಭಾಗಮಂಡಲದ ಕ್ಯಾಟೆಗೆ ತಲಪಿಸಿ, ಅಲ್ಲಿ ನಾಲ್ಕು ದಿವಸ ಇದ್ದು, ಮತ್ತೊಂದು ಸಲ ರಸ್ತು ತರ ಬೇಕು ಯಂತ, ಸದರಿ ಘಟ್ಟಾ ಇಳಿಯುವ ಬಗ್ಯೆ ಬಂದಲ್ಲಿ, ಕೊಡಗು ಜನ ಲಡಾಯಿ ಮಾಡಿ, ಘಟ್ಟಾ ಇಳಿಯುವ ಬಗ್ಯೆ ಬಿಡದೆ ಹೋದ್ದರಿಂದ, ಹಿಂತಿರಗಿ ಬಂದ ಮಾರ್ಗವನ್ನೇ ಹಿಡಿದು ಬಂದು, ಬೆಪ್ಪುನಾಡಲ್ಲು ಇಳುಕೊಂಡು, ಮಾರನೆ ದಿವಸ ಬೆಳಿಗ್ಯೆ ಟೀಪುಸುಲ್ತಾನನ ದಂಡಿನ ಸಂಗಡ ಕೂಡ ತಕ್ಕ ಬಗ್ಯೆ, ಹೆಗ್ಗಳದ ಘಟ್ಟದ ಮಾರ್ಗವಾಗಿ ಹೋಗುತ್ತಿದ್ದಲ್ಲಿ, ಅಲ್ಲಿ ಕೊಡಗು ಜನ ನಿಂತು ಲಡಾಯಿ ಮಾಡಿದಲ್ಲಿ, ಪೆಟ್ಟು ತಾಳಲಾರದೆ, ಅಲ್ಲಿಂದ ಹಿಂತಿರಿಗಿ[2], ಸಿದ್ಧೇಶ್ವರನ ಬೆಟ್ಟದ ಮಾರ್ಗವಾಗಿ, ದಂಡು ಸಮೇತ ಪಟ್ಟಣಕ್ಕೆ ಹೋದರು. ಈ ಸಮಾಚಾರವನ್ನು ಯಡವನಾಡಲ್ಲಿ ಹಾಂಬಾಳೆ ನಾಯಕನ ಸಂಗಡ ಲಡಾಯಿ ಮಾಡುತ್ತಾ ಇದ್ದ ಸೈದ್ ಹಮೀದನು ಕೇಳಿ, ಹೆದರಿ, ಪಟ್ಟಣಕ್ಕೆ ಹೋಗಿ, ಬುರಾನುದ್ದೀನನ ದಂಡಿನ ಸಂಗಡ ಕೂಡಿದನು. ಆ ಬಳಿಕ ಬುರಾನುದ್ದೀನ್ ಸಿಪಾದಾರ್, ಸೈದ್ ಹಮೀದ ಸಿಪಾದಾರ್, ಶೇಕ್ ಅನ್ಸರ್ ಸಿಪಾದಾರ್ ಸಹಾ ಈ ಮೂವರು ಸರದಾರರು ದಂಡು ಸಮೇತ ಗೆಜ್ಜಿಲಟ್ಟಿ[3] ಘಟ್ಟಾ ಇಳಿದು ಹೋಗಿ, ಟೀಪುಸುಲ್ತಾನನ ಫೌಜಿನ ಸಂಗಡ ಕೂಡಿದರು. ಆ ಬಳಿಕ ಮೂರು ತಿಂಗಳ ಮೇಲೆ ಪುಷ್ಯ ಮಾಸದಲ್ಲಿ ಟೀಪುಸುಲ್ತಾನನ ಫೌಜ ಮಡಿಕೇರಿ ಕ್ಯಾಟೆಗೆ ಇರುವ ರಸ್ತು ಸಾಗಿಸಿ ಕೊಂಡು ಬರುತ್ತಿದ್ದಲ್ಲಿ, ವೀರರಾಜೇಂದ್ರ ವಡೆಯರವರು ತಂಮ ಮಂದಿ ತೆಗೆದು ಕೊಂಡು ಹೋಗಿ, ಹಾಗೂರು ನಾಲ್ಕುನಾಡ ವಳಿತವಾದ ಸೆಗದಾಳದಲ್ಲಿ ಮಾರ್ಗ ಅಡ್ಡ ಗಟ್ಟಿ ಝಗಳಾ ಮಾಡಿದಲ್ಲಿ, ಆ ಟೀಪುಸುಲ್ತಾನನ ಫೌಜ ಯಾವತ್ತು ಮುರಿದು, ಘಾಯ ಜಖಮಿ ಆಗಿ, ಪಾಲಾಗಾದ್ದರಿಂದ, ಆ ರಸ್ತು ಸಾಮಾನು, ದನ ಕರ, ಆಯುಧ ಮುಂತಾದ್ದನ್ನು ಕೊಡಗು ಜನಕ್ಕೆ ಹಂಚಿ ಕೊಟ್ಟು ಬರುವದರೊಳಗಾಗಿ, "ವೀರರಾಜೇಂದ್ರ ವಡೆಯರವರು ಕುಟುಂಬ ಮಕ್ಕಳನ್ನು ಕುರುಚಿ ಯಂಬ ಗ್ರಾಮದಲ್ಲಿ ಇಟ್ಟು,

1 ಮಾಡ ತಕ್ಕ ಬಗ್ಯೆ for ಮಾಡುವ ಬಗ್ಯೆ. 2 ಹಿಂತಿರಗಿ. 3 ಗಜ್ಜಲಪಟ್ಟಿ.

ಟೀಪುಸುಲ್ತಾನರ ಫೌಜಿನ ಸಂಗಡ ಲಡಾಯಿ ಮಾಡುವ ಬಗ್ಯೆಯ ಹೋಗಿ ಇದ್ಧಾರೆ" ಯಂಬದಾಗಿ, ಶಿರಿನೆಲ್ಲಿ ಟಿಂಕಮುತ್ತಾ ಯಂಬವನು ಕೋಟೆ ಅರಸುಗಳಿಗೆ ತಿಳಿಸಿದ್ದರಿಂದ, ಈ ಮಾತು ಕೇಳಿ ಕೋಟೆ ಅರಸುಗಳು ತಂಮ ಕಡೆ ನಾಯಿಮಾರರು ಮುಳ್ಳು ಕುರುಂಬರಿಂದ ಸಹಾ ಇಂನೂರು ಜನವಂನು ಆ ಟಿಂಕಮುತ್ತನ ಸಂಗಡ ಕೊಟ್ಟು, "ರಾತ್ರೆ ವೇಳೆಯದಲ್ಲಿ ಹೋಗಿ, ಕುರುಚಿಯಲ್ಲಿ ಇರುವ ಕೊಡಗಿನ ದೊರೆಗಳ ಕುಟುಂಬ ಮಕ್ಕಳಂನು ಕಡದು ಹಾಕಿ, ಅವರ ಅರಮನೆಯಲ್ಲಿ ಇರುವಂಥ ಬದುಕು ಸರ್ವಸ್ವವಂನು ಲೂಟಿ ಮಾಡಿ ಕೊಂಡು ಬಾ" ಯಂಬದಾಗಿ ಹೇಳಿದರಿಂದ, ಅದ್ಯೇ ಮ್ಯೇರೆ ಆ ಟಿಂಕಮುತ್ತನು ರಾತ್ರಾರಾತ್ರೆಯ್ಯೆ ಬಂದು, ಆ ಕುರುಚಿ ಗ್ರಾಮದಲ್ಲಿ ಅರಮನೆ ಕುಟುಂಬ ಇದ್ದ ಮನೆಯಂನು ಲೂಟಿ ಮಾಡಿ, ಇಬ್ಬರು ಅರಸಿಕ್ಕರಂನೂ ವೀರರಾಜೇಂದ್ರ ವಡೆಯರವರ ಬಲ ಅಂಗಾನ ಮಗ ಹಾಬಬರಂನೂ, ಯೆರಡು ಜನ ಬಾಂದ್ಯೀರಂನೂ ಸಹಾ ಅಂಬಿನಿಂದ ಇಟ್ಟು, ಕೊಂದು ಹಾಕಿ, ಅಲ್ಲಿ ಇದ್ದ ಇಪ್ಪತ್ತು ಜನ ಪರಿಯಂತರ ಕೊಡಗರಂನು ಕಡದು ಹಾಕಿ, ವೀರರಾಜೇಂದ್ರ ವಡೆಯರವರ ಹಿರಿಯವರು ಪರಾಕ್ರಮೆಯದಿಂದ[1] ಸಂಪಾದಿಸಿದಂಥ ಅನರ್ಘ್ಯವಾದಂಥ ವಳ್ಳೆ ವಳ್ಳೆ ನಗನಾಣ್ಯ, ಹಣ ಕಾಸು, ಯಾವತ್ತಂನು ತೆಗದು ಕೊಂಡು, ಅರಮನೆಗೆ ಬೆಂಕಿ ಹಾಕಿ ಸುಟ್ಟು ಬಿಟ್ಟು, ರಾತ್ರಾರಾತ್ರೆಯೆ[2] ಆ ಜನಾನು[3] ಕರಕೊಂಡು, ಕಾಡ ಬಿದ್ದು ಹೋಗಿ, ಆ ಬಗೆ ನಗನಾಣ್ಯದಲ್ಲಿ ವಳ್ಳೆ ವಳ್ಳೆ ಅನರ್ಘ್ಯವಾದ ಕೆಲವು ನಗಗಳಂನು ಆ ಟಿಂಕಮುತ್ತನು ತೆಗದು ಕೊಂಡು, ಉಳಿದ[4] ನಗನಾಣ್ಯ ಯಾವತ್ತೂ ಕೋಟೆ ಅರಸುಗಳಿಗೆ ಕೊಟ್ಟನು. ಈ ಸಮಾಚಾರ ವೀರರಾಜೇಂದ್ರ ವಡೆಯರವರು ಕೇಳಿ, ಆ ಕುರ್ಚಿಗೆ ಬಂದು, ನೋಡಬಾರದಂಥಾದ್ದ[5] ಕಣ್ಣಿಂದ ನೋಡಿ, ಈ ಕೋಟೆ ಅರಸು ಮಾಡಿದಂಥ ಮಹಾದ್ರೋಹಕ್ಕೆ ಮಹಾದೇವನೆ ಶಿಕ್ಷಿಸಲಿ ಯಂತ ಮನಸ್ಸಿನಲ್ಲಿ ಧ್ಯಾನಿಸಿ, ಅಲ್ಲಿಂದ ನಾಲ್ಕುನಾಡ ಅರಮನೆಗೆ ಬಂದು, ಕೋಟೆ ಅರಸು ಅರ್ಥ ಪ್ರಾಣ ತೆಗದು ಕೊಂಡಂಥ, ಅನೇಕ ಕಾಲ ಮರೆಯದಂಥ ಉಪಕಾರ, ಇದಕ್ಕೆ ಪ್ರತಿ ಉಪಕಾರ ಮಾಡುವದಕ್ಕೆ ನಮಗೆ ಈ ವರೆಗೆ ಸಂದರ್ಭ ಆಗಲಿಲ್ಲಾ; ಇಂನು ಮುಂದೆ ಮಹಾದೇವನ ಕಟಾಕ್ಷ ವದಗಿದರೆ, ಪ್ರತಿ ಉಪಕಾರ ಮಾಡ ಬಹುದು, ಯಂಬದಾಗಿ ಹೇಳಿ, ವಂದು ಅರೆ ತಿಂಗಳು ನಾಲ್ಕುನಾಡ ಅರಮನೆಯಲ್ಲು ಇದ್ದು, ಇದ್ಯೇ ಮಾಘ ಮಾಸದಲ್ಲು ಕೊಡಗು ಮಂದಿ ಯಾವತ್ತಂನು ತೆಗದು ಕೊಂಡು, ಭಾಗಮಂಡಲದ ಕೋಟೆಗೆ ಹೋಗಿ, ಮುತ್ತಿಗೆ ಹಾಕಿ, ಮುಂಬಾರತ್ತು ಯಂಬ ಮೋಟೆಯಲ್ಲಿ ಫಿರಂಗಿ ಮಡಗಿ, ಆ ಫಿರಂಗಿಯಿಂದ ಖಾಸಾ ವೀರರಾಜೇಂದ್ರ ವಡೆಯರವರ್ಯೇ ಶಿಸ್ತು ನೋಡಿ, ಕೋಟೆಗೆ ಇಡುತ್ತಿದ್ದರು. ಇವರ ಕಾವಾ ವಳಿಕಿದ್ದ ಮದ್ದುಗಾರರು ಫಿರಂಗಿ ತುಂಬಿ ಕೊಡುತ್ತಾ ಇದ್ದರು. ಆ ಕೋಟೆಯಿಂದ ದೊರೆಗಳ ಮೇಲೆ ಯೇಳು ಫಿರಂಗಿಯಿಂದ ಗುಂಡು ಇಡುತ್ತಾ ಇದ್ದರು. ಈ ಮೆಹನತ್ತು ಮಾಡಿ ಐದು ದಿವಸದಲ್ಲಿ ಆ ಕೋಟೆಯಂನು ತೆಗದು ಕೊಂಡರು. ಆ ಕೋಟೆ ವಳಗೆ ಇದ್ದ ಫಿರಂಗಿ ಮದ್ದು ಗುಂಡು ಮುಂತಾದ ಸಾಮಾನು ದೊರೆಗಳಿಗೆ ಸಿಕ್ಕಿತು. ಅಲ್ಲಿ ಕನಕೆ ಕಾವೇರಿ ಸುಜ್ಯೋತಿ ಯಂಬ ಪುಣ್ಯನದಿಗಳು ತ್ರಿವೇಣಿ ಸಂಗಮವಾಗಿ ಇರುವಂಥ ಜಾಗದ ಹೆಸರು ಭಾಗಮಂಡಲ. ಅಲ್ಲಿ ಬ್ರಮ್ಹಾ ವಿಷ್ಣು ಮಹೇಶ್ವರ ಈ ಮೂರು ತ್ರಿಮೂರ್ತಿಗಳಿಗೂ ಮೂರು ದೇವಸ್ಥಾನ ಉಂಟು. ಅದರ ಮೇಲೆ ತಾಂಬರದ ತಗಡು ಹೊದಿಸಿ ಇದೆ. ಆ ದೇವಸ್ಥಾನದ ಸುತ್ತ ಕೋಟೆ ಕಟ್ಟಿ, ಅದರ ವಳಗೆ ಟೀಪು ಸುಲ್ತಾನರ ಕಡೆ ಫೌಜು, ಕಿಲ್ಲೇದಾರ ಸಹಾ ಇದ್ದರು. ದೊರೆಗಳು ಆ ಕೋಟೆಗೆ ಫಿರಂಗಿಯಿಂದ ಗುಂಡು ಇಡುವಾಗ್ಯೆ, ಆ ಮೂರು ದೇವಸ್ಥಾನಕ್ಕೂ ಗುರುತಿನ ಬಗ್ಯೆ ಮೂರು ಗುಂಡು ಹೊಡದದ್ದಲ್ಲಿ, ಆ ದೇವಸ್ಥಾನಗಳ ಮೇಗಣ ತಾಂಬರದ ತಗಡು ಕತ್ತರಿಸಿ ಹೋದ್ದರಿಂದ, ಆ ಕತ್ತರಿಸಿ ಹೋದ ಜಾಗಕ್ಕೆ ಬೆಳ್ಳಿ ತಗಡು ಹಾಕಿಸಿ ಇರುವಂಥಾದ್ದು ಗುರುತು ಹಾಜರು ಇದೆ. ಆ ಕೋಟೆಯಲ್ಲಿ ಇದ್ದ ಆಯುಧ, ಮದ್ದು, ಗುಂಡು, ಫಿರಂಗಿ ಮುಂತಾದ್ದು ನಾಲ್ಕುನಾಡ ಅರಮನೆಗೆ ಸಾಗಿಸಿ, ಆ ಬಳಿಕ ತುಳುವನಾಡ ಶೀಮೆ ಸಾಧಿಸುವ ಬಗ್ಯೆ, ಕೊಡಗು ಮಂದಿಯಂನು ಹೊಂಬಾಳೆ ನಾಯಕನ ಸಂಗಡ ಕೂಡಿಸಿ, ಮಣಿಸಿನ ಘಟ್ಟದ ಮಾರ್ಗವಾಗಿ ಕಳುಹಿದಲ್ಲಿ, ಹೊಂಬಾಳೆ ನಾಯಕನು ಟೀಪುಸುಲ್ತಾನರ ಫೌಜಿನ ಸಂಗಡ ಲಡಾಯಿ ಮಾಡಿ, ಅಮರಸೂಳ್ಯದ ಸರಹದ್ದಿನ ಆಚೆ, ಕೊಡೆಯಾಲದ ಈಚೆಗೆ, ನಡು ಮಧ್ಯ ಇರುವಂಥ ಶೀಮೆಯಂನು ಕಟ್ಟಿ ಕೊಂಡು, ಮೊಗನಾಡ ಹೊಳೆ ಬಳಿಯ ವಡ್ಡು ಕಟ್ಟಿ, ಕೆಲ ಮಂದಿಯಂನು ಠಾಣ್ಯ ಇಟ್ಟು, ಆ ವಿವರಕ್ಕೆ ರಾಜರಿಗೆ ಬಿಂನವತ್ತಳೆ[6] ಬರಕೊಂಡಲ್ಲಿ, "ಈಗ ಹೊಸತಾಗಿ ಕಟ್ಟಿ ಇರುವ ಶೀಮೆ ಅಮಲಂನು ನಿನಗೆ ಮೊಕರೂರು ಮಾಡಿ ಇದೆ, ಕೊಡಗು ಮಂದಿಯಲ್ಲಿ ಅಲ್ಲಾಯಲ್ಲಿ

[1] ಪರಾಕ್ರಮದಿಂದ or ಪರಾಕ್ರಮೆಯ. [2] ರಾತ್ರಾರಾತ್ರಿಯೆ. [3] ಜನವಂನು. [4] ಉಳಿದ. [5] ಬಾರದಂಥಾದಂನು. [6] ಬಿಂನವತ್ತಳೆ.

ಠಾಣ್ಯಕ್ಕೆ ಬೇಕಾದ ಮಂದಿ ಇಟ್ಟು ಕೊಂಡು, ಉಳಿಕೆ ಮಂದಿಯನ್ನು ಹೊಜೂರಿಗೆ ಕಳುಹಿಸುವದು" ಯೆಂಬದಾಗಿ, ನಿರೂಪ ಬರಸಿ ಕಳುಹಿದರಿಂದ, ಅದೇ ಮೇರೆ ಬಂದುಬಸ್ತು ಮಾಡಿ, ಉಳಿಕೆ ಮಂದಿಯನ್ನು ಕಲಿ ಸಂದ ೪೮೯೭ನೆ ಸಾಧಾರಣ ಸಂವತ್ಸರದ ಚೈತ್ರ ಮಾಸದಲ್ಲಿ ಕಳುಹಿಸಿ ಕೊಟ್ಟನು. ಆ ಬಳಿಕ ಮಂಡೆಪ್ಪನ ಅಪ್ಪಯ್ಯ, ನಗರಹಳ್ಳಿ ಪುಟ್ಟಗೌಡಗೆ ಸಹಾ ಅಪ್ಪಣೆ ಕೊಟ್ಟದ್ದು: ಮಹಾದೇವನ ಕಟಾಕ್ಷದಿಂದ ಮಡಿಕೇರಿ ಕೋಟೆ ವಿನಹಾ ನಂಮ ರಾಜ್ಯ ಯಾವತ್ತು ನಂಮ ಕೈವಶವಾಯಿತು. ಇದಲ್ಲದೆ ತುಳುವ ರಾಜ್ಯದ ಸೀಮೆಯನ್ನು ಹೋಗಿಸ್ತಾ ಸಾಧಿಸ್ತೇವು. ಮಡಕೇರಿ ಕೋಟೆಯು ನಂಮ ಸಂಸ್ಥಾನದ ಜಾಗವಿದೆ; ಅಲ್ಲಿ ಜಾಫರುಲ್ಲಿ ಬೇಗು ಕಿಲ್ಲೇದಾರನು ಫೌಜ ಸಮೇತ ಇದ್ದಾನೆ. ನೀವು ಮಂದಿ ತೆಗದು ಕೊಂಡು ಹೋಗಿ, ಮಡಕೇರಿ ಕೋಟೆಗೆ ರಸದು ಬರುವಂಥ ಪಥಮಾರ್ಗಕ್ಕೆಲ್ಲಾ ಮಂದಿ ಇಟ್ಟು, ಮಾರ್ಗ ಕಟ್ಟಿ, ಉಳಿಕೆ ಮಂದಿ ತೆಗದು ಕೊಂಡು ಹೋಗಿ, ಟೀಪು ಸುಲ್ತಾನರ ಸೀಮೆ ಸಾಧಿಸುವದೆಂತ, ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಅದೇ ಅಪ್ಪಣೆ ಮೇರೆ ಮಂದಿ ತೆಗದು ಕೊಂಡು ಹೋಗಿ, ಮಡಕೇರಿ ಕೋಟೆಗೆ ರಸ್ತು ಬರುವಂಥ ಪಥಮಾರ್ಗಕ್ಕೆಲ್ಲಾ ಮಂದಿ ಇಟ್ಟು, ಬಂದುಬಸ್ತು ಮಾಡಿ, ಟೀಪು ಸುಲ್ತಾನರ ಇಲಾಖೆ ಅರಕಲಗೋಡು ಕೊಣನೂರು ಸೀಮೆ ಲೂಟಿ ಮಾಡುತ್ತಾ ಇದ್ದಲ್ಲಿ, ಆ ಯೆರಡು ತಾಲೂಕಿನ ರೈತರು ಲಾಚಾರಾಗಿ ಬಂದು — "ನಾವು ರೈತರಿದ್ದೇವೆ. ನಮಗೆ ದುಃಖಾ ಕೊಡ ಬೇಡ. ನಾವು ಟೀಪು ಸುಲ್ತಾನರಿಗೆ ವಂದು ವರಹಾ ತೆತ್ತರೆ, ನಿಮಗೆ ವಂದು ರೂಪಾಯಿ ತೆತ್ತೇವು. ಈ ಮೇರೆ ನಂಮ ಯೆರಡು ತಾಲೂಕಿನಿಂದ ಟೀಪು ಸುಲ್ತಾನರಿಗೆ ನಾವು ಯೆಷ್ಟು ವರಹಾ ಕೊಡುತ್ತಾ ಇದ್ದೇವೋ, ಅಷ್ಟು ರೂಪಾಯಿ ನಿಂಮ ಸರಕಾರಕ್ಕೆ ತೆತ್ತು ಕೊಟ್ಟೇವು" ಯೆಂಬದಾಗಿ, ಆ ಯೆರಡು ತಾಲೂಕಿನ ರೈತರು ವಡಂಬಟ್ಟು, ಅದೇ ಮೇರೆ ನಿಗದಿ ಮಾಡಿದ್ದರಿಂದ, ಆ ತಾಲೂಕಿನಲ್ಲಿ ದೌಡು ಮಾಡುವಂಥಾದ್ದ ನಿಲ್ಲಿಸಿ. ಆ ಮಂಡೆಪ್ಪನ ಅಪ್ಪಯ್ಯ, ನಗರಹಳ್ಳಿ ಪುಟ್ಟಗೌಡ ಸಹ, ಮಂದಿ ತೆಗದು ಕೊಂಡು, ಐಗೂರು ಸೀಮೆಗೆ ಹೋಗಿ, ಅಲ್ಲಿ ಠಾಣೆಯ ಇದ್ದ ಟೀಪು ಸುಲ್ತಾನರ ಕಡೆ ಜನರನ್ನು ಹೊಡದು ವೋಡಿಸಿ ಬಿಟ್ಟು, ಮಂಜರಾಬಾದು ತಾಲೂಕಿನ ಕೆಲವು ಸೀಮೆಯನ್ನು ಕಟ್ಟಿ ಕೊಂಡು, ಮಂಜರಾಬಾದು ಸಮೀಪದ ಅರಕೆರೆಯಲ್ಲು ವಡ್ಡು ಕಟ್ಟಿ, ಠಾಣೆಯ ಇಟ್ಟು, ಆ ಠಾಣೆಯದ ಮಂದಿಗೆ ಸರದಾರನಾಗಿ ಈ ನಗರಹಳ್ಳಿ ಪುಟ್ಟಗೌಡನು ಇದ್ದ.[1] ಮಂಡೆಪ್ಪನ ಅಪ್ಪಯ್ಯನು ಆ ಸೀಮೆ ಹಿಡಾಯಿಸಿ ಕೊಂಡು ಬಂದುಬಸ್ತು ಮಾಡಿ ಕೊಂಡು ಇದ್ದನು. ಈ ಮೇರೆ ಇರುತ್ತಿದ್ದಲ್ಲಿ, ಟೀಪು ಸುಲ್ತಾನರು ಫೌಜ ಸಮೇತ ರಾಮರಾಜರ ಬೆಟ್ಟಕೋಟೆಯನ್ನು ತೆಗದು ಕೊಳ್ಳ ಬೇಕು ಯೆಂಬದಾಗಿ, ಆ ಬೆಟ್ಟಕೋಟೆ ಸಮೀಪದಲ್ಲಿ ಇಳು ಕೊಂಡು, ಮೂರು ದಿವಸದ ಮೇಲೆ ಮೂರನೆ ಝಾಮದಲ್ಲಿ ಆರು ಕುಸುಂಮನ್ನು ತೆಗದು ಕೊಂಡು, ಅಹಂಕಾರದಿಂದ ಹೆಡಹಳೆ ಮಾರ್ಗದಿಂದ ಆ ಬೆಟ್ಟಕೋಟೆ ಸುಗ್ಗಿ, ಮೂರು ನಾಲ್ಕು ಬತ್ತೇರಿಯನ್ನು ಆಕ್ರಮಿಸಿ ಕೊಂಡು, ಝಾಗಳಕ್ಕೆ ನಿಂತಲ್ಲಿ, ಮೇಲಣ ಬತ್ತೇರಿಗಳಿಂದ ಪಿರಂಗಿ ಗುಂಡು, ಬಂದೂಕಿನ ಗುಂಡು ಸಹಾ ಇಟ್ಟು, ಕತ್ತಿ ತೆಗದು ಕೊಂಡು, ಮೇಲೆ ಬಿದ್ದು ಕಡಿಯುತ್ತ ಬಂದಲ್ಲಿ, ಟೀಪು ಸುಲ್ತಾನರ ಅಗಾಡಿ ಫೌಜಿನಲ್ಲಿ ಇದ್ದ ಜಮಾ ಬೇಗು ಯೆಂಬ ಶಿಪಾಯನು ಬಿದ್ದು ಹೋಗಿ, ಆ ಕೋಟೆ ಮೇಲೆ, ಬತ್ತೇರಿಗಳ ಮೇಲೆ ಸಹಾ, ಹೊತ್ತಿ ಇದ್ದಂಥ ಟೀಪು ಸುಲ್ತಾನರ ಫೌಜ ಯಾವತ್ತು ಮೆಟ್ಟು ತಡೆಯಲಾರದೆ, ದಾರಿ ಕಾಣದೆ, ಕೋಟೆ ಮೇಲಣಿಂದ ಕಂದಕದ ವಳಗೆ ಬಿದ್ದು, ಮಯ್ಯತವಾದರು. ಟೀಪು ಸುಲ್ತಾನರ ಅವರಂಗು ಯೆಂಬ ಖಾಸಾ ಪಾಲ್ಕಿ, ಖಾಸಾ ಮೊಹರ ಇದ್ದಂಥ ಕಲಮ್ದಾನಿ, ಸವಾರಿ ಕುದುರೆ, ಖಾಸಾ ಕತ್ತಿ ಸಹಾ ಅಲ್ಲಿ ಬಿಟ್ಟು, ಟೀಪು ಸುಲ್ತಾನರು ಮುಖಭಂಗಿತರಾಗಿ, ಆ ಕಂದಕದಿಂದ ಗಿಡ ಬಿದ್ದು ಬಂದು, ತಂಮ ತಂಬಿಗೆ ಸೇರಿದರು. ಆ ಕಂದಕದಲ್ಲಿ ಬಹಳ ಮಂದಿ ದೊಡ್ಡ ದೊಡ್ಡ ಸರದಾರರು, ಹೇರಳ ಫೌಜ ಸಹಾ ಮಯ್ಯತ ಮಿಟ್ಟು ಹೋದರು. ಆ ಬಳಿಕ ಟೀಪು ಸುಲ್ತಾನರು ಬೆಟ್ಟಕೋಟೆ ತೆಗದು ಕೊಳ್ಳ ಬೇಕು ಯೆಂಬದಾಗಿ, ಅಲ್ಲೆ ಧಾವಣಿ. ಮಾಡಿ ಕೊಂಡು, ಸಂನದ್ಧರಾಗುತ್ತಾ ಇದ್ದರು. ಇತ್ತಲಾಗಿ ತಲಚೇರಿ ಕೋಟೆ ಚೀಫ್ ರಾಬರ್ಟ ಟೇಲರು[2] ಸಾಹೇಬರು ಕೆಲವು ಫೌಜನ್ನು ತಲಚೇರಿಯಿಂದ ಕಳುಹಿ ಕಡನೂರು ಯೆಂಬ ಜಾಗದಲ್ಲಿ ಟೀಪು ಸುಲ್ತಾನರ ಕಡೆ ಠಾಣೆಯ ಇದ್ದ ಮಂದಿಯನ್ನು ಹೊಡದು, ವೋಡಿಸಿ ಬಿಟ್ಟು, ಆ ಜಾಗವನ್ನು ತೆಗದು ಕೊಂಡರು. ಆ ಸಮಯದಲ್ಲಿ ಕಂಣನೂರ ಬಲಿಯಾ ಬೀಬಿಯು ಟೀಪು ಸುಲ್ತಾನರ ಕಡೆ ಫಾಜಲ್ಖಾನನ ಕುಸುಂಮಿನ ಜನ ಆರು ಸಾವಿರ, ತಂನ ಕಡೆ ಮಾ

1 ಇದ್ದನು. 2 Chief, Robert Taylor Esqr.

ಪಿಳ್ಳೇರು ನಾಲ್ಕು ಸಾವಿರ ಜನರ ಸಹಾ ಕೂಡಿ ಕೊಂಡು ಇದ್ದದರಿಂದ, ಟೇಪ್ ರಾಬರ್ಟ್ಸ ಟಿಲೀರಿ ಸಾಹೇಬರವರು ಆ ಬೀಬಿಗೆ—"ಟೀಪುಸುಲ್ತಾನರ ಫೌಜ ನೀನು ತೆಗದು ಕೊಂಡು ಝುಗಳ ಮಾಡುವವಳೋ? ಅದಲ್ಲಾ, ಟೀಪು ಸುಲ್ತಾನರ ದ್ಯಾಸ್ತಿ ಬಿಟ್ಟು, ಇಂಗ್ರೇಜ ಬಹಾದ್ದರ ಕುಂಪನಿಯವರ ಕೂಡೆ ಕೂಡಿ ನಿಲ್ಲುವವಳೋ?" ಯಂಬದಾಗಿ ಹೇಳಿ ಕಳುಹಿದ್ದಲ್ಲಿ, ಆ ಬೀಬಿಯು ಟೀಪು ಸುಲ್ತಾನರ ಕಡೆ ಫೌಜಿನ ಸರದಾರನ ಕೂಡೆ ಹೇಳಿದ್ದು: "ಇಂಗ್ರೇಜ ಬಹಾದ್ದರವರ ಫೌಜಂನು ಉಪಾಯ ತಂತ್ರದಿಂದ ಕರೆಸುತ್ತೇನೆ.[1] ಅವರು ಬಂದಲ್ಲಿ, ನೀವು ನಾವು ಕೂಡಿ ಅವರಂನು ಹೊಡೆಯ ಬೇಕು," ಯಂಬದಾಗಿ ಹೇಳಿದಲ್ಲಿ, ಅವನು ವಪ್ಪಿ ಕೊಂಡದರಿಂದ, ಆ ಬೀಬಿಯು ತಲಚೇರಿ ಸರದಾರ ಟೇಪ್ ರಾಬರ್ಟ್ಸ ಟೀಲರು ಸಾಹೇಬರವರಿಗೆ ಹೇಳಿ ಕಳುಹಿದ ವಿವರ—"ಕಂಣಾನೂರ ಕೋಟೆ ವಳಗೆ ಇರುವ ಟೀಪು ಸುಲ್ತಾನರ ಫೌಜಂನು ಯೆಳೆಂಟು ದಿವಸದ ವಳಗೆ ಉಪಾಯದಿಂದ ಕಾಡೆಯೊಲದ ಕಡೆಗೆ ಕಳುಹಿಸಿ ಬಿಡುತ್ತೇನೆ. ಈ ಮಂದಿ ಕೋಟೆಯಿಂದ ಇಳಿದು ಹೋದ ಬಳಿಕ, ಇಂಗ್ರೇಜಿ ಬಹಾದ್ದರರ ಫೌಜ ಕಳುಹಿ ಕೊಟ್ಟಲ್ಲಿ, ಅವರಂನು ಕೋಟೆ ವಳಕ್ಕೆ[2] ಕರಕೊಂಡು, ಕೋಟೆ ಮೇಲೆ ಇಂಗ್ರೇಜಿ ಬಹಾದ್ದರರ ಜಾಂಡೆ ಹಾಕಿಸಿ ಕೊಳ್ಳುತ್ತೇನೆ," ಯಂಬದಾಗಿ ಹೇಳಿ ಕಳುಹಿಸಿ, ಆ ಬಳಿಕ ಐದು ದಿವಸದ ಮೇಲೆ, ಬೀಬಿಯು ಆ ಟೀಪುಸುಲ್ತಾನರ ಕಡೆ ಸರದಾರನಿಗೆ ಹೇಳಿದ್ದು—"ನೀವು ನಿಂಮ ಫೌಜ ತೆಗದು ಕೊಂಡು, ಕಾಡೆಯೋಲಕ್ಕೆ ಹೋಗುತ್ತೇವೆಂಬದಾಗಿ, ಸುದ್ದಿ ಹುಟ್ಟಿಸಿ ಬಿಟ್ಟು, ನೀವು ಕವಾಯಿಯಲ್ಲಿ ಇಳಿ ಕೊಂಡು ಇರಿರಿ", ಆ ಬಳಿಕ, "ಈ ಮೇರೆ ಟೀಪು ಸುಲ್ತಾನರ ಫೌಜ ಕೋಟೆಯಿಂದ ಹೊರಗೆ ಹೋಯಿತು; ನಿಂಮ ಫೌಜ ತೆಗದು ಕೊಂಡು ಇಲ್ಲಿಗೆ ಬಂದು, ನಾಳೆ ದಿವಸ ಕೋಟೆ ಮೇಲೆ ನಿಂಮ ಜಾಂಡೆ ಹಾಕಿ ಕೊಳ್ಳಿ "ಯಂಬದಾಗಿ, ಹೇಳಿ ಕಳುಹುತ್ತೇನೆ; ಅವರು ಫೌಜ ತೆಗದು ಕೊಂಡು, ಇಲ್ಲಿಗೆ ಬಂದಲ್ಲಿ, ಅವರಂನು ಕೋಟೆ ಹೊರಗೆ ಇಳಿಸಿ ಇರುತ್ತೇನೆ; ಆ ಸಮಯದಲ್ಲಿ ನೀವು ಫೌಜ ಸಮೇತ ರಾತಾರಾತರಿಯೇ ಬಂದು, ಮಾಪಿಳ್ಳೇರ ಸಹಾ ಕೂಡಿ ಕೊಂಡು, ಅವರ ಫೌಜಂನು ಹೊಡದು, ಜಾಯಾ ಮಾಡ ಬೇಕು," ಯಂಬದಾಗಿ ಹೇಳಿ, ಆ ಟೀಪು ಸುಲ್ತಾನರ ಸರದಾರನ ಕೋಟೆಯಿಂದ ಹೊರಗೆ ಕಳುಹಿಸಿ ಬಿಟ್ಟು, "ಟೀಪು ಸುಲ್ತಾನರ ಫೌಜ ಕೋಟೆ ಬಿಟ್ಟು ಹೊರಗೆ ಹೋಯಿತು; ನಿಂಮ ಕಡೆ ಮಂದಿ ಜಲ್ದಿ ಕಳುಹಿಸಿ ಕೊಟ್ಟು, ಕೋಟೆಗೆ ಇಂಗ್ರೇಜ ಬಹಾದ್ದರ ಜಾಂಡೆ ಹಾಕಿ ಕೊಳ್ಳಿ," ಯಂಬದಾಗಿ, ಟೇಪ್ ರಾಬರ್ಟ್ಸ ಟಿಲೆರು ಸಾಹೇಬರವರಿಗೆ ಹೇಳಿ ಕಳುಹಿದಲ್ಲಿ, ಆ ಮೋಸಂನು ನಂಬಿ, ಮೇಜರ ಡೌ ಸಾಹೇಬರವರಿಗೆ, "ನಿಂಮ ಫೌಜ ತೆಗದು ಕೊಂಡು ಕಂಣಾನೂರು ಕೋಟೆಗೆ ಹೋಗಿ, ಇಂಗ್ರೇಜ ಜಾಂಡೆ ಹಾಕಿ ಕೊಳ್ಳಿ," ಯಂಬದಾಗಿ ಹೇಳಿದ್ದರಿಂದ, ಅದೇ ಮೇರೆ ಆ ಮೇಜರ ಡೌ ಸಾಹೇಬರು ತಂಮ ಮಂದಿ ತೆಗದು ಕೊಂಡು ಬಂದು, ಕಂಣಾನೂರು ಕೋಟೆ ಸಮೀಪದಲ್ಲಿ ಇಳಿ ಕೊಂಡಲ್ಲಿ; ಆ ಬೀಬಿಯು ಕವಾಯಿ ಯಂಬಲ್ಲಿ ಇಳಿ ಕೊಂಡಿದ್ದ ಟೀಪು ಸುಲ್ತಾನರ ಕಡೆ ಸರದಾರನಿಗೆ ಬರದು ಕಳುಹಿದ ವಿವರ.—"ಇಂಗ್ರೇಜಿಯವರ ಫೌಜ ಬಂದು ಕೋಟೆ ಸಮೀಪದಲ್ಲು ಇಳಿದು ಇದೆ. ನಿಂಮ ಫೌಜ ತೆಗದು ಕೊಂಡು, ರಾತಾರಾತರಿಯೇ ಇಲ್ಲಿಗೆ ಬಂದು, ನಂಮ ಕಡೆ ಮಾಪಿಳ್ಳೆಯವರು ಸಹಾ ಕೂಡಿ ಕೊಂಡು, ಇಂಗ್ರೇಜಿಯವರ ಫೌಜಂನು ಜಾಯಾ ಮಾಡಿ," ಯಂಬದಾಗಿ, ಬರೆಸಿ ಕಳುಹಿಸಿದ್ದರಿಂದ, ಅದೇ ಮೇರೆ ಆ ಟೀಪು ಸುಲ್ತಾನರ ಕಡೆ ಸರದಾರನು ಫೌಜ ತೆಗದು ಕೊಂಡು ಬಂದು, ಮಾಪಿಳ್ಳೇರಂನು ಕೂಡಿ ಕೊಂಡು, ರಾತರೆ ಮೂರು ಜಾವದ ಮೇಲೆ ಇಂಗ್ರೇಜ ಬಹಾದ್ದರರ ಫೌಜಿನ ಮೇಲೆ ಬಿದ್ದು, ಕೆಲವು ಜನಕ್ಕೆ ಜಾಯಾ ಜಖುಮಿ ಮಾಡಿದರು. ಅಷ್ಟರಲ್ಲಿ ಇಂಗ್ರೇಜ ಬಹಾದ್ದರರ ಫೌಜ ಯೆಚ್ಚರಿತು[4], ಈ ದಗಾ ಮಾಡುವದಕ್ಕೆ ಬಂದಂಥ ಟೀಪು ಸುಲ್ತಾನರ ಜನಕ್ಕೂ, ಮಾಪಿಳ್ಳೇರಿಗೂ ಚಂನಾಗಿ ಪೆಟ್ಟು ಹಾಕಿದಲ್ಲಿ, ಮುರದು[5] ಹೋಗಿ ಕಂಣಾನೂರು ಕೋಟೆ ಹೊಕ್ಕರು. ಆ ಬಳಿಕ ಈ ಕಂಣಾನೂರು ಬೀಬಿಯು ನಂಮ ಫೌಜಿಗೆ ಮೋಸ ಮಾಡ ಬೇಕು ಯಂಬದಾಗಿ, ಕರೆಸಿದವಳೇ ಹೊರತು, ಕೋಟೆ ಕೊಡುವದಕ್ಕೆ ಕರದವಳಲ್ಲಾ ಯಂಬದಾಗಿ, ಆ ಡೌ ಸಾಹೇಬರು ತಿಳಿದು, ಆ ಬೆಳಿಗ್ಗೆಯೆ ತಂಮ ಫೌಜ ಸಮೇತ ತಲಚೇರಿಗೆ ಹೋಗಿ, ಈ ವರ್ತಮಾನವೆಲ್ಲಾ ರಾಬರ್ಟ್ಸ ಟಿಲೆರು ಸಾಹೇಬರವರಿಗೆ ಬರದು ಕಳುಹಿದಲ್ಲಿ, ಅವರು ಈ ವಿವರವೆಲ್ಲಾ ಮುಂಬಾಯಿ ಗೌರ್ನರ ಮೇಜರ ಜನರಾಲ್ ರಾಬರ್ಟ್ಸ ಅಬರಕ್ರಂಬಿ ಸಾಹೇಬರವರಿಗೆ ಬರದು ಕಳುಹಿದಲ್ಲಿ; "ವಳ್ಳೇದು, ಈ ಬಗ್ಗೆಯೆ ಮುಂಬಾಯಿ ಫೌಜ ತೆಗದು ಕೊಂಡು, ಕೆಲವು ದಿವಸದಲ್ಲಿ ಟೀಪು ಸುಲ್ತಾನರ ಮೇಲೆ ಝುಗಳಕ್ಕೆ ಹೋಗುವ ಬಗ್ಯೆ ಆ ಕಡೆಗೆ ಬರುತ್ತೇವೆ. ಆವಾಗಯೆ ಆ ಕಂಣಾನೂರು ಬೀಬಿಗೆ ತಕ್ಕ ಶಿಕ್ಷೆ ಮಾಡಿಸ ಬಹುದು. ಇದ ತಿಳಿದು,

[1] ಕರಿಸುತ್ತೇನೆ. [2] ಒಳಗೆ or ಒಳಕ್ಕೆ. [3] ಈ. [4] ಎಚ್ಚರಿತು. [5] ಮುರಿದು.

ದಂಡಿಗೆ ಬೇಕಾದ ಸಾಮಾನು, ಗಾಡಿ ಯೆತ್ತುಗಳ ಮುಂತಾಗಿ ಜಮಾಯಿಸಿ ಕೊಂಡು ಇರುವದು” ಯಂಬದಾಗಿ, ಜವಾಬು ಬರೆಸಿ ಕಳುಹಿಸಿದ್ದರಿಂದ; ಆ ಟೇಲರು ಸಾಹೇಬರು ದಂಡಿಗೆ ಬೇಕಾದ ಕೆಲವು ಸಾಮಾನು ವಿಚಾರಿಸಿ, ತರಿಸಿ ಜಮಾಯಿಸುತ್ತ ಇದ್ದಲ್ಲಿ, ಮಲೆಯಾಳದಲ್ಲಿ ಇರುವ ಯೆತ್ತುಗಳು ಗಿಡ್ಡ ರಾಶಿ ಆಗಿ, ಗಾಡಿ ಯೆಳೆಯುವ ಲಾಯಖು ಅಲ್ಲವಾದ್ದರಿಂದ, ಗಾಡಿ ಯೆಳೆಯುವ ಲಾಯಖಿನ ದೊಡ್ಡ ಯೆತ್ತುಗಳ ತಲಾಷು ಮಾಡುತ್ತಾ ಇದ್ದರು. ಆತರುವಾಯ ಕೊಡಗಿನ ದೊರೆಗಳು ವೀರರಾಜೇಂದ್ರ ಒಡೆಯರವರಿಗೆ ಕೆಲವು ಸಾಮಾನು ಬೇಕಾದ್ದರಿಂದ, “ತಲಚೇರಿ ಪ್ಯಾಟೆಗೆ ಹೋಗಿ, ತೆರಯ ಮೂಲವಾಗಿ ಸಾಮಾನು ಕೊದು ಕೊಂಡು, ಒಳ್ಳೆ ಊಟು ಕುದುರೆ ಸಿಕ್ಕಿದರೆ, ಒಂದು ಕುದುರೆಯನ್ನು ತೆರಯಕ್ಕೆ ತೆಗದು ಕೊಂಡು ಬಾ” ಯಂಬದಾಗಿ, ತಮ್ಮ ಬಳಿಯ ಇದ್ದ ಮುತ್ತುಪಟ್ಟನ ಕೈಯ್ಯ ಒಂದು ಯಾದಾಸ್ತು ಬರ ಕೊಟ್ಟು ಕಳುಹಿದಲ್ಲಿ, ಅವನು ತಲಚೇರಿ ಪ್ಯಾಟೆಗೆ ಹೋಗಿ, ಆ ಯಾದಾಸ್ತು ಮೇರೆ ಸಾಮಾನು ವಿಚಾರಿಸುತ್ತ ಇದ್ದಲ್ಲಿ, ಈ ಸಮಾಚಾರ ಚೀಫ್ ರಾಬರ್ಟ್ ಟೇಲರು ಸಾಹೇಬರು ಕೇಳಿ, ಈ ಮುತ್ತುಪಟ್ಟನನ್ನು ಕರೆಸಿ, ಟೀಪು ಸುಲ್ತಾನರಿಗೂ, ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರಿಗೂ, ಆದಂಥ ಜಗಳ ವೃತ್ತಾಂತ ಯಾವ ಮೇರೆ ಯಂಬದಾಗಿ ಕೇಳಿದಲ್ಲಿ, ಆ ಮುತ್ತುಪಟ್ಟನು ಸವಿಸ್ತಾರವಾಗಿ ಹೇಳಿದಲ್ಲಿ, ಅದನ್ನು ಕೇಳಿ, ಆ ಸಾಹೇಬರು ಬಹುಳ ಸಂತೋಷ ಪಟ್ಟು, “ಈ ಮೇರೆ ಟೀಪು ಸುಲ್ತಾನರು ಕೊಡಗಿನ ದೊರೆಗಳಿಗೆ ಶತ್ರು ಆಗಿದ್ದಾರಷ್ಟೆ. ಅದೇ ಮೇರೆ ಅವರು ಇಂಗರೇಜಿ ಕುಂಪನಿ ಸರಕಾರಕ್ಕೂ ಶತ್ರು ಆಗಿದ್ದಾರೆ. ಅದರಿಂದ ಕೊಡಗಿನ ರಾಜರಿಗೂ, ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರಕ್ಕೂ, ಮಿತ್ರತ್ವ ವಾಂಛಲ್ಯವಿಟ್ಟು[1] ನಡೆಯ ಬೇಕೆಂಬ ಅಪೇಕ್ಷೆ ನಮಗೆ ಇದೆ. ಇದು ಕಾರಣ ಅವರಿಗೆ ಬೇಕಾದ ಸಾಮಾನು ಸರಂಜಾಮು ಕುದುರೆ ಸಹಾ, ಅವರು ನಿನ್ನ ಕೈಯ ಯಾದಾಸ್ತು ಬರ ಕೊಟ್ಟು ಇರುವ ಮೇರೆ ನಾವು ತರಿಸಿ ಕೊಡುತ್ತೇವೆ. ನಮ್ಮಲ್ಲಿ ಫಿರಂಗಿ ಗಾಡಿ ಯೆಳೆಯುವ ಬಗ್ಯೆ ಮಲೆಯಾಳ ಪ್ರಾಂತ್ಯದಲ್ಲಿ[2] ದೊಡ್ಡ ಯೆತ್ತುಗಳು ಸಿಕ್ಕುವದಿಲ್ಲ. ಅಲ್ಲಿ ದೊಡ್ಡದಾಗಿರುವಂಥ ಯೆತ್ತುಗಳ ವಿಚಾರಿಸಿ, ಕುಂಪನಿ ಸರಕಾರಕ್ಕೆ ಕಳುಹಿ ಕೊಟ್ಟರೆ, ಉಪಕಾರವಾದೀತು” ಯಂಬದಾಗಿ, ಮುತ್ತುಪಟ್ಟನ ಸಂಗಡ ಬಾಯಿ ಮಾತಿನಿಂದ ಹೇಳಿ, ಮಹಾರಾಜರಿಗೆ ದೋಸ್ತಿ ಕಾಗದವನ್ನು ಬರೆಸಿ, ಮುತ್ತುಪಟ್ಟನ ಕೈಯ ಕೊಟ್ಟು, ತಲಚೇರಿಯಿಂದ ಕಲಿ ಸಂದ ೪೮೯೦ನೇ ಸಾಧಾರಣ ಸಂವತ್ಸರದ ಚೈತ್ರ ಮಾಸದಲ್ಲು ಮುತ್ತುಪಟ್ಟನ ಕೈಯ ಕಳುಹಿದರಿಂದ, ಆ ಕಾಗದವನ್ನು ತಂದು ಒಪ್ಪಿಸಿ, ಅವರು ಹೇಳಿದಂಥ ಬಾಯಿ ಮಾತು ಯಾವತ್ತು ಸವಿಸ್ತಾರವಾಗಿ ಶ್ರುತಪಡಿಸಿದಲ್ಲಿ, ಆ ಮಾತು ಕೇಳಿ, ರಾಜರಿಗೆ ಕುಂಪನಿ ಇಂಗರೇಜಿ ಬಹಾದ್ದರ ಸರಕಾರದ ಮಿತ್ರತ್ವ ಬಳಸ ಬೇಕೆಂಬ ಮೋಹ ಹುಟ್ಟಿ, ಮುತ್ತುಪಟ್ಟನ ಸಂಗಡ ಹೇಳಿದ್ದು: “ಈ ಮೇರೆ ಅವರು ಬಾಯಿ ಮಾತಿನಿಂದ ಹೇಳಿ ಕಳುಹಿದ್ದರಿಂದಲೂ, ಕಾಗದ ಬರದು ಕಳುಹಿದ್ದರಿಂದಲೂ, ನಮ್ಮ ಮನಸ್ಸಿಗೆ ಸನ್ಮತವಿಲ್ಲ. ನಮಗೂ ಕುಂಪನಿ ಇಂಗರೇಜಿ ಬಹಾದ್ದರ ಸರಕಾರಕ್ಕೂ ಪಾಯ್ದಾರವಾಗಿ[3] ಸ್ನೇಹಮಿತ್ರತ್ವ ನಡದು ಬರ ಬೇಕೆಂಬ ಮೋಹ ನಮಗೆ ಬಹಳ ಇದೆ. ಅವರಿಗೂ ಈ ಮೇರೆ ಇದ್ದರೆ, ನಾವು ಅವರು ಕೂಡಿ ಶ್ರೇಟಿ ಆಗಿ, ಸೂರ್ಯ ಚಂದ್ರ ಇರುವ ಪರಿಯಂತರಕ್ಕೂ ಕುಂಪನಿ ಇಂಗ್ರೇಜಿ ಬಹಾದ್ದರ ಸರಕಾರಕ್ಕೂ ನಮ್ಮ ಸಂಸ್ಥಾನಕ್ಕೂ ಮಿತ್ರತ್ವ ಸ್ಥಿರವಾಗಿ ನಡದು ಬರ ಬೇಕೆಂಬದಾಗಿ, ಪ್ರಮಾಣಪತ್ರಿಕೆ ಯರಡು ಕಡೆಯಿಂದಲೂ ಬರದು, ಯರಡು ಕಡೆಯಲ್ಲೂ ಮಡಗ ಬೇಕು” ಯಂಬದಾಗಿ, ಬಾಯಿ ಮಾತಾಗಿಯೂ ಹೇಳಿ, ಅವರ ಕಾಗದಕ್ಕೆ ಜವಾಬು ಸಹಾ ಬರದು, ಮುತ್ತುಪಟ್ಟನ ಕೈಯ್ಯ ಕೊಟ್ಟು ಕಳುಹಿದಲ್ಲಿ, ಅವನು ರಾಬರ್ಟ್ ಟೇಲರು ಸಾಹೇಬರವರ ಬಳಿಗೆ ಹೋಗಿ, ರಾಜರು ಹೇಳಿ ಕಳುಹಿದಂಥ ಬಾಯಿ ಮಾತು ಯಾವತ್ತು ವಿವರವಾಗಿ ಆ ಸಾಹೇಬರಿಗೆ ತಿಳಿಸಿ, ಆ ಕಾಗದವನ್ನು ಅವರಿಗೆ ಕೊಟ್ಟಲ್ಲಿ, ಆ ಮಾತಿಗೆ ಟೇಲರು ಸಾಹೇಬರು ಮುತ್ತುಪಟ್ಟನ ಸಂಗಡ “ಈ ವಿವರ ಯಾವತ್ತು ಮುಂಬಾಯಿ ಸಂಸ್ಥಾನದಲ್ಲಿರುವ ಗೌರ್ನರ್ ಮೇಜರ್ ಜನ್‍ರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬು[4] ಬಹಾದ್ದರವರಿಗೆ ಬರದು ಕಳುಹಿಸಿ, ಇದಕ್ಕೆ ಜವಾಬನ್ನೂ ದೊರೆಗಳಿಗೆ ಬೇಕಾದ ಕುದುರೆ ಸಹಾ ಅವಲ್ ಮೋಸುಮಿನಲ್ಲಿ ಮುಂಬಾಯಿಂದ ತರಿಸಿ, ಕಳುಹಿಸ ಬಹುದು. ಈಗ ನಮಗೆ ಅಗತ್ಯ ಬೇಕಾಗಿ ಇರುವ ಫಿರಂಗಿ ಗಾಡಿ ಯೆಳೆಯುವ ಯತ್ತುಗಳನ್ನು ಜಮಾಯಿಸಿ, ಆ ವಿವರಕ್ಕೆ ಬರೆಸಿ ಕಳುಹಿದರೆ, ತರಿಸಿ ಕೊಡ್ತೇವು” ಯಂಬದಾಗಿ ಹೇಳಿ, ಪರತಿ ಜವಾಬಾಗಿ ಒಂದು ಕಾಗದವನ್ನು ಬರೆಸಿ, ಮುತ್ತುಪಟ್ಟನ ಕೈಯ್ಯ ಕೊಟ್ಟು ಸಹಾ ಕಳುಹಿಸಿ ಇದ್ದ

[1] ವಾತ್ಸಲ್ಯವಿಟ್ಟು. [2] ಪ್ರಾಂತ್ಯದಲ್ಲಿ. [3] ಪಾಯಿದ್ದಾರ. [4] Major General Sir Robert Abercromby, governor of Bombay.

ದರಿಂದ, ಅವನು ಬಂದು, ಆ ಸರದಾರರು ಹೇಳಿದ ಮೇರೆ ಬಾಯಿಮಾತು ಯಾವತ್ತು ತಾಯಿಕಪಡಿಸಿ, ಆ ಕಾಗದವಂನು ಕೊಟ್ಟಲ್ಲಿ, ವೀರರಾಜೇಂದ್ರ ವಡೆಯರವರು ಆ ವಿವರ ಯಾವತ್ತು ಕೇಳಿದು ಬಹಳ ಸಂತೋಷ ಬಟ್ಟು,[1] ಗಾಡಿ ಯಳೆಯುವಂಥ ಯತ್ತುಗಳು ಕೊಡಗಿನ ಸೀಮೆಯಲ್ಲಿ ಸಿಕ್ಕದರಿಂದ, ಟೀಪು ಸುಲ್ತಾನರ ಕಡೆ ಯತ್ತುಗಳು ಇದ್ದಂಥ ಸ್ಥಳವಂನು ಗೊಂತು[2] ಹಚ್ಚಿಸಿ, ಪ್ರಯತ್ನ ಮಾಡಿ, ಅಲ್ಲಿಂದ ಯೆಂಟು ನೂರು ಯತ್ತು ಪರಿಯಂತರ ತರಿಸಿ, ಅದರಲ್ಲಿ ಆರು, ವಳ್ಳೆ ಅನುವಾದಂಥ ಗಾಡಿ ಯಳೆಯುವಂಥ ಯತ್ತು ಐನೂರ ಐವತ್ತಿದಂನು ವಿಂಗಡವಾಗಿ ಇಟ್ಟು, ಉಳಿಕೆ ಯತ್ತುಗಳಂನು ರೈತರಿಗೆ ಹಂಚಿ ಕೊಟ್ಟು, ಈ ವಿವರ ಟಿಲೆರು ಸಾಹೇಬರಿಗೆ ಬರದು ಕಳುಹಿದಲ್ಲಿ, ಅಲ್ಲಿಂದ ಶಿಪಾಯಿಗಳು ಬೇಗಾರಿ ಜನರ ಸಹಾ ವಬ್ಬ ಇಂಜನೇರು[3] ಸರದಾರನ ಸಂಗಡ ಕೂಡಿಸಿ ಕಳುಹಿದ್ದರಿಂದ, ಅವರು ಬಂದಲ್ಲಿ, ವೀರರಾಜೇಂದ್ರ ವಡೆಯರವರು ಆ ಆರು ಮಡಗಿಸಿ ಇದ್ದಂಥ ಯತ್ತುಗಳಂನು ಅವರ ತಾಬೆಗೆ ಕೊಟ್ಟು ಕಳುಹಿಸಿದರು. ಆ ಬಳಿಕ ಟಿಲೆರು ಸಾಹೇಬರವರು ಕೊಡಗಿನ ಸಂಸ್ಥಾನದ ದೊರೆಗಳಿಗೆ ಬರಸಿ ಕಳುಹಿದ ಕಾಗದದಲ್ಲಿ: "ತಾವು ಹೇಳಿದ ಪ್ರಕಾರ ಭಾಷಾಪತ್ರಿಕೆ ಬರದು ಕೊಡ ತಕ್ಕ ಬಗ್ಯೆ ಮುಂಬಾಯಿ ಸಂಸ್ಥಾನದಿಂದ ನಮಗೆ ಹುಕುಂ ಬಂದು ಇದೆ. ಅದರಿಂದ ಇಲ್ಲಿಂದ ವಂದು ಕುಂಪನಿ ಶಿಪಾಯಿಗಳು ನಿಶಾನಿ ಸಹಾ ಕೂಡಿಸಿ, ಕಪಿತಾನ್ ಬ್ರಾನ್ ಸಾಹೇಬ ಯಂಬ ಸರದಾರರಂನು ಕಳುಹಿಸಿ ಇದ್ದೇವೆ. ತಾವು ಇಲ್ಲಿಗೆ ಬಂದು, ತಂಮ ಮಿಲಾಖತಿನ ಫಾಯಿದೆಯಿಂದ ಸಂತೋಷಪಡಿಸಬೇಕೆಂಬದಾಗಿ," ಬರಸಿ ಕಳುಹಿಸಿ ಇದ್ದರು. ಅದೇ ಮೇರೆ ಆ ಕಪಿತಾನ್ ಬ್ರಾನ್ ಸಾಹೇಬರು ಬಂದು, ಆ ಕಾಗದವಂನು ಕೊಟ್ಟು, ಕೆಲವು ವಿವರ ಬಾಯಿ ಮಾತಿನಿಂದಲು ಹೇಳಿದರಿಂದ, ವೀರರಾಜೇಂದ್ರ ವಡೆಯರವರು ಸರ್ವ ಬಗೆಯಲ್ಲು ಕುಂಪನಿ ಇಂಗ್ರೇಜ ಬಹಾದ್ದರ ಸರಕಾರ ನಂಬಿ, ಆ ಸರದಾರರ ಸಂಗಡ, ಇದೇ ಆಶ್ವೀಜ ಶುದ್ಧ ವಿಜಯ ದಶಮಿ ದಿವಸ ಕೊಡಗಿನಿಂದ ಹೊರಟು, ತಲಚೇರಿ ಕೋಟೆಗೆ ಹೋಗಿ, ದೊಡ್ಡ ದೊಡ್ಡ ಸರದಾರರ ಯಾವತ್ತು ಕಂಡು, ಭೇಟಿ ಆಗಿ, ದ್ಯಾನತಿ ಪ್ರಸ್ತಾಪವಂನು ಮಾಡಿ, ಭಾಷಾಪತ್ರಿಕೆ ಪ್ರಶ್ನೋತ್ತರವಾಗಿ ಮಾತನಾಡಿ, ವಪ್ಪಿ, ಉಭಯ ಕಡೆಯಿಂದಲೂ ಭಾಷಾಪತ್ರಿಕೆ ಬರಸಿದ ಕ್ರಮವೆಂತೆಂದರೆ:—"ಶ್ರೀ! ಇಂದ್ಯ ಪರ್ಯಂತಕ್ಕೆ ಬಹುಮಾನ ಪಟ್ಟ, ಇಂಗ್ರೇಜಿ ಕುಂಪನಿ ಹೆಸರಿಗೆ ತಲಚೇರಿ ಕೋಟೆ ಮುಖ್ಯರು ರಾಬರ್ಟ ಟಿಲೆರು, ನೇಂಗುಂದ ಮೂರ್ರು ಕೊಡಗಿನ ಹಾಲೇರಿ ವೀರರಾಜ ಅರಸುಗಳು, ತಂಮ ವಳಗೆ ವಪ್ಪಿಗೆ ಆಗಿ, ಬರದು ಕೊಟ್ಟ ನಂಬಿಗೆ ಕಾಗದದ ವಿವರ: ವಂದನೇ ಕಲಂ: ಸೂರ್ಯ ಚಂದ್ರ ಇರುವ ಪರಿಯಂತರಕ್ಕೂ ಇಕ್ಕಟ್ಟರ ಕಡೆ ವಿಶ್ವಾಸಕ್ಕೂ ಹೆಚ್ಚು ಕಡಮೆ ಬಾರದಂತೆ ನಡದು ಬರುವಂಥಾದಕ್ಕೆ, ಹೆಚ್ಚು ಕಡಮೆ ಬರಲಿಕ್ಕೆ ಇಲ್ಲಾ. ಯರಡನೇ ಕಲಂ: ಟೀಪು ಸುಲ್ತಾನನಿಗೂ, ಅವನ ಕಡೆ ಇರುವ ಪಕ್ಷದವರು ಯಾವತ್ತು,[4] ಯರಡು ಕಡೆಯವರು, ಅವರು ನಮಗೆ ಶತ್ರು ಯಂತ ಭಾವಿಸಿ ಕೊಂಡು ಬರ ಬೇಕು. ಇಂಗ್ರೇಜರಿಗೂ ಅವನಿಗೂ ನಡದು ಬರುವಂಥ ಲಡಾಯಿಯಲ್ಲು, ಅರಸುಗಳಿಗೆ ಸಮಯ ಸಿಕ್ಕಿದರೆ, ಶತ್ರುವಿಗೆ ತಂಮಿಂದ ಆಗುವಷ್ಟು ನಾಶ ಮಾಡುವದಕ್ಕೆ, ಹಾಜರಾಗಿ ಇರ ಬೇಕು. ಬೇರೆ ಕೊಡಗು ಮಲೆದಾರಿ ಇಂಗ್ರೇಜರ ಪಾಳ್ಯ ವಂದು ಸಮಯಕ್ಕೆ ಹೋಗುವಾಗಯೆ, ಸನ್ಮತ ಇರ ಬೇಕು, ಯಾತರಿಂದ ಯಂದರೆ, ಟೀಪು ಸುಲ್ತಾನನ ಕಡೆಗೆ ಹೋಗುವ ಸಮಯ ಬಂದರೆ, ಆವಾಗಯೆ ನಂಮ ಪಾಳ್ಯದವರಿಗೆ ರಾತಿಬು ಜೀನಸು, ನಿಂಮ ಊರಲ್ಲಿರುವಂಥಾದ್ದು ಸಹಾಯ[5] ಕ್ರಯಕ್ಕೆ ಕೊಡಿಸಿ ಸಹಾಯ ಮಾಡ ಬೇಕು. ಘಟ್ಟದ ಮೇಲೆ ಟೀಪು ಊರಲ್ಲು ನಮಗೂ ಆತಗೂ ಲಡಾಯಿ ಆಗುವಾಗ್ಯೆ, ರಾಜರು ತಮಗೆ ಕೂಡಿದಷ್ಟು ಬಲ ತೆಗದು ಕೊಂಡು, ಇಂಗ್ರೇಜರ ಕಡೆಯಲ್ಲು ಕೂಡಿ ಇರ ಬೇಕು. ಮೂರನೇ ಕಲಂ: ನಂಮ ರಾಜ್ಯದಲ್ಲು ಆಗುವಂಥ ಸರಕು, ಕುಂಪನಿಗೆ ಆಗುವಂಥಾ ಸರಕು ಮರ್ಯಾದೆಯ ಪ್ರಕಾರ ಸಹಾಯ ಕ್ರಯಕ್ಕೆ ಕುಂಪನಿಗೆ ಕೊಡುವ ಬಗ್ಯೆ, ವಪ್ಪಿಗೆ ಆಗಿ ಇದ್ದೇವೆ. ಬೇರೆ ಟೋಪೀಕಾರ ಜಾತಿಗೆ ಯಾರಿಗೂ ವ್ಯಾಪಾರ ಮಾಡುವದಕ್ಕೆ ವಪ್ಪಿಗೆ ಇಲ್ಲಾ. ನಾಲ್ಕನೇ ಕಲಂ: ಕುಂಪನಿಗೆ ಅನ್ಯೋನ್ಯವಿಡಿದು ನಡದು ಬರುವಂಥ ಅರಸುಗಳ ಪ್ರಕಾರಕ್ಕೆ, ಟೀಪು ಸುಲ್ತಾನನ ವಂದು ಹುಕುಂ ನಿಂಮ ಮೇಲೆ ನಡಿಯದಂತೆ, ಕುಂಪನಿಯಿಂದ ಆಗುವಂಥ ಪ್ರಯತ್ನ ಮಾಡಿ, ನಿಂಮಂನ ಇರಿಸಿ ಕೊಳ್ಳುತ್ತೇವೆ. ಟೀಪುಗೂ ನಮಗೂ ವಂದು ವೇಳೆಗೆ ವಳ್ಳೆತಾಗಿ ಹೋಗುತ್ತದೆಯಾದರೆ, ತಹನಾಮೆ ಬರದು ಇಡುವಾಗ್ಯೆ, ಅದರಲ್ಲು, ಕೊಡಗಿನ ರಾಜರು ಇಂಗ್ರೇಜ ಕುಂಪನಿಗೆ ಅನ್ಯೋನ್ಯವಿಡಿದು ನಡದು ಬರುವಂಥಾದ್ದು ಅವರ ಮೇಲೆ ಆತನು ವಂದು ಜಾಬಾವಿಯು ನಡಸದಂತೆ ಅದ

[1] ಪಟ್ಟು. [2] ಗೊತ್ತು. [3] Engineer. [4] ಯಾವತ್ತಕ್ಕೂ. [5] ಸವಾಯ.

ಕೊಳ್ಳು ಬಹರೇವು.[1] ಐದನೇ ಕಲಂ: ರಾಜರಿಗೆ ಒಂದು ಸಮಯಕ್ಕೆ ಇಲ್ಲಿಗೆ ಬರ ಬೇಕಾದರೆ, ಅವರ ಕುಟುಂಬ ಮುಂತಾಗಿ, ಆ ಊರಲ್ಲಿರುವ ರೈತರ ಕುಟುಂಬ ಮುಂತಾಗಿ, ಘಟ್ಟದ ಕೆಳಗೆ ಬಂದಲ್ಲಿ, ಇಲ್ಲಿಂದ ಒಂದು ಗಾರದ್[2] ಶಿಪಾಯಿಗಳ ಕಳುಹಿಸಿ ಕೊಟ್ಟು, ದಾರಿ ಮಾರ್ಗದಲ್ಲಿ ಒಂದು ಅಟಕ ಆಗದಂತೆ ತಂದು, ತಲಚ್ಚೇರಿಯಲ್ಲು ಒಂದು ಮನೆ ಸಹಾ ಬಿಡಿಸಿ ಕೊಟ್ಟು, ರಾಜಸ್ಥಿತಿ ಸ್ಥೈರ್ಯವಾಗುವ ಪರಿಯಂತರ ರಕ್ಷಣೆಯ ಮಾಡಿ ನಿಲ್ಲಿಸಿ ಕೊಳ್ಳುತ್ತಾ ಇದೆ. ಪುನಹಾ ರಾಜಸ್ಥಿತಿ ಸ್ಥೈರ್ಯವಾಗುತ್ತಲೆ, ನಿಮ್ಮ ಊರಿಗೆ ಸಂಗಡ ಮನುಷ್ಯರ ಕೂಡಿಸಿ, ಚಂದಾಗಿ ಕಳುಹಿ ಕೊಡುವಲ್ಲಿ ಅಂತರವಿಲ್ಲಾ. ಈ ಕಾರ್ಯಕ್ಕೆ ಅನ್ಯೋನ್ಯ ನಡದು ಬರುವಲ್ಲಿ, ಯಿಂದಿಗೂ ಹೆಚ್ಚು ಕಡಿಮೆ ಬಾರದಂತೆ, ಇತ್ತಕಡೆಯಲ್ಲು ಅಂತರ ಬರಲಿಕ್ಕಿಲ್ಲಾ. ಈ ಕಾರ್ಯಕ್ಕೆ ಯೆರಡು ಕಡೆಯವರಿಗೂ ಸಾಕ್ಷಿ: ಶ್ರೀ ದೇವರು, ಸೂರ್ಯ, ಚಂದ್ರ, ಭೂಮಿ ಸಾಕ್ಷಿ. ಸಾಧಾರಣ ಸಂವತ್ಸರದ ಆಶ್ವೀಜ ಬ. ೫ಲ್ಲು ತಲಚ್ಚೇರಿಯಲ್ಲಿರುವಂಥ ಮೇಜಯೂರ ರಾಬರ್ಟ್ ಟೈಲರು ಕುಂಪನಿ ಹೆಸರಿಗೆ, ಬಂಗಾಳದ ಗೌರ್ನರ ಜನರಲರ ಹೆಸರಿಗೂ, ಮುಂಬಾಯಿ ಗೌರ್ನರರ ಹೆಸರಿಗೂ, ತಲಚ್ಚೇರಿಯಲ್ಲು ಇರುವಂಥ ಮೇಜಯೂರ ತಂಪಲದಾರರೂ ಕೊಡಗಿನ ಹಾಲೇರಿ ವೀರರಾಜೇಂದ್ರ ರಾಜರೂ ಒಂದು ಮನಸಾಗಿ, ಈ ವರುಷ, ಈ ತಿಂಗಳು ದಿವಸದಲ್ಲು ಬರದು ಇಟ್ಟ ನಿಶ್ಚಯ ಕಾಗದಕ್ಕೆ ನಮ್ಮ ಹೆಸರಲ್ಲು ಗುರ್ತು ಹಾಕಿ, ಕುಂಪನಿ ಮೊಹರ ಮಾಡಿ, ಯೆರಡು ಕಡೆಗೂ ಬರದು ಕೊಟ್ಟು ಇದ್ದೇವೆ. ಶ್ರೀ ಶ್ರೀ ಶ್ರೀ ಶ್ರೀ ಶ್ರೀ." ಈ ಮೇರೆ ಉಭಯ ಕಡೆಯಿಂದಲೂ ಯೆರಡು ಭಾಷಾಪತ್ರ ಬರಸಿ, ಅದಕ್ಕೆ ಉಭಯ ಕಡೆ ಅರಮನೆ ಮೊಹರ ದಸ್ಕತು ಮಾಡಿ, ಅದರಲ್ಲು ಒಂದನು ತಲಚ್ಚೇರಿಯಲ್ಲು ಮಡಗಿ, ಮತ್ತೊಂದು ವೀರರಾಜೇಂದ್ರ ಒಡೆಯರವರ ಕೈಯ ಕೊಟ್ಟು, ಜನ್ರಾಲ್ ಸಾಹೇಬರು ಕಳುಹಿದ ಕುದರೆಯನು ಕೊಟ್ಟು, ಉಭಯ ಕಡೆಯಿಂದಲೂ ಉಡುಗರೆ ಉತ್ಸಾಹವನು ಮಾಡಿ, ಪುನಹಾ ಹೊರಟು ಬರುವಾಗಯೆ, ಅದೇ ಕಪಿತಾನ್ ಬ್ರೌನ್ ಸಾಹೇಬರನೂ ಒಂದು ಕುಂಪನಿ ಜನ ಸಹಾ ರಾಜರವರ ಸಂಗಡ ಕೂಡಿಸಿ ಕೊಟ್ಟು, ಕೊಡಗಿನ ರಾಜ್ಯಕ್ಕೆ ಕಳುಹಿಸಿ ಕೊಟ್ಟರು. ಅದೇ ಮೇರೆ ದಾರಿಗೆಳವರು, ಆ ಕಪಿತಾನ್ ಬ್ರೌನ್ ಸಾಹೇಬರು ಸಹಾ ಬಂದು ಅರಮನೆಗೆ ತಲುಪಿದ ಬಳಿಕ, ಆ ಕಪಿತಾನ್ ಸಾಹೇಬರು ತಿರಿಗಿ ಹೋಗುವಾಗಯೆ, ರಾಜರವರ ಕ್ಷೇಮಸಮಾಚಾರಕ್ಕೆ ಕಾಗದವನು ಬರಸಿ, ತೆಗದು ಕೊಂಡು ಹೋಗಿ, ತಲಚ್ಚೇರಿ ಕೋಟೆ ಸರದಾರರು ಚೀಪ್ ರಾಬರ್ಟ್ ಟೈಲರು ಸಾಹೇಬರವರಿಗೆ ಕೊಟ್ಟರು. ಅಷ್ಟರಲ್ಲಿ ಮಡಕೇರಿ ಕೋಟೆಯಲ್ಲು ಇರುವ ಟೀಪುಸುಲ್ತಾನರ ಕಡೆ ಮಂದಿಗೆ ರಸತು ಮುಗಿದೆ ತೀರಿ ಹೋಗಿ, ಪಥ ಮಾರ್ಗ ಬಂದಾಗಿ ಹೋದದರಿಂದ, ಮಡಕೇರಿ ಕೋಟೆಯಲ್ಲು ಇದ್ದ ಜಾಫರ್ ಕುಲ್ಲಿ ಬೇಗ್ ಕಿಲ್ಲೇದಾರನು, ಈ ರಸತು ತೀರಿ ಹೋದ ಪೂರ್ವೋತ್ತರವಾಗಿ ಅರ್ಜಿ ಬರದು, ಕಳ್ಳ ಮಾರ್ಗವಾಗಿ ಟೀಪು ಸುಲ್ತಾನರ ಬಳಿಗೆ ಕಳುಹಿದ್ದರಿಂದ, ಅವರು ಖಾದರ್‌ಖಾನ ಕೈಸಗಿ ಸಂಗಡ ಭಾರಿ ಫೌಜನು ಕೂಡಿಸಿ, ಕಾಡೆಯಾಲದ ಫೌಜದಾರ ನಕ್ಕಡಖಾನ್ ಮಹಮ್ಮದ ಹಾನೇನಿ ಬಿಂತೂರಿ ರಸತಿನ ಸಾಮಾನು ಸರಂಜಾಮು ಸಹವಾಗಿ ಮಡಕೇರಿಗೆ ಕಳುಹಿದಲ್ಲಿ, ಅದೇ ಮೇರೆ ಖಾದರ್‌ಖಾನ ಕೈಸಗಿ ಭಾರಿ ಫೌಜ ಸಮೇತ ರಸತು ತೆಗದು ಕೊಂಡು, ಕೊಡಗಿನ ಶೀಮೆ ಅವರು ಮುಳ್ಳುಸೋಗೆ ಹೊಳೆ ಕಡಾ ದಾಟಿ, ಇಟ್ಟಿ ತಡಿಯಲ್ಲು ಇಳು ಕೊಂಡಲ್ಲಿ, ಈ ಸಮಾಚಾರವನು ವೀರರಾಜೇಂದ್ರ ಒಡೆಯರವರು ಕೇಳಿ, ಕೊಡಗು ಮಂದಿಯನು ತೆಗದು ಕೊಂಡು, ಖಾಸಾ ತಾವೆ ಹೊರಟು ಹೋಗಿ, ಆ ರಸತು ಬರುವ ಮಾರ್ಗದಲ್ಲಿ ಬೂದಿಟ್ಟಾವದಿ ಯೆಂಬ ಜಾಗದಲ್ಲಿ ಒಡ್ಡುತಳೆ ಕಟ್ಟಿ, ಲಡಾಯಕ್ಕೆ ಕಾದು ಇದ್ದರು. ಅಷ್ಟರಲ್ಲಿ ಆ ಖಾದರ್ ಖಾನನು ಫೌಜ ಸಮೇತ ರಸತು ಸಾಗಿಸಿ ಕೊಂಡು, ಮೂರನೆ ದಿವಸ ಬೆಳಿಗ್ಗೆಯೆ ಯೆರಡು ಅರೆ ಗಳಿಗೆ ಹೊತ್ತಿನಲ್ಲಿ ಬೂದಿಟ್ಟಾವದಿಗೆ ಮುಟ್ಟಿದಲ್ಲಿ, ಝಗಳಾ ಮಾಡಿ, ಆ ಒಡ್ಡಿಗೆ ಹಲ್ಲಾ ಹಾಕುವದಕ್ಕೆ ಬಂದಲ್ಲಿ, ಕೊಡಗು ಜನಕ್ಕೂ ಆ ಫೌಜಿಗೂ ಹೋರಾಟ ಲಡಾಯವಾಗಿ, ಕೋವಿ ಗುಂಡಿನ ಲಡಾಯಿ ನಿಂತು, ಕೈಬೆರಸಿ, ಕತ್ತಿಯಿಂದ ಐದು ಘಳಿಗೆ ಪರಿಯಂತರ ಲಡಾಯವಾಗಿ, ಟೀಪು ಸುಲ್ತಾನರ ಕಡೆ ಐನೂರು ಜನ ಮೃತವಾಗಿ, ಇನ್ನೂರು ಜನಕ್ಕೆ ಜಖಮಿ ಆಗಿ, ಕಡೆಗೆ ಪೆಟ್ಟು ತಡಿಯಲಾರದೆ ಓಡಿ ಹೋಗಿ, ಖಾದರ್‌ಖಾನ ಕೈಸಗಿಯು ಕೆಲವು ಮಂದಿ ತೆಗದು ಕೊಂಡು, ಮಿಟ್ಟಾಡಿಯಲ್ಲು ನಿಂತು ಇದ್ದಲ್ಲಿಗೆ ಕೂಡಿದರು. ಆ ಖಾದರ್‌ಖಾನನು ಈ ಘಾಬರಿ ಆಗಿ ಬಂದ ಮಂದಿಗೆ ಸಮಧಾಯಿಸಿ, ಯಾವತ್ತು ದಂಡು ಒಟ್ಟು ಗೂಡಿ ಕೊಂಡು, ಅಲ್ಲಿಗೆ ಸಮೀಪದಲ್ಲು ಇದ್ದ ಟಿಕ್ಕದು ಒಂದು

1 ಬರುವೆವು. 2 Guard.

ಗುಡ್ಡೆ ಹಾಕಿ, ಅದರಲ್ಲು ದಂಡು ಇಳು ಕೊಂಡು, ದಂಡಿನ ಸುತ್ತಾ ರಸ್ತು ತುಂಬಿದಂಥ ಗೋಣಿಗಳನು ಕೋಟೆ ಕಟ್ಟಿದ ಹಾಗೆ ನಿಟ್ಟು ಹಚ್ಚಿ, ಅದರ ಆಶ್ರಯದ ಒಳಗೆ ಹೊಕ್ಕೊಂಡು, ಸಾಯಂಕಾಲದ ಪರಿಯಂತರ ಜಗಳ ಮಾಡುತ್ತಿದ್ದನು. ಆ ಬಳಿಕ, ದಂಡಿನ ಜನ ಹೊರಟ ಹೋಗದಂತೆ, ದಂಡಿನ ಸುತ್ತಲು ದೊರೆಗಳು ತಮ್ಮ ಕಡೆ ಕೊಡಗು ಮಂದಿಯನು ಮುತ್ತಿಗೆ ಹಾಕಿಸಿದಲ್ಲಿ, ಕೊಡಗು ಮಂದಿಗೆ ಗೊತ್ತುಗಾರರಾಗಿ[1] ಇರುವಂಥಾವರು ರಾಜರ ಬಳಿಗೆ ಬಂದು, "ನಮಗೆ ಅಪ್ಪಣೆ ಆದರೆ, ಈ ರಾತ್ರೆ ಬೆಳಗಿನ ಜಾವದಲ್ಲಿ ಅವರ ದಂಡಿನ ಮೇಲೆ ಬಿದ್ದು, ಒಂದೊಂದು ಕೋವಿ ಗುಂಡು ಇಟ್ಟು, ಆ ಮೇಲೆ ಕತ್ತಿಯಿಂದ ಕಡದು,[2] ಅವರ ದಂಡನು ಮುಳುಗಿಸುತ್ತಾ ಇದ್ದೇವೆ. ಆ ದಂಡಿನಲ್ಲಿರುವಂಥಾ ಸಾಮಾನು ಸರಂಜಾಮು ಯೇನು ಇದ್ದಾಗ್ಯೂ, ಲಡಾಯಿ ಮಾಡುವ ಮಂದಿಗೆ ಮಾಫು ಕೊಡಿಸ ಬೇಕು" ಯಂಬದಾಗಿ, ಅರಿಕೆ ಮಾಡಿ, ಅಪ್ಪಣೆ ಕೇಳಿದಲ್ಲಿ, ಆ ಮಾತಿಗೆ ರಾಜರು ಒಡಂಬಟ್ಟು, ಅಪ್ಪಣೆ ಕೊಡಿಸಿದ ವಿವರ: "ಪರಾಕು ನಾವು ಟೀಪು ಸುಲ್ತಾನರ ಇಲಾಖೆ ಪಿರಿಯಾಪಟ್ಟಣದಲ್ಲು ಇರುವಾಗ್ಯೆ, ಒಂದು ದಿನ ನಂಜರಾಯಪಟ್ಟಣದ ಪಾಶ್ವಾಂಡಕ್ಕೆ ಬೇಟೆಗೆ ಹೋಗಿ, ಸಾಯಂಕಾಲವಾಗಿ, ಪುನಹಾ ಹೋಗುವದಕ್ಕೆ ಸಂದಟ್ಟು[3] ಆಗದೆ ಉಳು ಕೊಂಡು ಇದ್ದಲ್ಲಿ, ಖಾದರ್‌ಖಾನ್ ಕೆಸಗಿಯು ನಮ್ಮ ಬಳಿಗೆ ಬಂದು, ನಮ್ಮನು ಕರ ಕೊಂಡು ಕುಶಾಲ ನಗರಕ್ಕೆ ಹೋಗಿ, ಬೆಳಗ್ಗೆಯ ಸಾಯಂಕಾಲಕ್ಕೆ ಯೆರಡು ಹೊತ್ತಿನ ಅಡಿಗೆ ಶ್ಯಾಖಸ್ತರವನು ಕೊಟ್ಟು ಇದ್ದಾನೆ. ಈ ಸಮಯದಲ್ಲಿ ನಾವು ಅವನ ಪ್ರಾಣ ಉಪಕಾರ ಮಾಡ ಬೇಕಾದ್ದರಿಂದ, ನೀವು ಹೇಳಿದ ಹಾಗೆ ಬೆಳಗಿನ ಜಾವದಲ್ಲಿ ಟೀಪು ಸುಲ್ತಾನರ ಫೌಜಿನ ಮೇಲೆ ಬಿದ್ದು, ನಿಗ್ರಹಿಸಿ, ಆ ಖಾದರ್‌ಖಾನ್ ಕೆಸಗಿ ಯೆಂಬ ಸರದಾರನನು ಪ್ರಾಣ ಬೆರಸಿ, ನಮಗೆ ತಂದು ಕೊಟ್ಟರೆ, ಆ ದಂಡಿನಲ್ಲಿ ಇದ್ದ ಸಾಮಾನು ಯಾವತ್ತು ನಿಮಗೆ ಮಾಫು ಕೊಡಿಸ ಬಹುದು" ಯಂಬದಾಗಿ ಹೇಳಿದಲ್ಲಿ, ಆ ಗೊತ್ತುಗಾರರು ಹೇಳಿ ಕೊಂಡದ್ದು: "ನಾವು ಕತ್ಲೆ[4] ವೇಳೆಯದಲ್ಲಿ ಹೋಗಿ, ಅವರ ದಂಡಿನ ಮೇಲೆ ಬಿದ್ದು, ಕೆಬೆರಸಿ ಕಡಿಯುವಾಗ್ಯೆ, ಅವರ ಸರದಾರ ಖಾದರ್‌ಖಾನ್ ಕೆಸಗಿ ಇಂಥಾವ ಯೆಂಬದಾಗಿ ಸಹ ಕೈಗೆ ಸಿಕ್ಕದ್ದು ಹ್ಯಾಗೆ? ಕಾಣದೆ ಮೋಸವಾಗಿ ಹೋದರೆ, ಹೋಯಿತು. ಜೀವ ಸಹಿತ ಈ ಕಡೆ ಮಂದಿ ಕೈಗೆ ಸಿಕ್ಕಿದರೆ, ತಮಗೆ ತಂದು ಒಪ್ಪಿಸುತ್ತೇವೆ" ಯಂಬದಾಗಿ ಅರಿಕೆ ಮಾಡಿದಲ್ಲಿ, ಈ ಮಾತಿಗೆ ಮಹಾರಾಜರು ಒಪ್ಪದೆ, "ಹಾಗಾದರೆ ನಾವು ಮಾರಾವತಿ ಖಾದರ್‌ಖಾನನ ಹೆಸರು ಹಿಡಿಸಿ ಕರೆಸುತ್ತೇವೆ.[5] ಅವನ ಅದೃಷ್ಟ ಚೆನ್ನಾಗಿ ಇದ್ದು ಬಂದರೆ, ಸರಿ; ಇಲ್ಲದಿದ್ದರೆ, ನೀವು ಹೇಳಿದ ಮೇರೆ ನಾವು ಒಪ್ಪಿ ಇದ್ದೇವೆ. ಹಾಗೆ ಮಾಡಿ" ಯಂಬದಾಗಿ ಅಪ್ಪಣೆ ಕೊಟ್ಟು, ಆ ಬಳಿಕ ಯೆರಡು ಜನ ಹಾತರ ಇದ್ದವರನು, ಅವರ ದಂಡಿನ ಸಮೀಪಕ್ಕೆ ಹೋಗಿ, "ಪರಾಕು ದೊರೆಗಳು ಶಿಕಾರಿಗೆ ಬಂದು ಇದ್ದಾಗ್ಯೆ, ಅಡಿಗೆ ಶ್ಯಾಖಸ್ತರ ಕೊಟ್ಟು ಉಪಕಾರ ಮಾಡಿ ಇದ್ದೀರಿ; ಆದ್ದರಿಂದ ನಿಮಗೆ ಪ್ರಾಣ ಉಪಕಾರ ಮಾಡ ಬೇಕು ಯೆಂಬ ಮೋಹ ನಮ್ಮ ದೊರೆಗಳಿಗೆ ಹುಟ್ಟಿ ಇದೆ. ಈ ಸಮಯದಲ್ಲಿ ನೀವು ಶರಣಾಗತರಾಗಿ ದೊರೆಗಳ ಬಳಿಗೆ ಬಂದರೆ, ಕ್ಷೇಮವಿದೆ. ಇಲ್ಲದಿದ್ದರೆ[6] ಯೆರಡು ಘಳಿಗೆ ಒಳಗೆ ನಿಮ್ಮ ಪ್ರಾಣ ವ್ಯರ್ಥವಾಗುತ್ತದೆ" ಯಂಬದಾಗಿ, ಕರದು ಹೇಳುವಂತೆ ಅಪ್ಪಣೆ ಕೊಟ್ಟು ಕಳುಹಿದಲ್ಲಿ, ಆ ಜನ ಹೋಗಿ, ಅದೇ ಮೇರೆ ಕರದು ಹೇಳಿದಲ್ಲಿ, ಈ ಮಾತು ಕೇಳಿದಾಕ್ಷಣ ಆ ಖಾದರ್‌ಖಾನ್ ಕೆಸಗಿ, ನತ್ತಡಖಾನ್, ಮಹಂಮದ್‌ಹುಸೇನ್ ಬಿಂತೂರಿ, ಅಮಲುದಾರ ರಜಬಲ್ಲಿ ಸಹಾ, ಈ ನಾಲ್ವರು ತಮ್ಮ ದಂಡಿನಿಂದ ಹೊರಟು, ವೀರರಾಜೇಂದ್ರ ಒಡೆಯರವರಿಗೆ ಶರಣಾಗತರಾಗಿ ಬಂದು ಕಂಡಲ್ಲಿ, ಆ ಖಾದರ್‌ಖಾನನಿಗೆ ದೊರೆಗಳು ಅಪ್ಪಣೆ ಕೊಟ್ಟದ್ದು: "ಒಂದು ದಿವಸ ನೀನು ನಮಗೆ ಉಪಕಾರ ಮಾಡಿ ಇದ್ದೀಯಷ್ಟೆ. ಅದರ ಬದಲಿಗೆ ನಿನಗೂ ನಿನ್ನ ನೆಂಟರಿಷ್ಟರಿಗೂ ಮಾನ ಪ್ರಾಣ ಉಳಿಸಿ ಬಿಟ್ಟು ಕಳುಹುತ್ತಾ ಇದ್ದೇವೆ. ಉಳಿಕೆ ಟೀಪು ಸುಲ್ತಾನರ ಕಡೆ ಫೌಜನು ನಿಗ್ರಹಿಸಿ, ರಸ್ತು ಸಾಮಾನು ಯಾವತ್ತು ನಮ್ಮ ಮಂದಿಗೆ ಮಾಫು ಕೊಡಿಸುತ್ತೇವೆ" ಯಂಬದಾಗಿ, ಅಪ್ಪಣೆ ಕೊಟ್ಟಲ್ಲಿ, ಆ ಮಾತಿಗೆ ಖಾದರ್‌ಖಾನನು ಅರಿಕೆ ಮಾಡಿ ಕೊಂಡದ್ದು: "ಈ ದಂಡು ರಸ್ತು ಸಹಾ ಅತಂತ್ರವಾದ ಮೇಲೆ, ಟೀಪು ಸುಲ್ತಾನರ ಬಳಿಗೆ ಯಾವ ಮೇರೆ ಹೋಗ ಬೇಕು? ಇಲ್ಲಿಂದ ನನ್ನ ಪ್ರಾಣ ಉಳಿಸಿ ಕೊಂಡು ಹೋದಾಗ್ಯೂ, ನನ್ನ ಕುಟುಂಬ ಮಕ್ಕಳ ಪ್ರಾಣ ಸಹಿತ ಉಳಿಸಲಿಕ್ಕೆ ಇಲ್ಲ. ಈ ಬಗ್ಯೆ, ಪ್ರಾಣ ಉಳಿಸ ಬೇಕು ಯಂಬದಾಗಿ, ದಯವಿಟ್ಟರೆ, ಸಾಮಾನು, ಸರಂಜಾಮು, ದಂಡು ಸಮೇತ ಪ್ರಾಣ ಉಳಿಸುವ ಮಾರ್ಗದಿಂದ ಬಿಟ್ಟು ಕೊಟ್ಟರೆ, ಈ ರಸ್ತಂ

[1] ಗೊತ್ತುಗಾರರಾಗಿ. [2] ಕಡಿದು. [3] ಸಂದಟಿ. [4] ಕತ್ತಲೆ. [5] ಕರಿಸುತ್ತೇವೆ. [6] ಇಲ್ಲದಿದ್ದರೆ.

ನು ಮಡಕ್ಕೇರಿ ಕ್ಯೋಟೆಗೆ ಪೋಗಿ, ಪುನಹಾ ಫೌಜ ಸಮೇತ ಪಟ್ಟಣಕ್ಕೆ ಹ್ಯೋದೇನು. ಈ ಮಾನ ಪ್ರಾಣ ಉಳಿಸಿದ ಉಪಕಾರ ನಂನ ಜೀವ ಇರುವ ಪರಿಯಂತ್ರ ಮರೆಯಲಿಕ್ಕೆ ಇಲ್ಲ„ ಯಂಬದಾಗಿ ಅರಿಕೆ ಮಾಡಿ ಕೊಂಡದರಿಂದ, ಆ ಮಾತಂನು ರಾಜರು ಚಿತ್ತಕ್ಕೆ ತಂದು ಕೊಂಡು, ಕರೆಕಾರ ಕೊಂಗೆರ ಐಯಂಣನಿಗೆ ಅಪ್ಪಣೆ ಕೊಟ್ಟ ವಿವರ: "ನೀನು ಈ ದಂಡಿನ ಸಂಗಡ ಮಡಕ್ಕೇರಿ ಪರಿಯಂತ್ರ ಮಾಗೂದ ವಡ್ಡು ತಳಿಗಳಲ್ಲಿ ಇರುವ ಕಾವಲು ಮಂದಿ ಯೇನಾದ್ರು[1] ಅಡ್ಡಿ ಪಾರಕತ್ತು ಮಾಡದೆ ಬಿಡುವಂತೆ ತಾಕಿದಿ ಮಾಡಿ ಕೊಂಡು ಹ್ಯೋಗಿ, ಕಿಲ್ಲೆದಾರ ಜಾಫರಕುಲ್ಲಿ ಬೇಗು ನಂಮ ಸಂಗಡ ಝುಗಳ ಮಾಡ ತಕ್ಕವನಾ? ಅದಲ್ಲಾ ನೆಲ್ಲಾ ಮಾಡಿ ಕೊಂಡು, ಕ್ಯೋಟೆ ಬಿಟ್ಟು, ಈ ದಂಡಿನ ಸಂಗಡ ಹ್ಯೋಗ ತಕ್ಕವನಾ? ಯೆಂಬದಾಗಿ ಅವನ ಸಂಗಡ ಕೇಳಿ, ಅಲ್ಲಿಂದ ಈ ದಂಡಂನು ನಂಮ ಗಡಿ ಮುಳ್ಳು ನ್ಯಾಗೆ ಹಾಳೆ ತಡವಿನ ಆಚೆಗೆ ದಾಟಿಸಿ ಬಿಟ್ಟು, ಆ ವಿವರ ಅರಿಕೆ ಮಾಡು„ ಯಂಬದಾಗಿ, ಅಪ್ಪಣೆ ಕೊಟ್ಟಲ್ಲಿ, ಆ ಐಯಂಣನು ಆದ್ದೇ ಮೇರೆ ಆ ದಂಡಿನ ಸಂಗಡ ಇದ್ದು ಕೊಂಡು, ರಸದಿನ[2] ಸಾಮಾನವಂನು ಸಿಗೆವಾಸಿಯಿಂದ ಮಡಕ್ಕೇರಿಗೆ ತಲಪಿಸಿ, ದಾರೆಗಳು ಅಪ್ಪಣೆ ಕೊಟ್ಟು ಇದ್ದ ವಿವರವಂನು ಆ ಜಾಫರಕುಲ್ಲಿ ಬೇಗನ ಸಂಗಡ ಪೇಳಿದಲ್ಲಿ, ಆತನು ಪೇಳಿದ್ದು: "ಕ್ಯೋಟೆಲಿ ಇದ್ದ ರಸತು ಯಾವತ್ತು ಮುಗದು[3] ಹ್ಯೋಗಿ ಇತ್ತು. ಇಂದು ನಾಳೆ ಕ್ಯೋಟೆಯಂನು ವಪ್ಪಿಸಿ ಹ್ಯೋಗ ಬೇಕೆಂಬ ಯೋಚನೆ ವಳಕೆ ಇದ್ದೆನು. ಅಷ್ಟರಲ್ಲಿ ದಾರೆಗಳು ಖಾದರಖಾನನ ಮೇಲೆ ದಯವಿಟ್ಟು, ರಸತಿನ ಸರಂಜಾಮು ತಾವೆ ಮಡಕ್ಕೇರಿ ಕ್ಯೋಟೆಗೆ ತಲಪಿಸಿ ಇದ್ಧಾರೆ. ಈ ಮೇರೆ ರಸದು ಇದ್ದಂತೆ ಕ್ಯೋಟೆ ವಪ್ಪಿಸಿ ಬಿಟ್ಟು, ನಾವು ಟೀಪು ಸುಲ್ತಾನರ ಬಳಿಗೆ ಹ್ಯೋದರೆ, ನಂಮ ಕುಟುಂಬ ಮಕ್ಕಳ ಪ್ರಾಣ ಉಳಿಸಲಿಕ್ಕೆ ಇಲ್ಲ. ಇದು ಕಾರಣ ದಾರೆಗಳ ಅಪ್ಪಣೆ ಆದರೆ, ಈ ರಸದು ತೀರುವ ಪರಿಯಂತ್ರ ಇರುತ್ತೇವೆ. ಆ ಬಳಿಕ ಕ್ಯೋಟೆಯಂನು ವಪ್ಪಿಸಿ, ಅಪ್ಪಣೆ ಕೇಳಿ ಕೊಂಡು, ನಂಮ ಖಾವಂದರ ಬಳಿಗೆ ಹ್ಯೋದೇವು. ಅದರಿಂದ ನಂಮ ಅರ್ಥ ಮಾನ ಪ್ರಾಣ ಉಳದೀತು„ ಯಂಬದಾಗಿ, ಪೇಳಿದ್ದರಿಂದ, ಆ ಮಾತು ಕೇಳಿ ಕೊಂಡು, ಆ ಕೊಂಗೆರ ಐಯಂಣನು ಅಲ್ಲಿಂದ ಆ ಖಾದರಖಾನನ ಸಂಗಡ ಪುನಹ ಹ್ಯೋಗಿ, ಅವರ ದಂಡಂನು ಸರಹದ್ದಿನ ಮುಳ್ಳು ನ್ಯಾಗೆ ಕಡ ದಾಟಿಸಿ ಬಿಟ್ಟು, ತಾನು ಮಹಾರಾಜರ ಬಳಿಗೆ ಬಂದು, ಆ ವಿವರ ಯಾವತ್ತು ಶೃತ ಪಡಿಸಿದನು. ಅತ್ತಲಾಗಿ ಟೀಪು ಸುಲ್ತಾನರು ಮಹಾ ಕ್ರೋಧದಿಂದ ತಂಮ ಯಾವತ್ತು ಫೌಜ ತೆಗದು ಕೊಂಡು ಹ್ಯೋಗಿ, ಬೆಟ್ಟಕ್ಯೋಟೆಗೆ ಮೋರ್ಚೆಗಳ ಹಾಕಿ, ಲಡಾಯಿ ಮಾಡಿ, ಹಲ್ಲಾ ಹ್ಯಾತಿ, ತೆಗದು ಕೊಂಡು, ಅದರಲ್ಲಿ ಇದ್ದಂಥ ಫಿರಂಗಿಗಳು ಗುಂಡುಗಳು ಮುಂತಾದ ಸಾಮಾನು ಪಟ್ಟಣಕ್ಕೆ ಸಾಗಿಸಿ, ಆ ಕ್ಯೋಟೆಯಂನು ಹುಡಿಗುಟ್ಟಿ, ಅಗದು, ನೆಲಸಮ ಮಾಡಿ, ಅವರ ಶೀಮೆಯಂನು ಸೂರೆ ಮಾಡಿ, ಪ್ಯೋರಳ ಹೆಂಣು ಗಂಡು ಶೆರೆ ಹಿಡಿದು, ಮನೆಮಾರಿಗೆ ಅಗ್ನಿ ಪ್ರವೇಶ ಮಾಡಿ,[4] ಫೌಜ ಸಮೇತ ಪಟ್ಟಣದ ಕಡೆಗೆ ಹ್ಯೋದರು.

ಆ ಬಳಿಕ ಕೆಲವು ದಿವಸ ಕಳದ ಮೇಲೆ, ಮುಂಬಾಯಿ ಗವುನರ ಮೇಜರ ಜನರಾಲ್ ರಾಬರ್ಟ ಆಬರಕರಂಬಿ ಸಾಹೇಬ ಬಹಾದ್ದರವರು[5] ಫೌಜ ಸಮೇತ ಮುಂಬಾಯಿಂದ ಹೊರಟು ಬಂದು, ತಲಚ್ಚೇರಿಯಲ್ಲು ಇಳು ಕೊಂಡು, ತಂಗೂರ ಬೀಬಿ ಮಾಡಿದಂಥ ಮೋಸದ ವಿವರ ಮೇಲೆ ಸದರಿ ಬರದು ಇರುವಂಥಾದ್ದು ಕೇಳಿ, ಇಂಥ ಮೋಸ ಮಾಡಿದಂಥ ಜನರ ಸ್ಥಾನವಂನು ತೆಗದು ಕೊಂಡು, ಈ ಜನರ ಸ್ಥಾನ ಭ್ರಷ್ಟ ಮಾಡಿ, ಮುಂಬಾಯಿಗೆ ಕಳುಹಿಸ ಬೇಕೆಂಬದಾಗಿ ನಿಶ್ಚೈಸಿ, ತಂಮ ಫೌಜ ತೆಗದು ಕೊಂಡು ಹ್ಯೋಗಿ, ತಂಗೂರ ಬಳಿಯ ಇಳು ಕೊಂಡು, ಆ ಜನ್ರಲ್ ಸಾಹೇಬರು ರಾಜರವರ ಮಿಲಾಖತ್ತು ಆಗ ಬೇಕು ಯಂಬ ಅಪೇಕ್ಷೆಯಿಂದ[6] ಕರ ಕೊಂಡು ಬರುವ ಬಗ್ಯೆ, ವಬ್ಬ ಸರದಾರರು ಸಂದು ಕುಂಪನಿ ಶಿಪಾಯಿಗಳ ಸಹಾ ಕಳುಹಿದಲ್ಲಿ, ಆ ಸರದಾರನು ಬಂದು, "ಜನ್ರಲ್ ಸಾಹೇಬರು ತಂಮ ಭೇಟಿ ಆಗ ಬೇಕು ಯಂಬದಾಗಿ, ಬಹಳ ಅಪೇಕ್ಷೆಯಿಂದ ಇದ್ಧಾರೆ„ ಯಂತ ಪೇಳಿದಲ್ಲಿ, ರಾಜರವರು ಕಾಡಗಿನಿಂದ ಹೊರಟು ತಲಚ್ಚೇರಿಗೆ ತಲಪಿದರು. ಅಲ್ಲಿಗೆ ಮುಟ್ಟುವದಕ್ಕೆ ವಂದು ದಿವಸ ಮುಂಚಿತವಾಗಿ ಇಂಗ್ರೇಜರ ಫೌಜ ಲಡಾಯ ಮಾಡಿ, ತಂಗೂರ ಕ್ಯೋಟೆಯಲ್ಲು ಇದ್ದ ಟೀಪು ಸುಲ್ತಾನರ ಕಡೆ ಆರು ಸಾವಿರ ಜನ, ತಂಗೂರ ಬೀಬಿ ಕಡೆ ನಾಲ್ಕು ಸಾವಿರ ಮಾಪಿಳ್ಳೆರು ಸಹಾ ಪೆಟ್ಟು ತಾಳಲಾರದೆ, ಸಲಾಂ ಮಾಡುತ್ತೇವೆಂಬದಾಗಿ, ರಾಜಪಟ ನಡಿಸಿದಲ್ಲಿ, ಜನ್ರಲ್ ಸಾಹೇಬರು ಪೇಳಿದ್ದು: "ಟೀಪು ಸುಲ್ತಾನರ ಕಡೆ ಜನರು ಅವರು ಸಂಪಾದಿಸಿದಂಥ ವಡವೆ ಸಹಾ ಬಿಟ್ಟು ಕಾಡುತ್ತೇ

1 ಯೇನಾದರೂ. 2 ರಸ್ತಿನ. 3 ಮುಗಿದು. 4 ಮಾಡಿ. 5 Governor of Bombay, Major General Sir Robert Abercromby. 6 ಅಪೇಕ್ಷೆಯಿಂದ.

ವೆ; ಹೋಗಲಿ. ಆ ಕಂಣೂರ ಕೋಟೆ ವಳಗೆ ಇರುವ ಮಾಪಿಳ್ಳೆರು ಇಂಗರೇಜಿ ಬಹಾದ್ದರ ಸರಕಾರದ ಫೌಜಿಗೆ ದಗಾ ಮಾಡಿದ್ಧಾರೆ. ಅವರಂನೂ ಆ ಬೀಬಿಯಂನೂ ಸಹಾ ಹಿಡಿದು, ಅವರ ಸ್ಥಾನದಿಂದ ತೆಗದು, ಮುಂಬಾಯಿಗೆ ಕಳುಹಿಸ ಬೇಕು. ಈ ಸ್ಥಳದಲ್ಲಿ ಇರುವದಕ್ಕೆ ಯೋಗ್ಯಸ್ಥರಲ್ಲ. ಇವರ ಸಂಗಡ ನಾವು ಸಲ್ಲಾ ಮಾಡಲಿಕ್ಕೆ ಇಲ್ಲಾ” ಯಂಬದಾಗಿ ಹೇಳಿದರಿಂದ, ಆ ಬೀಬಿಯು, ಆ ಮಾಪಿಳ್ಳೆರು ಸಹಾ ಯೋಚಿಸಿದದು: ಟೀಪು ಸುಲ್ತಾನರ ಕಡೆ ಜನರು ಸಲ್ಲಾ ಮಾಡಿ ಕೊಂಡು, ಕೋಟೆಯಿಂದ ಇಳಿದು, ಪಟ್ಟಣಕ್ಕೆ ಹೋಗುತ್ತಾರೆ. ನಂಮ ಮಾಪಿಳ್ಳೆರಿಗೆ ಜೀವಿಸಲಿಕ್ಕೆ ಬಿಡರು. ಮಾಪಿಳ್ಳೆರು ಯಾವತ್ತಂನು ಇಂಗರೇಜಿಯವರು ಕೊಂದು ಹಾಕಯಾರು. ಮಲೆಯಾಳದಲ್ಲು ಇರುವಂಥ ಅರಸುಗಳು, ನಾಯಿಮಾರರು ಮುಂತಾಗಿ ತೆರುಗಳಿದ್ಧಾರೆ. ಕೊಡಗಿನ ದೊರೆಗಳವರು ಈಗ ತಲಚ್ಚೇರಿಗೆ ಬಂದು ಇದ್ಧಾರೆ. ಪರಾತು ಅವರ ಹಿರಿಯವರ ದಿವಸದಲ್ಲಿ ಅವರ ಕಡೆ ದಳವಾಯಿಗೆ ನಾವು ಉಪಕಾರ ಮಾಡಿದ್ಧೇವೆ. ಈ ಸಮಯದಲ್ಲಿ ನಾವು ಹೇಳಿ ಕೊಂಡರೆ, ನಮಗೆ ಉಳಿಸಿ ಕೊಳ್ಳುವ ಬಗ್ಯೆ, ಅವರಿಂದ ಆಗುವಷ್ಟು ಉಪಕಾರ ಮಾಡ್ಯಾರು ಯಂಬದಾಗಿ, ನಿಶ್ಚಯ ಮಾಡಿ ಕೊಂಡು, ಆ ಬೀಬಿಯು ತಂನ ಮಗನಂನು ರಾತ್ರಿಕಾಲದಲ್ಲಿ ಕಳ್ಳ ಮಾರ್ಗವಾಗಿ ದೋಣಿ ಮೇಲೆ ಹತ್ತಿಸಿ, ಕಾರೆಕಾರ ಕುಂಞಿಪಕ್ಕಿ ಯಂಬವನ ಕೂಡಲಿಟ್ಟು, “ಇಷ್ಟು ದಿವಸ ನಂಮ ಮಗನಾಗಿ ಇದ್ದದ್ದು, ಈಗ ತಂಮ ಮಡಲಿಗೆ ಹಾಕಿ ಇದ್ಧೇನೆ. ತಾವು ಆರೈಕೆ ಮಾಡಿ ಕೊಂಡರೆ, ಕೀರ್ತಿ ತಂಮದು ಇದೆ” ಯಂಬದಾಗಿ, ಆ ಕುಂಞಿಪಕ್ಕಿ ಸಂಗಡ ಬಾಯಿಮಾತಿನಿಂದ ಹೇಳಿ, ಕೊಡಗಿನ ರಾಜರವರ ಬಳಿಗೆ ಕಳುಹಿಸಿದ್ದರಿಂದ, ಅವನು ಅದ್ದೇ ಮೇರೆ ಆ ಬೀಬಿ ಮಗನಂನು ಕರದು ಕೊಂಡು ತಲಚ್ಚೇರಿಗೆ ಬಂದು, ಮೂಸೆ ಬೇಹಾರಿಯಂನು ಕೂಡಿ ಕೊಂಡು, ವೀರರಾಜೇಂದ್ರ ಒಡೆಯರವರು ಇಳದು ಇದ್ದ ಹಾಯಿಜನ ಮನೆಗೆ ಬಂದು, ಆ ಬೀಬಿ ಹೇಳಿದ ವಿವರ ಯಾವತ್ತೂ ಹೇಳಿ ಕೊಂಡಲ್ಲಿ, ಪರಾತು ನಂಮ ಹಿರಿಯವರ ಕಾಲದಲ್ಲಿ ದಳವಾಯಿಗೆ ಇವರು ಉಪಕಾರ ಮಾಡಿ ಇದ್ಧಾರೆ ಯಂಬದಂನು ಗ್ರಹಿಸಿ, ಅದಕ್ಕೆ ಪ್ರತಿ ಉಪಕಾರ ಮಾಡ ಬೇಕೆಂಬದಾಗಿ, ಆ ಬೆಳಗ್ಗಯೆ ಬೀಬಿ ಮಗನಂನು ಕರಕೊಂಡು ಹೋಗಿ, ಈ ಬೀಬಿ ವೃತ್ತಾಂತ ಯಾವತ್ತು, ಚೀಫ್ ರಾಬರ್ಟ್ ಟೇಲರು ಸಾಹೇಬರವರ[1] ಸಂಗಡ ಹೇಳಿದಲ್ಲಿ, ಅವರು ಈ ಮಾತ ಕೇಳಿ, “ಕಂಣಾನೂರ ಬೀಬಿಯು ಇಂಗರೇಜಿಯವರಿಗೆ ನಂಬಿಸಿ ದಗಾ ಮಾಡಿ ಇದ್ಧಾರೆ.[2] ಆದದರಿಂದ ಅವಳ ಸಂಗಡ ನಾವು ಸಲ್ಲಾ ಮಾಡಲಿಕ್ಕೆ ಇಲ್ಲಾ. ಅವಳ ಮಾತಾಗಿ ನಾವು ಜನರಲ್ ಸಾಹೇಬರವರಿಗೆ ಹೇಳುವದಕ್ಕೂ ತಕಯವಿಲ್ಲಾ” ಯಂಬದಾಗಿ ಹೇಳಿದರು. ಆ ಮಾತಿಗೆ ಮಹಾರಾಜರವರು ಹೇಳಿದದು: “ಹಾಗಾದರೆ, ನಾವು ಈ ಬೀಬಿ ಮಗನಂನು ಕರಕೊಂಡು ಜನರಲ್ ಸಾಹೇಬರವರ ಭೇಟಿ ಆಗುವ ಬಗ್ಯೆ ಹೋಗುತ್ತೇವೆ. ನಂಮ ಸಂಗಡ ನೀವು ಬರ ಬೇಕು” ಯಂಬದಾಗಿ ಹೇಳಿದಲ್ಲಿ, ಆ ಮಾತಿಗೆ ಆ ಸರದಾರರು ಒಪ್ಪಿ ಕೊಂಡು, ಅದ್ದೇ ಮೇರೆ ರಾಜರವರು ಆ ಸರದಾರರು ಸಹಾ, ಬೀಬಿ ಮಗನಂನು ಕರಕೊಂಡು ತಲಚ್ಚೇರಿಯಿಂದ ಹೊರಟು, ಪತ್ತೇಮಾರಿ ಮೇಲೆ ಸವಾರಿ ಆಗಿ, ಇಂಗರೇಜಿ ಬಹಾದ್ದರ ಲಷ್ಕರಿನ ಸಮೀಪ ಇಳಿದು, ಮೇಜರ್ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ್ ಬಹಾದ್ದರವರ ಭೇಟಿ ಆಗಿ, ವೀರರಾಜೇಂದ್ರ ಒಡೆಯರವರು ಆ ಬೀಬಿ ಮಗನ ಕೈಹಿಡಿದು, ಜನರಲ್ ಸಾಹೇಬರವರ ಕೈಯಲ್ಲಿ ಕೊಟ್ಟು: “ನಂಮ ಮೇಲೆ ಮೆಹರಬಾನಿಗಿ ದರಿಷ್ಟಿ ಇಟ್ಟು, ಈ ಮಗುವಿನ ಮಾನ ಪ್ರಾಣ ಉಳಿಸಿ ರಕ್ಷಣೆಯ ಮಾಡ ಬೇಕು” ಯಂಬದಾಗಿ ಜಾಹೀರ್ ಮಾಡಿದಲ್ಲಿ, ಜನರಲ್ ಸಾಹೇಬರವರು ತಿಳಿಯದೆ, ರಾಜರ ಮಾತಿನ ಮೇಲೆ “ಆದೀತು” ಯಂತ ಒಪ್ಪಿ ಕೊಂಡು, ಆ ಬಳಿಕ: “ಈ ಮಗು ಯಾರದು” ಯಂಬದಾಗಿ ರಾಬರ್ಟ್ ಟೇಲರು ಸಾಹೇಬರ ಸಂಗಡ ಕೇಳಿದಲ್ಲಿ, “ಈ ಮಗು ಕಂಣೂರ ಬೀಬಿದು.[3] ರಾತ್ರೆ ತಿಳಿಯದ ಹಾಗೆ ದೋಣಿ ಹತ್ತಿಸಿ ಮಹಾರಾಜರವರ ಬಳಿಗೆ ಕಳುಹಿದ್ಧಾಳೆ” ಯಂಬದಾಗಿ ಹೇಳಿದಲ್ಲಿ, ಈ ಮಾತ ಕೇಳಿ, ಜನರಲ್ ಸಾಹೇಬರವರು ಮನಸಿನಲ್ಲಿ ಬಹಳ ದ್ವೇಷ ಪಟ್ಟು, “ಕಂಣೂರವರು ಕುಂಪನಿ ಸರಕಾರದ ಸಾಹೇಬ ಜನರಿಗೆ ಮೋಸ ಮಾಡಿ ಇದ್ಧಾರೆ. ಅದಕ್ಕೆ ತಕ್ಕ ಶಿಕ್ಷೆ ಮೊಕರರು ಆಗಿ ಇದೆ. ಇಂಥಾ ದುಷ್ಟ ಜನರ ಮೇಲೆ ಮೆಹರಬಾನಿ ಮಾಡ ಬಾರದು” ಯಂಬದಾಗಿ ಹೇಳಿದಲ್ಲಿ, “ಇದು ಒಂದಾವರ್ತಿಗೆ ನಂಮ ಮೇಲಣ ಮಿತ್ರತ್ವ ವಾಂಛಲ್ಯದಿಂದ ಈ ಮಗುವಿನ ಮೇಲೆ ದಯವಿಟ್ಟು, ಈ ಮಗುವಂನು ಕಂಣೂರ ಸ್ಥಾನದಲ್ಲಿ ನಿಲ್ಲಿಸ ಬೇಕು. ಈ ಉಪಕಾರ ನಂಮ ಮೇಲೆ ಮಾಡಿದ ಹಾಗೆ ಆದೀತು” ಯಂಬದಾಗಿ, ವೀರರಾಜೇಂದ್ರ ಒಡೆಯರವರು ಬಹಳ ಬಗೆಯಿಂದ ಹೇಳಿ ಕೊಂಡದರಿಂದ, ಜನರಲ್ ಸಾಹೇ

1 Chief, Robert Taylor, Esqr. 2 ಇದ್ಧಾಳೆ. 3 ಬೀಬಿಯದು or ಬೀಬಿದು.

ಬರವರು ಒಡಂಬಟ್ಟು, "ಕಂಣೂರ ಬೀಬಿಯು ತಂನ ಮಗನಂನು ತಂಮ ಕೈಗೆ ಕೊಟ್ಟದರಿಂದ, ಆ ಮಗುವಂನು ತಾವು ನಂಮ ಕೈಗೆ ಕೊಟ್ಟಿರಷ್ಟೆ. ಪುನಹಾ ನಾವು ಈ ಮಗುವಂನು ತಂಮ ಕೈಗೆ ಕೊಡುತ್ತೇವೆ: ತಾವು ಅದೇ ಮೇರೆ ಕಂಣೂರ ಕೋಟೆ ಒಳಗೆ ಹೋಗಿ, ಈ ಮಗುವಂನು ಬೀಬಿ ಕೈಗೆ ಕೊಟ್ಟು, ಸಲ್ಲಾ ಮಾಡಿ, ಈ ಹೊತ್ತಿ ಪರಿಯಂತರಕ್ಕೆ ನೀನು ಮಾಡಿದಂಥಾ ದ್ರೋಹವಂನು ಇಂಗ್ರೇಜಿ ಕುಂಪನಿ ಸರಕಾರದಿಂದ ಮಾಫು ಮಾಡಿಸಿ ಇದ್ದಾರೆ. ಇಂನು ಮುಂದೆ ಇಂಥಾ ಅನ್ಯಾಯ ಮಾಡಿದ್ದುಂಟಾದರೆ, ಮಾಫು ಆಗಲಿಕ್ಕಿಲ್ಲಾ, ತಕ್ಕ ಶಿಕ್ಷೆ ಆದೀತು ಯಂತ ಹೇಳ ಬೇಕು" ಯಂಬದಾಗಿ ಹೇಳಿ, ಆ ಬಳಿಕ ಆ ಜನರಲ್ ಸಾಹೇಬರವರು ಮಹಾರಾಜರವರ ಸಂಗಡ ರಾಬರ್ಟ ಟೇಲರು ಸಾಹೇಬರಂನು, ಮೆಸ್ತರ ಶ್ಯಾಂಡಿಪಾರು ಸಾಹೇಬರಂನು, ಸಾಮುವೆಲ್ ಉಲುಸ್ಸೇನ್ ಸಾಹೇಬರಂನು[1] ಮುಂತಾದ ಸರದಾರರ ಕೂಡಲಿಟ್ಟು, ಕಂಣೂರ ಕೋಟೆಗೆ ಕಳುಹಿದರಿಂದ, ಅದೇ ಮೇರೆ ಮಹಾರಾಜರವರು, ಆ ಸರದಾರರು ಇಂಗ್ರೇಜಿ ಝಾಂಡೆ ಸಹಾ, ಆ ಕಂಣೂರ ಕೋಟೆ ಒಳಗೆ ಹೋಗಿ. ಕುಂಪನಿ ಸರಕಾರದ ಝಾಂಡೆಯಂನು ಕೋಟೆ ಮೇಲೆ ನಿಲ್ಲಿಸಿ, ಜನರಲ್ ಸಾಹೇಬರವರು ಹೇಳಿದ ಮೇರೆ ಬೀಬಿ ಮಗನಂನು ಬೀಬಿಗೆ ಕೊಟ್ಟು, ಯಾವತ್ತು ವಿವರವಂನು ಹೇಳಿ, ಚಂನಾಗಿ ಸಮದಾಯಿಸಿ, ಆ ಬಳಿಕ ತಿರುಗಾ[2] ಬಂದು, ಅಲ್ಲಿನ[3] ವರ್ತಮಾನ ಯಾವತ್ತು ಜನರಲ್ ಸಾಹೇಬರವರ ಸಂಗಡ ಹೇಳಿದಲ್ಲಿ, ಈ ಮಾತ ಕೇಳಿ, ಜನರಲ್ ಸಾಹೇಬರವರು, ಬಹಳ ಸಂತೋಷ ಪಟ್ಟು: "ನೀವು ಮಾಡಿದ ಕೆಲಸವೆಲ್ಲ ಒಳ್ಳೇದೆ ಸರಿ" ಯಂಬದಾಗಿ ಹೇಳಿ, ಆ ಬಳಿಕ ಆ ಕೋಟೆ ಒಳಗೆ ಇದ್ದ ಟೀಪು ಸುಲ್ತಾನರ ಕಡೆ ಜನರಂನು ಬಿಟ್ಟು ಕಳುಹಿಸಿ ಕೊಟ್ಟರು. ಆ ಮೇಲೆ "ಇಂನು ಮುಂದೆ ತಮಗೂ ನಮಗೂ ದೊಡ್ಡ ಶತ್ರುವಾದ ಟೀಪು ಸುಲ್ತಾನರ ನಿಗ್ರಹಿಸುವ ಬಗ್ಯೆ ತಯಾರಾಗ ಬೇಕು. ಈಗ ಇಂಗ್ರೇಜಿ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗುವಂಥ ಗಟ್ಟದ[4] ಮಾರ್ಗ ಯಾವತ್ತು ಟೀಪು ಸುಲ್ತಾನರ ತಾಲ್ಲೂಕಿನ[5] ಒಳಗೆ ಇದೆ. ಆ ಗಟ್ಟಗಳಲ್ಲಿ ಹೇರಳ ಮಂದಿ ಇಟ್ಟು ಬಂದೋಬಸ್ತು ಮಾಡಿ ಇದ್ದಾರೆ. ಅದರಿಂದ ಇಂಗ್ರೇಜಿ ದಂಡು ಕೊಡಗಿನ ಶೀಮೆಗಾಗಿ ಸಾಗಿ ಹೋಗ ತಕ್ಕ ಬಗ್ಯೆ[6] ಯಾವ ಮಾರ್ಗ ಸರಾಗವಾಗಿ ಇದೆ ಯಂತ ನೋಡ ತಕ್ಕ ಬಗ್ಯೆ, ಒಬ್ಬರು ಸರದಾರರಂನು ಸ್ವಲ್ಪ ದಿವಸದ ಒಳಗೆ ತಂಮ ಬಳಿಗೆ ಕಳುಹಿಸುತ್ತಾ ಇದ್ದೇವೆ. ಆ ಸರದಾರರು ಪಸಂದು ಮಾಡಿದಂತ[7] ಮಾರ್ಗವಂನು ತಾವು ಒಡಂಬಟ್ಟು, ದಂಡು ಸಾಗಿ ಬರುವ ಹಾಗೆ, ದುರಸ್ತು ಮಾಡಿಸ ಬೇಕು" ಯಂಬದಾಗಿ, ವೀರರಾಜೇಂದ್ರ ಒಡೆಯರವರ ಸಂಗಡ ಹೇಳಿದಲ್ಲಿ, ಈ ಮಾತಿಗೆ ಒಪ್ಪಿ ಕೊಂಡು, ಕೊಡಗಿನ ರಾಜ್ಯಕ್ಕೆ ಬಂದರು. ಇದೇ ಸಮಯದಲ್ಲಿ ಕರ್ನಲ್ ಹಾರ್ಟಲಿ[8] ಸಾಹೇಬರವರು ಫೌಜ ಸಮೇತ ತಲ್ಲಿಕೋಟೆಗೆ ಬಂದು, ಅಲ್ಲಿ ಇದ್ದಂಥ ಟೀಪು ಸುಲ್ತಾನ ಕಡೆ ಫೌಜ ಯಾವತ್ತಂನು ನಿಗ್ರಹಿಸಿ, ಆ ಕೋಟೆಯಂನು ತೆಗದು ಕೊಂಡು, ಅಲ್ಲಿಂದ ಕಂಣೂರಿಗೆ ಬಂದು, ಆ ಜನರಲ್ ಸಾಹೇಬರವರ ದಂಡಿಗೆ ಕೂಡಿದರು.

ಆ ಬಳಿಕ ಕೆಲವು ದಿವಸದಲ್ಲಿ ಮಾರ್ಗಗಳ ನೋಡ ತಕ್ಕ ಬಗ್ಯೆ, ಕಪ್ತಾನ್ ರನೆಲ್ ಸಾಹೇಬರವರು[9] ಬಂದು, ಧೊರೆಗಳ ಭೇಟಿ ಆಗಿ, "ಇಂಗ್ರೇಜಿ ಬಹಾದ್ದರ ಸರಕಾರದ ಫೌಜ ಬರ ತಕ್ಕ ಬಗ್ಯೆ, ಹೆಗ್ಗಳದ ಗಟ್ಟದ ಮಾರ್ಗವಂನು ದುರಸ್ತು ಮಾಡಿಸಿ ಕೊಡ ಬೇಕು. ಅದೇ ಮಾರ್ಗವಾಗಿ ದಂಡು ಬಂದ ಮೇಲೆ, ದಂಡಿಗೆ ಬೇಕಾದ ಸರಂಜಾಮು. ತಂಮ ಮುಖದಿಂದ ಕೊಡಿಸಿ ಕೊಟ್ಟು, ಸಹಾಯ ಮಾಡ ಬೇಕು" ಯಂಬದಾಗಿ ಹೇಳಿದಲ್ಲಿ, ವೀರರಾಜೇಂದ್ರ ಒಡೆಯರವರು ಆ ಮಾತಿಗೆ ಒಪ್ಪಿ ಒಡಂಬಟ್ಟು, ಆ ಕಪ್ತಾನ್ ರನೆಲ್ ಸಾಹೇಬರಂನು ಮೂರು ದಿವಸ ಪರಿಯಂತರ ತಂಮ ಬಳಿಯ ಮಡಗಿ ಕೊಂಡು, ಇಂಗ್ರೇಜಿ ಬಹಾದ್ದರ ಫೌಜ ಸಮೇತ ಜನರಲ್ ಸಾಹೇಬರಂನು ಕರ ಕೊಂಡು ಬರುವ ಬಗ್ಯೆ, ಆ ಕಪ್ತಾನ್ ಸಾಹೇಬರಂನು ಪುನಹಾ ಲಷ್ಕರಿಗೆ ಕಳುಹಿ ಕೊಟ್ಟು, ಮಹಾರಾಜರವರು ಲಷ್ಕರಿಗೆ ಬೇಕಾದ ಸಾಮಾನು ಜಮಾಯಿಸುವ ಬಗ್ಯೆ, ಕೊಡಗಿನ ಶೀಮೆ ಒಳಗೆ ಟೀಪು ಸುಲ್ತಾನರು ನುಗ್ಗಿ, ಲೂಟಿಸಿ, ಹೆರಾನು[10] ಮಾಡಿ ಇದ್ದಾರೆ ಇಂಥಾ ಹೆರಾನು ಶೀಮೆಯಲ್ಲಿ ಯಾವ ಮೇರೆ ರಾಶೀಪಿನ ಸರಂಜಾಮು ಶಿಕ್ಕೀತು? ಯರಡನೇದು, ಅರಮನೆ ಜಕೀರವೆಂತು[11] ಕಂಡು ಇದೆ. ಯಾವತ್ತು ಒಡವೆ ವಸ್ತು ಹಣ ಕಾಸು ಮುಂತಾಗಿ ಟೀಪು ಸುಲ್ತಾನರ ಲೂಟಿಗೆ ಶಿಕ್ಕಿ ಹೋಯಿತು. ಮೂರನೇದು, ತಂಮ ಶೀಮೆ ಹೆರಾನಾದಾಗ್ಯೂ, ಸ್ನೇಹಿತರ ಶೀಮೆಯಿಂದ ತರಿಸಿ ಕೊ

---

1 Mr. Sandiford and Mr. Samuel Wilson. 2 ತಿರುಗಿ. 3 ಅಲ್ಲಿನ. 4 ಘಟ್ಟದ. 5 ತಾಲೂಕಿನ. 6 ಹೋಗುವದಕ್ಕೆ. 7 ಮಾಡಿದಂಥಾ. 8 Colonel Hartly. 9 Captain Rennell. 10 ಹೈರಣು. 11 ಜತೀರವೆಂತು.

ಟ್ಟೇವು ಯೆಂದರೆ, ಕೊಡಗಿನ ಶೀಮೆ ಸುತ್ತಾ ಇರುವ ಶೀಮೆ ಯಾವತ್ತು ಟೀಪು ಸುಲ್ತಾನರದು ಹೋಯಿತು, ವಟಬ ದ್ಯಾ
ಸ್ತರದು ಕಾಣುವದಿಲ್ಲಾ. ಆ ಕಡೆಯಿಂದ ಈ ಶೀಮೆಗೆ, ಈ ಕಡೆಯಿಂದ ಆ ಶೀಮೆಗೆ ವಟಬರು ಹೋಗಿ ಬರು
ವದಕ್ಕೆ ಇಲ್ಲಾ. ಈ ಮೂರು ವಿಧದಿಂದ ವಿಚಾರಿಸಿ ನ್ಯಾಯಿದಾಗ್ಯೂ, ಮೊಗಾ ಕ್ಯಾರಲಿಲ್ಲಾ. ಕಡೆಗೆ ಈಗ ಇಂ
ಗರೇಜ ಬಹಾದ್ದರ ಕುಂಪನಿ ಸರಕಾರವು, ನಂಮ ಸರಕಾರವು, ಸ್ನೇಹ ಮಿತ್ರತ್ವದಿಂದ ಸೂರ್ಯ ಚಂದ್ರ ಇರುವ
ಪರಿಯಂತರ ನಡದು ಬರುವ ಬಗ್ಗೆಯೆ, ಹೊಸ ಸೂತ್ರವಾಗಿ ಆಣೆ ಭಾಷೆಯಿಂದ ಕರಾರು ಆಗಿ ಇದೆ. ಇದಲ್ಲದೆ
ಇಂಗರೇಜ ಬಹಾದ್ದರ ಕುಂಪನಿ ಸರಕಾರದ ಜಯಪ್ರದದ ಲಷ್ಕರು ದೊಡ್ಡ ದುಷ್ಮಾನ್ ಟೀಪು ಸುಲ್ತಾನರ ಸಂ
ಗಡ ಲಡಾಯಿ ಮಾಡುವ ಬಗ್ಗೆಯೆ, ಇದ್ದೇ ಕೊಡಗಿನ ಶೀಮೆ ಮಾರ್ಗವಾಗಿ ಬರುತ್ತಾ ಇದೆ. ಇಂಥಾ ಸಮಯದಲ್ಲಿ ರಾ
ಶಿಮ ಮುಂತಾದ ಸರಂಜಾಮು ನಂಮಿಂದ ಆಗುವಷ್ಟು ಸಹಾಯ ಮಾಡದಿದ್ದರೆ, ಸ್ನೇಹಕ್ಕೆ ವಿಹಿತವಾಗಿ ಕಾಣದು
ಯೆಂತ ಗ್ರಹಿಸಿ, ಕೆಲವು ಬೇಹಿನ ಜನರಂನು ಟೀಪು ಸುಲ್ತಾನರ ಶೀಮೆ ವಳಗೆ ಕಳುಹಿಸಿ, ಗಾಡಿಗೆ ಆಗುವಂಥ ಯೆ
ತ್ತುಗಳು, ಸಾಮಾನು, ಸರಂಜಾಮು. ಮುಂತಾಗಿ ಇರುವಂಥ ಸ್ಥಳ ಗೊತ್ತು ಹತ್ತಿಸಿ, ಆ ಜಾಗಕ್ಕೆ ಲಡಾಯಿ ಮಾ
ಡುವಂಥ ಜನರಂನು ಆಯುಧಪಾಣಿ ಸಮೇತ ಕಳುಹಿಸಿ, ದುಷ್ಮಾನರ ಕಡೆ ಜನರ ಸಂಗಡ ಯುದ್ಧ ಮುಖದಲ್ಲಿ
ಪರಾಭ ವೆಚ್ಚ ಮಾಡಿಸಿ, ಕೆಲವು ಸಾಮಾನವು, ಸಾವಿರದ ಐನೂರು ಪರಿಯಂತರ ಯೆತ್ತುಗಳು ಸಹಾ ಸಂಪಾದಿಸಿ ತರಿ
ಸಿ, ಈ ವಿವರವಂನು ತಲಚ್ಚೇರಿಗೆ ರಾಬರ್ಟ್ ಟೇಲರು ಸಾಹೇಬರವರಿಗೆ ಕಾಗದ ಬರಸಿ[1] ಕಳುಹಿಸಲಾಗಿ, "ಆ ಸರಂಜಾಮು
ಯಾವತ್ತು, ದಂಡು ಇಲ್ಲಿಂದ ಕೊಡಗೆ ಬಂದ ಮೇಲೆ ಕೊಡಿಸ ಬೇಕು. ಈಗಲೆ ಲಷ್ಕರು ಕೂಡಾಗಿ ಬರುತ್ತದೆ. ಗಾ
ಡಿ ಯಳೆಯುವ ಬಗ್ಗೆಯ ಯೆತ್ತುಗಳು ಅಗತ್ಯ ಬೇಕಾಗಿ ಇರುವದರಿಂದ, ಆ ಯೆತ್ತುಗಳ ತರುವ ಬಗ್ಗೆಯ ಕೆಲವು
ಜನರಂನು ಕಳುಹಿಸಿ ಇದ್ದೇವೆ. ಅವರ ಕೈಯಲ್ಲಿ ಕೊಟ್ಟು ಕಳುಹಿಸ ಬೇಕು" ಯೆಂಬದಾಗಿ, ಜವಾಬು ಬರದು ಕಳುಹಿ
ದರಿಂದ, ಅದ್ದೇ ಮೇರೆ ಮಹಾರಾಜರು ವಳಳೆ ಗಟ್ಟಿ[2] ತರವಾದ ಸಾವಿರದ ನೂರ ಹಂನೊಂದು ಯೆತ್ತು ಆದು,
ಆ ಮನುಷ್ಯರ ವಶಕ್ಕೆ ಕೊಟ್ಟು, ತಲಚ್ಚೇರಿ ಇಂಗರೇಜ ಕುಂಪನಿ ಸರಕಾರಕ್ಕೆ ಕಳುಹಿಸಿ ಕೊಟ್ಟರು. ಯಿಳಿಕೆ ರಾಶಿಪಿ
ನ ಸರಂಜಾಮು ಲಷ್ಕರಿಗೆ ಕೊಡುವ ಬಗ್ಗೆಯೆ, ಹೊರಯತ್ತ ಬಟ್ಟು[3] ಜಮಾಯಿಸುತ್ತಾ ಇದ್ದರು.

ಅಷ್ಟರಲ್ಲಿ ಮಡಕೇರಿ ಕ್ಯಾಟೆಯಲ್ಲಿ ಇದ್ದ ಮಂದಿಗೆ ರಸದು ತೀರಿ ಹೋಗಿ, ಲಟಾರಾಗಿ, ತಂಮ ತಂಮ
ವಡವೆ ಸಹಿತ ಪರಾರಿದಿಂದ ಬಿಟ್ಟು ಕೊಟ್ಟರೆ, ಹೋದ್ಯೇವು ಯೆಂಬದಾಗಿ, ಜಾಹರಕುಲ್ಲಿ ಬೇಗು ಕಿಲ್ಲೇದಾರನ
ಸಂಗಡ ಹೇಳಿದ್ದರಿಂದ, ಆ ಕಿಲ್ಲೇದಾರನು ನಾಲ್ಕು ಜನವಂನೂ, ವಂದು ಬಿಳಿ ಬಾವುಟ ಸಹಾ, ಸಲ್ಲಾ ಮಾಡುವ
ಬಗ್ಗೆಯ ನಾಲ್ಕುನಾಡ ಅರಮನೆಗೆ ದೊರೆಗಳ ಬಳಿಗೆ ಕಳುಹಿದಲ್ಲಿ, ಈ ವಿವರವಂನು ಕೇಳಿ, ರಾಜರು ಅಲ್ಲಿಂದ ಹೊ
ರಟು ಬಂದು, ಮಡಕೇರಿ ಹಳೇ ಕ್ಯಾಟೆಯಲ್ಲು ಇಳುಕೊಂಡು, ಆ ಕಿಲ್ಲೇದಾರರಂನು ತಂಮ ಬಳಿಗೆ ಕರೆಸಿ, ಕ್ಯಾಟೆ ವಳ
ಗೆ ಇರುವಂತಾದ್ದೂ ಟೀಪು ಸುಲ್ತಾನರ ಸರಕಾರದ ಸಾಮಾನು ಸರಂಜಾಮು ಯಾವತ್ತೂ ವಂಚಿಸದೆ, ನಂಮ ಸರಕಾರಕ್ಕೆ
ವಪ್ಪಿಸಿ, ನೀನು, ನಿಂನ ಮಂದಿ ಸಹಾ, ನಿಂಮ ನಿಂಮ ಮನೆವಾತೀ ವಡವೆ ಯೇನು ಇದ್ದಾಗ್ಯೂ, ತೆಗದು ಕೊಂಡು
ಹೋಗಿ ಯೆಂಬದಾಗಿ, ಅಪ್ಪಣೆ ಕೊಟ್ಟಲ್ಲಿ, ಆ ಕಿಲ್ಲೇದಾರನು ವಪ್ಪಿ ಕೊಂಡು, ಐನೂರು ಜನ ಕೊಡಗರಂನು ಕರ
ದು ಕೊಂಡು ಹೋಗಿ, ಆ ಕ್ಯಾಟೆ ವಳಗೆ ಇದ್ದ ತಂನ ಠಾಣೆಯದ ಮಂದಿಯಂನು ಹೊರಗೆ ಇಳಿಸಿ, ಅದರ ಬದಲಿಗೆ
ಆ ಕೊಡಗ ಮಂದಿಯಂನು ನಿಲ್ಲಿಸಿ, ವೀರರಾಜೇಂದ್ರ ವಡೆಯರವರ ಕಡೆ ಜಾಂಡೆ ಕ್ಯಾಟೆ ಮೇಲೆ ನಿಲ್ಲಿಸಿ, ಆ ಕ್ಯಾ
ಟೆ ಬಾಗಿಲ ಬೀಗ ಮುದ್ರೆಯಂನು, ಕಜಾನೆ,[4] ಫಿರಂಗಿ, ಮದ್ದು, ಗುಂಡು ಮುಂತಾದ ಟೀಪು ಸುಲ್ತಾನರ ಸರಕಾರದ
ಸಾಮಾನು ಇದ್ದದ್ದು ಯಾವತ್ತು ದೊರೆಗಳಿಗೆ ವಪ್ಪಿಸಿದನು. ಆ ಮಾರನೆ ದಿವಸ ಬೆಳಿಗ್ಗೆಯೆ ರಾಜರ ಖಾಸ ಸ್ವಾ
ಯಿ ಆ ಕ್ಯಾಟೆಗೆ ಹೋಗುವಾಗ್ಯೆ, ಮಾರ್ಗದಲ್ಲಿ ಟೀಪು ಸುಲ್ತಾನರ ಕಡೆ ಠಾಣೆಯದ ಮಂದಿ ಯಾವತ್ತು ಬ
ಹಳ ದೀನ್ಯೋಕ್ತಿಯಿಂದ: "ನಮಗೆ ಮೂರು ತಿಂಗಳಿಂದ ಟೀಪು ಸುಲ್ತಾನರ ಸರಕಾರದಿಂದ ಸಂಬಳ ಸಿಕ್ಕಲಿಲ್ಲಾ. ನಂ
ಮ ಕುಟುಂಬ ಮಕ್ಕಳು ಯಾವತ್ತು, ಖರ್ಚಿಗೆ ಇಲ್ಲದೆ, ಹೈರಾನು ಆಗುತ್ತದೆ. ತಂಮ ಸಂನಿಧಾನದಿಂದ ಖರ್ಚಿಗೆ
ಕೊಟ್ಟು ರಕ್ಷಣೆಯ ಮಾಡ ಬೇಕು" ಯೆಂಬದಾಗಿ, ಅರಿಕೆ ಮಾಡಿ ಕೊಂಡದರಿಂದ, "ನಿಂಮ ಕಿಲ್ಲೇದಾರನಂನು ಕಳುಹಿ
ದರೆ, ನಿಂಮ ಖರ್ಚಿನ ಬಗ್ಗೆಯೆ ಹಣ ಕೊಡಿಸ ಬಹುದು" ಯೆಂಬದಾಗಿ, ಅಪ್ಪಣೆ ಕೊಟ್ಟು, ಕೊಡಗಿನ ಸಂಸ್ಥಾನದ

[1]ಬರಸಿ. [2]ಪಟಟಿ. [3]ಪಟಟು. [4]ಖಜಾನೆ.

ಹುಕುಮತ್ತಿನ ಜಾಗವಾದ ಆ ಕ್ವಾಟೆ ವಳಗೆ ಹೋಗಿ, ಆ ಕಿಲ್ಲೇದಾರನ ಸಂಗಡ: "ನಿಂನ ಕಡೆ ಮಂದಿ ಖರ್ಚಿಗೆ ಇಲ್ಲದೆ ಕಷ್ಟ ಬಡುತ್ತಾರೆ;[1] ಅದರಿಂದ ವಂದು ಸಾವಿರ ವರಹವಂನು ಇನಾಮು ಆಗಿ ಕೊಡುತ್ತೇವೆ. ಅದಂನು ಹಂಚಿ ಕೊಡು. ಇದಲ್ಲದೆ ನಿಂಮ ಸಂಗಡ ಮೆಹಗಾವಲಿಗೆ ಕೊಡಗಿನ ಸರಹದ್ದು ಮುಳ್ಳು ಹಾಗೆ ಹೊಳೆ ಪರಿಯಂತರ ಕೆಲವು ಮಂದಿಯಂನು ಕೊಡುತ್ತೇವೆ" ಯಂಬದಾಗ, ಅಪ್ಪಣೆ ಕೊಟ್ಟು, ಅದೇ ಮೇರೆ ವಂದು ಸಾವಿರ ವರಹವಂನು ಆ ಕಿಲ್ಲೇದಾರನ ಕೈಯ ಕೊಟ್ಟಲ್ಲಿ, ಅವನು ಆ ಜನಕ್ಕೆ ಹಂಚಿ ಕೊಟ್ಟು, ರಾಜರ ಸಂನಿಧಾನದಿಂದ ಅಪ್ಪಣೆ ತೆಗದು ಕೊಂಡು, ಮೆಹಗಾವಲಿನ ಮಂದಿ ಸಹಾ ಕೂಡಿ ಕೊಂಡು, ಪಟ್ಟಣಕ್ಕೆ ಹೋದನು. ಆ ಬಳಿಕ ಮಹಾರಾಜರು ಆ ಕ್ವಾಟೆ ಬಂದುಬಸ್ತು ಮಾಡಿಸಿ ಕೊಂಡು, ನಾಲ್ಕುನಾಡ ಅರಮನೆಯಲ್ಲು ಇರುತ್ತಾ ಇದ್ದರು.

ಇತ್ತಲಾಗಿ ಮೇಜರ್ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರು ಫೌಜ ಸಮೇತ ಬಂದು, ಹೆಗ್ಗಳದ ಗಟ್ಟದ ಮೈದಾನದಲ್ಲು ಇಳುಕೊಂಡು, "ನಾವು ನಂಮ ದಂಡು ಸಮೇತ ನಿಂಮ ಕೊಡಗಿನ ಶೀಮೆಗೆ ಬಂದು ಇಳಿದು ಇದ್ದೇವೆ. ತಂಮ ಭೇಟಿ ಆಗ ಬೇಕೆಂಬ ಅಪೇಕ್ಷೆ ಇದೆ" ಯಂಬದಾಗಿ, ಕಾಗದ ಬರದು ಕಳುಹಿದ್ದರಿಂದ, ಮಹಾರಾಜರು ಅರಮನೆಯಿಂದ ಹೊರಟು, ಆ ದಂಡಿಗೆ ಹೋಗಿ, ಆ ಜನರಾಲ್ ಸಾಹೇಬರವರ ಮುಲಾಖತು ಆಗಿ ಸಂತೋಷ ಪಟ್ಟು, ದಂಡಿಗೆ ಬೇಕಾದ ಸಾಮಾನು ತಂಮಲ್ಲಿ ಕೂಡಿ ಇದ್ದಂಥಾದಂನು ಕೊಡಿಸಿ, ಮತ್ತೂ ಸಾಮಾನು ಸರಂಜಾಮು ಟೀಪು ಸುಲ್ತಾನರ ಶೀಮೆಯಿಂದ ತರಿಸಿ, ದಂಡಿಗೆ ಕೊಡಿಸುತ್ತಾ ಇದ್ದರು. ಹೀಗೆ ಇರುತ್ತ ಇದ್ದಲ್ಲಿ ಮದುರಾಜಿಯಿಂದ[2] ಜನರಾಲ್ ಮೆಂಡೂಸ್[3] ಸಾಹೇಬ್ ಬಹಾದ್ದರವರು ಫೌಜ ಸಮೇತ ಶ್ರೀರಂಗಪಟ್ಟಣದ ಕ್ವಾಟೆ ತೆಗದು ಕೊಳ್ಳ ಬೇಕೆಂಬದಾಗಿ ಹೊರಟು, ದಿಂಡುಗಲ್ಲು[4] ಮಾರ್ಗವಾಗಿ ಬಂದು, ಕೊಯಮುತ್ತೂರಲ್ಲು[5] ಇಳುಕೊಂಡರು. ಈ ಸಮಾಚಾರ ಟೀಪು ಸುಲ್ತಾನರು ಕೇಳಿ, ತಂಮ ದಂಡು ತೆಗದು ಕೊಂಡು, ಪಟ್ಟಣದಿಂದ ಹೊರಟು, ಸತ್ಯಮಂಗಲಕ್ಕೆ ಬಂದು, ಮೆಂಡೂಸ್ ಸಾಹೇಬ್ ಬಹಾದ್ದರವರ ಸಂಗಡ ಲಡಾಯಿಯಾದಲ್ಲಿ, ಅದೇ ಲಡಾಯಿದಲ್ಲಿ ಟೀಪು ಸುಲ್ತಾನರ ಖಾಸಮೈದುನನಾದ ಬುರಾನುದ್ದೀನರು ಬಿದ್ದು ಹೋದರು. ಕಡೆಗೆ ಟೀಪು ಸುಲ್ತಾನರ ದಂಡು ಇಂಗ್ರೇಜ ಬಹಾದ್ದರ ಫೌಜಿನ ಸಂಗಡ ಮೋಕ[6] ಸಂಧಿಸಿ ಜಗಳ ಮಾಡಲಾರದೆ, ಮುಂದೆ ಗಿಡ ಗುಡ್ಡಗಳ ಆಶ್ರಯದಿಂದ ಇಂಗ್ರೇಜ ಬಹಾದ್ದರರ ಫೌಜಿಗೆ ರಸದು ಬರುವಂಥಾ ಮಾರ್ಗಗಳ ಕಟ್ಟಿ, ಇಂಥಾ ಯೋಗ್ಯ ಅಲ್ಲದ ಅಡ್ಡಿ ಹರಕತ್ತು ಮಾಡುವದಕ್ಕೆ ಪ್ರಾರಂಭಿಸಿದರು.

ಅಷ್ಟರಲ್ಲಿ ಬಂಗಾಳದ ಲಾರ್ಡ್ ಕಾರ್ನ್‌ವಾಲಿಸ್[7] ಸಾಹೇಬ ಬಹಾದ್ದರವರು ಖಾಸಿ ಫೌಜ ಸಮೇತ ಮದುರಾಜಿನ ಕಡೆಗೆ ಬಂದು ಇಳದರು.[8] ಈ ಗಾಬರಿ ಆಗುವಂಥಾ ಸಮಾಚಾರ ಟೀಪು ಸುಲ್ತಾನರು ಕೇಳಿ, ಕರಿಷ್ಣಾಗಿರಿ ಗಟ್ಟಾ ಇಳಿದು, ಅರಕಾಟ[9] ಶೀಮೆಗೆ ಹೋದರು. ಇವರ ಬೆಂನ ಹಿಂದೆ ಜನರಾಲ್ ಮೆಂಡೂಸ್ ಸಾಹೇಬ್ ಬಹಾದ್ದರವರು ಫೌಜ ಸಮೇತ ಇದೇ ಗಟ್ಟಾ ಇಳಿದು, ಬಂಗಾಳದ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ್ ಬಹಾದ್ದರವರ ಫೌಜಿನ ಸಂಗಡ ಕೂಡಿ, ವಟ್ಟಾಗಿ ಗಟ್ಟಾ ಹತ್ತಿ ಬಂದು, ಬೆಂಗಳೂರ[10] ಮೊಕಾಮಿನಲ್ಲಿ ಇಳುಕೊಂಡರು. ಟೀಪು ಸುಲ್ತಾನರು ತಂಮ ಫೌಜ ಸಮೇತ ಬಂದು, ಅದೇ ಬೆಂಗಳೂರಲ್ಲಿ ವಂದು ಕಡೆ ಇಳುಕೊಂಡರು. ಆ ಬಳಿಕ ಇಂಗ್ರೇಜಿ ಬಹಾದ್ದರವರ ಫೌಜ ಮೋರ್ಚೆ ಹಾಕಿ, ಫಿರಂಗಿ ಯೇರಿಸಿ, ಆ ಬೆಂಗಳೂರ ಕ್ವಾಟೆಯಂನು ಫಿರಂಗಿ ಗುಂಡಿನಿಂದ ಕೆಡವಿ, ಯೇಳು ದಿವಸದಲ್ಲಿ ಹಲ್ಲಾ ಹತ್ತಿ, ಆ ಕ್ವಾಟೆಯಂನು ತಂಮ ಕೈವಶ ಮಾಡಿ ಕೊಂಡರು. ಟೀಪು ಸುಲ್ತಾರು ಯಲ್ಲಾ ಬಗೆಯಲ್ಲು ಲಾಚಾರಾಗಿ, ಮತ್ತು ಮುಂಬಾಯಿ ಲಷ್ಕರು ಕೊಡಗಿನ ಮಾರ್ಗವಾಗಿ ಬರುವದ[11] ಕೇಳಿ, ತಂಮ ಫೌಜ ತೆಗದು ಕೊಂಡು, ಇಂಗ್ರೇಜಿ ಬಹಾದ್ದರವರ ಫೌಜ ಬರುವದಕ್ಕಿಂತ ಮುಂದಾಗಿ, ಶ್ರೀರಂಗಪಟ್ಟಣಕ್ಕೆ ಬಂದು,[12] ಹಿರಿಯಾಪಟ್ಟಣಕ್ಕೆ ತಂಮ ಕಡೆ ಹಬೀಬ ಸರದಾರನ, ಕೆಲ ಫೌಜ ಸಹಾ, ಕಳುಹಿಸಿ, ಅದರ ವಳಗೆ ಇರುವಂಥ ಜನವಂನು ಹೊರಡಿಸಿ, ಆ ಕ್ವಾಟೆ ಪಾಯಗಳಲ್ಲು ಸುರಂಗವಂನು ತೆಗಸುತ್ತಾ ಇದ್ದರು. ಟೀಪು ಸುಲ್ತಾನರು ಪಟ್ಟಣದ ಕ್ವಾಟೆ ಮುಂದೆ, ಯರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ, ಆ ಬತ್ತೇರಿಗಳ ವಳಗೆ ತಂಮ ಫೌಜಂನು ನಿಲ್ಲಿಸಿ ಕೊಂಡು ಇದ್ದರು. ಅಷ್ಟರಲ್ಲಿ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ್ ಬಹಾದ್ದರವರು, ಜನರಾಲ್ ಮೆಂಡೂಸ್ ಸಾಹೇಬ್ ಬಹಾದ್ದರವರು ಸಹಾ, ಫೌಜ ಸಮೇತ ಪಟ್ಟಣಕ್ಕೆ ತಲಪಿದರು. ಕೊಡಗಿನ ಕಡೆಯಿಂದ ಗೌನರ ಮೇಜರ ಜನರಾಲ್

1 ಪಡುತ್ತಾರೆ. 2 Madras. 3 Meadows. 4 Dindigul. 5 Coimbatoor. 6 ಮುಖ. 7 Lord Cornwallis. 8 ಇಳಿದರು. 9 Arcot. 10 Bangalore. 11 ಬರುವದನ್ನು. 12 Seringapatam.

ರಾಬರ್ಟ್ ಆಬರ್ಕರಂಬಿ[1] ಸಾಹೇಬ ಬಹಾದ್ದರವರು, ಕೊಡಗಿನ ರಾಜರು ಸಹಾ ಕೂಡಿ, ಮುಂಬಾಯಿ ಫೌಜ ಸಮೇತ ಹೊಟಾಗ, ಮುತ್ತೂರ ಗ್ರಾಮದ ಸಮೀಪಕ್ಕೆ ತಲಪಿದರು. ಅಷ್ಟರಲ್ಲಿ ಪೆರಿಯಾಪಟ್ಟಣದ ಕ್ಯಾತೆಯಲ್ಲಿ ಸುರಂಗ ತೆಗೆಸುತ್ತಾ ಇದ್ದ ಟೀಪು ಸುಲ್ತಾನರ ಕಡೆ ಜನರು, ಇಂಗ್ರೇಜ ಬಹಾದ್ದರರ ಲಷ್ಕರು ಇಲ್ಲಿಗೆ ಬಂದರೆ, ಪೆರಿಯಾಪಟ್ಟಣದ ಕ್ಯಾತೆ ತೆಗದು ಕೊಂಡಾರು, ಯೆಂಬದಾಗಿ ತಿಳಿದು, ಶೀಗ್ರದಲ್ಲಿ[2] ಸುರಂಗಗಳ ವಳಗೆ ಮದ್ದು ತುಂಬಿ, ಬೆಂಕಿ ಹಾಕಿ, ಕ್ಯಾತೆಯನ್ನು ಕೆಡವಿ ಬಿಟ್ಟು, ಆ ಸರದಾರನು ತನ್ನ ಮಂದಿ ತೆಗದು ಕೊಂಡು, ಶ್ರೀರಂಗಪಟ್ಟಣಕ್ಕೆ ಹೋದನು.

ಆ ಬಳಿಕ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರು ಯೆರಡು ಪಟಾಲಂ ಪೆರಿಯಾಪಟ್ಟಣದ ಕ್ಯಾತೆ ವಳಗೆ ಇಟ್ಟು, ಉಳಿಕೆ ಫೌಜ ಸಮೇತ ಪೆರಿಯಾಪಟ್ಟಣದ ಹಾಳೆ ಕ್ಯಾತೆ ಸಮೀಪದಲ್ಲು ಇಳುಕೊಂಡರು.

ಟೀಪು ಸುಲ್ತಾನರು ತಂಮ ಮಂದಿ ತೆಗದು ಕೊಂಡು ಹೋಗ್ಯಾಗ, ಇಂಗ್ರೇಜ ಬಹಾದ್ದರವರ ಫೌಜಿನ ಸಂಗಡ ಕರಿಗಟ್ಟದ ಬಳಿಯ ಲಡಾಯಿ ಮಾಡಿದಲ್ಲಿ, ಇಂಗ್ರೇಜಿಯವರ ಫೌಜ ಟೀಪು ಸುಲ್ತಾನರ ಫೌಜಿನ ಮೇಲೆ ಬಲಾಢ್ಯರಾಗಿ, ಟೀಪು ಸುಲ್ತಾನರ ಫೌಜನ್ನು ನಿಗ್ರಹಿಸಿದರು. ಕಡೆಗೆ ಟೀಪು ಸುಲ್ತಾನರ ಫೌಜ ವ್ಯಾಡಿ ಹೋಗ್ಯಾಗ, ಕಾವೇರಿ ಯೆರಡು ಹೊಳೆ ಮಧ್ಯ, ಕ್ಯಾತೆ ಬತ್ತೇರಿ ವಳಗೆ ಬಂದು, ಕ್ಯಾತೆ ಆಶ್ರಯದ ವಳಗೆ ಇಳುಕೊಂಡರು. ಆ ಬಳಿಕ ಇಂಗ್ರೇಜಿ ಬಹಾದ್ದರವರ ಫೌಜ ವಂದು ರಾತ್ರೆ ಕರಿಗಟ್ಟದ ಬೆಟ್ಟದ ಬಳಿಯ ಇಳದು ಇದ್ದು, ಅಲ್ಲಿಂದ ಹೊರಟು, ಫ್ರೆಂಚರಾಕ ಬೆಟ್ಟದ[3] ಸಮೀಪದಲ್ಲಿ, ಕೊಡಗಿನ ಕಡೆಯಿಂದ ಕುಂಮಕ್ಕಾಗ[4] ಪೆರಿಯಾಪಟ್ಟಣಕ್ಕೆ ಬಂದು ಇರುವ ಮುಂಬಾಯಿ ಫೌಜಿನ ದಾರಿ ನ್ಯಾಡುತಾ ಮೂರು ದಿವಸ ಅಲ್ಲಿ ಮೊಕಾಂ ಮಾಡಿ ಇದ್ದರು.

ಆ ಬಳಿಕ ಮಳೆಗಾಲ ಸಮೀಪವಾದ್ದರಿಂದ, ಲಾರ್ಡ ಕಾರ್ನವಾಲೀಸ ಸಾಹೇಬ ಬಹಾದ್ದರವರ ಫೌಜ ಅಲ್ಲಿಂದ ಹೊರಟು, ಬೆಂಗಳೂರಿಗೆ ಹೋದರು.[5] ಮೇಜರ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರು ಕೊಡಗಿನ ಮಹಾರಾಜರು ಸಹಾ, ಸಂಗಡ ಇರುವ ಫೌಜ ಸಮೇತ, ಪೆರಿಯಾಪಟ್ಟಣದಿಂದ ಹೊರಟು ಬಂದು, ಹೆಗ್ಗಳದ ಗಟ್ಟದಲ್ಲು ಇಳುಕೊಂಡು, ಆ ಬಳಿಕ ಆ ಜನರಾಲ್ ಸಾಹೇಬರು ದೊರೆಗಳ ಸಂಗಡ ಹೇಳಿದ್ದು: "ನಾವು ಇಲ್ಲಿಂದ ತಲಚೇರಿಗೆ ಹೋಗಿ, ಇಂಗ್ರೇಜ ಬಹಾದ್ದರ ಸರಕಾರದ ಫೌಜ ಯಾವತ್ತೂ ಅಲ್ಲಿ ಮಡಗಿ, ಮುಂಬಾಯಿಗೆ ಹೋಗುತ್ತೇವೆ. ಆ ಬಳಿಕ ಅವಲ್ ಮೊಸುಂಮಿಗೆ ಪುನಃ ಮುಂಬಾಯಿಂದ ಈ ಕಡೆಗೆ ಬರುತ್ತೇವೆ. ಈಗ ಕೆಲವು ಜಂಗಿ ಸಾಮಾನು, ಫಿರಂಗಿ, ಗುಂಡು, ಮದ್ದು ತಂಮ ಕೋಟೆಗೆ ಕೊಡುತ್ತೇವೆ. ಆರು ತಿಂಗಳು ಪರಿಯಂತರ ತಾವು ನಾಲಕು ಕಡೆಯಿಂದ ರಸದಿನ ಸಾಮಾನು ಮುಂತಾಗಿ ಹೇರಳವಾಗಿ ಪರಿಯತ್ನದಿಂದ ತರಿಸಿ, ಜಮಾಯಿಸ ಬೇಕು. ಇದಲ್ಲದೆ ಕೆಲವು ರೀತಿ ವರ್ತಕರು ರಸದಿನ ಸಾಮಾನು ವಗೈರೆ ಟೀಪು ಸುಲ್ತಾನರ ದಂಡಿಗೆ ಸಾಗಿಸುತ್ತಾರೆ; ಅವರಿಗೆ ಕವುಲು ಕರಾರಿನಿಂದ ಈ ಕಡೆಗೆ ತಿರಿಗಿಸಿ ಕೊಂಡು, ಅವರು ಟೀಪು ಸುಲ್ತಾನರ ದಂಡಿನಲ್ಲಿ ಜಿನಿಸು ಮಾರುವ ಕ್ರಯಕ್ಕಿಂತಲು ಹೆಚ್ಚು ಕ್ರಯ ಕೊಡಿಸಿ, ರಸದಿನ ಸಾಮಾನು ಜಮಾಯಿಸ ಬೇಕು. ಈ ಬಗ್ಗೆಯೆ ಬೇಕಾದಷ್ಟು ದ್ರವ್ಯ ಕುಂಪನಿ ಸರಕಾರದಿಂದ ಕೊಡಿಸುತ್ತೇವೆ." ಯೆಂಬದಾಗಿ ಹೇಳಿದಲ್ಲಿ, ಆ ಮಾತಿಗೆ ರಾಜರು ಹೇಳಿದ್ದು: "ಈಗ ತಾವು ರಸದಿನ ಸಾಮಾನದ ಕ್ರಯಕ್ಕೆ ಹಣ ಕೊಡ ಕೆಲಸವಿಲ್ಲ; ತಾವು ಹೇಳಿದ ಪ್ರಕಾರ ಟೀಪು ಸುಲ್ತಾನರ ದಂಡಿಗೆ ರಸದು ಸಾಮಾನು ತಲಪಿಸುವಂಥಾ ರೀತಿ ವರ್ತಕರನ್ನು ಈ ಕಡೆಗೆ ಮಾಡಿ ಕೊಂಡು, ಕ್ರಯ ಮೂಲವಾಗಿ ತಿಕ್ಕಿದಷ್ಟು ಸಾಮಾನಿಗೆ ಕ್ರಯವನ್ನು ನಂಮ ಕೈಯಿಂದ ಕೊಟ್ಟು, ಆ ಸಾಮಾನ ಜಮಾಯಿಸುತ್ತೇವೆ. ಸಾಮಾನದ ಕ್ರಯಕ್ಕೆ ನಂಮಲ್ಲಿರುವ ಹಣ ಸಾಲದೆ ಹೋದರೆ, ತಮಗೆ ಕಾಗದ ಬರಸಿ ಕಳುಹಿ, ಸಾಮಾನದ ಕ್ರಯದ ಬಗ್ಗೆಯೆ ಹಣ ತರಿಸಿ ಕೊಂಡು, ಸಾಮಾನು ರಸದು ಜಮಾಯಿಸಿ ಮಡಗ್ಯೇವು." ಯೆಂತ ಹೇಳಿದರು.

ಆ ಬಳಿಕ ಆ ಜನರಾಲ್ ಸಾಹೇಬರು ಕೆಲು ಫಿರಂಗಿ, ಮದ್ದು, ಗುಂಡು, ದವಸ, ಧಾನ್ಯ ಮುಂತಾದ ಸಾಮಾನವನ್ನು ಬ್ಯಾಪಾಸದಲ್ಲು ಇಡಿಸ ತಕ್ಕ ಬಗ್ಗೆಯೆ,[6] ವೀರರಾಜೇಂದ್ರ ವಡೆಯರವರ ವಶಕ್ಕೆ ಕೊಟ್ಟು, ಆ ಜನರಾಲ್ ಸಾಹೇಬರು ಫೌಜ ಸಮೇತ ಕಲಿ ಸಂದ ೪೮೯೨ನೆ ವಿರೋಧಿಕೃತು ಸಂವತ್ಸರದ ಜ್ಯೇಷ್ಟ ಮಾಸದಲ್ಲು ಗಟ್ಟ ಇಳಿದು, ತಲಚೇರಿಗೆ ಹೋಗಿ, ಫೌಜ ಯಾವತ್ತು ಅಲ್ಲಿ ಬಿಟ್ಟು, ತಾವು ಮುಂಬಾಯಿಗೆ ಹೋದರು.

1 Governor, Major General Sir Robert Abercromby. 2 ಶೀಘ್ರದಲ್ಲಿ. 3 French Rocks. 4 ಕುಮ್ಮಕ್ಕಾಗಿ. 5 ಹೋಯಿತು. 6 ಇಡುವ ಹಾಗೆ.

ರಾಜರು ಆ ಬಗೆ ಅನಾಮತ್ತು ಸಾಮಾನು ಯಾವತ್ತನ್ನು ಜ್ಯೋಪಾನದಲ್ಲಿ ಮಡಗಿಸಿ, ನಾಲ್ಕುನಾಡ ಅರಮನೆಗೆ ಬಂದು, ತಮ್ಮ ಕೊಡಗಿನ ಸೀಮೆಯಲ್ಲಿ ಸಿಕ್ಕಿದಂಥಾ ಕೆಲವು ಸಾಮಾನವನ್ನು ಕ್ರಯ ಕೊಟ್ಟು ತರಿಸಿ, ಜಮಾಯಿಸುತ್ತಾ, ಇದಲ್ಲದೆ ಟೀಪು ಸುಲ್ತಾನರ ದಂಡಿಗೆ ರಸದು ತಲಪಿಸುತ್ತಾ ಇದ್ದಂಥಾ ರೈಚಿಗೆಲ್ಲಾ ಭಾರವನ್ನ ಕೊಟ್ಟು, ತಮ್ಮ ಕಡೆಗೆ ತಿರುಗಿಸಿ ಕೊಂಡು, ಅವರು ಹೇಳಿದ ಮೇರೆ ಕ್ರಯ ಕೊಡಿಸಿ, ಆ ಬಗೆ ಸಾಮಾನು ಸರಂಜಾಮು ಅವರಿಂದ ತರಿಸಿ, ಜಮಾಯಿಸುತ್ತಾ, ಈ ಕಡೆ ಸಿಕ್ಕದಂಥಾ ಸಾಮಾನವನ್ನು ಟೀಪು ಸುಲ್ತಾನರ ಸೀಮೆಗೆ ಕೊಡಗ ಮಂದಿಯನ್ನು ಕಳುಹಿ, ಯುದ್ಧ ಮುಖದಲ್ಲಿ[1] ಪರಾಕ್ರಮತನದಿಂದ ತರಿಸುತ್ತಾ, ಮಳೆಗಾಲ ಆರು ತಿಂಗಳು ಪರಿಯಂತರ ಈ ಮೂರು ವಿಧದಿಂದ ಸಾಮಾನು ತರಿಸುವ ಬಗ್ಗೆಯ ಪ್ರಯತ್ನ ಬಟ್ಟು[2] ಜಮಾಯಿಸುತ್ತಾ ಇದ್ದರು.

ಆ ಬಳಿಕ ಮಾರ್ಗಶಿರ ಮಾಸದಲ್ಲಿ ಮೇಜರ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ್ ಬಹಾದ್ದರವರು, ಜಂಗೀ ಸಾಮಾನು ಸರಂಜಾಮು ವಗೈರೆ ಸಾಗಿಸಿ ಕೊಂಡು, ಮುಂಬಾಯಿಂದ ತಲಚ್ಚೇರಿಗೆ ಬಂದು, ಅಲ್ಲಿಂದ ಲಷ್ಕರು ಸಮೇತ ಬಂದು, ಹರಾಕು ಇಳಿದು ಇದ್ದ ಹೆಗ್ಗಳದ ಗಟ್ಟದ ಮೇಲೆ ಇಳುಕೊಂಡು, ಆ ವಿವರವನ್ನು ವೀರರಾಜೇಂದ್ರ ಒಡೆಯರವರಿಗೆ ಬರಸಿ ಕಳುಹಿ ತಿಳಿಸಿದಲ್ಲಿ, ರಾಜರು ಹೋಗಿ, ಆ ಜನರಾಲ್ ಸಾಹೇಬರ ಕಂಡು, ಕ್ಷೇಮ ಲಾಗಿ ಸಂತೋಷ ಬಟ್ಟು, ಮೊದಲು ಅನಾಮತ್ತಾಗಿ ಹಾರೆಗಳ ವಶದಲ್ಲಿ ಇಟ್ಟು ಇದ್ದಂಥಾ ಜಂಗೀ ಸಾಮಾನು ಫಿರಂಗಿ ಮುಂತಾದ್ದನ್ನು ಮನಹಾ ಅವರಿಗೆ ಕೊಟ್ಟಲ್ಲಿ, ಅವರು: "ಎರಡು ತಿಂಗಳು ತನಕ ಮೊಕಾಂ ಮಾಡುತ್ತಾ ಇದ್ದೇವೆ. ಲಷ್ಕರಿನ ಖರ್ಚಿನ ಬಗ್ಗೆಯ ತಮ್ಮ ಕಡೆಯಿಂದ ಐದು ಲಕ್ಷ ಡಂಗಾಳಿ ಅಕ್ಕಿ ಕೊಡಿಸ ಬೇಕು" ಎಂಬುದಾಗಿ, ಹೇಳಿದಲ್ಲಿ, "ಯೇನಾ ಬಗೆಯಿಂದಾದರೂ ನಾಲ್ಕು ಕಡೆಯಿಂದ ತರಿಸಿ ಕೊಡಿಸುತ್ತೇವೆ" ಎಂಬದಾಗಿ, ಮಹಾರಾಜರು ಹೇಳಿ, ಅದೇ ಮೇರೆ ನಾಲ್ಕು ಕಡೆ ಸೀಮೆಯಿಂದ ಆಡು, ಕುರಿ ಮುಂತಾದ ರಾತ್ರಿಬಿನ ಸಾಮಾನು ಹೇರಳವಾಗಿ ತರಿಸಿ, ಆ ಲಷ್ಕರಿಗೆ ಕೊಡಿಸುತ್ತಾ, ಐದು ಲಕ್ಷ ಡಂಗಾಳಿ ಅಕ್ಕಿಯನ್ನು ಅವರಿಗೆ ಬೇಕಾದ ಹೊತ್ತಿಗೆ ಕೊಡುವ ಬಗ್ಗೆಯ ಅಳಿಸಿ, ಜ್ಯೋಪಾನದಲ್ಲು ಮಡಗಿಸಿ, ಈ ಮೇರೆ ಇರುತ್ತಿದ್ದಲ್ಲಿ, ಟೀಪು ಸುಲ್ತಾನರು ಖಾದರಖಾನ ಕೇಸಗಿ ಸಂಗಡ ಹೇಳಿದ್ದು: "ನಿನ್ನ ಮೇಲೆ ಕೊಡಗಿನ ರಾಜರ ಬಹಳ ಮೊಹಬ್ಬತಿನಾಗಿ ಇದೆ. ಮೊದಲು ನೀನು ಅವರ ಕೈಗೆ ಸಿಕ್ಕಿ ಇದ್ದಾಗ್ಯೆ, ಪ್ರಾಣ ಉಳಿಸಿ, ನಿನ್ನನ್ನು ಈ ಕಡೆಗೆ ಬಿಟ್ಟು ಕಳುಹಿಸಿ ಇದ್ದರು. ಈಗ ನಿನ್ನ ಮುಖಾಂತರದಿಂದ[3] ಅವರ ಸ್ನೇಹ ಮಾಡಗ ಬೇಕು. ಈ ಬಗ್ಗೆಯ ನಿನಗೆ ಇತಬಾರಿ ಆಗಿ ಇರುವಂಥಾ ಮನುಷ್ಯರನ ಕರಕೊಂಡು ಬಾ" ಎಂಬದಾಗಿ, ಹೇಳಿದಲ್ಲಿ, ಆ ಖಾದರಖಾನನು ತನಗೆ ಆಪ್ತರಾದಂಥಾ ಜನರ ಟೀಪು ಸುಲ್ತಾನರ ಬಳಿಗೆ ಕರದು ಕೊಂಡು ಹೋಗಿ, ಒಪ್ಪಿಸಿದಲ್ಲಿ, ಟೀಪು ಸುಲ್ತಾನ ಬಹದ್ದರವರು ತಮ್ಮ ಕಡೆಯಿಂದ ಒಂದು ಕಾಗದ, ಮೀರ ಸಾದಕನ ಕಡೆಯಿಂದ ಒಂದು ಕಾಗದ, ಪೂರ್ಣೈಯನ ಕಡೆಯಿಂದ ಒಂದು ಕಾಗದ ಸಹಾ, ದೋಸ್ತಿ ಮಾಡುವ ಬಗ್ಗೆಯ ನಂಬಿಗೆ ಖಾಸ್[4] ಹಾಕಿ ಬರಸಿ, ಆ ಖಾದರಖಾನನ[5] ಕಡೆ ಬಳ್[6] ಆದ್ಮಿ ಹರಿಕಾರ ದಲಾಯತ ಸಹಾ ಐದು ಜನರ ಸಂಗಡ ವೀರರಾಜೇಂದ್ರ ಒಡೆಯರವರ ಬಳಿಗೆ ಕಳುಹಿದರಿಂದ, ಆ ಜನವು ಕೊಡಗಿನ ಸೀಮೆ ಸರಹದ್ದಿಗೆ ಬಂದಲ್ಲಿ, ಅಲ್ಲಿ ಇದ್ದ ಹಾರದವರು ಆ ಕಾಗದಗಳ ಸಮೇತ ಆ ಜನರನ್ನು ರಾಜರ ಬಳಿಗೆ ಕರತಂದಲ್ಲಿ, ಆ ಖಾದರಖಾನನ ಕಡೆ ಮರದೆ ಆದ್ಮಿಯು, ತಾನು ತಂದಂಥಾ ಕಾಗದಗಳನ್ನು ಒಪ್ಪಿಸಿ, "ಮಹಾರಾಜರು ನಮ್ಮ ಸ್ನೇಹದಿಂದ ಮೊಖ[7] ತಿರುಗಿಸಿ, ಇಂಗ್ರೇಜಿಯವರ ಸಂಗಡ ಕೂಡಿ ಇದ್ದೀರಿ. ನಾವು ಸಮೀಪದಲ್ಲಿ ಇರುವಂಥಾವರು ನಮ್ಮನ್ನು, ದೂರ ಮಾಡಿ, ದೂರ ದೇಶದವರ ಸಂಗಡ ದೋಸ್ತಿ ಇಟ್ಟು ಇದ್ದೀರಿ. ಕಷ್ಟಕಾಲಕ್ಕೆ ಸಮೀಪದವರು ಹೊರತು, ದೂರ ದೇಶದವರ ಸ್ನೇಹ ಕೆಲಸಕ್ಕೆ ಬಾರದು. ಹ್ಯಾಗೆಯಂದರೆ, ಹರಾಕು ಸಂವತ್ಸರದಲ್ಲಿ ಇಂಗ್ರೇಜಿಯವರು ತಮ್ಮನ್ನು ಕರದು ಕೊಂಡು, ದಂಡು ಸಮೇತ ಹೆಯಾಪಟ್ಟಣಕ್ಕೆ ಬಂದು ಇದ್ದು, ಪುನಹಾ ಹೋಗುವಾಗ್ಯೆ, ತಮ್ಮನ್ನು ಕೊಡಗಿನಲ್ಲಿ ಬಿಟ್ಟು, ದಂಡು ಸಮೇತ ಅವರು ಗಟ್ಟಾ ಇಳಿದು ಹೋದರು. ಆ ಸಮಯದಲ್ಲಿ ನಾವು ದಂಡು ತೆಗದು ಕೊಂಡು ಕೊಡಗಿನ ಸೀಮೆಗೆ ನುಗ್ಗಿ. ಲೂಟಿ ಮಾಡಿ ಇದ್ದರೆ, ಇಂಗ್ರೇಜಿಯವರ ಸಹಾಯ ಯಾವ ಮೇರೆ ಆಗುತ್ತಿತ್ತು? ಈಗ ಬಿದ್ದಿರುವ ನ್ಯಾಯ ತೀರಿದ ಬಳಿಕ, ಅದೇ ಮೇರೆ ಇಂಗ್ರೇಜಿಯವರು ತಮ್ಮನ್ನು ತಮ್ಮ ಸೀಮೆಯಲ್ಲಿ ಬಿಟ್ಟು, ಅವರು ಅವರ ಸೀಮೆಗೆ ಹೋಗುತ್ತಾರೆ. ಇಷ್ಟು ಸಮೀಪದಲ್ಲು ಇದ್ದು, ನಮ್ಮ ಸಂಗಡ ವಿರುದ್ಧ ಮಾಡಿ ಕೊಂಡು, ತಾವು

[1] ಯುದ್ಧದ ಮುಖಾಂತ್ರ. [2] ಪಟ್ಟು. [3] ಮುಖಾಂತರ. [4] ಖಾಸ್. [5] ಖಾದರಖಾನ. [6] ಬಳ್ಳಿ. [7] ಮುಖ.

ನಿರ್ವಾಹ ಮಾಡ ತಕ್ಕದು ಹ್ಯಾಗೆ? ಇಂದಿನ ವರಿಗೆ ನಂಮ ತಂಮ ವೊಳಗೆ ಇದ್ದಂಥಾ ತಕರುತವಂನು ಮರತು ಬಿಟ್ಟು, ಇನ್ನು ಮುಂದೆ ನಮಗೆ ಬಂದಂಥಾ ಕಷ್ಟವೇ ತಂಮದು ಯಂಬದಾಗಿ ಭಾವಿಸಿ, ಉಭಯ ಕಡೆಯಿಂದಲೂ ಭೇದ ತಾಗದೆ, ಯೇಕೀಕರವಾಗಿ ಸ್ನೇಹ ಪಾರಂಪರ್ಯದ್ಧಾರವಾಗಿ ನಡದು ಬರುವ ಬಗ್ಗೆಯ, ತಾವು ಕೇಳಿದ ನಂಬಿಗೆ ಭಾಷೆ ನಾವು ಬರದು ಕೊಡುತ್ತಾ ಇದ್ದೇವೆ. ಅದೇ ಮೇರೆ ನಾವು ಕೇಳಿದ ಹಾಗೆ, ತಾವು ಮಾಡಿ ಕೊಡ ಬೇಕು. ಆ ಬಳಿಕ ಮುಂಬಾಯಿಂದ ಬಂದು, ಹೆಗ್ಗಳದ ಗಟ್ಟದ ಮೇಲೆ ಇಳಿದು ಇರುವ ಇಂಗ್ರೇಜರ ಫೌಜಂನು ಘಾತ ಮಾಡುವ ಬಗ್ಗೆಯ ವಪ್ಪಿಗೆ ಆದರೆ, ಮೀರ ಕಮದ್ದೀನನಂನು ಭಾರಿ ಫೌಜ ಸಮೇತ ತಂಮ ಬಳಿಗೆ ಕಳುಹಿ ಕೊಡುತ್ತಾ ಇದ್ದೇವೆ. ಆ ಬಳಿಕ ಗಟ್ಟದ ಮಾರ್ಗ, ಬಿಲ್ಲರೆ ಮಾರ್ಗಗಳ ಯಾವತ್ತು, ಬಂದು ಮಾಡಿ, ಇಂಗ್ರೇಜಿಯವರ ಫೌಜಿನ ಮೇಲೆ ಬಿದ್ದು ಮುಳುಗಿಸಿದರೆ, ತಂಮ ಶೀಮೆ ಸರಹದ್ದಿನ ಸಮೀಪದ ಹೆಗ್ಗಡೆ ದೇವನ ಕೋಟೆ, ಹಿರಿಯಾಪಟ್ಟಣ, ಬೆಟ್ಟದಪುರ, ಕೊಣನೂರು, ಅರಕಲ್ಗೋಡು ಮುಂತಾದ ತಾಲೂಕುಗಳಂನು ಕೊಡುತ್ತಾ ಇದ್ದೇವೆ" ಯಂಬದಾಗಿ, ಬಾಯಿ ಮಾತಿನಿಂದ ಹೇಳಿದನು. ಕಾಗದಗಳಲ್ಲೂ ಇದೇ ವಿವರವಾಗಿ ಬರದು ಇತ್ತು. ಈ ವಿವರವಂನು ಮಹಾರಾಜರು ತಿಳು ಕೊಂಡು, ಹೆಗ್ಗಳಕ್ಕೆ ಹೋಗಿ, ಆ ಕಾಗದಗಳಂನು ಜನರಾಲ್ ಸಾಹೇಬರವರ ಕೈಯ ಕೊಟ್ಟು, ಬಾಯಿಮಾತಿನಿಂದ ಕೇಳಿದ ವಿವರವಂನು ಹೇಳಿದಲ್ಲಿ, "ಟೀಪುಸುಲ್ತಾನರ ಮಾತಿನ ಮೇಲೆ ತಾವು ನಮಗೆ ದಗಾ ಮಾಡಲಿಕ್ಕೆ ಇಲ್ಲಾ; ತಮಗೆ ನಮಗೆ ಭೇದವಿಲ್ಲಾ ಯಂಬದಾಗಿ, ನಾವು ಬಹಳ ನಂಬಿ ಕೊಂಡು, ಇಲ್ಲಿಗೆ ಬಂದು ಇದ್ದೇವೆ. ತಂಮ ನಂಮ ಕಷ್ಟ ಸುಖ ವಂದೇ ಸರಿ" ಯಂಬದಾಗಿ, ಜನರಾಲ್ ಸಾಹೇಬರು ಹೇಳಿದರು. ಆ ಬಳಿಕ ಆ ಜನರಾಲ್ ಸಾಹೇಬರವರ ಸಂಗಡ ಮಸಲತ್ತು ಮಾಡಿ, ಟೀಪುಸುಲ್ತಾನರಿಗೆ ಜವಾಬು ಬರದ ವಿವರ: "ಹರಾಕು ತಾವು ಇಂಥಾ ನಂಬಿಗೆ ಭಾಷೆಯಿಂದ ನಂಮ ಶೀಮೆ, ವಡವೆ, ಸರ್ವಸ್ವವಂನು ಅಪಹರಿಸಿ ಕೊಂಡು, ಖರಾಬು ಮಾಡಿ ಇದ್ದೀರಿ. ಮಹಾದೇವನು ನಮಗೆ ಕೊಟ್ಟು ಇರುವಂಥಾ ವಂದು ನಾಲಿಗೆಯಂನು, ಇಂಗ್ರೇಜಿ ಬಹದ್ದರ ಸರಕಾರದ ಸ್ನೇಹ ಮಾಡುವಾಗ್ಗೆಯ, ಅವರಿಗೆ ಕೊಟ್ಟು ಇದ್ದೇವೆ. ಈಗ ನಿಮಗೆ ಕೊಡುವ ಬಗ್ಗೆಯ ನಿಂಮಂತೆ ಯರಡು ನಾಲಿಗೆ ನಮಗೆ ಇಲ್ಲಾ" ಯಂಬದಾಗಿ ಬರೆಸಿ, ಆ ಜನರಾಲ್ ಸಾಹೇಬರವರಿಗೆ ತೋರಿಸಿ, ಆ ಕಾಗದಗಳ ತಂದ ಮನುಷ್ಯರ ಕೈಯ ಕೊಟ್ಟು, ಕಳುಹಿಸಿ ಬಿಟ್ಟರು.

ಆ ಬಳಿಕ ಮಾಘ ಮಾಸದಲ್ಲಿ ಜನರಾಲ್ ಸಾಹೇಬ ಬಹದ್ದರರವರು ಹೆಚ್ಚಿಗೆ ಇರುವ ಫಿರಂಗಿಗಳು, ಮದ್ದು, ಗುಂಡು ಮುಂತಾಗಿ ಹೆಗ್ಗಳದಲ್ಲು ಇಟ್ಟು, ಅದರ ರಕ್ಷಣೆಯಾಗಿದ್ದ ಬಗ್ಗೆಯ, ವಂದು ಪಟಾಲಂ ಕರ್ನಲ್ ಫಿಂಚಿ[1] ಸಾಹೇಬರ ಸಹಾ ಮಡಗಿ ಇದ್ದದಲ್ಲದೆ,[2] "ಮತ್ತು ಬೇಕಾದಂಥಾ ಕೆಲವು ಸಾಮಾನವಂನು ದೊರೆಗಳು ಕೊಟ್ಟಾರು; ಅದಂನು ತೆಗದು ಕೊಂಡು ರಶೀತಿ[3] ಕೊಟ್ಟು, ಇಂನು ತಲಚೆರಿ ಕಡೆಯಿಂದ ಬರುವಂಥಾ ಸಾಮಾನವಂನು ಬರಮಾಡಿ ಕೊಂಡು, ಜೋಪಾನದಲ್ಲು ಮಡಗಿ ಕೊಂಡು ಇರ ಬೇಕು. ಲಷ್ಕರಿನ ಸಂಗಡ ಸಾಗಿಸಿ ಕೊಂಡು ಹೋಗುವಂಥಾ ರಸ್ತು ಸಾಮಾನು ಸಾಲದೆ ಹೋದರೆ, ಸಾಮಾನು ಕಳುಹುವಂತೆ, ನಿಮಗೆ ತಿಳಿಸೇವು" ಯಂಬದಾಗಿ, ಆ ಕರ್ನಲ್ ಸಾಹೇಬರವರಿಗೆ ತಾಕೀದಿ ಮಾಡಿ, ಆ ಜನರಾಲ್ ಸಾಹೇಬ ಬಹದ್ದರವರು ಫೌಜ ಸಮೇತ ಬೇಕಾದ ರಸ್ತು ಸಾಮಾನು ತೆಗದು ಕೊಂಡು, ಅಲ್ಲಿಂದ ಹೊರಟು ಬಂದು, ಶಿದ್ಧಾಪುರದಲ್ಲು ಇಳು ಕೊಂಡು ಇದ್ದರು.

ಅಷ್ಟರಲ್ಲಿ ಬಂಗಾಳದ ಜನರಾಲ್ ಲಾರ್ಡ ಕಾರ್ನವಾಲೀಸ ಸಾಹೇಬ ಬಹದ್ದರರವರು, ಮದರಾಜಿನ ಜನರಾಲ್ ಮೆಂಡೂಸ ಸಾಹೇಬ ಬಹದ್ದರರವರು ಭಾರಿ ಫೌಜ ಸಮೇತ, ನಿಜಾಮಲ್ಲೀಖಾನರ ಫೌಜು, ಪೇಶ್ವೇರ ಫೌಜ ಸಹಾ ವಾಗಿ, ಬೆಂಗಳೂರಿಂದ ಕೂಟಾಗಿ ಶ್ರೀರಂಗ ಪಟ್ಟಣದ ಬಳಿಯ ಬಂದು, ಇಳಿದು ಕೊಂಡರು.

ಆ ಬಳಿಕ ಮೇಜರ ಜನರಾಲ್ ರಾಬರ್ಟ ಅಬರಕರಂಬಿ ಸಾಹೇಬ ಬಹದ್ದರರವರು ವೀರರಾಜೇಂದ್ರ ವಡೆಯರವರ ಸಂಗಡ ಹೇಳಿದ ವಿವರ: "ಜನರಾಲ್ ಲಾರ್ಡ ಕಾರ್ನವಾಲಿಸ ಸಾಹೇಬ ಬಹದ್ದರರವರು, ಜನರಾಲ್ ಮೆಂಡೂಸ ಸಾಹೇಬ ಬಹದ್ದರರವರು, ಇಂಗ್ರೇಜ ಬಹದ್ದರ ಸರಕಾರದ ಫೌಜ ಸಮೇತ, ಹೊರಟು ಬಂದು, ಶ್ರೀರಂಗ ಪಟ್ಟಣದ ಸಮೀಪದಲ್ಲು ಇಳಿದು ಇದ್ದಾರೆ. ಅದೇ ಮೇರೆ ನವಾಬ ನಿಜಾಮಲ್ಲೀಖಾನರ ಫೌಜ ಪೇಶ್ವೆಯವರ ಫೌಜ ಸಹಾ, ಪಟ್ಟಣದ ಸಮೀಪಕ್ಕೆ ಬಂದರು. ನಾವು ಫೌಜ ಸಮೇತ ಪಟ್ಟಣಕ್ಕೆ ಕೂಟಾಗಿ ಹೋಗುತ್ತೇವೆ.

---

1 Colonel Finch. 2 ಇಟ್ಟದ್ದಲ್ಲದೆ. 3 receipt.

ರಾತಿಬಿನ ಸಾಮಾನು ಅಕ್ಕಿ ಮುಂತಾಗಿ ಕೂಡಿಸ ಬೇಕೆಂಬದಾಗಿ, ಮೊದಲು ತಂಮ ಸಂಗಡ ಹೇಳಿ ಇದ್ಧೇವಲ್ಲಾ? ಅದಂನು ಕಾಡಿಸ ಬೇಕು" ಯಂಬದಾಗಿ ಹೇಳಿದಲ್ಲಿ, "ಮೊದಲು ಹೇಳಿದ ಮೇರೆ, ಐದು ಲಕ್ಷ ಡಂಗಾಳಿ ಅಕ್ಕಿಯಂನು ಕೂಡಿಗೆ ಮಾಡಿಸಿ, ತಿಗಟ್ಟನಾಡ ಹೋದ್ದಿಸ್ಥಾನೆಯಲ್ಲಿ ಜ್ಯಾಪಾನದಿಂದ ಮಡಗಿಸಿ, ಅದಕ್ಕೆ ಪಟ್ಟಬನ ಕಿವಾತಿ ಮಾಡಿ, ಇಂಗ್ರೇಜ ಬಹಾದ್ದರ ಸರಕಾರದ ದಂಡಿನಿಂದ ಯಾರಾದರೂ ಪಟ್ಟಬರು ಬಂದು, ಅಕ್ಕಿ ಕೇಳಿದರೆ, ಅಳದು ಕಾಡುವಂತೆ ತಾಕೀದಿ ಮಾಡಿ ಇದ್ಧೇವೆ. ಯತ್ತು, ಆಳು ಕಳುಹಿಸಿ, ತರಿಸಿಕೊಳ್ಳ ಬೇಕು" ಯಂಬದಾಗಿ, ಹೇಳಿದಲ್ಲಿ, ಆ ಜನರಾಲ್ ಸಾಹೇಬ ಬಹಾದ್ದರವರು ಪಪತಿ, ಹೇರಿ ಕೊಂಡು ಬರುವ ಬಗ್ಯೆ, ಹಾಯೂಜನ ಕಡೆ ವೆಂಕಟನಾಯಕ ಯಂಬವನ ಸಂಗಡ ಯತ್ತು ಆಳಂನು ಕೊಟ್ಟು, ಇದಕ್ಕೆಲ್ಲಾ ಪಟ್ಟಬ ಕಪಿತಾನರ ಗಾಂತು[1] ಮಾಡಿ ಕಳುಹಿಸಿ ಕೊಟ್ಟಲ್ಲಿ, ಹೋದ್ದಿಸ್ಥಾನೆ ಕಿವಾತಿಯಲ್ಲಿ ಇದ್ದ ತಿಗಟ್ಟನಾಡ ಆಮಿಲ್ ಕೆಟುವಳಿ ಅಚ್ಚುವಂಗಾನು ಆ ಅಕ್ಕಿಯಂನು ಅಳೆಸಿ, ಆ ಕಪಿತಾನ್ ಸಾಹೇಬರ ವಶಕ್ಕೆ ಕೊಟ್ಟಲ್ಲಿ, ಆ ಯತ್ತುಗಳಿಗೆಲ್ಲಾ ತುಂಬುವಾಗ್ಯೆ, "ಐದು ಲಕ್ಷ ಡಂಗಾಳಿ ಅಕ್ಕಿಯಿಂದ ಅರೆವಾಶಿ ಅಕ್ಕಿ ತುಂಬು ಆಯಿತು, ಉಳಿಕೆ ಅಕ್ಕಿ ಸಾಗಿಸಿ ಕೊಂಡು ಹೋಗುವ ಬಗ್ಯೆ ಯರಡನೆ ಸಲ ಬರುತ್ತೇವೆ" ಯಂಬದಾಗಿ ಹೇಳಿ, ಆ ಕಪಿತಾನ್ ಸಾಹೇಬರು ಆ ಅಕ್ಕಿಯಂನು ಸಾಗಿಸಿ ಕೊಂಡು, ಶಿದ್ಧಾಪುರದಲ್ಲು ಇಳಿದು ಇದ್ದ ದಂಡಿಗೆ ಕೂಡಿದಲ್ಲಿ, ಬಂಗಾಳದ ಜನರಾಲ್ ಲಾರ್ಡ್ ಕಾರ್ನ್‌ವಾಲಿಸ ಸಾಹೇಬ ಬಹಾದ್ದರವರು, ಮದುರಾಜಿನ ಜನರಾಲ್ ಮೆಂಡೂಸ್ ಬಹಾದ್ದರವರು ಫೌಜ ಸಮೇತ, ಇದಲ್ಲದೆ ನವಾಬ ನಿಜಾಮಲ್ಲೀಖಾನರ ಫೌಜು, ಪೇಶವೆಯವರ ಫೌಜ ಸಹಾ, ಕೂಡಿ, ಶ್ರೀರಂಗ ಪಟ್ಟಣದ ಸಮೀಪದಲ್ಲು ಇಳಿದು ಇದ್ಧಾರೆ, ತಾವು ಮುಂಬಾಯಿ ಫೌಜ ಸಮೇತ ಬಂದು, ಹೋಜರಾಗ ಬೇಕೆಂಬದಾಗಿ ದೊಡ್ಡ ದಂಡಿನಿಂದ ಪಟ್ಟಬರು ಸಾಹೇಬರು ಬರದು, ಗುಟ್ಟಿನಿಂದ ಕಳುಹಿದರಿಂದ, ಅದಂನು ಜನರಾಲ್ ರಾಬಟ್ಸ್ ಆಬರಕ್ರಂಬಿ ಸಾಹೇಬ ಬಹಾದ್ದರವರು ನೋಡಿ ಕೊಂಡು, ಆಕ್ಷಣವೇ ಮುಂಬಾಯಿ ದಂಡು ಯಾವತ್ತಂನು ತೆಗದು ಕೊಂಡು ಹೊರಟು, ಗುಂಡಿಪಟ್ಟಣ ಯಂಬಲ್ಲಿ ಇಳು ಕೊಂಡರು.

ಅದೇ ರಾತರೆ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ ಬಹಾದ್ದರವರು ಇಂಗ್ರೇಜಿ ಯರಡು ರಿಜಮಿಟಂನು[2] ಕಗ್ಗಾಲ್ ಬಗ್ಯೆ ಕಳುಹಿದಲ್ಲಿ, ಆ ಯರಡು ರಿಜಮಿಟು ನಾಲ್ಕು ಉಕ್ಕಡದ ವಳಗೆ ತಿರಂಗೂರಿಂದ ಚಂದಗಾಲು ಪರಿಯಂತರ, ಪಾಲಹಳ್ಳಿಯಿಂದ ಗಂಜಾಮು ಪರಿಯಂತರ, ಟೀಪುಸುಲ್ತಾನರ ಫೌಜಿನ ಮೇಲೆ ಬಿದ್ದು ಹಾಡದಲ್ಲಿ, ಅವರ ಫೌಜ ಯಾವತ್ತು ಮುರುದು, ರಾತರೆಕಾಲದಲ್ಲಿ ಟೀಪುಸುಲ್ತಾನರ ದಂಡಿನ ಜನರು, ತಂಮವರು ಪರರು ಯಂಬದ ತಿಳಿದೆ, ತಂಮ ತಂಮ ವಳಗೆ ಕಡದಾಡುತ್ತಾ, ಈ ಮೇರೆ ಬಗೆ ಬಗೆ ಲಡಾಯಿ ತಂಮ ವಳಗೆ ಮಾಡಿ ಹಾಯಿತವಾದರು. ಇಂಗ್ರೇಜಿಯವರು ಗಂಜಾಮಿನಲ್ಲಿ ಮುಂತಾಗಿ ಇದ್ದ ಬತ್ತೇರಿಗಳ ತೆಗದು ಕೊಂಡರು. ಉಳಿಕೆ ಟೀಪುಸುಲ್ತಾನರ ದಂಡಿನ ಮಂದಿ ಚಲ್ಲ ಪಿದು, ಯರಡು ಮೂರು ದಿವಸದಲ್ಲು ಜಮಾ ಆಗಿ, ಕೋಟೆ ಆತರಯಿಪಿದಿದು ಇಳು ಕೊಂಡರು.,

ಅದೇ ದಿವಸ, ಪರಾತು ಟೀಪುಸುಲ್ತಾನರು ಮೋಸದಿಂದ ಹಿಡು ಕೊಂಡು ಹೋಗಿ, ಚೇಲೆಯರ ಮಾಡಿ, ಟಾಪಿಯಲ್ಲು ಇಟ್ಟು ಕೊಂಡು ಇದ್ದಂಥಾ ಕಾಡಗರಲ್ಲಿ ಐದು ಸಾವಿರ ಪರಿಯಂತರ ಕಾಡಗು ಜನರು, ಅದೇ ಸಮಯ ಪಳ್ಳೇದು ಯಂತ ತಿಳಿದು, ಕುಟುಂಬ ಮಕ್ಕಳು ಸಹಾವಾಗಿ ಹಾನೆರಡು ಸಾವಿರ ಜನ ಪರಿಯಂತರ ಅವರ ಪೂರ್ವದ ಸ್ಥಳವಾದ ಕಾಡಗೆ ಬಂದರು.

ಆ ಮಾರನೆ ದಿವಸ ಲಾರ್ಡ್ ಕಾರ್ನ್‌ವಾಲಿಸ್ ಸಾಹೇಬ ಬಹಾದ್ದರವರು, ಜನರಾಲ್ ಮೆಂಡೂಸ್ ಬಹಾದ್ದರವರು, ಸಹಾ ಲಾಲಬಾಗಿನಿಂದ ದವಲತಬಾಗು ಪರಿಯಂತರ ತಂಮ ದಂಡಂನು ಇಳಿಸಿ, ಮೋರ್ಚೆ ಹಾಕುವ ಬಗ್ಯೆ ಪ್ರಾರಂಭ ಮಾಡಿಸಿದರು. ಅದೇ ಮೇರೆ ತಿರಂಗೂರು ಕಡೆಯಿಂದಲೂ ಮೋರ್ಚೆ ಹಾಕಿಸುತ್ತಾ ಇದ್ದರು. ಆ ವಾಗ್ಯೆ ಮೇಜರ ಜನರಾಲ್ ರಾಬಟ್ಸ್ ಆಬರಕ್ರಂಬಿ ಸಾಹೇಬ ಬಹಾದ್ದರವರು ಕಾಡಗಿನ ರಾಜರ ಸಂಗಡ ಹೇಳಿದ ವಿವರ: "ನಾವು ಫೌಜ ಸಮೇತ ಇಪ್ಪತ್ತು ದಿವಸದ ಕಟಿಗೆ ಬೇಕಾದ ರಾತಿಬಿನ ಸಾಮಾನು ತೆಗದು ಕೊಂಡು ಪಟ್ಟಣಕ್ಕೆ ಹೋಗುತ್ತೇವೆ; ಇದು ಮುಗುದ[3] ಮೇಲೆ, ಮೂವತ್ತು ಸಾವಿರ ಪರಿಯಂತರ ಯತ್ತು, ಫೌ

[1] ಗಾಂತು. [2] Regiment. [3] ಮುಗಿದ.

ಜ ಸಹಾ ಕೂಡಿಸಿ, ತಂಮ ಬಳಿಗೆ ಕಳುಹುತ್ತೇವೆ. ಆದ್ದರಿಂದ ತಾವು ತಂಮ ಅರಮನೆಗೆ ಹೋಗಿ, ಈಗ ಜಮಾಯಿಸಿ ಇರುವ ಸಾಮಾನು ಅಲ್ಲದೆ, ನಾಲ್ಕುಕಡೆಯಿಂದ ಸಾಮಾನು ಸರಂಜಾಮು ಲಷ್ಕರಿನ ಖರ್ಚಿನ ಬಗ್ಯೆ ತರಿಯ ಮೂಲವಾಗಿ ಜಮಾಯಿಸಿ, ಅದು ಯಾವತ್ತನ್ನು ಕರ್ನಲ್ ಹಿಂಟಿ ಸಾಹೇಬರ ವಶಕ್ಕೆ ಕೊಟ್ಟು, ಅದಕ್ಕೆ ರಶೀತಿ ತೆಗದು ಕೊಳ್ಳುವದು. ಇದಲ್ಲದೆ ಟೀಪುಸುಲ್ತಾನರ ದಂಡಿಗೆ ರಸತು ಸಾಗುವಂಥಾ ನಾಲ್ಕಾಕಡೆ ಮಾರ್ಗಗಳಂನು ಇಂಗ್ರೇಜ ಬಹಾದ್ದರರ ಲಷ್ಕರಿನವರು, ಪೇಶ್ವೆಯವರ ಲಷ್ಕರಿನವರು ಸಹಾ, ಬಂದು ಮಾಡಿದ್ದಾರೆ. ಇದಲ್ಲದೆ ನಗರದ ಶೀಮೆಯಿಂದ ಅಸ್ತಾರೆ ಗಟ್ಟಾ ಹಾತಿ ರಸತಿನ ಸಾಮಾನು ಟೀಪುಸುಲ್ತಾನರ ಲಷ್ಕರಿಗೆ ಸಾಗಿ ಹೋಗುತ್ತಾ ಇದೆ. ತಂಮ ಕಡೆ ಮಂದಿ ಕಳುಹಿಸಿ, ಯುದ್ಧಮುಖದಿಂದ ಆ ರಸತಂನು ತಂಮ ವಶ ಮಾಡಿ ಕೊಂಡು, ಕರ್ನಲ್ ಹಿಂಟಿ ಸಾಹೇಬರ ವಶಕ್ಕೆ ಕೊಡಿಸ ಬೇಕು" ಯೆಂಬದಾಗಿ ಹೇಳಿ, ತಂಮ ಮುಂಬಾಯಿ ಫೌಜ ಸಮೇತ ಕೂಚು ಮಾಡಿ, ಸುಲ್ತಾನಪೇಟೆ ಬಳಿಯ ಇಳು ಕೊಂಡರು.

ಮಹಾರಾಜರು ಪುನಹಾ ಕೊಡಗಿಗೆ ಬಂದು, ಶೀಮೆ ಪಾರುಪತ್ಯಗಾರರ ಯಾವತ್ತು ಕರಸಿ, "ಈಗ ಪಟ್ಟಣದಿಂದ ಕುಟುಂಬ ಮಕ್ಕಳು ಸಹಾವಾಗಿ ಬಂದು ಇರುವ ಕೊಡಗು ಜನಕ್ಕೆ ಯೆರಡು ತಿಂಗಳಿಗೆ ಊಟಕ್ಕೆ ಬೇಕಾದ ಸಾಮಾನು ಅರಮನೆ ಕರದಿಂದ ಕೊಟ್ಟು, ಹೊರತು ಅವರು ಇದ್ದಂಥಾ ಆಯಾ ನಾಡುಗಳಲ್ಲಿ ಮನೆಗಳ ಕಟ್ಟಿಸಿ ಕೊಟ್ಟು ಇಳಿಸಿ, ಆರೈಕೆ ಮಾಡುತ್ತಾ ಇರಿ. ಈಗ ನಗರದ ಶೀಮೆಯಿಂದ ರಸತಿನ ಸಾಮಾನು ಅಸ್ತಾರೆ ಮಾರ್ಗವಾಗಿ ಟೀಪುಸುಲ್ತಾನರ ದಂಡಿಗೆ ಸಾಗಿ ಹೋಗುತ್ತಾ ಇದೆ. ನಾವು ಕೊಡಗ ಮಂದಿಯಂನು ತೆಗದು ಕೊಂಡು ಅಲ್ಲಿಗೆ ಹೋಗಿ, ಆ ಗಟ್ಟದ ಮಾರ್ಗಗಳ ಕಟ್ಟಿ, ರಸತಿನ ಸಾಮಾನ ತೆಗದು ಕೊಂಡು, ಮತ್ತು ಟೀಪುಸುಲ್ತಾನರ ಶೀಮೆಗೆ ಹೋಕ್ಕು, ಹೇರಳ ದನ ಕರು ಸಾಮಾನು ಸಹಾ ತೆಗದು ಕೊಂಡು, ಅಲ್ಲಿಂದ ಕೆಲವು ದಿವಸದಲ್ಲಿ ಕೊಡಗಿಗೆ ಬರುತ್ತಾ ಇದ್ದೇವೆ. ಅದರಲ್ಲಿ ದನ ಕರ ಯಾವತ್ತು ಈಗ ಹೊಸ್ತಾಗಿ ಬಂದು ಇರುವ ರೈತರಿಗೆ ಕೊಡಿಸಿ, ರಸತಿನ ಸಾಮಾನು ಇಂಗ್ರೇಜ ಬಹಾದ್ದರ ಸರಕಾರಕ್ಕೆ ಕೊಡ ಬಹುದು" ಯೆಂಬದಾಗಿ, ಆ ಪಾರುಪತ್ಯಗಾರರಿಗೆ ತಾಕೀದಿ ಮಾಡಿ, ಅದ್ಯೇ ಮ್ಯೇರೆ ದಾರೆಗಳು, ಹೇರಳ ಕೊಡಗು ಮಂದಿ ತೆಗದು ಕೊಂಡು ಹೊರಟು, ಬಗೂರ ಶೀಮೆ ತಾಲೂಕಿನ ಅರೆಕೆರೆ ಯೆಂಬ ಗ್ರಾಮಕ್ಕೆ ಹೋಗಿ ಇಳು ಕೊಂಡು, ಅಲ್ಲಿಂದ ಐದು ಸಾವಿರ ಜನ ಕೊಡಗರಂನು ಆ ರಸತು ತೆಗದು ಕೊಂಡು ಬರುವ ಬಗ್ಯೆ, ಅಸ್ತಾರೆ ಗಟ್ಟಕ್ಕೆ ಕಳುಹಿಸಿದಲ್ಲಿ, ಆ ಕೊಡಗರು ಅದ್ಯೇ ಅಪ್ಪಣೇ ಮ್ಯೇರೆ ಅಸ್ತಾರೆ ಗಟ್ಟದ ಮಾರ್ಗಗಳಂನು ಕಟ್ಟಿ, ರಸತು ಬರುವಂಥಾ ದಾರಿ ನೋಡುತ್ತಾ ಇದ್ದಲ್ಲಿ, ಆ ಬಗೆ ರಸತು ಬಂದು ಗಟ್ಟಕ್ಕೆ ತಲಪಿದಲ್ಲಿ, ಆ ಕೊಡಗು ಮಂದಿಯು ನಾಲ್ಕು ಕಡೆಯಿಂದ ಮುತ್ತಿ, ಆ ರಸತಿನ ಯೆತ್ತುಗಳಂನು, ಅದರ ಸಂಗಡ ಇದ್ದ ಲಂಬಾಣಿಗರಂನು[1] ಸಹಾ ಹಿಡಿದು ಕೊಂಡು ಬರುವಾಗ್ಯೆ, ಅಸ್ತಾರೆ ಶೀಮೆಯಂನು ಲೂಟಿ ಮಾಡಿ, ಸಾಮಾನು, ದನ ಕರ ಮುಂತಾಗಿ ಹಿಡು ಕೊಂಡು, ಯಾವತ್ತು ರಸತಿನ ಸಾಮಾನು, ದನ ಕರ ಮುಂತಾಗಿ ದಾರೆಗಳವರ ಬಳಿಗೆ ಕಳುಹಿಸಿ ಬಿಟ್ಟು, ಆ ಕೊಡಗ ಮಂದಿಯು ಆ ಕಡೆ ಶೀಮೆಯಲ್ಲಿ ಲೂಟಿ ಮಾಡಿ ಕೊಂಡು, ಅಲ್ಲಿಯ್ಯೇ ಇರುತ್ತಿದ್ದಲ್ಲಿ, ಮಹಾರಾಜರು ಇಂಗ್ರೇಜ ಬಹಾದ್ದರ ಲಷ್ಕರಿಗೆ ಬೇಕಾದಂಥಾ ಸಾಮಾನವಂನು ಆರಿಸಿ, ಆ ಕರ್ನಲ್ ಹಿಂಟಿ ಸಾಹೇಬರ ಬಳಿಗೆ ಸಾಗಿಸುತ್ತಾ, ಉಳಿಕೆ ಸಾಮಾನು, ದನ ಕರ, ಕಬ್ಬಿಣ, ಬಟ್ಟೆ, ದವಸ ಮುಂತಾಗಿ, ನಾಡುಗಳ ಪಾರುಪತ್ಯಗಾರರ ವಶಕ್ಕೆ ಕೊಟ್ಟು, ಹೊಸ್ತಾಗಿ ಬಂದಂಥಾ ರೈತರಿಗೆ ಅವರವರ ತರವರಿತು, ಆ ಯಾವತ್ತು ಸಾಮಾನು, ದನ ಕರ ಮುಂತಾದ್ದದಂನು, ಹಂಚಿ ಕೊಡಿಸುತ್ತಾ ಇದ್ದರು.

ಅತ್ತಲಾಗಿ ಟೀಪುಸುಲ್ತಾನರು ತಂಮ ಕೆಲವು ಫೌಜಂನು ಸುಲ್ತಾನಪೇಟೆ ಬಳಿಯ ಇಳಿದು ಇದ್ದ ಮುಂಬಾಯಿ ಫೌಜಿನ ಸಂಗಡ ಜಗಳಾ ಮಾಡತಕ್ಕ ಬಗ್ಯೆ ಕಳುಹಿದಲ್ಲಿ, ಆ ಸುಲ್ತಾನರ ಕಡೆ ಮಂದಿಯು ಇಂಗ್ರೇಜ ಬಹಾದ್ದರ ಫೌಜಿನ ಸಂಗಡ ಜಗಳಾ ಮಾಡಿದಲ್ಲಿ, ಅವರ ಫೌಜಿಗೆ ಬಹಳ ಪೆಟ್ಟಾಗಿ, ಹೇರಳ ಜನ ಮರಣವಾಗಿ, ಜಖಮಿ ಆಗಿ, ಕಡೆಗೆ ಇದರಿಗೆ[2] ನಿಲ್ಲಲಾರದೆ, ಚಲ್ಲಾಪಿಲ್ಲಿ ಆದ್ದರಿಂದ, ಟೀಪುಸುಲ್ತಾನರು ಯೆಲ್ಲಾ ಬಗೆಯಿಂದಲೂ ಆಟಾರಾಗಿ, ಗುಲಾಮಲ್ಲೀಖಾನನಂನು ನವಾಬ ಲಾರ್ಡ ಕಾರ್ನ್ವಾಲಿಸ್ ಸಾಹೇಬ ಬಹಾದ್ದರವರ ಬಳಿಗೆ ಸಲ್ಲಾ ಮಾಡುವ ಬಗ್ಯೆ, ಹೇಳಿ ಕಳುಹಿದಲ್ಲಿ, ಆ ನವಾಬ ಲಾರ್ಡ ಕಾರ್ನ್ವಾಲಿಸ್ ಸಾಹೇಬ ಬಹಾದ್ದರವರು ಹೇ

[1] ಲಂಬಾಣಿಗರನ್ನು. [2] ಎದುರಿಗೆ.

ಳಿದ್ದು: "ಟೀಪುಸುಲ್ತಾನರು ಮಾಡ ಬಾರದಂಥಾ ಕೆಲವು ತುಂಟತನ ಮಾಡಿದ್ದರಿಂದ, ಅವರ ಪಟ್ಟಣವಂನು ತೆಗದು ಕೊಳ್ಳ ಬೇಕೆಂಬದಾಗಿ, ಹೇರಳ ದ್ರವ್ಯ ವೆಚ್ಚಾ ಮಾಡಿ, ಬಂದು ಇದ್ದೇವೆ. ಆದ್ದರಿಂದ ಈ ಮೂರು ಸಂಸ್ಥಾನದವರಿಗೆ ಮೂರು ಕೋಟಿ ರೂಪಾಯಂನು ಕೊಟ್ಟು, ಮೊಹರು ಮಾಡಿ ಇರುವ ಮೇರೆ ಕೆಲು ಶೀಮೆಯಂನು ಬಿಟ್ಟು ಕೊಟ್ಟರೆ, ನಾವು ಕಟ್ಟಿ ಕೊಂಡು ಇರುವಂಥಾ ಬೆಂಗಳೂರು ಮುಂತಾದ ಅವರ ಶೀಮೆಯಂನು ಬಿಟ್ಟು ಕೊಟ್ಟು, ನಂಮ ವಿಲಾಯಿತಿಗಳಿಗೆ ಹೋಗುತ್ತೇವೆ" ಯಂಬದಾಗಿ ಹೇಳಿದಲ್ಲಿ, ಈ ಮಾತ ಕೇಳಿ, ಗುಲಾಮಲ್ಲೀಖಾನನು ಪುನಹಾ ಬಂದು, ಉಭಯ ಕಡೆಯಿಂದ ನಡದ ಸಲ್ಲಾದ ಮಾತುಗಳ ಟೀಪುಸುಲ್ತಾನರಿಗೆ ಜಾಹೀರು ಮಾಡಿದಲ್ಲಿ, ಅವರು ಒಡಂಬಟ್ಟು, ಆ ಬಳಿಕ ಮೂರು ಸಂಸ್ಥಾನದವರು ಪಪ್ಪಿ ಖುಶಿಯಿಂದ ನಂಬಿಗೆ ಭಾಷೆಯಿಂದ ನಿಶ್ಚೈಸಿದ ಮೇರೆ ಕರಾರುನಾಮೆಗಳ ಮೊಹರು ಮಾಡಿ; ಮೂರು ಸಂಸ್ಥಾನದಲ್ಲು ಮಡಗಿದರು.

ಟೀಪುಸುಲ್ತಾನರು ಮೂರು ಸಂಸ್ಥಾನದವರಿಗೂ ಕೊಡ ತಕ್ಕ ಶೀಮೆಗಳಂನು ವಿಂಗಡಿಸಿ, ಬಿಟ್ಟು ಕೊಟ್ಟು, ಕೆಲವು ದ್ರವ್ಯವಂನು ನಗದು ಕೊಟ್ಟು, ಉಳಿಕೆ ದ್ರವ್ಯದ ಬದಲಿಗೆ ತಂಮ ಇಬ್ಬರು ಮಕ್ಕಳಂನು ನವಾಬ ಮೂಲಿಉಲ್ ಅಲಕಾಬ್ ಲಾರ್ಡ್ ಕಾರ್ನ್ವಾಲಿಸ್ ಸಾಹೇಬ್ ಬಹಾದ್ದರವರ ವಶಕ್ಕೆ ಕೊಟ್ಟರು. ಆ ಬಳಿಕ ಬಂಗಾಳದ ಇಂಗ್ರೇಜ ಬಹಾದ್ದರವರ ಫೌಜಿನವರು ಮುಂತಾಗಿ ಬತೇರಿಗಳ ಮೇಲೆ ಯೇರಿಸಿ ಇದ್ದ ಫಿರಂಗಿಗಳಂನು ಇಳಿಸಿದರು. ಆ ಸಮಯದಲ್ಲಿ ಗವುನರ್ ಮೇಜರ್ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ್ ಬಹಾದ್ದರವರು ಕರ್ನೇಲ್ ಜಮೀಸ್[1] ಹಾರ್ಟ್ಲಿ ಸಾಹೇಬ ಬಹಾದ್ದರವರು ಸಹ, ಇವರು ಇಬ್ಬರು ಮುಂಬಾಯಿ ಸರದಾರರು ನವಾಬ ಗವುನರ್ ಜನರಾಲ್ ಲಾರ್ಡ್ ಕಾರ್ನ್ವಾಲಿಸ್ ಸಾಹೇಬ್ ಬಹಾದ್ದರವರ ಬಳಿಗೆ ಹೋಗಿ, ಅಲ್ಲಿ ಮೂರು ದಿವಸ ಮೊಕಾಂ ಮಾಡಿದಲ್ಲಿ, ಆ ನವಾಬ್ ಲಾರ್ಡ್ ಕಾರ್ನ್ವಾಲಿಸ್ ಸಾಹೇಬ್ ಬಹಾದ್ದರವರ ಸಂಗಡ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ್ ಬಹಾದ್ದರವರು ಹೇಳಿದ ವಿವರ: ಟೀಪುಸುಲ್ತಾನರ ಸರಕಾರಕ್ಕೂ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಸಂಗಡ ಕೂಡಿ ಇರುವ ಸರಕಾರಗಳಿಗೂ ನಂಬಿಗೆ ಭಾಷೆಯಿಂದ ಸಲ್ಲಾ ಮೊಹರು ಆಗಿ, ಟೀಪುಸುಲ್ತಾನರ ಕೈಯಿಂದ ಕೆಲು ದ್ರವ್ಯವಂನು ತೆಗದು ಕೊಂಡು, ಬಾಕಿ ಬರ ತಕ್ಕ ದ್ರವ್ಯಕ್ಕೆ ಅವರ ಮಕ್ಕಳಂನು ತೆಗದು ಕೊಂಡು, ಬಾಕಿ ದ್ರವ್ಯ ಸಂದ ಬಳಿಕ ಅವರ ಮಕ್ಕಳ ಕಳುಹಿಸಿ ಕೊಡುತ್ತೇವೆಂತ ಹೇಳಿ, ಕೆಲು ಶೀಮೆಯಂನು ತೆಗದು ಕೊಂಡು, ತಾವು ಬಂಗಾಳಕ್ಕೆ ಹೋಗುತ್ತೀರಿ. ನಾವು ನಂಮ ದಂಡು ಸಮೇತ ಮುಂಬಾಯಿಗೆ ಕೊಡಗಿನ ಮಾರ್ಗವಾಗಿ ಹೋಗುತ್ತೇವೆ. ಆವಾಗ್ಯೆ ಮೊದಲು ಟೀಪುಸುಲ್ತಾನರ ಮೇಲೆ ಜಗಳಕ್ಕೆ ಪ್ರಾರಂಭವಾಗುವಾಗ್ಯೆ, ನಂಮಂನು ತಲಚ್ಚೇರಿಗೆ ಕರಿಸಿ, ಕೊಡಗಿನ ಸಂಸ್ಥಾನಕ್ಕೂ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಸೂರ್ಯ ಚಂದ್ರ ಇರುವ ಪರಿಯಂತರ ತಂಮ ವಳಗೆ ಸ್ನೇಹಾ ಪಾರ್ಯಾದಧಾರವಾಗಿ[2] ನಡದು ಬರ ಬೇಕು. ಇದಲ್ಲದೆ ಟೀಪುಸುಲ್ತಾನರು ಇಂಗ್ರೇಜ ಬಹಾದ್ದರ ಸರಕಾರಕ್ಕೂ ಕೊಡಗಿನ ಸಂಸ್ಥಾನಕ್ಕೂ ದೊಡ್ಡ ಶತ್ರು ಆಗಿದ್ದಾರೆ. ಟೀಪುಸುಲ್ತಾನರ ಸಂಗಡ ಲಡಾಯಿಕ್ಕೆ ಇಂಗ್ರೇಜ ಬಹಾದ್ದರ ಸರಕಾರದ ಫೌಜ ಹೋಗುವಾಗ್ಯೆ, ಕೊಡಗಿನ ಶೀಮೆ ವಳಗೆ ಮಾರ್ಗ ಕೊಡ ಬೇಕು. ಲಷ್ಕರಿಗೆ ಬೇಕಾದಂಥಾ ಸಾಮಾನು ಸರಂಜಾಮು ತಂಮ ಕಡೆಯಿಂದ ಕೊಡಿಸಿ ಕೊಡ ಬೇಕು. ಟೀಪುಸುಲ್ತಾನರ ಸ್ನೇಹಾ ಮಡಗ ಬಾರದು. ಘಾತಕ ಉಭಯ ಕಡೆಯಿಂದಲೂ ಆ ಸುಲ್ತಾನರ ಮೇಲೆ ಜಗಳಾ ಮಾಡುವದಕ್ಕೆ ಪಶಿನ ಬೇಕು. ವಂದು ಸಮಯದಲ್ಲಿ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಟೀಪುಸುಲ್ತಾನರ ಸರಕಾರಕ್ಕೂ ಸಲ್ಲಾ ಆದರೆ, ಮೊದಲು ಕೊಡಗಿನ ಸಂಸ್ಥಾನಕ್ಕೆ ಸಲ್ಲಾ ಮಾಡಿ, ಆ ಬಳಿಕ ಇಂಗ್ರೇಜ ಬಹಾದ್ದರ ಸರಕಾರಕ್ಕೆ ಸಲ್ಲಾ ಮಾಡ್ಯೇವು ಯಂಬದಾಗಿ, ಈ ಮೇರೆ ಉಭಯ ಕಡೆಯಿಂದ ಕರಾರುನಾಮೆ ಮೊಹರು ಆಗಿದೆ. ಅದಂನು ನಂಬಿ, ನಾವು ನಿಂಮ ಮುಂಬಾಯಿ ದಂಡು ಹೋಗುವ ಬಗ್ಯೆ, ನಂಮ ಶೀಮೆಯಲ್ಲಿ ಮಾರ್ಗ ಕೊಟ್ಟು, ದಂಡಿಗೆ ಬೇಕಾದ ಸಾಮಾನು ಸರಂಜಾಮು. ಪರಾಗಿ ಪರಿಯತನ ಮಾಡಿ, ತರಿಸಿ ಕೊಟ್ಟು, ಇಂಗ್ರೇಜ ಸರಕಾರಕ್ಕೆ ಜಯ ಆಗಲಿ ಯಂಬದಾಗಿ ಹಾರೈಸಿ ಕೊಂಡು ಇದ್ದೆವು. ಅದೇ ಮೇರೆ ಇಂಗ್ರೇಜ ಸರಕಾರದ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗಿ, ಟೀಪುಸುಲ್ತಾನರ ಸಂಗಡ ಲಡಾಯಿ ಮಾಡಿದಲ್ಲಿ, ಅವರು ಲಾಚಾರಾಗಿ ತಂಮ ಸಂಗಡ ಸಲ್ಲಾ ಮಾಡಿದ್ದರಿಂದ, ಹೇರಳ ದ್ರವ್ಯ ಕೆಲು ಶೀಮೆಗಳ ಸಹಾ ತೆಗದು ಕೊಂಡು, ಈ ಮೇರೆ ಟೀಪುಸುಲ್ತಾನರ ಸಂಗಡ ಸ್ನೇಹಾ ಬಳಸಿ ಕೊಂಡು, ತಾವು ಹೋಗುತ್ತೀರಿ; ನಾವು ಟೀಪುಸುಲ್ತಾನರ ಕಡೆಯಿಂದ ಸ್ನೇಹದ ಮಾತ[3] ಕೇಳಿಸಿ, ಇಂಗ್ರೇಜ ಸರಕಾರದ ದ್ಯಾನಕ್ಕೆ ಬುಡಾಗಿ

---

1 Colonel James Hartley. 2 ಪರ್ಯಾದ್ಧಾರ. 3 ಮಾತು.

ದ್ದರಿಂದಲೂ, ಟೀಪುಸುಲ್ತಾನರ ಮಾತಿಗೆ ನಾವು ಒಡಂಬಡದವರಾದ್ದರಿಂದಲೂ, ಅವರಿಗೆ ನಾವು ಹೇರಳ ವೈರಿಗಳಾಗಿ ಇದ್ದೇವೆ. ಹೀಗೆ ಇರುವಲ್ಲಿ, ತಾವು ಟೀಪುಸುಲ್ತಾನರ ಸಂಗಡ ದೋಸ್ತಿ ನಡತೆ ಕಾಯಂ ಮಾಡಿ ಕೊಂಡು, ನಮಗೂ ಟೀಪುಸುಲ್ತಾನರಿಗೂ ಇರುವಂಥಾ ವಿರುದ್ಧವಂನು ಬೆಳಸಿ, ತಂಮ ವಿಲಾಯಿತಿಗಳಿಗೆ ಹೋಗುತ್ತೀರಿ. ಇಂಗ್ರೇಜ ಬಹಾದ್ದರ ಸರಕಾರದ ಸತ್ಯಧರ್ಮ್ಮ ಇದೇ ಮೇರೆ ಇದೆಯೋ? ಯಂತಾ ಈ ವಿವರ ಕೊಡಗಿನ ಮಹಾರಾಜರು ಕೇಳಿದರೆ, ಯೇನು ಜವಾಬು ಹೇಳ ಬೇಕು" ಯಂತಾ, ಕೇಳಿದಲ್ಲಿ, ಈ ವಿವರ ಯಾವತ್ತೂ ನವಾಬ ಮಾಲಿವುಲ್ ಅಲಕಾಟ್ ಲಾರ್ಡ್ ಕಾರ್ನ್ವಾಲಿಸ ಸಾಹೇಬ ಬಹಾದ್ದರವರು ಮನಸ್ಸಿಗೆ ತಂದು ಕೊಂಡು, "ಕೊಡಗಿನ ಮಹಾರಾಜರವರಿಗೆ ಕುಂಪನಿ ಇಂಗ್ರೇಜ ಬಹಾದ್ದರ ಸರಕಾರದಿಂದ ಕರಾರುನಾಮೆ ಬರದು ಕೊಟ್ಟು ಇರುವ ಮೇರೆಗೆ ಸಲ್ಲಾ ಮಾಡಿ ಕೊಡ ಬೇಕು. ಅದು ವಿಹಿತ ವದೆ" ಯಂಬದಾಗಿ ಹೇಳಿ, "ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತರಶವ ವಾಂಛಲ್ಯವಿಟ್ಟು[1] ಶಾಶ್ವತವಾಗಿ ನಡದು ಬರ ಬೇಕು ಯಂಬದಾಗಿ, ಖಾಸಾಪತ್ರಿಕೆ ಬರೆಸಿ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದಲ್ಲು ಮಡಗಿ ಇದೆ. ಆದ್ದರಿಂದ ಕುಂಪನಿ ಇಂಗ್ರೇಜ ಸರಕಾರದಲ್ಲಿ ನೀವು ಸಲ್ಲಾದ[2] ಮೂಲದಿಂದ ಯಾವ ಮೇರೆ ಸ್ನೇಹ ಪಾತ್ರರಾಗಿ ಇದ್ದೀರೋ, ಅದೇ ಮೇರೆ ಕೊಡಗಿನ ಮಹಾರಾಜರ ಸಂಗಡಲೂ ಸಲ್ಲಾ ಮಾಡಿ ಸ್ನೇಹ ಮಡಗ ಬೇಕು, ಅವರ ಸಂಗಡ ವಿರುದ್ಧ ಮಾಡ ಬಾರದು" ಯಂಬದಾಗಿ, ಟೀಪುಸುಲ್ತಾನರಿಗೆ ಕಾಗದ ಬರದು ಕಳುಹಿದಲ್ಲಿ, ಈ ಮಾತಿಗೆ ಟೀಪುಸುಲ್ತಾನರು ಒಡಂಬಡದೆ, ಜವಾಬು ಬರೆಸಿ ಕಳುಹಿದ ವಿವರ: "ಪರಾಕು ಕೊಡಗಿನ ದೊರೆಗಳ ಸಂಗಡ ದೋಸ್ತಿ ನಡದು ಬರ ಬೇಕೆಂಬದಾಗಿ ಕರಾರುನಾಮೆ ಬರೆಸಿ ಮಡಗಿ ಕೊಂಡು, ಇದ್ದೀರಿ. ಅದೇ ಮೇರೆ ತಾವು ಈಗ ನಂಬಿಗೆ ಖಾಸ್ತೆಯಿಂದ ಸಲ್ಲಾನಾಮೆ ಬರದು ಕೊಟ್ಟು, ನಂಮ ಸರಕಾರದ ದೋಸ್ತಿ ಮಡಗುತ್ತೀರಿ. ಹೀಗೆ ಇರುವಲ್ಲಿ ಇಂಗ್ರೇಜ ಸರಕಾರದವರು ನಮಗೂ ಅವರಿಗೂ ಸ್ನೇಹಿತರು ಇದ್ದೀರಿ. ಉಭಯಸ್ಥರಿಗೂ ತಾವು ಸಕಾಯಿ[3] ಮಾಡ ಬಾರದು. ಕೊಡಗಿನ ದೊರೆಗಳ ಮಾತಿನಿಂದ ತಮಗೆ ಕೆಲಸವಿಲ್ಲಾ. ನಾವೂ ಅವರೂ ಭುಜಬಲಶಕ್ತಿ ಇದ್ದದಂತೆ ನ್ಯಾಯ ಕೊಳ್ಳುತ್ತೇವೆ" ಯಂಬದಾಗಿ, ಬರದು ಕಳುಹಿದಲ್ಲಿ, ಅದಂನು ನೋಡಿ, ಮಹಾ ಸಿಟ್ಟಿನಲ್ಲಿ, "ಟೀಪುಸುಲ್ತಾನರು ಕೊಡಗಿನ ಮಹಾರಾಜರ ಸಂಗಡ ಸಲ್ಲಾ ಮಾಡಿ, ಸ್ನೇಹ ಮಡಗುವದಕ್ಕೆ ಮನಸ್ಸು ಇಲ್ಲಾ. ಆದ್ದರಿಂದ, ಈಗ ಕುಂಪನಿ ಸರಕಾರದ ಸಂಗಡ ಸಲ್ಲಾ ನಿಶ್ಚೈಸಿ ಇರುವಂಥಾದ್ದು ಕೆಲಸವಿಲ್ಲಾ. ಟೀಪುಸುಲ್ತಾನರ ಸಂಗಡ ಲಡಾಯಿಯೇ ಹೊರ್ತು ಸಲ್ಲಾ ಮಾಡಲಿಕ್ಕೆ ಇಲ್ಲಾ" ಯಂತಾ, ಆ ಟೀಪುಸುಲ್ತಾನರ ವಕೀಲರ ಸಂಗಡ ಹೇಳಿ ಕಳುಹಿ, ಯಥಾಪ್ರಕಾರ ಮೋರ್ಚೆಗಳ ಮೇಲೆ ಫಿರಂಗಿಗಳ ಯೇರಿಸುವ ಬಗ್ಗೆಯೆ ಹುಕುಂ ಕೊಟ್ಟರು. ಆ ವಕೀಲರು ಟೀಪುಸುಲ್ತಾನರ ಬಳಿಗೆ ಬಂದು, "ಕೊಡಗಿನ ಮಹಾರಾಜರವರ ಸಂಗಡ ಸ್ನೇಹ ಮಡಗಿ, ಈಗ ಆಗಿರುವ ಸಲ್ಲಾ ಕಾಯಂ ಮಡಗ ಬೇಕು. ಆದ್ದರಿಂದ ಯಾವತ್ತೂ ಜನರಿಗೂ ಸುಖ ಉಂಟಾದೀತು" ಯಂತಾ, ಜಾಹೀರು ಮಾಡಿದ್ದಲ್ಲಿ, ಟೀಪುಸುಲ್ತಾನರು ಈ ಮಾತಂನು ಮನಸ್ಸಿಗೆ ತಂದು ಕೊಂಡು, "ನಾವು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸಂಗಡ ವಿರುದ್ಧ ಬಿಟ್ಟು, ಸಲ್ಲಾ ಮಾಡಿ ಇರುವ ಮೇರೆ, ನಮಗೂ ಕೊಡಗಿನ ದೊರೆಗಳಿಗೂ ಸಲ್ಲಾ ನಿಶ್ಚಯವೇ ಸರಿ; ಇನ್ನು ಮುಂದೆ ಕೊಡಗಿನ ದೊರೆಗಳ ಮೇಲಾಗಲಿ, ಅವರ ಶೀಮೆ ಮೇಲಾಗಲಿ, ಅವರ ರೈತರ ಮೇಲಾಗಲಿ ವಿರುದ್ಧಾ ಮಾಡಿದರೆ, ಇಂಗ್ರೇಜ ಸರಕಾರದ ಸಂಗಡ ಮಾಡಿದ ಹಾಗೆ ಸರಿ. ಯಲ್ಲಾ ಬಗೆಯಲ್ಲು ಅವರಿಗೂ ನಮಗೂ ಸ್ನೇಹವೇ ಹೊರ್ತು ವಿಕಲ್ಪ ಯೋಚಿಸಲಿಕ್ಕೆ ಇಲ್ಲಾ, ಯಂಬದಾಗಿಯೂ, ಪರಾಕು ಇಪ್ಪತ್ತನಾಲ್ಕು ಸಾವಿರ ರೂಪಾಯಿ ನಂಮ ಸರಕಾರಕ್ಕೆ ಕೊಡುತ್ತಿದ್ದರು, ಅದಂನು ಇಂಗ್ರೇಜ ಸರಕಾರಕ್ಕೆ ತೆಗದು ಕೊಳ್ಳ ಬೇಕೆಂಬದಾಗಿ ಸಹಾ" ಬರದು, ಅದಕ್ಕೆ ತಂಮ ದಸ್ತಖತ್ತು ಮೊಹರ ಮಾಡಿ, ನವಾಬ ಲಾರ್ಡ್ ಕಾರ್ನ್ವಾಲೀಸ ಸಾಹೇಬ ಬಹಾದ್ದರವರ ಬಳಿಗೆ ಕಳುಹಿದಲ್ಲಿ, ಅವರು ಈ ಸಲ್ಲಾದ ವಿವರವಂನು ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರಿಗೂ, ಕರ್ನೆಲ್ ಹಾರ್ಟಲಿ ಸಾಹೇಬ ಬಹಾದ್ದರವರಿಗೂ ತಿಳಿಸಿ, ಮೋರ್ಚೆಗಳ ಮೇಲೆ ಇದ್ದ ಫಿರಂಗಿಗಳಂನು ಇಳಿಸಿ, ಸಲ್ಲಾಕ್ಕೆ ನಿರ್ಣಯವಾದ್ದರಿಂದ ಸಂತೋಷಿತರಾಗಿ, ಮೇಜರ್ ಜನರಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರೂ, ಕರ್ನೆಲ್ ಹಾರ್ಟಲಿ ಸಾಹೇಬ ಬಹಾದ್ದರವರು ಸಹಾ ಅಲ್ಲಿಂದ ತಂಮ ಫೌಜ ಇಳದು ಇದ್ದ ಜಾಗಕ್ಕೆ ಬಂದು, "ಟೀಪುಸುಲ್ತಾನರಿಗೂ ಇಂಗ್ರೇಜ ಬಹಾದ್ದರವರ ಸರಕಾರಕ್ಕೂ ಲಡಾಯಿ ಯಂಬ ಬೆಂಕಿ ಉರಿಯುತ್ತಿದ್ದಂ

[1] ವಾತ್ಸಲ್ಯ. [2] ಸಲ್ಲಿದ. [3] ಸಹಾಯ.

ಥಾದ್ದು ಸತಂತ್ರವಾಗಿ, ಸ್ಥಿರವಾದ ಸಲ್ಲಾ ನಿಶ್ಚಯವಾಗಿ ಇದೆ. ಅದ್ದೇ ಮೇರೆ ತಂಮ ಕೊಡಗಿನ ಶೀಮೆ ಮಾತಾಗಿಯೂ ಕರಾರುನಾಮೆ ಬರದು, ಸಲ್ಲಾ ಮೊಹರು ಆಗಿ ಇದೆ. ಆದ್ದರಿಂದ ಟೀಪುಸುಲ್ತಾನರು ತಂಮ ಮೇಲೆ ಮೆರಾ ಮಾಡಲಿಕ್ಕೆ ಇಲ್ಲಾ. ತಾವು ಅವರ ಮೇಲೆ ತಕರುತವ ಮಡಗದೆ, ತಂಮ ಮಂದಿ ಸಮೇತ ತಾವು ಕೊಡಗು ಶೀಮೆಗೆ ಬಂದರೆ, ನಾವು ಫೌಜ ಸಮೇತ ಹೊರಟು ಮುಂಬಾಯಿಗೆ ಹೋಗ ತಕ್ಕ ಬಗ್ಯೆ ಕೊಡಗಿಗೆ ಬರುತ್ತೇವೆ. ಆ ಬಳಿಕ, ತಂಮ ನಂಮ ಭೇಟಿ ಆದಲ್ಲಿ, ಕರಾರು ನಿಶ್ಚಯ ಆದ ವಿವರ ಯಾವತ್ತು ನಾವು ನಿಮಗೆ ತಿಳಿಸಯ್ಯೇವು" ಯಂಬದಾಗಿ, ಮೇಜರ ಜನರಾಲ ರಾಬರ್ಟ ಆಬರಕರಂಬಿ ಸಾಹೇಬ ಬಹಾದ್ದರವರು ವೀರರಾಜೇಂದ್ರ ಒಡೆಯರವರಿಗೆ ಕಾಗದ ಬರೆಸಿ, ಮಹಾರಾಜರು ಇರುತ್ತಿದ್ದ ಬಗೂರು ಶೀಮೆ ವಳಿತವಾದ ಅರೆಕೆರೆಗೆ ಕಳುಹಿದರು.

ಆ ಕಾಗದವಂನು ನೋಡಿ ಕೊಂಡು, ಅಲ್ಲಿ ಠಂಗಯದ ನಾಗರಹಾಳ್ಳಿ ಪುಟ್ಟಿ ಗವುಡ ಮಂಡೆಹನ ಅಪಾಪೆಯನ ಸಹಾ ಇಟ್ಟು, ಸಂಗಡ ಇರುವ ಮಂದಿ ಸಮೇತ ಹೊರಟು, ನಾಲ್ಕುನಾಡ ಅರಮನೆಗೆ ಬಂದು ಇರುತ್ತಿದ್ದರು.

ಲಾರ್ಡ್ ಕಾರ್ನವಾಲೀಸ ಸಾಹೇಬ ಬಹಾದ್ದರವರು ಇಂಗರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಟೀಪು ಸುಲ್ತಾನರಿಗೂ ಸಲ್ಲಾ ಮಾಡಿದಂಥಾದ್ದು ಜನರಾಲ ಮೆಂಡೋಸ ಸಾಹೇಬ ಬಹಾದ್ದರವರು ಒಡಂಬಡದೆ, ತಂಮ ಕೈಯಿಂದ ಪಿಸ್ತೋಲಿನ ಗುಂಡಿನಿಂದ ತಂಮ ಮೈಗೆ ತಾವೇ ಹೊಡದು, ಜಖಮಿ ಮಾಡಿ ಕೊಂಡರು. ಆ ಬಳಿಕ ಮದುರಾಜಿನ[1] ಸರದಾರರು ಆ ಸಾಹೇಬರಂನು ಸಂಗಡ ಸಾಗಿಸಿಕೊಂಡು, ಮದುರಾಜಿಗೆ ಹೋದರು. ಪರುಶರಾಂಬಾವುನು[2] ಈ ಸಲ್ಲಾಕ್ಕೆ ಒಡಂಬಡದೆ, ತಂಮ ಫೌಜ ತೆಗದು ಕೊಂಡು ಹೋಗುವಾಗ್ಯೆ, ಅಲ್ಲಲ್ಲಿ ಕೆಲು ಶೀಮೆಯಂನು ಲೂಟಿ ಮಾಡಿ ಕೊಂಡು, ತಂಮ ದೇಶಕ್ಕೆ ಹೋದರು. ಹರಿಪಂಥಪಟಕೆಯನು ಫೌಜ ಸಮೇತ ಸಲ್ಲಾಕ್ಕೆ ಒಡಂಬಟ್ಟು, ತಂಮ ದೇಶಕ್ಕೆ ಹೋದರು. ನಿಜಾಮಲ್ಲೀಖಾನರು ಇದ್ದೇ ಮೇರೆ ಒಡಂಬಟ್ಟು, ಫೌಜ ಸಮೇತ ತಂಮ ದೇಶಕ್ಕೆ ಹೋದರು. ನವಾಬ ಮಾಲಿಕುಲ ಅಲ್ಕಾಬ ಲಾರ್ಡ್ ಕಾರ್ನವಾಲೀಸ ಸಾಹೇಬ ಬಹಾದ್ದರವರು ಮದುರಾಜಿನ ಮಾರ್ಗವಾಗಿ ಬಂಗಾಳಕ್ಕೆ ಹೋದರು. ಮೇಜರ ಜನರಾಲ ರಾಬರ್ಟ ಆಬರಕರಂಬಿ ಸಾಹೇಬ ಬಹಾದ್ದರವರು ತಂಮ ಫೌಜ ಸಮೇತವಾಗಿ ಹೊರಟು ಬಂದು, ಹೆಗ್ಗಳದ ಗಟ್ಟದ ಬಳಿ[3] ಮೈದಾನದಲ್ಲು ಇಳಿದು ಕೊಂಡರು.

ಆವಾಗ್ಯೆ ಮಹಾರಾಜರವರು ನಾಲಕುನಾಡ ಅರಮನೆಯಿಂದ ಹೋಗಿ, ಆ ಜನರಾಲ ಸಾಹೇಬರವರ ಭೇಟಿ ಆದಲ್ಲಿ, ಆ ಜನರಾಲ ಸಾಹೇಬರು ಹೇಳಿದ ವಿವರ: "ಟೀಪುಸುಲ್ತಾನರು ತಂಮ ಮೇಲೆ ವಿರುದ್ಧಾ ಮಾಡಲಿಕ್ಕೆ ಇಲ್ಲಾ. ತಾವು ಅವರ ಮೇಲೆ ವಿರುದ್ಧಾ ಮಾಡಗ ಬಾರದು. ಈಗ ಟೀಪುಸುಲ್ತಾನರ ಕೆಲು ಶೀಮೆ ತಾವು ಕಟ್ಟಿ ಕೊಂಡು ಇರುವಂಥಾದ್ದಂನು ಬಿಟ್ಟು ಕೊಟ್ಟು; ತಂಮ ಶೀಮೆ ಸರಹದ್ದಿನ ಬಂದುಬಸ್ತು ಮಾಡಿ ಕೊಂಡು, ಹರಾತು ಟೀಪುಸುಲ್ತಾನರಿಗೆ ಕೊಡತಕ್ಕ ಇದ್ದಂಥಾ ಇಪ್ಪತ್ತನಾಲ್ಕು ಸಾವಿರ ರೂಪಾಯಿಯಂನು ಕೊಲಂಪರಿಯಲ್ಲು ಇಂಗರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಕೊಟ್ಟು ಬರ ಬೇಕು" ಯಂಬದಾಗಿ, ಹೇಳಿದಲ್ಲಿ, ಈ ಮಾತಿಗೆ ಮಹಾರಾಜರವರು ಹೇಳಿದ ವಿವರ: "ಟೀಪುಸುಲ್ತಾನರು ಈ ಹಣ ನಂಮ ಕಡೆಯಿಂದ ತೆಗದು ಕೊಳ್ಳಲೂ ಇಲ್ಲಾ; ಅವರ ಮಾತಿನ ಮೇಲೆ ಈ ಹಣ ಕುಂಪನಿ ಸರಕಾರಕ್ಕೆ ಕೊಡುವದಕ್ಕೂ ಇಲ್ಲಾ; ಈಗ ಟೀಪುಸುಲ್ತಾನರ ಕೆಲು ಶೀಮೆ ನಾವು ಕಟ್ಟಿ ಕೊಂಡು ಇರುವಂಥಾದ್ದು ಬಿಡಲಿಕ್ಕೂ ಇಲ್ಲಾ. ಇಂಥಾ ಸಲ್ಲಾವು[4] ನಮಗೆ ಬೇಕಿಲ್ಲಾ[5]" ಯಂಬದಾಗಿ ಹೇಳಿದಲ್ಲಿ, ಆ ಜನರಾಲ ಸಾಹೇಬರು ಈ ಮಾತು ಯಾವತ್ತು ಕೇಳಿ, ಮನಸ್ಸಿನಲ್ಲಿ ಬಹಳ ನೊಂದು ಕೊಂಡು, "ತಂಮ ನಂಮ ಉಭಯ ಸರಕಾರವು ಭೇದವಾಗಿ ಕಾಣದೆ, ನಂಬಿಗೆ ಭಾಷೆಯಿಂದ ಸಲ್ಲಾ ಮೊಹರು ಆಗಿ ಇದೆ. ಅದಕ್ಕೆ ವಿಕಲ್ಪ ತರ ಬಾರದು. ಟೀಪುಸುಲ್ತಾನರ ಶೀಮೆ ತಾವು ಸಾಧಿಸಿ ಕೊಂಡು ಇರುವಂಥಾದ್ದಂನು ಬಿಟ್ಟು ಕೊಟ್ಟು, ತಂಮ ಶೀಮೆ ಸರಹದ್ದು ಬಂದುಬಸ್ತು ಮಾಡಿ ಕೊಳ್ಳ ಬೇಕು. ಟೀಪುಸುಲ್ತಾನರ ಶೀಮೆ ಸರಹದ್ದು ತಂಮ ಶೀಮೆ ಸರಹದ್ದು ಸಹಾ ಕೂಡಿ ಇದೆ. ಈ ಮೇರೆ ಇದ್ದರೆ, ಕಜಿಯಾ ಬಾಕಿ ಇದ್ಧೀತು. ಆದ್ದರಿಂದ ಈ ಸರಹದ್ದಂನು ಕಮ್ಮಸ್ಲೀಲು[6] ಬರದು, ಬಂದುಬಸ್ತು ಮಾಡುವ ಬಗ್ಯೆ, ಇಂಜನೀರು ಸಾಹೇಬರ ಕಳುಹುತ್ತೇವೆ.

1 Madras. 2 ಪರಶುರಾಮಭಾವ. 3 ಬಳಿಯ. 4 ಸಲ್ಲಾ. 5 ಬೇಕಾಗುವದಿಲ್ಲಾ. 6 Arab fac simile.

ಈಗ ನಾವು ಮುಂಬಾಯಿಗೆ ಹೋಗಿ, ಪುನಹಾ ಅವಲ್ ಮೋಸಂಮಿನಲ್ಲಿ ಕಣ್ಣೂರಿಗೆ ಬರುತ್ತೇವೆ. ಆವಾಗ್ಯೆ ತಂಮ ಭೇಟಿ ಆಗಿ, ತಂಮನಸಿಗೆ[1] ಬೇಕಾದ ಹಾಗೆ, ಸಂತೋಷ ಆಗುವಂತೆ, ಕರಾರುನಾಮೆ ಬರದು ಕೊಡುತ್ತೇವು," ಯಂಬದಾಗಿ, ಈ ಮೇರೆ ಬಹಳ ಬಗೆಯಿಂದ ಮಹಾರಾಜರವರ ಒಡಂಬಡಿಸಿ, ಕಲಿಯಿಂದ ೪೮೯೪ನೇ ಪರಿಧಾವಿ ಸಂವತ್ಸರದ ಚೈತ್ರ ಮಾಸದಲ್ಲಿ ಜನರಾಲ್ ಸಾಹೇಬರು ಫೌಜ ಸಮೇತ ತಲಚೇರಿಗೆ ಹೋದರು.

ಮಹಾರಾಜರವರು ನಾಲ್ಕುನಾಡ ಅರಮನೆಗೆ ಬಂದು, ಹೊಸ್ತಾಗಿ ಸಾಧಿಸಿ ಕೊಂಡು ಇದ್ದಂಥಾ ಟೀಪುಸುಲ್ತಾನರ ಶೀಮೆಯಂನು ಬಿಟ್ಟು, ಠಾಣ್ಯದ ಮಂದಿಯಂನು ಕರೆಸಿ ಕೊಂಡು, ತಂಮ ಸರಹದ್ದಿನ ಬಂದುಬಸ್ತು ಮಾಡಿಸಿ ಕೊಂಡು ಇದ್ದರು.

ಆ ಬಳಿಕ ಅದೇ ಸಂವತ್ಸರದ ಜ್ಯೇಷ್ಠ ಮಾಸದಲ್ಲಿ ಟೀಪುಸುಲ್ತಾನರ ಕಡೆಯಿಂದ ಲಂಗಡಾ ದಾಡಿ ಸೇಖ್ಯಿಮಾಮು ಯಂಬ ಶಿಪಾಯಿನು ಕೊಡೆಯಾಲದ[2] ಶೀಮೆ ಗಡಿ ಯಾವತ್ತೂ ವಿಚಾರಿಸಿ ಕೊಂಡು, ತಂನ ಕಡೆ ಜನ ಠಾಣ್ಯ ಇಟ್ಟು, ಬಂದುಬಸ್ತು ಮಾಡಿ ಕೊಳ್ಳುತ್ತಾ, ಪಂಜೆಯ ಬೆಳ್ಳಾರೆ ಸಮೀಪಕ್ಕೆ ಬಂದು, "ಈ ಪಂಜೆಯ ಬೆಳ್ಳಾರೆ ಯರಡು ಮಾಗಣೆಯು ನಂನ ಖಾವಂದರಾದ ಟೀಪುಸುಲ್ತಾನರ ಶೀಮೆಗೆ ಶೇರ ತಕ್ಕದ್ದು. ಇದಂನು ಬಿಟ್ಟು ಕೊಡ ಬೇಕು," ಯಂತಾ, ಆತನು ಹೇಳಿದ್ದಲ್ಲಿ, ಈ ಮಾಗಣೆ ದೊರೆಗಳವರು ಹೇಳಿ ಕಳುಹಿದ ವಿವರ: "ಪರಾಕು, ವಿಕ್ರುತು[3] ಸಂವತ್ಸರದಲ್ಲಿ, ಟೀಪುಸುಲ್ತಾನರ ತಂದೆಯಾದ ನವಾಬ್ ಹೈದರಲ್ಲೀಖಾನ್ ಬಹದ್ದರವರು ಸ್ನೇಹ ಮಾರ್ಗದಿಂದ ಕೌಲಗಾ ಕಟ್ಟಿ, ಕೊಡಗಿನ ದೊರೆಗಳವರಿಗೆ ಬಿಟ್ಟು ಇದ್ಧಾರೆ. ಅವರ ಮಗ ಟೀಪುಸುಲ್ತಾನರು ಈಗ ಕೇಳುವಂಥಾದ್ದು ವಿಹಿತವಲ್ಲಾ," ಯಂಬದಾಗಿ, ಹೇಳಿ ಕಳುಹಿದಲ್ಲಿ ಈ ಮಾತ ಕೇಳಿ, ಆ ಸೇಖ್ಯಿಮಾಮನು ಹೇಳಿದ್ದು: "ನವಾಬ್ ಹೈದರಲ್ಲೀಖಾನರಿಗೆ ಕೊಡಗಿನ ದೊರೆಗಳು ಸ್ನೇಹವಾಗಿ ಇದ್ದರು. ಆದ್ದರಿಂದ ದೋಸ್ತಿ ಉದ್ದಿಶ್ಯವಾಗಿ ಬಿಟ್ಟು ಕೊಟ್ಟು ಇದ್ದರು. ಈಗ ಕೊಡಗಿನ ದೊರೆಗಳು ಹೈದರಲ್ಲೀಖಾನರ ಮಗ ಟೀಪುಸುಲ್ತಾನರ ಸಂಗಡ ವಿರುದ್ಧಾ ಮಾಡಿ, ಇಂಗ್ರೇಜಿಯವರ ದೋಸ್ತಿ ಮಾಡಿ ಕೊಂಡು, ಟೀಪುಸುಲ್ತಾನರಿಗೆ ಶತ್ರುವಾಗಿ ಇದ್ಧಾರೆ. ಹೀಗೆ ಇರುವಲ್ಲಿ, ಈ ಶೀಮೆ ನಿಮಗೆ ಬಿಟ್ಟು ಕೊಟ್ಟದರಿಂದ ಪ್ರಯೋಜನವೇನು?" ಯಂಬದಾಗಿ ಹೇಳಿದ್ದಲ್ಲಿ, ಅದಂನು ವೀರರಾಜೇಂದ್ರ ಒಡೆಯರವರು ಕೇಳಿ, ಹೈದರಲ್ಲೀಖಾನರು ಕೊಟ್ಟಂಥಾದ್ದಂನು, ಅವರ ಮಗ ಟೀಪುಸುಲ್ತಾನರು ಅಪೇಕ್ಷೆ ಬಟ್ಟು[4] ಕೇಳಿದರೆ, ಬಿಟ್ಟು ಕೊಡುವಂಥಾದ್ದು ಸಹಜವೇ ಸರಿ, ಯಂತಾ ತಿಳಿದು, ಆ ಪಂಜೆಯ ಬೆಳ್ಳಾರೆಯಂನು ಬಿಟ್ಟು ಕೊಟ್ಟು, ಅಲ್ಲಿ ಇದ್ದ ಠಾಣ್ಯದ ಮಂದಿಯಂನು ಕರೆಸಿ ಕೊಂಡರು.

ಆ ಬಳಿಕ ಆ ಲಂಗಡಾ ದಾಡಿ ಸೇಖ್ಯಿಮಾಮನು ಯರಡು ಮಾಗಣೆಯಂನು ಬಂದುಬಸ್ತು ಮಾಡಿ ಕೊಂಡು, "ಪೂರ್ವಾರಭ್ಯದಿಂದ ಶೇರಿ ಬಂದಂಥಾ ಅಮರಸೂಳ್ಯ ಯಂಬ ಯರಡು ಮಾಗಣೆಯು ನಮಗೆ ಬರ ಬೇಕು. ಬಿಟ್ಟು ಕೊಡಿ," ಯಂಬದಾಗಿ ಕೇಳಿದಲ್ಲಿ, "ಈ ಮಾಗಣೆ ಯರಡು ನಂಮ ಕೊಡಗಿನ ಸಂಸ್ಥಾನಕ್ಕೆ ಶೇರಿದ್ದು ಇದೆ. ನಿಮಗೆ ಸಲತಕ್ಕದ್ದಲ್ಲಾ. ಇದರ ಕಳ್ಳೆ[5] ಬರ ಬೇಡ. ಮಿಗುಹಿದು ಬಂದರೆ, ಠೀಕ ತಕ್ಕದ್ದಲ್ಲಾ," ಯಂಬದಾಗಿ, ರಾಜರವರು ಆ ಮಾಗಣೆಗಳ ಅಮಿಲನ ಮುಖಾಂತರ ಹೇಳಿಸಿ, ಈ ವಿವರಕ್ಕೆ ಮಲೆಯಾಳ ರಾಜ್ಯದಲ್ಲು ಕಮೀಶನರಾಗಿ ಇದ್ದ ಮಿಸ್ತರ ವಿಲಿಯಮ್ ಹಾಲ್ಮರ್ ಸಾಹೇಬರು ಮೇಜರ ಅಲೆಕ್ಷಂದರ ಡೌ ಸಾಹೇಬರವರಿಗೆ[6] ಸಹಾ ಬರಸಿ ಕಳುಹಿದ ಕಾಗದದಲ್ಲಿ: "ಟೀಪುಸುಲ್ತಾನರು ನಂಮ ಶೀಮೆಗೆ ಪರಾಕು ಬಹಳವಾಗಿ ದುಖ್ಖಾ ಕೊಟ್ಟದರಿಂದ, ನಾವು ಅವನ ಶೀಮೆಯಲ್ಲಿ ಕೆಲವು ಶೀಮೆಯಂನು ಮೆಹನತ್ತು ಮಾಡಿ ಕಟ್ಟಿ ಕೊಂಡು ಇದ್ದಲ್ಲಿ, ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ್ ಬಹದ್ದರವರು ಈಗ ಟೀಪುಸುಲ್ತಾನರ ಸಂಗಡ ಸಲ್ಲಾವಾಗಿ ಇದೆ. ಅವರ ಶೀಮೆಯಲ್ಲಿ ನೀವು ಕಟ್ಟಿ ಕೊಂಡು ಇರುವಂಥಾದಂನು ಬಿಟ್ಟು ಕೊಟ್ಟು, ನಿಂಮ ಶೀಮೆ ಸರಹದ್ದಂನು ನೀವು ಬಂದುಬಸ್ತು ಮಾಡಿ ಕೊಳ್ಳಿ ಯಂಬದಾಗಿ, ಹೇಳಿದರಿಂದ, ಅದೇ ಮೇರೆ ನಾವು ಕಟ್ಟಿ ಕೊಂಡು ಇದ್ದಂಥಾ ಅವರ ಶೀಮೆಯಂನು ಅವರಿಗೆ ಬಿಟ್ಟು ಕೊಟ್ಟು, ನಂಮ ಶೀಮೆ ಸರಹದ್ದಂನು ನಾವು ಬಂದುಬಸ್ತು ಮಾಡಿ ಕೊಂಡು ಇದ್ಧೇವೆ. ಹೀಗೆ ಇರುವಲ್ಲಿ ಇಕ್ಕೇರಿಯವರ ಕಾಲದಿಂದ ನಂಮ ಸಂಸ್ಥಾನಕ್ಕೆ ಶೇರಿ ಬಂದಂಥಾ ಅಮರಸೂಳ್ಯ ಯಂಬ ಯರಡು ಮಾಗಣೆಯು ತಮಗೆ ಸಲತಕ್ಕದ್ದು ಇದೆ. ಬಿಟ್ಟು ಕೊಡ ಬೇಕೆಂಬದಾಗಿ, ಈಗ ಟೀಪುಸುಲ್ತಾನರ ಕ

1 ತಂಮ ಮನಸಿಗೆ. 2 Mangalore. 3 ವಿಕೃತಿ. 4 ಪಟ್ಟು. 5 ತಳ್ಳೆ. 6 Commissioner Mr. William Palmer, Major Alexander Dow.

ದೆಯವರು ಬಂದು ಇದ್ಧಾರೆ. ಈ ಮಾಗಣೆಗಳ್ಯಾವದೂ ಟಿಪ್ಪುಸುಲ್ತಾನರದು ಅಲ್ಲಾ. ಅವಾದರೆ, ಮಿಗುವಿ
ದು ಬರುತ್ತಾರೆ. ನಾವು ಬಿಡಲಿಕ್ಕಿಲ್ಲಾ. ಪೂರಾತನ್ಯಯದಿಂದ[1] ಈ ಯರಡು ಮಾಗಣೆ ನಂಮ ಸಂಸ್ಥಾನಕ್ಕೆ ಸೇರಿ
ದಂಥಾದ್ದು ಹಾವುದು ಅಲ್ಲಾ ಯಂಬದಕ್ಕೆ, ಕಲ್ಕತ್ಯೆಯಲಿ ಬಹಳ ದಿವಸ ಬದುಕಿ ಬಾಳಿದಂಥಾ ಮುಹಪಿನವರು ಇ
ದ್ಧಾರೆ, ಅವರಂನ ವಿಚಾರಿಸಿದಲ್ಲಿ ತಮಗೆ ತಿಳಿಯ ಬಂದೀತು. ಟಿಪ್ಪುಸುಲ್ತಾನರ ಕಡೆಯವರು ಮಿಗುವಿದು ಬಂದು,
ತಕರಾರು ಮಾಡುವದು ಸರಿ. ನಾವು ಕಡೆಯಲಿಕ್ಕೆ ಇಲ್ಲಾ. ಈ ವಿವರ ನೀವು ತಿಳಿಯಲಿಲ್ಲಾ ಯಂಬದಾಗಿ, ನಾಳೆ
ತಾವು ಹೇಳ್ಯಾರಿ ಯಂಬದರಿಂದ, ತಮಗೆ ಬರದು ತಿಳಿಸಿದ್ಧೇವೆ.—ಈ ಬಗ್ಯೆ ಯೇನೆಂಬದಕ್ಕೂ ಜವಾಬು ಜಲದು ಬ
ರದು ಕಳುಹಿಸ ಬೇಕು," ಯಂಬ ವಿವರವಾಗಿ ಪ್ರಮಾಥಿ ಸಂವತ್ಸರದ ಜ್ಯೇಷ್ಠ ಶು. ೨ ದಿವಸ ಬರದು, ದಾರೆಗಳು ಕ
ಳುಹಿಸಿ ಕೊಟ್ಟರು.

ಮತ್ತು ಆ ಲಂಗಡಾ ಸೇಖ್ಯಿಮಾಮು ಯಂಬವನು ಸದರಿ ಮ್ಯಾಲೆ ಬರದು ಇರುವರೀತಾ ವಿವರ ಹೇಳಿದಂಥಾ
ದ್ದ ಕೇಳದೆ, ಫೌಜ ತೆಗದು ಕೊಂಡು, ಮಿಗುವಿದು ಬಂದು, ಆ ಅಮರಸೂಳ್ಯದ ಸರಹದ್ದಿನಲ್ಲಿ ಠಾಣ್ಯೆಯ
ಇದ್ದಂಥಾ ಮಹಾರಾಜರ ಕಡೆ ಮಂದಿ ಮ್ಯಾಲೆ ಕೈ ಮಾಡಿ, ಆ ಮಾಗಣೆಗಳ ವಳನುಗ್ಗಿ, ಲೂಟಿ ಮಾಡಿ, ರೈತರ ಹಿ
ಡಿದು, ಕೆಲವರ ಕೈಕಾಲು ಕುಯಿದು[2], ಕೆಲವರ ಗಲ್ಲು ಹಾಕಿ, ಈ ಮ್ಯಾರೆ ತಕರಾರು ನಡಿಸಿದ್ದರಿಂದ, ಇದಂನು ರಾ
ಜರು ತಿಳಿದು, "ಅವನು ಮಿಗುವಿದು ಬಂದರೆ, ಚಿಂತೆ ಯೇನು ಇದೆ? ಆ ಟಿಪ್ಪುಸುಲ್ತಾನರ ಕಡೆಯವರು ಯೇನಾಂ
ದೂ ಜಲುಮೆ ಜಾಸ್ತಿ ನಡಸಿದಾಗ್ಯೂ, ನೀವು ಅವರ ಮ್ಯಾಲೆ ಕೈಮುಡುಕು ಮಾಡ ಕೆಲಸವಿಲ್ಲಾ. ಅಲ್ಲಿ ಇರು
ವಂಥಾ ಠಾಣ್ಯೆಯದ ಮಂದಿಗೂ, ರೈತರಿಗೂ[3] ಸಹಾ ತೆಗದು, ಹಳಿವಿಟ್ಟಿನಲ್ಲು ಮಡಗಿ, ದುಸುಮಾನರಿಂದ[4] ದುಖ್ಖ
ಕಟ್ಟದಂತೆ ಮಾಡಿ ಕೊಂಡು ಇರುವದು. ಇದರ ಬಂದುಬಸ್ತು ಮಾಡಲಾದೀತು ಯಂಬದಾಗಿ, ಆ ಮಾಗಣೆಗಳ ಅಮಿ
ಲರಿಗೆ ಅಪ್ಪಣೆ ಕೊಟ್ಟರು.

ಅಷ್ಟರಲ್ಲಿ ಬಂಗಾಳ್ಯದ ಲಾಡ್ ಕಾರ್ನವಾಲೀಸ್ ಸಾಹೇಬ್ ಬಹಾದ್ದರವರು ಮಹಾರಾಜರವರಿಗೆ ಬರಸಿ ಕ
ಳುಹಿದ ಕಾಗದದಲ್ಲಿ: ಟಿಪ್ಪುಸುಲ್ತಾನರ ವಕೀಲರು ನಂಮ ಸಂಗಡ ಇರುತ್ತಾರೆ. ಅವರು ವಿಹಿತ ಪಡಿಸಿದ ವರ್ತಮಾ
ನ: ತಂಮ ತಾಲೂಕಿಗೂ ಟಿಪ್ಪುಸುಲ್ತಾನರ ತಾಲೂಕಿಗೂ ಸರಹದ್ದು ಇದೆಯಷ್ಟೆ; ಆ ಸರಹದ್ದು ಪ್ರಾಂತ್ಯದ
ಲ್ಲಿ ತಂಮ ತಾಲೂಕಿನ ಜನರು ತಂಮ ಸರಹದ್ದಿನಲ್ಲಿ ಇದ್ದು ಕೊಂಡು, ಟಿಪ್ಪುಸುಲ್ತಾನರ ಶೀಮೆ ನುಗ್ಗಿ, ಕಾ
ಳ್ಗೆ ಲೂಟಿ ಮಾಡ ಬೇಕು ಯಂತಾ ಹಂಗಾಮು ಮಾಡುತ್ತಾರೆ ಯಂತಾ ಹೇಳಿದರಿಂದ, ಈ ವಿವರ ಕೇಳಿ ನಂಮ ಮನ
ಸ್ಸಿಗೆ ಕ್ಯಾರಿದ ವಿವರ ಸರ್ವ ಪ್ರಕಾರದಲ್ಲು ತಮಗೆ ತಿಳಿದು, ತಂಮ ಕಡೆಯಿಂದ ನಡೆಯಲಾರದು ಯಂದು, ನಂಮ ಮ
ನಸ್ಸಿನಲ್ಲು ನಿಶ್ಚಯ ಕ್ಯಾರಿ ಇದೆ. ಹೀಗೆ ತಿಳಿದು ಇದ್ದಾಗ್ಯೂ, ನಾವು ಕೇಳಿದ ವರ್ತಮಾನ ತಮಗೆ ತಿಳಿಸ ಬೇ
ಕೆಂಬದು ಕ್ಯಾರಿ, ಈ ಹಂಗಾಮಿನ ಬಗ್ಯೆ ಟಿಪ್ಪುಸುಲ್ತಾನರಿಗೆ ಅವರ ತಾಲೂಕಿನ ಅಮಲುದಾರರು ಬರದು ಇದ್ದ
ಅರ್ಜಿಗಳಂನು ನಂಮ ಬಳಿಗೆ ಕಳುಹಿದರಿಂದ, ತಾವು ತಿಳಿಯುವ ಬಗ್ಯೆ ಅರ್ಜಿನಕಲು ಕಳುಹಿದ್ಧೇವೆ. ಬಂದು ತ
ಲಪ್ಯಯತು[5] ಈಗ ಟಿಪ್ಪುಸುಲ್ತಾನರಿಗೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಮಿತ್ರತ್ವ ಆಗಿ, ಕವು
ಲು ಕರಾರು ದೃಢವಾಗಿ ಇದೆ. ಹೀಗೆ ಇರುವಲ್ಲಿ, ಮ್ಯಾಲೆ ಬರದ ಪ್ರಕಾರ ಹಂಗಾಮು ನಡದರೆ, ಯುಕ್ತವಲ್ಲಾ
ಹೀಗಾ ನಡದರೆ, ವಂದಾಂದು ಮಾತಿನ ಮ್ಯಾಲೆ ಜಗಳ ಹುಟ್ಟುತ್ತಾ ಇದೆ. ತಂಮ ತಾಲೂಕಿನವರು ಅವರ ತಾಲೂಕಿಗೆ
ನಡಸುವ ರೀತಿ, ಅವರ ಬಗೆಯವರು ತಂಮ ತಾಲೂಕಿಗೆ ನಡಸ್ಯಾರು ಯಂತಾ, ಕ್ಯಾರುತ್ತಾ ಇದೆ. ಆದ್ದರಿಂದ ಈ ಕಾ
ಯ್ಯ ತ್ಯಜಿಸ ತಕ್ಕದ್ದು. ಸರ್ವ ಪ್ರಕಾರದಲ್ಲು ನೂತನ ಜಗಳ ಹುಟ್ಟುವ ರೀತಿ ಮಾಡದೆ ಇರ ಬೇಕು. ಇದರಿಂ
ದ ಬರೆಯ ಬೇಕಾಗುತ್ತಾ ಇದೆ. ಟಿಪ್ಪುಸುಲ್ತಾನರಿಗೂ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಸಲ್ಲಾ ಮೊಹರು
ಆಗಿರುವ ಅಭಿಪ್ರಾಯ ತಂಮ ತಾಲೂಕಿನ ಜನರಿಗೆ ತಿಳಿಸಿ, ಮುಂದೆ ಕಟಕ್ಕೆ[6] ಇಲ್ಲದ ಹಾಗೆ ಮಾಡಿಸುವದು," ಯಂ
ಬದಾಗಿ, ಬರಸಿ ಇದ್ದರು.

ಆ ಅಮಲುದಾರರು ಬರದು ಇದ್ದ ಅರ್ಜಿನಕಲು: "ಸ್ವಾಮಿಯವರ ಕೈಯ ಅಪ್ಪಣೆ ತೆಗದು ಕೊಂಡು, ಸ್ಥಳ
ಕ್ಕೆ ಹಾಗಿ ಬಂದು, ಸಾಗು ಸಂಬು ಮಾಡುವ ಬಗ್ಯೆ ತಾಲೂಕು ಜರಾಯತ[7] ಹೂಡ ಬೇಕೆಂದು, ದೂರ ದೇಶಕ್ಕೆ ಹ್ಯಾಗಿ

---

[1] ಪ್ರಾರಂಭದ. [2] ಕೊಯಿದು. [3] Dative instead of Accusative. [4] ದುಷ್ಮನರಿಂದ. [5] ತಲುಪಿತು. [6] ತಂಟೆ. [7] ಜರಾತಿ or ಜರಾಯತಿ.

ಇದ್ದಂಥಾ ರೈತರಂನು ತರಿಸಿ, ಜಮಾ ಮಾಡಿದಲ್ಲಿ; ಮೂರು ನಾಲ್ಕು ಸಾವಿರ ಕಾಡಗ ಜನ ಬಂದು, ನಂಮ ತಾಲೂಕಿನಲ್ಲಿ ಹತ್ತು ಹನ್ನೆರಡು ಗ್ರಾಮಕ್ಕೆ ಅಗ್ನಿಪ್ರವೇಶ ಮಾಡಿ, ಲೂಟಿ ಮಾಡಿ, ಹೆಂಗಸು ಗಂಡು ಸೆರೆ ಹಿಡಿದು ಕೊಂಡು ಹೋದರು. ಆದ್ದರಿಂದ ಬಂದು ಇದ್ದ ರೈತರೆಲ್ಲಾ ಗಾಬರಿ ಆಗಿ ಓಡಿ ಹೋದರು. ಇದಕ್ಕೆ ಬದಲು ಅವರಂನು ನಾವು ತಂಬಿ ಘನುಚಾಯಿಸುವ ಬಗ್ಯೆ ಹುಜೂರು ಅಪ್ಪಣೆ ಆಗಲಿಲ್ಲಾ. ಆದ್ದರಿಂದ ಲಾಚಾರು ಇದ್ದೇವೆ. ಕಾಡಗರ ಹಂಗಾಮು ಹೆಚ್ಚು ಮೀರಿಯದೆ. ಮುಂದೆ ಗುಲಾಮಗೆ ಅಪ್ಪಣೆ ಆದ ಹಾಗೆ ನಡೆಯುತ್ತೇನೆ ಯಂಬದಾಗಿ, ಇದೇ ಮೇರೆ ಪಿರಿಯಾಪಟ್ಟಣದ ಅಮಲುದಾರನ ಅರ್ಜಿ ಬಂದು, ತೆರಕಣಾಂಬಿ ಅಮಲುದಾರನ ಅರ್ಜಿ ಬಂದು, ಬೇಲೂರು ಅಮಲುದಾರನ ಅರ್ಜಿ ಬಂದು, ಮಂಜಿರಾಬಾದು ಅಮಲುದಾರನ ಅರ್ಜಿ ಬಂದು; ಅಂತು ನಾಲ್ಕು ಅರ್ಜಿ ನಕಲು ಸಹಾ ಬಂದು ತಲುಪಿದರಿಂದ, ಆ ಬಳಿಕ ಇದಕ್ಕೆ ಜವಾಬು ಮಹಾರಾಜರು ಬರೆಸಿ ಕಳುಹಿದ ವಿವರ:

"ಹರಾಕು ಟೀಪುಸುಲ್ತಾನರು ನಂಮ ರಾಜ್ಯಕ್ಕೆ ಬಹಳ ದುಃಖ ಕೊಟ್ಟು, ಲಕ್ಷ ಹಂನೊಂದು ಸಾವಿರ ಪಯಿಂತರ ರೈತರಂನು ಹಿಡಿದು ಕೊಂಡು ಹೋಗಿ, ಹೇರಳ ತರಾರತ್ತು ನಡಿಸಿದ್ದರಿಂದ, ಅವರ ಶೀಮೆಗೆ ದುಃಖ ಕಾದುತಾ ಇದ್ದೆವು. ಅಷ್ಟರಲ್ಲಿ ಇಂಗರೇಜ ಬಹಾದ್ದರ ಸರಕಾರಕ್ಕೂ ಟೀಪುಸುಲ್ತಾನಿಗೂ ಸಲ್ಲಾ ಮೊಹರು ಆದ್ಧರಿಂದ, ಆ ತರುವಾಯ ಗವರ್ನರ್ ಮೇಜರ್ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ ಬಹಾದ್ದರವರು ಮುಂಬಾಯಿಗೆ ಹೋಗುವ ಬಗ್ಯೆ ಪಟ್ಟಣದಿಂದ ಬಂದು, ಈ ಕಾಡಗಿನ ಶೀಮೆಯಲ್ಲಿ ಇಳಿದು ಇದ್ದಲ್ಲಿ, 'ಇಂನು ಮುಂದೆ ಟೀಪುಸುಲ್ತಾನರು ನಿಂಮ ರಾಜ್ಯದ ತಳ್ಳಿ[1] ಬರಲಿಕ್ಕೆ ಇಲ್ಲಾ. ನೀವು ಅವರ ಶೀಮೆ ಮೇಲೆ ತರಾರತ್ತು ಮಾಡ ಬಾರದು. ಅವರ ತಾಲೂಕಿನ ಶೀಮೆ ತಾವು ಯಷ್ಟು ಕಟ್ಟಿ ಕೊಂಡು ಇದ್ಧೀರಾ, ಅದಂನು ಅವರಿಗೆ ಬಿಟ್ಟು ಕೊಟ್ಟು ಅಲ್ಲಿ ಇರುವಂಥಾ ತಂಮ ಕಡೆ ಜನರಂನು ತರಿಸಿ ಕೊಂಡು, ಹರಾಕು ಮೇರೆ ತಂಮ ಶೀಮೆ ಬಂದುಬಸ್ತು ಮಾಡಿ ಕೊಳ್ಳಿ' ಯಂಬದಾಗಿ, ಆ ಜನರಾಲ್ ಸಾಹೇಬರವರು ಹೇಳಿದಲ್ಲಿ, ಅದೇ ಪ್ರಕಾರ ಈಗ ನಾವು ಕಟ್ಟಿ ಕೊಂಡು ಇದ್ದಂಥಾ ಬಗೂರು ಮುಂತಾದ ಶೀಮೆಯಂನು ಬಿಟ್ಟು ಕೊಟ್ಟು, ನಂಮ ತಾಲೂಕು ಶೀಮೆ ಹಾತರ ಬಂದುಬಸ್ತು ಮಾಡಿ ಕೊಂಡು ಇರುತ್ತಿದ್ದಲ್ಲಿ, ಈಗ ಟೀಪುಸುಲ್ತಾನರ ಕಡೆ ಜನರು ಅವರ ಶೀಮೆ ಸರಹದ್ದು ಮೀರಿ ಬಂದು, ಹರಾಕಾರತ್ಯ ನಂಮ ತಾಲೂಕಿನಲ್ಲು ಇರುವಂಥಾ ಅಮರಸೂಳ್ಯ ಯರಡು ಮಾಗಣೆ ನಮಗೆ ಬಿಟ್ಟು ಕೊಡ ಬೇಕು ಯಂಬದಾಗಿ ಹೇಳಿದಲ್ಲಿ, ಈ ಮಾಗಣೆ ಯರಡು ನಂಮದು ನಿಮಗೆ ದರ್ಕಾರ ಇಲ್ಲಾ. ಇದರ ತಳ್ಳಿ ನೀವು ಬರ ಕೆಲಸವಿಲ್ಲಾ. ಮಿಗುಮೀರಿ ಬಂದರೆ, ನಾವು ತಾಳ ತಕ್ಕದ್ದಿಲ್ಲಾ[2] ಯಂಬದಾಗಿ ಹೇಳಿದಾಗ್ಯೂ, ಕೇಳದೆ ಮಿಗುಮೀರಿ ಬಂದು, ನಂಮ ಕಡೆ ಜನರಿಗೆ[3] ಹೊಡದು, ನಂಮ ನಂಬಿದ ರೈತರಂನು ಹಿಡಿದು, ಅವರಲ್ಲಿ ಕೆಲವರ ಕೊತ್ತಲು ಕುಯಿದು[4], ಕೆಲವರಿಗೆ ಗಲ್ಲು ಹಾಕಿ, ಈ ಮೇರೆ ನಾನಾ ಪ್ರಕಾರ ಹಲಾಕು ಮಾಡಿ, ತರಾರತ್ತು ನಡಸಿದ್ದರಿಂದ, ಅವರ ತರಾರತ್ತಿನ ಮೇರೆ ನಂಮ ಕಡೆಯಿಂದಲು ತಂಬಿ ಘನುಚಾಯಿಸಲಾರದೆ ಬಿಟ್ಟದ್ದಲ್ಲಾ. ನಾಳೆ ಈ ನ್ಯಾಯ ದರಿಯಾಪ್ತು ಆಗುವಾಗ್ಯೆ, ಜಬರದಸ್ತಿ ನಡದದ್ದು ನಂಮ ಕಡೆಯಿಂದಲ್ಯೋ? ಅವರ ಕಡೆಯಿಂದಲ್ಯೋ? ಯಂಬದಂನು ತಿಳಿಯದೆ, ನಂಮ ಕಡೆಯಿಂದಲ್ಲೇ ತರಾರತ್ತು ನಡಸಿದರು ಯಂತಾ ತಂದೀಕು ಯಂಬದಾಗಿ, ನಾವು ಈ ಮೇರೆ ತಿಳಿದು, ಈಗ ಅವರು ಮುಂಚಿದಾಗ್ಯೂ, ಅವರ ಮೇಲೆ ಮುಂಚಿಸ ಬಾರದು, ಯಾತರಿಂದ ಯಂದರೆ, ನಾಳೆ ಇಂಗರೇಜ ಬಹಾದ್ದರ ಸರಕಾರದವರು ಯಾರ ಕಡೆಯಿಂದ ಜಬರದಸ್ತಿ ನಡದು ಇದೆ ಯಂತಾ ವಿಚಾರಿಸ್ಯಾರು. ಆವಾಗ್ಯೆ ಈಗ ನಡಸಿದಂತಾ ತರಾರತ್ತು ತಪ್ಪು ಅವರ ಮೇಲೆ ಸಾಬೂತು ಆಗ ಬೇಕು ಯಂಬದಂನು ಕುರಿತು, ಅವರ ಕಡೆ ಜನರು ಸರಹದ್ದು ದಾಟಿ, ಶೀಮೆ ವಳಗೆ ಬಂದಾಗ್ಯೂ, ನೀವು ಅಡ್ಡಿ ಮಾಡ ಬೇಡ. ಅವರು ಬಂದ ಹಾಗೆ, ನೀವು ಕಾಲು ಹಿಂದಟ್ಟು, ಕೆಲವು ದಿವಸ ಶೀಮೆ ವಳಗೆ ಬಂದು ಇರಲಿ ಯಂತಾ, ಆ ಮಾಗಣೆಗಳ ಸರಹದ್ದಿನಲ್ಲಿ ಠಾಣ್ಯ ಇದ್ದ ಮಂದಿಗೆ ಅಪ್ಪಣೆ ಕೊಟ್ಟು, ಅದೇ ಮೇರೆ ಆ ಯರಡು ಮಾಗಣೆ ಠಾಣ್ಯದವರಂನು ತರಿಸಿ ಕೊಂಡೆವು. ಈಗ ಟೀಪುಸುಲ್ತಾನರ ಕಡೆ ಜನರು ಅಮರಸೂಳ್ಯದ ಮಾಗಣೆಗೆ ಬಂದು ಇದ್ಧಾರೆ. ನಂಮ ಕಡೆ ಜನರು ಅವರ ಶೀಮೆ ತಳ್ಳಿ ಹೋಗದೆ ಇದ್ದಾಗ್ಯೂ, ಹರಾಕಾರತ್ಯ ನಂಮ ತಾಲೂಕು ಆಗಿ ಇರುವಂ

---

[1] ತಳ್ಳಿಗೆ. [2] ತಾಳ ತಕ್ಕದ್ದು ಇಲ್ಲಾ. [3] ಜನರಂನು. [4] ಕೊಯಿದು.

ಥಾ ಅಮರಸುಳ್ಯ ಯರಡು ಮಾಗಣೆಯಂನು ಕಟ್ಟಿ ಕೊಂಡು, ಇಂಥಾ ಶರಾರತು ಅವರು ನಡಸಿದಾಗ್ಯೂ, ನಾವು ಅವರ ಶೀಮೆಗೆ ಶರಾರತು ಮಾಡಿನಲಿಲ್ಲಾ. ಇಂನು ಮುಂದು ನಾವು ಅವರ ಮೇಲೆ ಶರಾರತು ನಡಸಲಿಕ್ಕೆ ಇಲ್ಲಾ. ಪರಂತು ನವಾಬ ಹೈದರಲ್ಲೀಖಾನರು ಬಿದರೂರಂನು ಕಟ್ಟಿ ಕೊಂಡು, 'ಇದು ಯಾವತ್ತು ನಂಮ ಸ್ವಾಧೀನವಾಯಿತು. ಇದರ ತಾಲೂಕಿನ ಶೀಮೆ ಯಾವದು ಇದೆ! ಈ ಅಮರಸುಳ್ಯ ಯರಡು ಮಾಗಣೆ ಇಕ್ಕೇರಿಗೆ ಶೇರ ತಕ್ಕದ್ದಾ? ಕೊಡಗಿಗೆ ಶೇರಿ ಇದೆಯೋ?' ಯಂಬದಾಗ, ದರಿಯಾಪ್ತು ಮಾಡಿ, ಇದು ಕೊಡಗಿನ ಸಂಸ್ಥಾನಕ್ಕೆ ಶೇರಿದ್ದೆನೆ. ಯಂಬದಾಗ, ತಿಳಿದು, ಅದು ನಮಗೆ ದರಕಾರ ಇಲ್ಲಾ ಯಂಬದಾಗ, ಇದರ ತಳ್ಳಿ ಬಾರದೆ ಬಿಟ್ಟು ಇದ್ಧಾರೆ. ಈಗ ಅವರ ಮಗ ಟೀಪುಸುಲ್ತಾನರು ತಕರಾರು ಮಾಡಿ, ನಮಗೆ ಶೇರಿದಂಥಾ ಅಮರಸುಳ್ಯ ಯರಡು ಮಾಗಣೆಯಂನು ಕಟ್ಟಿ ಕೊಂಡು, ತರೀಕತು ಮಾಡುತ್ತಾರೆ. ಈ ಪ್ರಕಾರ ಅವರು ಮಾಡುವಾಗ್ಯೆ, ಅದಕ್ಕೆ ತಕ್ಕ ಹಾಗೆ ಮಾಡಲಾರದೆ, ನಾವು ಬಿಟ್ಟದ್ದು ಅಲ್ಲಾ. ದೋಸ್ತರ ಮಾತ ಮೀರ ಬಾರದು ಯಂಬದರಿಂದ, ಊಟಾರಾಗಿ ಆ ಯರಡು ಮಾಗಣೆಯಂನು ಬಿಟ್ಟು ಇದ್ಧೇವೆ. ಈ ಮಾತು ವಿಚಾರಿಸಿ ತಿಳಿಸಿ ಕೊಟ್ಟರೆ, ಬಹಳ ಮೆಹೆರಬಾನಿಗಿ ಆದೀತು. ಇದಲ್ಲದೆ ನಮಗೂ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ ಬಹಾದ್ದರವರಿಗೂ ದೋಸ್ತಿ ಮೊಕರರು ಆಗಿ, ಆವಾಗ್ಯೆ ಮುಂಬಾಯಿ ಫೌಜ ಬಂದು, ನಂಮ ಶೀಮೆಯಲ್ಲಿ ಇಳಿದು ಇದ್ದದಲ್ಲಿ, ಈ ವರ್ತಮಾನ ಟೀಪುಸುಲ್ತಾನರು ಕೇಳಿ, 'ತಾವು ನಂಮ ಸಂಗಡ ದೋಸ್ತಿ ಮಡಗ ಬೇಕು: ಇಂಗ್ರೇಜರ ದೋಸ್ತಿ ಮಡಗ ಬಾರದು,' ಯಂಬದಾಗಿ, ಚಿತ್ತೂರಿ ಮಾರ್ಗದಿಂದ ಅವರ ಹೆಸರಿಂದ ಕಾಗದ ವಂದು, ಮೀರಸಾದಿಕ ಮೋಗ್ಣೆಯರ ಹೆಸರಿಂದ ಸಹಾ ಕಾಗದಗಳ ನಂಮ ಹೆಸರಿಗೆ ಬರೆಸಿ, ಇಂಗ್ರೇಜ ಬಹಾದ್ದರ ಸರಕಾರದ ಮುಂಬಾಯಿ ಫೌಜಂನು ನಾವು ದಗಾ ಮಾಡುವ ಬಗ್ಯೆ, ಹಾಶಾರ ದಳಾಯತರ ಕೈಯು ಕೊಟ್ಟು ಕಳುಹಿಸಿದಲ್ಲಿ, ಆ ಕಾಗದಗಳ ತಂದಂಥಾ ಜನರಿಗೆ ಪಹರಾದಲ್ಲಿ ಮಡಗಿಸಿ, ಆ ಕಾಗದಗಳಂನು ಗವರನರ ಮೇಜರ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ ಬಹಾದ್ದರವರಿಗೆ ತೋರಿಸಿ, ಆ ವಿವರವೆಲ್ಲಾ ಅವರಿಗೆ ತಿಳಿಸಿ, ಆ ತರುವಾಯ: 'ನಮಗೆ ಇರುವದು ವಂದು ನಾಲಿಗೆ. ಅದಂನು ಇಂಗ್ರೇಜ ಬಹಾದ್ದರವರಿಗೆ ಕೊಟ್ಟು ಇದ್ಧೇವೆ. ನಿಮಗೆ ವಂದು ನಾಲಿಗೆ ಕೊಡುವದಕ್ಕೆ ನಮಗೆ ಯರಡು ನಾಲಿಗೆ ಇಲ್ಲಾ,' ಯಂಬದಾಗಿ, ಜಬಾಬು ಬರೆಸಿ ಕಳುಹಿದರಿಂದ, ವಿರುದ್ಧಾ ಮಡಗಿ ಕೊಂಡು, ಇವರು ಮುಂಬಾಯಿ ಲಷ್ಕರು ಇಲ್ಲಿಗೆ ಬರುವ ಬಗ್ಯೆ ಮಾರ್ಗ ಕೊಟ್ಟು, ದಂಡಂನು ಶ್ರೀರಂಗಪಟ್ಟಣಾ ಪರಿಯಂತರ ತಲಪಿಸಿದರು, ಯಂಬದರಿಂದ, ನಂಮ್ಮೇಲೆ ಇಲ್ಲ[1] ಸಲ್ಲದ ಮಾತು ಬರದು ತಂಮ ಬಳಿಗೆ ಕಳುಹುತ್ತಾರೆ. ಅದು ಯಾತರಿಂದ ಯಂದರೆ— ಇಂಗ್ರೇಜ ಬಹಾದ್ದರರ ಸಂಗಡ ದೋಸ್ತರಾಗಿ ಇರುತ್ತೇವೆ. ಅದಕ್ಕೆ ವಿಕಲ್ಪ ಮಾಡಿ, ನಂಮ್ಮೇಲೆ ತಂಮ ಶಿಟ್ಟು ಉಂಟು ಮಾಡ ಬೇಕು ಯಂಬದಾಗಿ, ಆ ಮೇರೆ ಬರೆಯುತ್ತಾ ಇದ್ದಾರೆ. ಅದಂನು ನಿಶ್ಚಯ ಯಂತಾ ತಿಳಿಯ ಬಾರದು. ನಂಮ ದೋಸ್ತರಾದಂಥಾ ಇಂಗ್ರೇಜ ಬಹಾದ್ದರ ಸರಕಾರದವರು ಮಾಡಿರುವ ಸಲ್ಲಾಕ್ಕೆ ನಾವು ಮೀರಲಿಕ್ಕಿಲ್ಲಾ," ಯಂಬದಾಗಿ, ಬರದು ಕಳುಹಿಸಿದರು. ಇದೇ ವಿವರವಾಗಿ ಮುಂಬಾಯಿ ಗವರನರ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ ಬಹಾದ್ದರವರಿಗೆ ಕಾಗದ ವಂದು ಬರೆಸಿ ಕಳುಹಿದರು.

"ಈ ಅಮರಸುಳ್ಯದ ಮಾಗಣೆಗೆ ಟೀಪುಸುಲ್ತಾನರ ಕಡೆಯವರು ವಳ ನುಗ್ಗಿ ಬಂದು, ಈ ಪ್ರಕಾರ ಶರಾರತು ನಡಸುತ್ತಾರೆ," ಯಂಬ ಅಖಬಾರಾಯವಾಗಿ, ಮಲೆವಾರ ಕಮೀಶನ್ ಮೆಸ್ತರ ಉಯಿಲಿಂಗ ಪಾಮರ ಸಾಹೇಬರಿಗೆ, ಮೇಜರ ಅಲೆಕಸಾಂಡರ ಡೋ ಸಾಹೇಬರವರಿಗೆ[2] ಕಾಗದ ವಂದು ಬರೆಸಿ, ಕಳುಹಿಸಿ ಕೊಟ್ಟರು.

ಇದೇ ಸಾಧಾರಿ ಸಂವತ್ಸರದ ಜ್ಯೇಷ್ಠ ಶು ೮ ಲಲು ಈ ಇಬ್ಬರು ಕಮೀಶನ್ ಸಾಹೇಬರು ಬರೆಸಿ ಕಳುಹಿದ ಕಾಗದದಲ್ಲಿ: "ಈಗ ನಮಗೂ ಟೀಪುಸುಲ್ತಾನರಿಗೂ ನಂಬಿಗೆ ಖಾಷೆಯಿಂದ ಸಲ್ಲಾ ಆಗಿ ಇದೆ. ವಂದು ವಚನ ಹಾಕಿ, ಯೇನಾದರೂ ಕಜಿಯಾ ಬರಲಿಕ್ಕಿಲ್ಲಾ. ಅಥವಾ ಕಜಿಯಾ ಮುಲುಕಿನ ಶಿವಾರೆಗೆ ಬಂದರೆ, ದೋಸ್ತಿ ಮಾರ್ಗದಿಂದ ನಂಮ ಕಡೆ ವಬ್ಬ ಶಯಾಣ ಗೃಹಸ್ಥಗೆ[3] ಕಳುಹಿಸಿ, ಯರಡು ಸವಾದ್ದಂನು ಮಾಲುಂ ಮಾಡಿಯೇವು. ಆ ಅಮರಸುಳ್ಯ ಯರಡು ಮಾಗಣೆ ನಗರದ ತಾಲೂಕು ಅಲ್ಲದೆ, ತಂಮ ತಾಲೂಕು ಆಗಿ ಇದ್ದರೆ, ತಂಮ ಮೇಲೆ ಟೀಪುಸುಲ್ತಾನರ ಶರಾರತು ನಡೆಯಲಿಕ್ಕೆ ಇಲ್ಲಾ. ಟೀಪುಸುಲ್ತಾನರ ಕಡೆ ಮನುಷ್ಯರು ತಂಮ ಮುಲುಕಿನ

1 ನಂಮ ಮೇಲೆ ಇಲ್ಲದ. 2 William Palmer. Major Alexander Dow. 3 Dative instead of accucative.

ಲ್ಲಿ ಬರಲಿಕ್ಕೆ ಬಿಡದ ಹಾಗೆ, ಬಂದುಬಸ್ತು ಮಾಡುವದು. ಆ ಬಳಿಕ ಟಿಪುಸುಲ್ತಾನನ ಕಡೆ ಸರದಾರರು ಯಾರಾದರೂ ಬಂದು, ಆ ಯರಡು ಮಾಗಣೆಯನ್ನು ಕೇಳಿದರೆ, ಈ ಯರಡು ಮಾಗಣೆ ನಿಮ್ಮದಲ್ಲಾ, ನಂಮ ತಾಲೂಕು ಇದೆ. ಕರಾರು ನಲ್ಲಾ ಆದ ಪ್ರಕಾರ ಇಂಗರೇಜ ಸಾಹೇಬರು ಬಂದುಬಸ್ತು ಮಾಡಿ ಇದ್ದಾರೆ. ಈ ಹಕೀಕತ್ತನ್ನೆಲ್ಲಾ ಇಂಗರೇಜ ಬಹಾದ್ದರ ಸರಕಾರಕ್ಕೆ ಬರದು ಕಳುಹುತ್ತೇವೆ. ಅವರು ಅದರ ಬಂದುಬಸ್ತು ಮಾಡ್ಯಾರು ಯಂತ, ತಾವು ಜವಾಬು ಹೇಳುವದು. ಇದರ ಮೇಲು ಅವರ ಸರದಾರರು ಯಾರಾದರೂ ಬಂದರೆ, ನೀವು ತಲಚೇರಿಯಲ್ಲಿ ಇರುವ ಸರದಾರರ ಬಳಿಗೆ ಹೋಗಿ, ಇದರ ಜವಾಬು ಸವಾಲು ಮಾಡು ಯಂತ ಹೇಳುವದು. ಆಗ ಕರಾರು ನಲ್ಲಾ ಆದ ಪ್ರಕಾರ ಕಮಾಶೀಕು ಮಾಡಲಾದೀತು! ಆ ಬಳಿಕ ಇಂಥಾ ಕಜಿಯಾ ಬರಲಿಕ್ಕಿಲ್ಲ," ಯಂಬದಾಗಿ, ಬರದು ಕಳುಹಿದರಿಂದ, ಅದೇ ಪ್ರಕಾರ ವೀರರಾಜೇಂದ್ರ ವಡೆಯರವರು ಆ ಅಮರಸೂಳ್ಯ ಯರಡು ಮಾಗಣೆ ಸರಹದ್ದನ್ನು ಬಂದುಬಸ್ತು ಮಾಡಿ ಕೊಂಡು, ಇರುತ್ತಾ ಇದ್ದರು.

ಆ ಬಳಿಕ ವೀರರಾಜೇಂದ್ರ ವಡೆಯರವರು ಪರಾಕು ಜನರಾಲ್ ರಾಬಟ್ ಆಬರಕರಂಬಿ ಸಾಹೇಬ ಬಹಾದ್ದರವರು ಶ್ರೀರಂಗಪಟ್ಟಣಕ್ಕೆ ಟಿಪುಸುಲ್ತಾನನ ಮೇಲೆ ಲಡಾಯಕ್ಕೆ ಹೋಗುವ ಬಗ್ಯೆ ಬಂದು ಇದ್ದದಾಗ್ಯೆ, ರಾಜರು ಆ ಜನರಾಲ್ ಸಾಹೇಬರವರು ಸಹಾ ಒಂದು ತಂಬಿನ ಪಳಿಗೆ ಕುಂತು[1], ಮನಸುಬಾ ಮಾಡಿದ ಯಡೆವಾಳ್ಕನಾಡ ಪಳಿಕವಾದ ಮಗುಲ ಗ್ರಾಮದಲ್ಲಿ ಕಲಿ ಸಂದ ೪೮೯೨ನೆ ಪರಿಧಾವಿ ಸಂವತ್ಸರದ ಪೌಷ್ಯ ಮಾಸದಲ್ಲಿ, ಯಲ್ಲಾ ಜನಸಿಗೂ ತಿಳಿಯುವ ಬಗ್ಯೆ, ಅಲ್ಲಿ ಪಯಾಟೆ[2] ಕಟ್ಟಿಸುವದಕ್ಕೆ ನಿಶ್ಚಯ ಮಾಡಿ, ಅಪ್ಪಣೆ ಕೊಟ್ಟು, ಅದಕ್ಕೆ ವೀರರಾಜೇಂದ್ರಪಯಾಟೆ ಯಂಬ ಹೆಸರು ಮಡಗಿದರು.

ಈ ಮೇರೆ ಇರುತ್ತಿದ್ದದರಲ್ಲಿ, ಇದೇ ಸಂವತ್ಸರದ ಮಾರ್ಗಶಿರ ಬ ೧೨ಲು ಮೇಜರ ಜನರಾಲ್ ರಾಬಟ್ ಆಬರಕರಂಬಿ ಸಾಹೇಬ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ, "ಈಗ ನಮಗೆ ಕೊಚಿ, ಪಾಲಗಾಟ್ಚೇರಿಗೆ[3] ಸಹಾ ಹೋಗುವ ಬಗ್ಯೆ ಜರೂರಾಗಿ ದರಕಾರ ಉಂಟು, ಆದ್ದರಿಂದ ತಂಮ ಭೇಟಿ ತೆಗದು ಕೊಂಬ ಬಗ್ಯೆ ಅನುಕೂಲವಾಗಲಿಲ್ಲಾ. ಅಲ್ಲಿಂದ ಮನಹಾ ತಲಚೇರಿ ಕಂನಾನೂರ[4] ಕಡೆಗೆ ಬಂದ್ಯಾಗ್ಯೆ, ಭೇಟಿ ತೆಗದು ಕೊಂಡು, ಯಾವತ್ತು ಪ್ರಸಂಗ ಹಕೀಕತ್ತು ಮಾತನಾಡಲಾದೀತು. ಟಿಪುಸುಲ್ತಾನನ ಶೀಮೆ ಸರಹದ್ದು, ತಂಮ ಶೀಮೆ ಸರಹದ್ದು ನ್ಯಾಯ ತೀರಿಸುವಂಥಾದ್ದು, ನಮಗೆ ಜರೂರು ಇದೆ; ಯಾವ ಬಗ್ಯೆ ಯಂದರೆ, ಮುಂದೆ ಅದರಿಂದ ಕಜಿಯಾ ಬರಲಾಗದು. ಈ ಬಗ್ಯೆ ಈ ಕಾಗದದ ಸಂಗಡ ಮೇಸ್ತರ ಇಂಜನೇರು ಇಮಿಟ್[5] ಸಾಹೇಬರನ್ನು ಕೊಡಗ ಶೀಮೆಗೆ ಕಳುಹಿಸಿ ಇದ್ದೇವೆ. ಟಿಪುಸುಲ್ತಾನನ ಶೀಮೆ ಸರಹದ್ದು, ತಂಮ ಶೀಮೆ ಸರಹದ್ದು ಸಹಾ ನ್ಯಾಯ, ತಮಸೀಲಲ್ಲು ಬರಕೊಂಬ ಬಗ್ಯೆ, ಈ ಇಂಜನೇರು ಸಾಹೇಬರು ಮಹಾ ಬುದ್ಧಿಶಾಲಿಯರಾಗಿ ಇದ್ದಾರೆ; ಈ ಮುಲುಕಿನ ಸರಹದ್ದು ಬರೆಯುವ ಬಗ್ಯೆ ತಾವು ಯಷ್ಟು ಮೆಹರಬಾನಿಗಿ ಮದತ್ತು ಮಾಡಲಾದೀತ್ಯೊ, ಅಷ್ಟು ಮದತ್ತು ಮಾಡ ಬೇಕು, ಇವರು ಚಂನಾಗಿ ಆಕ್ಷೆ ಮಾಡಿ ಬರಕೊಂಡಾರು," ಯಂಬದಾಗ್ಯೆ, ಬರೆಸಿ ಇದ್ದರು.

ಇದೇ ಮೇರೆ ಆ ಇಂಜನೇರು ಸಾಹೇಬರು ಬಂದು, ಕೊಡಗಿನ ಶೀಮೆ ಸರಹದ್ದಿಗೆ ಹೋಗಿ, ಅಮರಸೂಳ್ಯ, ಯೆಳುಸಾವಿರಶೀಮೆ ಮುಂತಾದ ಗಡಿ ಸರಹದ್ದನ್ನು ನ್ಯಾಯ ವಿಚಾರಿಸಿ, ಸರಹದ್ದಿನಲ್ಲಲು ಕಲ್ಲುಗಳ ನೆಟ್ಟು, ತಮಸೀಲಲ್ಲು ಬರಕೊಂಡು, ಕಲಿ ಸಂದ ೪೮೯೪ನೆ ಪರಮಾದೀಚ ಸಂವತ್ಸರದ ಚೈತ್ರ ಮಾಸದಲ್ಲಿ ಕಂನಾನೂರಿಗೆ ಹೋದರು.

ಅಷ್ಟು ಹೊತ್ತಿಗೆ ಗವರನರ್ ಮೇಜರ ಜನರಾಲ್ ರಾಬಟ್ ಆಬರಕರಂಬಿ ಸಾಹೇಬ ಬಹಾದ್ದರವರು, ಸರಜನರಾಲ್ತನದ[6] ಹುದ್ದಾ ಆಗಿ, ಬಂಗಾಳಕ್ಕೆ ಹೋಗ ತಕ್ಕ ಬಗ್ಯೆ, ಕಂನಾನೂರಿಗೆ ಬಂದು, ತಂಮ ಭೇಟಿ ಆಗ ಬೇಕೆಂಬ ಅಪೇಕ್ಷೆ ಇದೆ ಯಂಬದಾಗಿ, ಮಹಾರಾಜರವರಿಗೆ ಕಾಗದ ಬರೆಸಿ, ಮೇಸ್ತರ ಮಾಸನ್[7] ಯಂಬ ಆಫೀಸರರ ಕೈಯ ಕೊಟ್ಟು, ಒಂದು ಕುಂಪನಿ ಶಿಪಾಯಿಗಳ ಸಹಾ ಕೂಡಿಸಿ ಕಳುಹಿಸಿ ಕೊಟ್ಟಲ್ಲಿ, ಅದು ಬಂದು ತಲುಪುತ್ತಲೆ, ವೀರರಾಜೇಂದ್ರ ವಡೆಯರವರು ಕಂನಾನೂರಿಗೆ ಹೋಗಿ, ಆ ಜನರಾಲ್ ಸಾಹೇಬರವರ ಕಂಡು, ಭೇಟಿ ಆಗಿ, ಉಭಯಸ್ತರು ಸಂತೋಷದಿಂದ ಯೆಳೆಂಟು ದಿವಸ ಅಲ್ಲಿ ಇರುವಾಗ್ಯೆ, ಟಿಪುಸುಲ್ತಾನರು ಹೇಳಿದ ಮೇರೆ ಇಷ್ಟಹಾಕು ನಾಲ್ಕು

1 ಕೂತು. 2 ಪೇಟೆ. 3 Cochin, Palghaut. 4 Tellicherry, Cannanore. 5 Mr. Engineer Emmett. 6 Commander in chief ship. 7 Mr. Mason, an officer.

ಸಾವಿರ ರೂಪಾಯಿ ವರುಷಂಪ್ರತಿಯಲ್ಲು ಇಂಗ್ರೇಜ ಬಹಾದ್ದರ ಸರಕಾರಕ್ಕೆ ಕೊಡ ಬೇಕಲ್ಲಾ ಯಂತಾ, ಆ ಜನರಾಲ್ ಸಾಹೇಬರು ಕೇಳಿದಲ್ಲಿ, ದೊರೆಗಳವರು ಜವಾಬು ಹೇಳಿದ ವಿವರ:

"ಪರಾತರಕ್ಷೆಯ ನಂಮ ಸಂಸ್ಥಾನದಿಂದ ಪರ ಸಂಸ್ಥಾನಕ್ಕೆ ದ್ರವ್ಯ ಕೊಡಲೂ ಇಲ್ಲಾ; ಪಟಬರು ತೆಗದು ಕೊಳ್ಳಲೂ ಇಲ್ಲಾ. ಕೆಲು ಕಾಲದ ಮುಂದೆ ಕೊಡಗಿನ ಸಂಸ್ಥಾನದ ದೊರೆ ಮಕ್ಕಳಿಗೆ ತಂಮ ಪಳಗೆ ನ್ಯಾಯವಾಗಿ ಗೃಹಛಿದ್ರವಾದ್ದರಿಂದ, ಆವಾಗಯೆ ಹೈದರಲ್ಲೀಖಾನ್ ಬಹಾದ್ದರವರು ನಂಮ ತಂದೆಯವರಾದ ಲಿಂಗರಾಜೇಂದ್ರ ವಡೆಯರವರಿಗೆ ನಂಬಿಗೆ ಭಾಷೆ ಕೊಟ್ಟು ಕರೆಸಿ, ಉಪಾಯತಂತ್ರದಿಂದ ನಂಮ ಕೊಡಗಿನ ಶೀಮೆಯಂನು ಸಾಧಿಸಿ ಕೊಂಡು, ವಂಬತ್ತು[1] ಹತ್ತು ವರುಷ ಪರ್ಯಂತರ ಆಕ್ರಮಿಸಿ ಕೊಂಡು ಇದ್ದಲ್ಲಿ, ಆ ಬಳಿಕ, ಮತ್ತಾಟಬರ ಸಹಾಯ ಸಂಪತ್ತು ಇಲ್ಲದೆ, ಮಹಾದೇವನ ಕಟಾಕ್ಷದಿಂದ ಟೀಪುಸುಲ್ತಾನರ ಸಂಗಡ ನಾನಾ ಪ್ರಕಾರ ಯುದ್ಧಾ ಮಾಡಿ, ಕೊಡಗಿನ ರಾಜ್ಯ ಯಾವತ್ತಂನು ನಾವೇ ಸಾಧಿಸಿ ಕೊಂಡು ಇರುವಾಗ್ಯೆ, ಆ ಬಳಿಕ ಯರಡೂವರೆ ವರುಷದ ಮೇಲೆ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದವರಿಗೆ ಟೀಪುಸುಲ್ತಾನರ ಕಡೆಗೆ ಹೋಗುವ ಬಗ್ಯೆ, ಕೊಡಗಿನ ಶೀಮೆಗಾಗಿ ಮಾರ್ಗ ಕೊಡ ಬೇಕು ಯಂತಲೂ, ಮಿತ್ರತ್ವ ಶಾಶ್ವತವಾಗಿ ಇರ ಬೇಕು ಯಂತಲೂ, ದ್ಯಾಸ್ತಿ ಸ್ಥಿರವಾಗ ತಕ್ಕ ಬಗ್ಯೆ ಭಾಷಾಪತ್ರಿಕೆಗಳ ಬರೆಸಿ, ಅದರಲ್ಲಿ ವಂದಂನು ಕುಂಪನಿ ಸರಕಾರಕ್ಕೆ ತೆಗದು ಕೊಂಡು, ಮತ್ತೊಂದು ನಮಗೆ ಕೊಟ್ಟು ಇರುವದರಿಂದ, ಅದ್ದೇ ಮೇರೆ ಇಂಗ್ರೇಜ ಬಹಾದ್ದರ ಸರಕಾರದ ಫೌಜಿಗೆ ನಂಮ ಶೀಮೆಯಲ್ಲಿ ಮಾರ್ಗ ಕೊಟ್ಟು, ನಂಮಿಂದ ಆಗ ತಕ್ಕ ಸಹಾಯವಂನು ಖೈರ್ಕಾಯಿ ಮಾರ್ಗದಿಂದ ಪ್ರಯತ್ನ ಬಟ್ಟು[2] ಮಾಡಿ ಇದ್ದೇವೆ. ಮಲೆಯಾಳ ರಾಜರ ರಾಜ್ಯ ಟೀಪುಸುಲ್ತಾನರು ಆಕ್ರಮಿಸಿ ಕೊಂಡು ಇರುವಾಗ್ಯೆ, ಇಂಗ್ರೇಜ ಬಹಾದ್ದರವರು ಲಡಾಯಿ ಮಾಡಿ, ಆ ಶೀಮೆಯಂನು ತೆಗದು ಕೊಂಡು, ಮಲೆಯಾಳದ ರಾಜರಿಗೆ ಆ ಶೀಮೆಯಂನು ಕೊಟ್ಟು ನಿಲ್ಲಿಸುವಾಗ್ಯ, ಆ ರಾಜರು ಇಷ್ಟು ಇಷ್ಟು ರೂಪಾಯಿ ಟೀಪುಸುಲ್ತಾನರಿಗೆ ಕೊಡುತಾ ಇದ್ದಂಥಾದಂನು ಇಂಗ್ರೇಜಿಯವರು ತೆಗದು ಕೊಳ್ಳಲಿ ಯಂತಾ ಟೀಪುಸುಲ್ತಾನರು ಹೇಳುವಂಥಾದ್ದು ಸರಿ. ಇಂಗ್ರೇಜಿಯವರು ಮಲೆಯಾಳದ ರಾಜ್ಯವಂನು ಆ ರಾಜರಿಗೆ ಕೊಟ್ಟು, ಟೀಪುಸುಲ್ತಾನರು ಹೇಳಿದ ಮೇರೆ, ಅವರ ಕೈಯಿಂದ ಖಂಡ್ಣೀ ಹಾಗಿ ತೆಗದು ಕೊಳ್ಳುವಂಥಾದ್ದು ಧರ್ಮವೇ ಸರಿ. ನಂಮ ರಾಜ್ಯವಂನು ಟೀಪುಸುಲ್ತಾನರ ಸಂಗಡ ನಂಮ ಭುಜಬಲ ಸಾಮರ್ಥ್ಯದಿಂದ ಜಗಳಾ ಮಾಡಿ ತೆಗದು ಕೊಂಡು, ನಾವೇ ಆಳುತ್ತೇವೆ, ಇಂಗ್ರೇಜಿಯವರಿಗೆ ನಾವು ಮಿತ್ರತ್ವ ಉದ್ದಿಶ್ಯ ನಂಮ ಶೀಮೆಯಲ್ಲಿ ಮಾರ್ಗ ಕೊಟ್ಟು, ಬೇಕಾದ ಸಹಾಯ ಉಪಕಾರ ಮಾಡಿದರಿಂದ, ಕೊಡಗಿನ ರಾಜರವರ ಕೈಯಿಂದ ಇಪ್ಪತ್ತನಾಲ್ಕು ಸಾವಿರ ರೂಪಾಯಿ ತೆಗದು ಕೊಳ್ಳಿ ಯಂತಾ, ಟೀಪುಸುಲ್ತಾನರು ಹೇಳಿದ್ದಕ್ಕೆ ಅವರ ಮಾತಿನ ಮೇಲೆ ನಂಮ ಕೂಡೆ ಇಂಗ್ರೇಜ ಬಹಾದ್ದರ ಕುಂಪನಿ ಸರ ಜನರಾಲರು ಕೇಳುವಂಥಾದ್ದು ಧರ್ಮವಲ್ಲಾ" ಯಂಬದಾಗಿ, ಮಹಾರಾಜರವರು ಹೇಳಿದಲ್ಲಿ, ಆ ಜನರಾಲ್ ಸಾಹೇಬರು ಹೇಳಿದ್ದು: "ನಾವೇನಾದರೂ ಉಪಕಾರ ಮಾಡಿ, ತಂಮ ಶೀಮೆ ತಮಗೆ ಸಾಧಿಸಿ ಕೊಡಲಿಲ್ಲಾ. ನಂಮ ಉಪಕಾರದಿಂದ ತಂಮ ರಾಜ್ಯ ತಾವು ಸಾಧಿಸಿ ಕೊಳ್ಳಲಿಲ್ಲಾ. ತಂಮ ಸಾಮರ್ಥ್ಯದಿಂದಲೇ ತಂಮ ರಾಜ್ಯ ತಾವೇ ಸಾಧಿಸಿ ಕೊಂಡು ಇದ್ಧೀರಿ. ಮಲೆಯಾಳದ ರಾಜರು ಖಂಡ್ಣೀ ಕೊಡುವ ಮೇರೆ ತಾವು ಖಂಡ್ಣೀ ಕೊಡಿ ಯಂತಾ ನಾವು ಕೇಳುವದಿಲ್ಲಾ. ಕೊಡಗಿನ ಸಂಸ್ಥಾನಕ್ಕೂ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಸೂರ್ಯ ಚಂದ್ರ ಇರುವ ಪರಿಯಂತರಕ್ಕೂ ಸಾರ್ವಾದ್ಯಧಾರವಾಗಿ ಮಿತ್ರತ್ವ ನಡದು ಬರ ಬೇಕು ಯಂತಾ, ಉಭಯ ಕಡೆಯಿಂದಲೂ ಭಾಷಾಪತ್ರಿಕೆ ಬರದು ಕೊಟ್ಟು ಇದೆಯಷ್ಟೆ. ಅದ್ದೇ ಮೇರೆ ಈ ಮಿತ್ರತ್ವ ಶಾಶ್ವತವಾಗಿ ನಡದು ಬರುವದಕ್ಕೆ ಯಾದಗಾರಿ[3] ಗುರ್ತು ದ್ಯಾಸ್ತಿ ಮಾರ್ಗದಿಂದ ಕೇಳುತ್ತೇವೆ. ಇಪ್ಪತ್ತನಾಲ್ಕು ಸಾವಿರ ರೂಪಾಯಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸ್ನೇಹದ ಉದ್ದಿಶ್ಯಾ ಕೊಡ ಬೇಕು. ಇದಕ್ಕೆ ಪ್ರತಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದಿಂದ ಮಾಡುವ ಉಪಕಾರ ಯೇನು ಯಂದರೆ: ವಂದು ವೇಳೆ ಶತ್ರುವಾದ ಪರರಾಯರಿಂದ ಜಗಳಾ ಬಂದಲ್ಲಿ, ಇಂಗ್ರೇಜ ಬಹಾದ್ದರ ಕುಂಪನಿಯಿಂದ ಬೇಕಾದ ಕುಂಮಕು ಮದತ್ತು ಉಪಕಾರ ಮಾಡಿ, ಚತುರಂಗ ಮಾಬಲ ಸಹಾ ಬಂದು, ತಮಗೆ ಮೀರಿಯಾದವನ ಫೌಜಂನು ಹೊಡದು ನಿಗ್ರಹಾ ಮಾಡಿ, ತಂಮ ರಾಜ್ಯದಲ್ಲಿ ಇರುವಂಥವರಿಗೆ ಸುಖದಲ್ಲಿ ಇರುವಂತೆ ಮಾಡುವ, ಈ

1 ಒಂಬತ್ತು. 2 ಪಟ್ಟು. 3 ನೆನಪು.

ಸ್ನೇಹ ಉಪಕಾರದ ಉದ್ದಿಶ್ಯವಾಗಿ ಕಲಿಂಪರಿತಿಯಲ್ಲು ಇಪ್ಪತ್ತನಾಲ್ಕು ಸಾವಿರ ರೂಪಾಯಿ ತಾವು ಕೊಟ್ಟು ಬರ ಬೇಕು" ಯಂಬದಾಗಿ ಹೇಳಿದಲ್ಲಿ, ಆ ಮಾತಿಗೆ ವಪ್ಪಿ ವಡಂಬಟ್ಟು, "ತಾವು ಹೇಳಿದ ಮೇರೆ ಸ್ನೇಹ ಉದ್ದಿಶ್ಯವಾಗಿ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಕೊಡುತ್ತೇವೆ. ಈ ಮೇರೆ ನಾವು ಕೊಡುತ್ತಾ ಬಂದರೆ, ಇಂಗರೇಜಿಯವರು ಮಳೆಯಾಳದ ರಾಜರಿಗೆ ಸರಕಾರದ ಕಡೆಯಿಂದ ರಾಜ್ಯ ಕೊಟ್ಟು, ಖಂಡಣಿ ತೆಗದು ಕೊಳ್ಳುತ್ತಾ ಇದ್ದರು. ಅದೇ ಮೇರೆ ಕೊಡಗಿನ ರಾಜರಿಗೂ ಕುಂಪನಿ ಸರಕಾರದ ಕಡೆಯಿಂದ ಶೀಮೆ ಕೊಟ್ಟು, ಖಂಡಣಿ ಮೊಕರರು ಮಾಡಿ ಇದ್ದಾರೆ. ಯಂತಾ ಹೇಳಿಯಾರು" ಯಂಬದಾಗಿ, ಮಹಾರಾಜರವರು ಹೇಳುವಾಗ್ಯೆ, ಜನರಾಲ್ ಸಾಹೇಬರು ಹೇಳಿದ್ದು: "ಈ ಮೇರೆ ಮಾತು ಬರಲಿಕ್ಕಿಲ್ಲಾ. ತಾವು ಸ್ನೇಹ ಉದ್ದಿಶ್ಯ ಇಂಗರೇಜ ಬಹಾದ್ದರ ಸರಕಾರಕ್ಕೆ ಇಷ್ಟು ಕೊಡುತ್ತೀರಿ. ಆದ್ದರಿಂದ ವಂದು ಸಮಯ ಬಂದಾಗ್ಯೆ, ಇಂಗರೇಜ ಬಹಾದ್ದರವರು ಚತುರಂಗ ಮೊಬಿಲ ಸಮೇತ ಬಂದು, ಸಹಾಯ ಮಾಡ ಬೇಕು" ಯಂಬದಾಗಿ ಹೇಳಿ, ಸನ್ಮತ ಬಟ್ಟು, ಈ ಬಗ್ಯೆ ಭಾಷಾಪತ್ರಿಕೆ ಬರೆಸಿ, ಉಭಯ ಕಡೆಯಲ್ಲು ಸನದಾಗಿ ಮಡಗಿ ಇರುವ ಕ್ರಮವೆಂತೆಂದರೆ:

ಕೊಡಗಿನ ಸಂಸ್ಥಾನದ ಹಾಲೇರಿ ವೀರರಾಜೇಂದ್ರ ರಾಜರವರು ಬಹುಮಾನವಾದ ಇಂಗರೇಜ ಸರಕಾರ ಕುಂಪನಿ ಸಂಗಡ ಯಾವ ರೀತಿ ಇದ್ದಾರೆ ಯಂಬದು ನಿಶ್ಚಯವಾಗಿ ಇಂಗರೇಜ ಕುಂಪನಿ ಸರಕಾರದ ಯಾವತ್ತು ಚಾಕರ ಜನರು ತಿಳಿಯ ತಕ್ಕ ಬಗ್ಯೆ, ನಾವು ಬರ ಕೊಟ್ಟ ವಿವರ:

ವಂದನೇ ಕಲಂ. ಮಹಾರಾಜರವರು ಟಿಪ್ಪುಸುಲ್ತಾನರ ಸಂಗಡ ಯುದ್ಧ ಮಾಡಿ, ತಂಮ ಕೊಡಗಿನ ಶೀಮೆಯನ್ನು ಸ್ವಾಧೀನ ಮಾಡಿ ಕೊಂಡರು. ಅದರಲ್ಲಿ ಕೆಲವು ಶೀಮೆ ಬಾಕಿ ಇದ್ದಂಥಾದ್ದನ್ನು ತಂಮ ಹಿಂಮತ್ತಿನಿಂದಲೇ ಸ್ವಾಧೀನ ಮಾಡಿ ಕೊಂಡರು. ಇದಕ್ಕೆ ಸರಕಾರ ಕುಂಪನಿ ಕಡೆಯಿಂದ ಯೇನಾದರೂ ಮದತ್ತು ಮಾಡಲಿಲ್ಲಾ. ಈ ಪ್ರಕಾರ ಇರುತ್ತಿದ್ದಲ್ಲಿ, ಇಂಗರೇಜ ಸರಕಾರಕ್ಕೂ ಟಿಪ್ಪುಸುಲ್ತಾನರಿಗೂ, ಆದ ಮೊದಲಿನ ಲಡಾಯಿದಲ್ಲಿ ದೊರೆಗಳವರು ಇಂಗರೇಜ ಸರಕಾರಕ್ಕೆ: "ನೀವು ಯಾವದಕ್ಕೂ ಯೋಚನೆ ಮಾಡ ಕೆಲಸವಿಲ್ಲಾ. ಯೇನೊಂದು ಸಹಾಯ ಸಂಪತ್ತು ಬೇಕಾದರೂ, ನಾವು ಮಾಡಿ ಕೊಡುತ್ತೇವೆ" ಯಂತಾ, ಕಬೂಲಾಗಿ ಹೇಳಿದ್ದರಿಂದ, ಈ ಮದತ್ತುಗಾರಿಯನ್ನು ಸರಕಾರದಲ್ಲು ಕಬೂಲು ಮಾಡಿ, ರಾಜರ ಕಡೆಯಿಂದಲೂ ನಂಮ ಕಡೆಯಿಂದಲೂ ವಪ್ಪಿ, ಖುಷಿ ಆಗಿ ಸರಕಾರ ಕುಂಪನಿ ಕಡೆಯಿಂದ ಕಲಕ್ಟೇರಿ ಕ್ಯಾಟ ಮೆಸ್ತರ್ ರಾಬರ್ಟ್ ಟೇಲರ್[1] ಸಾಹೇಬರ ಮಾರಿಫತ್ತಿನಿಂದ ಕಹಾನಾಮೆಯನ್ನು ಬರೆಸಿ, ಕಲಕ್ಟೇರಿ ಸರಕಾರದ ದಪ್ತರದಲ್ಲು ಮಡಗಿ ಇದೆ.

ಯರಡನೇ ಕಲಂ. ರಾಜರವರು ಅಂತಃಕರಣ ಪೂರ್ವಕವಾಗಿ ಯುದ್ಧವನ್ನು ತಾವು ಮಾಡಿದರು. ಮುಂಬಾಯಿ ಸಂಸ್ಥಾನದ ಕಡೆ ಫೌಜ ನಂಮ ಹುಕುಮತ್ತಿನಲ್ಲಿ ಇತ್ತು. ಆ ಲಷ್ಕರಿಗೆ ಬೇಕಾದ ಯತ್ತು, ಅಕ್ಕಿ, ರಸದು ಮುಂತೆಗಿ ಯಾವತ್ತು ಕೊಟ್ಟು, ಬಹಳ ಮೆಹನತ್ತು ಮದತ್ತು ಮಾಡಿದರು. ಈ ಪ್ರಕಾರ ಮಾಡದೆ ಇದ್ದರೆ, ಫೌಜ ಮುಂದೆ ಹೋಗುವದಕ್ಕೆ ಬಹಳ ಪ್ರಯಾಸವಿತ್ತು. ಈ ಫೌಜಿಗೆ ಕೊಟ್ಟಂಥಾ ರಸದು, ಯತ್ತಿಗೆ ಸಹಾ ಇದರ ಕ್ರಯ ರಾಜರವರು ತಂಮ ಮನಸು ಪೂರ್ವಕವಾಗಿ, ತೆಗದು ಕೊಳ್ಳುವದಿಲ್ಲಾ ಯಂತಾ, ನಿಶ್ಚಯ ಮಾಡಿ ಇದ್ದಾರೆ.

ಮೂರನೇ ಕಲಂ. ಲಡಾಯಿ ಪ್ರಾರಂಭವಾದಾರಭ್ಯ ಲಡಾಯಿ ಆಖೇರು ಹೋಯಿಂತರದಲ್ಲು, ರಾಜರವರು ಅಂತಃಕರಣ ಪೂರ್ವಕವಾಗಿ ಕುಂಪನಿ ಸರಕಾರದ ಸಂಗಡ ದೋಸ್ತಿ ಮಡಗುವದರಿಂದ, ಆ ದೋಸ್ತಿಗೆ ಟಿಪ್ಪುಸುಲ್ತಾನರು ವಿಕಲ್ಪ ಮಾಡ ಬೇಕು ಯಂಬದಾಗಿ, ಕುಂಪನಿಗೆ ತಿಳಿಯದ ಹಾಗೆ, ಹಾಮೇಷ ಹಿಕಮತ್ತುಗಳ ನಡಸುತ್ತಾ ಇದ್ದರು. ಆದಾಗ್ಯೂ ರಾಜರು ಆ ಮಾತಿಗೆ ವಡಂಬಡಲಿಲ್ಲಾ.

ನಾಲ್ಕನೇ ಕಲಂ. ಹೋದ ಮಾರ್ಚಿ ತಿಂಗಳಲ್ಲಿ ಶ್ರೀರಂಗಪಟ್ಟಣದ ಸಲ್ಲಾ ಸನದು ಕರಾರು ಆದ ಸಮಯದಲ್ಲಿ, ಲಾರ್ಡ ಕಾರ್ನವಾಲೀಸ್ ಸಾಹೇಬರವರು ರಾಜರವರ ಬಹುಮಾನ ಸ್ನೇಹಿತಿಯ ನಿಷ್ಕಪಟ ಪೂರ್ವಕವಾಗಿ ಇರುವದ ತಿಳಿದು, ರಾಜರವರು ಆಶಂಕವಿಲ್ಲದೆ ಸ್ವತಂತ್ರವಾಗಿ, ಟಿಪ್ಪುಸುಲ್ತಾನರ ಅಂಕೈಜ ಇಲ್ಲದೆ ಇರ ಬೇಕು ಯಂತಾ ನಿಶ್ಚಯಿಸಿ, ರಾಜರವರಿಗೂ ಅವರ ದೇಶಕ್ಕೂ ಕುಂಪನಿ ಸರಕಾರದ ಆಶ್ರಯದಲ್ಲಿ ತೆಗದು ಕೊಳ್ಳ ಬೇಕು ಯಂಬದಾಗಿ, ಮೊಕರರು ಮಾಡಿದರು. ಈ ಬಗ್ಯೆ ಟಿಪ್ಪುಸುಲ್ತಾನರು ಬಹಳವಾಗಿ ವಿರೋಧವಾದಂಥಾ ಮಾತನು ಹೇ

[1] Mr. Robert Taylor.

ಳಿದರು. ಆ ಮಾತು ಯಾವತ್ತು ಖಂಡಣೆ ಮಾಡಿದಲ್ಲಿ, ಅದರ ಮೇಲೆ ಟೀಪುಸುಲ್ತಾನರು "ಕೊಡಗಿನ ಶೀಮೆಯಿಂ ದ ವರುಷಂಪ್ರತಿಯಲ್ಲು ಖಂಡಣೆ ಯೆಂಟು ಸಾವಿರ ವರಹಾ ತಮಗೆ ಬರುತ್ತಾ ಇತ್ತು. ಅದಂನು ಕುಂಪನಿ ಸರಕಾರ ಕ್ಕೆ ತೆಗದು ಕೊಳ್ಳ ಬೇಕು" ಯಂತಾ ಹೇಳಿದರು.

ಐದನೆ ಕಲಂ. ರಾಜರವರು ಹೇಳಿದರು: "ಯಾವಾಗ್ಯೂ ತಂಮ ಶೀಮೆಯಿಂದ ಯೆಂಟು ಸಾವಿರ ವರಹಾ ಖಂಡ ಣೆ ಟೀಪುಸುಲ್ತಾನಿಗೆ ಕೊಡಲಿಲ್ಲಾ. ಕುಂಪನಿ ಸರಕಾರದ ಸ್ನೇಹಾ ಮದತ್ತಿನ ಉದ್ದಿಶ್ಯ ನಂಮ ಖುಷಿಯಿಂದ ವರುಷಂಪ್ರತಿಯಲ್ಲು ಯೆಂಟು ಸಾವಿರ ವರಹಾ ಕೊಟ್ಟೇವು" ಯಂಬದಾಗಿ, ಹೇಳಿದರು.

ಆರನೆ ಕಲಂ. ದೊರೆಗಳವರು ತಂಮ ರಾಜ್ಯ ಪರಿಪಾಲನೆ ಮಾಡಿ ಕೊಳ್ಳುವಲ್ಲಿ, ಸರಕಾರ ಕುಂಪನಿ ಕಡೆಯಿಂದ ಯಾವಾಗಲಾದರೂ ತಂಟೆ ತಕರಾರು ಆಗ ಬಾರದು; ಯೇನು ಕಾರಣ ಯಂದರೆ: ರಾಜರವರು ಬಹಳ ಧೈರ್ಯದಿಂದ ತಂಮ ರಾಜ್ಯದ ಪ್ರಜೆ ಸಂರಕ್ಷಣೆಯು ಮಾಡಿಸಿ, ಪ್ರಜಾವೃದ್ಧಿ ಮಾಡಿಸುವಂಥಾದಕ್ಕೆ ಸಮರ್ಥರು ಇದ್ದಾರೆ. ನಂ ಮ ದಸ್ತಕತ್ತು ಮುದ್ರೆ ಸಹಿತ ಕಂಣಾನೂರ ಸ್ಥಾನದಲ್ಲು ತಾರೀಖು ೩೧ ನೆ ಮಾರ್ಚಿ ಮಾಸ ಸನ್ ೧೭೯೩ ಲು ಬರೆಸಿ ಕೊ ಟ್ಟಿದ್ದು. ರಾಬಟ್ ಅಬರಕ್ರಂಬಿ ಸು[1] ತಾಜಾ ಕಲಂ: ಸದರಿ ಬರದ ವರಹಾ ಒಂದಕ್ಕೆ ರೂಪಾಯಿ ಮೂರರ ಪ್ರಕಾರ ರಾಜರವರು ವರುಷಂಪ್ರತಿಯಲ್ಲು ತಲಿಚ್ಚೇರಿಗೆ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಕೊಡ ಬೇಕು. ದಸ್ತಕತ್ತು ರಾಬಟ್ ಅಬರಕ್ರಂಬಿ.

ಈ ಪ್ರಕಾರ ಯರಡು ಕರಾರುನಾಮೆ ಬರದು, ಅದರಲ್ಲಿ ಒಂದಕ್ಕೆ ಅವರ ಕೈಯಾಗ್ಳ[2] ದಸ್ತಕತ್ತು ಮೊಹರ ಮಾಡಿ, ಮಹಾರಾಜರವರಿಗೆ ಕೊಟ್ಟು, ಮತ್ತೊಂದು ಕರಾರುನಾಮೆ ದೊರೆಗಳವರ ಕಡೆಯಿಂದ ತೆಗದು ಕೊಂಡು, ಸರ್ ಜ ನರಾಲ್ ರಾಬಟ್ ಅಬರಕ್ರಂಬಿ ಸಾಹೇಬ ಬಹಾದ್ದರವರು ಬಂಗಾಳಕ್ಕೆ ಹೋದರು.

ಮಹಾರಾಜರವರು ಆ ಕರಾರುನಾಮೆ ತೆಗದು ಕೊಂಡು, ತಂಮ ಕೊಡಗಿನ ರಾಜ್ಯಕ್ಕೆ ಬಂದು, ಕ್ಷೇಮ ಸಂತೋ ಷದಲ್ಲಿ ರಾಜ್ಯಭಾರ ಮಾಡಿ ಕೊಂಡು, ಕರಾರುನಾಮೆ ಪ್ರಕಾರ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ವರು ಷ ವರುಷಕ್ಕೂ ಸ್ನೇಹಾ ಉದ್ದಿಶ್ಯ ಇಪ್ಪತ್ತನಾಲ್ಕು ಸಾವಿರ ರೂಪಾಯಿ ಸಂದಾಯತ[3] ಮಾಡಿ, ಅದಕ್ಕೆ ರಶೀತಿ ತೆಗದು ಕೊಳ್ಳುತ್ತಾ, ಕರಾರು ನಾಮೆ ಪ್ರಕಾರ ಉಭಯ ಕಡೆಯಿಂದಲೂ, ಲೇಶಾಂತ ಹೆಚ್ಚು ಕಡಿಮೆ ಇಲ್ಲದೆ, ಧ್ಯಾ ನತಿಯಿಂದ ಇದ್ದಲ್ಲಿ, ಸಲ್ಲಾ ಆಗಿ ಮೂರು ವರುಷದ ಮೇಲೆ, ಟೀಪುಸುಲ್ತಾನರು ಸಲ್ಲಾಕೆ ತಪ್ಪಾವಂತು ಮಾ ಡುವವರಾಗಿಯೂ ನಾನಾ ಪ್ರಕಾರ ವಿರುದ್ಧ ಮಾಡುವ ಮತಲಬಿನಲ್ಲಿ ಇದ್ದಾರೆ, ಯಂಬ ಸಮಾಚಾರ ಮಹಾರಾಜ ರವರು ಕೇಳಿದರಿಂದ, ಅದಂನು ನೆಲವರ ತಿಳಿಯ ಬೇಕೆಂಬದಾಗಿ, ಒಂದು ಜ್ಯಾಡಿ ಹರಿಕಾರರಂನು ಶ್ರೀರಂಗಪಟ್ಟಣಕ್ಕೆ ಕಳುಹಿದಲ್ಲಿ, ಆ ಜನರು ಹೋಗ್ಗಿ ತಿಳುಕೊಂಡು ಬಂದು, ಮರಾಟಿಯವರ ಕಡೆಯಿಂದ ಇಬ್ಬರು ವಕೀಲರು ಟೀಪುಸು ಲ್ತಾನರ ಬಳಿಗೆ ಬಂದು, ಮಸಲತ್ತು ಮಾಡುತ್ತಾರೆಂಬದಾಗಿ, ಅರಿಕೆ ಮಾಡಿದರಿಂದ, ದೊರೆಗಳವರು ಈ ವರ್ತಮಾನ ಸವಿ ಸ್ತರ ತಿಳಿದು, ಮಲೆವಾರ ಕಮಿಶನ್ ಜಮೀಸ್ ಇಷ್ಟೀವನ್[4] ಸಾಹೇಬರವರಿಗೆ ಬರೆಸಿ ಕಳುಹಿದರು.

ಆ ಬಳಿಕ ಕೆಲವು ದಿವಸದ ಮೇಲೆ ಟೀಪುಸುಲ್ತಾನರು ಯರಡು ವರುಷದಿಂದ ವೀರರಾಜೇಂದ್ರ ಒಡೆಯರವರ ಗಾತ[5] ಮಾಡ ಬೇಕು ಯಂಬದಾಗಿ ಯೋಚಿಸಿ ಕೊಂಡು, ಇವರ ಬಂಧುವರ್ಗದಲ್ಲಿ ಒಬ್ಬ ಲಿಂಗರಾಜ ಯಂಬದಾಗಿ ಇ ದ್ದಾ[6]. ಅವನಿಗೆ ವೀರರಾಜೇಂದ್ರ ಒಡೆಯರವರು ಒಂದು ನಾಡು ಜಹಾಗೀರಿ ಕೊಟ್ಟು ಇಟ್ಟು ಇದ್ದಲ್ಲಿ, ಟೀ ಪುಸುಲ್ತಾನರು ಇಬ್ಬರು ಮುಸಲ್ಮಾನರಂನು ಆ ಲಿಂಗರಾಜನ ಬಳಿಗೆ ಕಳುಹಿಸಿ, ಕೊಡಗಿನ ರಾಜರು ಇಂಗ್ರೇಜಿಯ ವರ ಸಂಗಡ ಅತ್ಯಂತ ದ್ವೇಸ್ತರಾಗಿ ಇದ್ದಾರೆ. ಆ ಉಭಯಸ್ಥರು ಕೂಡಿ, ನಂಮ ದವಲತ್ತು, ಮಾನ ಸಹಾ, ಕೆಡಿಸಿದರು. ಇಂನು ಮುಂದು ಒಂದು ಸಮಯದಲ್ಲಿ ಸಲ್ಲಾ ಬಿಗಡಾಯಿಸಿದರೆ, ಇಂಗ್ರೇಜಿ ಬಹಾದ್ದರ ಫೌಜಂ ನು ಕರೆಸಿ, ಮೊದಲಿಂತಲೂ ಹೆಚ್ಚು ಹಾಲು ಹೆಚ್ಚಾಗಿ ಬೇಕಾದ ಸಾಮಾನು, ಸರಂಜಾಮು ತಯಾರು ಮಾಡಿ ಕೊಟ್ಟು, ಅವರಂನು ಪಟ್ಟಣ ಪರಿಯಂತರ ಕಳುಹಿಸಿ, ನಂಮ ದವಲತ್ತಂನು ಮುಳುಗಿಸಿ ಬಿಟ್ಟಾರು. ಕೊಡಗಿನ ದೊರೆಗಳು ನ ಮಗೆ ಧೊಡ್ಡ ದುಷ್ಮಾನರಾಗಿ, ಶ್ರೀರಂಗಪಟ್ಟಣದ ಸಮೀಪದಲ್ಲಿ ಇದ್ದಾರೆ. ಅವರಂನು ಯಲ್ಲಾ ಬಗೆಯ ಲ್ಲು ನಂಮ ಸರಕಾರದ ದುಷ್ಮಾನರು ಯಂತಾ, ತಿಳಿಯ ಬೇಕು. ಆವಾಗಯೆ ನಿನಗೆ [illegible] ಮಾಡಿಯೇವು. ಈ

1 Signed. 2 Provincialism for ಕೈಯಾಳಗಳ. 3 ಸಂದಾಯ. 4 James Stevens Commissioner of Malabar. 5 ಘಾತ. 6 ಲಿಂಗರಾಜ ಮಹಾರಾಜರವರ [illegible]

ಮನಸುಬಕ್ಕೆ ನಿನಗೆ ಖುಷಿ ಇದ್ದರೆ, ಒಂದು ಕೌಲು ಕಾಗದ, ಆಣೆಭಾಷೆ ಹಾಕಿ, ಬರದು ಕಳುಹಿಸ ಬೇಕು ಯೆಂಬದಾಗ, ಆ ಮುಸಲಮಾನರ ಸಂಗಡ ಹೇಳಿ ಕಳುಹಿದಲ್ಲಿ, ಆ ಲಿಂಗರಾಜನು ಈ ಮನಸುಬಕ್ಕೆ ಕಬೂಲಾಗಿ, ಒಂದು ಕಾಗದ ಬರದ ವಿವರ.

ನಾನು ನಿಮ್ಮ ಸರಕಾರದ ಖೈರು ಕಾಯುದ್ಧೇನೆ[1]. ಇಂಗರೇಜಿಯವರ ಸ್ನೇಹ ನಾನು ಮಾಡುವದಿಲ್ಲ. ವೀರರಾಜೇಂದ್ರ ವಡೆಯರವರನ್ನು ಯೇನಾ ಬಗೆಯಿಂದಾದರೂ ಹೊಡೆಯುತ್ತೇನೆ ಯೆಂಬದಾಗಿ, ನಂಬಿಕೆ ಆಗಿ ಬರದು ಕಳುಹಿಸಿ, ಕೊಡಗ ಜನರಲ್ಲಿ ವೀರರಾಜೇಂದ್ರ ವಡೆಯರವರ ನಿಮಕುಹರಾಮರಾಗಿ ದುಷ್ಮಾನರಾದಂಥಾ ಕೆಲವು ಕಾರ್ಯಗಾರರನ್ನು ತನ್ನ ಸಂಗಡ ಕೂಡಿ ಕೊಂಡು, ಆ ನಿಮಕುಹರಾಮ ಕೊಡಗರಿಗೆ ಟೀಪುಸುಲ್ತಾನರ ಕಡೆಯಿಂದ ಬೇಕಾದ ಬಕ್ಷವಿಸ್ಸು ಕೊಡಿಸುತ್ತೇನೆ ಯೆಂತಾ, ತಾನು ಭರವಸಾ ಕೊಟ್ಟು, ಹೊಡೆಯುವ ಬಗೆಯ ಯತ್ನ ಮಾಡಿದ ವಿವರ—ದೊರೆಗಳವರು ಮರಿಕೇರಿಗೆ ಹೋಗುವಾಗಯೂ, ಬಿಕಟ್ಟಾದ[2] ಕಾಡ ಮಾರ್ಗದಲ್ಲಿ ನಿಂತು, ಗುಂಡಿನಿಂದ ಹೊಡೆಯಿರಿ ಯೆಂಬದಾಗಿ, ಆ ನಿಮಕುಹರಾಮ ಕೊಡಗರಿಗೆ ಹೇಳಿದಲ್ಲಿ, ಆ ಮಾತಿಗೆ ಆ ಜನ ಹಾಮಿ ಕೊಂಡು, ಆ ವೈರ ಮಾಡ ಬೇಕೆಂಬದಾಗಿ ತಯಾರಾಗಿ ಇದ್ದಲ್ಲಿ, ಈ ವೈರ ಕೊಡಗರು ಸ್ವಾಮಿ ದ್ರೋಹ ಮಾಡ ಬೇಕೆಂತಾ ಯೋಚಿಸಿ ಇದ್ಧಾರೆ ಯೆಂತಾ ತಿಳಿದಲ್ಲದೆ, ಟೀಪುಸುಲ್ತಾನನು ಲಿಂಗರಾಜನು ಸಹಾ ಯೆರಡು ಪಕ್ಷದಿಂದ ದೊರೆಗಳ ಹೊಡೆಯ ಬೇಕೆಂಬದಾಗಿ ಯೋಚಿಸಿದ್ಧಾರೆ ಯೆಂಬದು ತಿಳಿಯಲಿಲ್ಲ. ಆದ್ದರಿಂದ ಆ ನಿಮಕುಹರಾಮ ಕೊಡಗರಿಗೆ ತಕ್ಕ ಶಿಕ್ಷೆ ಮಾಡಿಸಿ ಬಂದುಬಸ್ತು ಮಾಡಿದರು.

ಕಲಿ ಸಂದ ೪೮೯೭ನೆ ರಾಕ್ಷಸ ಸಂವತ್ಸರದಲ್ಲಿ ಹಾಡಿನಾಲ್ಕುನಾಡಲ್ಲಿ ಹೊಸ ನೂತನವಾಗಿ ಅರಮನೆಯನ್ನು ಕಟ್ಟಿಸಿ, ತಯಾರು ಮಾಡಿಸಿ, ಇದ್ದೇ ಸಂವತ್ಸರದ ವೈಶಾಖ ಶು ೬ ಯ ಶುಕ್ರವಾರ ಘಳಿಗೆ ೨೫ಕ್ಕೆ ಕನ್ಯಾ ಲಗ್ನದಲ್ಲಿ ವೀರರಾಜೇಂದ್ರ ವಡೆಯರವರು ಗೃಹಪ್ರವೇಶವಾದರು.

ಆ ಬಳಿಕ ಟೀಪುಸುಲ್ತಾನರು ಲಿಂಗರಾಜ ಯೆಂಬ ಜಹಗೀರಿಯವ ಸಹಾ ಮನಸುಬಾ ಮಾಡಿದ ವಿವರ ಹ್ಯಾಗೆ ಯೆಂದರೆ: ಮೊದಲು ವೀರರಾಜೇಂದ್ರ ವಡೆಯರವರನ್ನು ಕೊಡಗರ ಕೈಯಿಂದಾ ದ್ರೋಹ ಮಾಡಿಸ ಬೇಕು ಯೆಂತಾ, ಮಾಡಿದಂಥಾ ಯೋಚನೆ ಸಾಫಲ್ಯವಿಲ್ಲದೆ ಹೋಯಿತು. ಮುಂದೆ ಹ್ಯಾಗೆ ದಗಾ ಮಾಡ ಬೇಕು ಯೆಂಬದಾಗಿ, ಟೀಪುಸುಲ್ತಾನರು ಆ ಜಹಗೀರಿಯವನಿಗೆ ಕಾಗದ ಬರಸಿ ಕಳುಹಿಸಲ್ಲಿ, ಕೆಲ ಫೌಜನ್ನು ರಾತ್ರಾತ್ರೆ ಕಾಡು ಮಾರ್ಗವಾಗಿ ನಂನಲ್ಲಿಗೆ ಕಳುಹಿದರೆ, ರಾತ್ರೆ ಕಾಲದಲ್ಲಿ ಅವರ ಮೇಲೆ ಬಿದ್ದು ಹೊಡೆಯುತ್ತೇನೆ ಯೆಂಬದಾಗಿ, ಅವನು ಜವಾಬು ಬರದು ಕಳುಹಿದಲ್ಲಿ, "ಕೊಡಗಿನ ರಾಜನಿಗೆ ಸರಕು ಸವಲತ್ತು ಜಮೀಯತು ಇತ್ತು. ಆ ಸಮಯದಲ್ಲಿ ನಂಮ ಹೇರಳ ಫೌಜನ್ನು ಮುಳುಗಿಸಿ ಬಿಟ್ಟರು. ಈಗ ಅವರಿಗೆ ಜಮೀಯತು ಹೆಚ್ಚಾಗಿ ಇದೆ. ಇಂಗರೇಜಿಯವರ ಕುಂಮಕು ಉಂಟು. ಅದಾಯದ ಸಾಮಾನು ಕೂಡಿ ಇದೆ. ಹೀಗೆ ಇರುವಲ್ಲಿ, ಫೌಜ ಕಳುಹಿದರಿಂದ ಪ್ರಯೋಜನವೇನು ಇದೆ. ಬಹಳ ಬಗೆ ಹಿಕಮತ್ತಿನಿಂದ, ನಿನ್ನ ಯುಕ್ತಿ ಇದ್ದರೆ, ಈ ಪ್ರಯಾಸದ ಕೆಲಸವನ್ನು ಮಾಡ ಬೇಕು ಯೆಂಬದಾಗಿ, ಟೀಪುಸುಲ್ತಾನರು ಬರಸಿ ಕಳುಹಿದಲ್ಲಿ, ಈ ಜಹಗೀರಿಯವನು ಜವಾಬು ಬರದ ವಿವರ: ಇಲ್ಲಿ ಚೆಂನಾಗಿ ಶಿಸ್ತು ಹೊಡೆಯುವಂಥಾ ಜನ ನಂನಲ್ಲಿ ಇಲ್ಲ. ಆದ್ದರಿಂದ ಅಸದುಲ್ಲಾಯಿ ಜನದಲ್ಲಿ ಆರಿಸಿ, ಇತಬಾರಿ ಆಗಿ ಒಳ್ಳೆ ಶಿಸ್ತು ಹೊಡೆಯುವಂಥಾ ಯೆರಡು ಜನರನ್ನು ಚಕಮುಕಿ ಬಂದೂಕು, ಮದ್ದು ಗುಂಡು, ಮುಂತಾದದನ್ನು ಕೊಟ್ಟು, ಇಲ್ಲಿಗೆ ಕಳುಹಿದರೆ, ಅವರು ಸ್ವಾಮಿ ಹೋಗುವ ಮಾರ್ಗದಲ್ಲಿ ಇಕ್ಕಟ್ಟಿನ ಜಾಗದಲ್ಲಿ ಈ ಚೋರರನ್ನು ನಿಲ್ಲಿಸಿ, ಗುಂಡಿನಿಂದ ಹೊಡಸುತ್ತೇನೆ. ಅದು ಸಂದರ್ಭ ಆಗದಿದ್ದರೆ, ಅವರು ಹಾಮೇಷಾ ಶಿಕಾರಿಗೆ ಹೋಗುತ್ತಾ ಇದ್ಧಾರೆ. ಆವಾಗಯೆ ಸಂದರ್ಭವಾದಲ್ಲಿ, ಹೊಡಿಸುತ್ತೇನೆ. ಅಥಾಪಿಸಿ[3] ಈ ಯೆರಡು ಬಗೆಯಲ್ಲು ಸಂದರ್ಭ ಶಿಕ್ಕದೆ ಹೋದರೆ, ಶಿವರಾತ್ರೆ ಹಬ್ಬದ ದಿವಸ ಮಹಾದೇವಪುರದಲ್ಲಿ ಬಹಳ ಜಿಕ್ರಿನಲ್ಲಿ[4] ಖುಷಿಯಿಂದ ಹಬ್ಬಾ ಮಾಡುತ್ತಾ ಇರುತ್ತಾರೆ. ಆ ಸಮಯದಲ್ಲಿ ಈ ಜನದ ವೇಷ ಬದಲು ಮಾಡಿ, ಕತ್ತಿ, ಬಂಕು ಮುಂತಾದ ಹತಿಯಾರ ಕೊಟ್ಟು, ಆ ಜಾತ್ರೆ ಜನರ ಸಂಗಡ ಕೂಡಿಸಿ ಬಿಟ್ಟು, ಆ ಜನರ ಮರೆಯಿಂದ ಘಾಯ ಮಾಡಿಸುತ್ತೇನೆ. ಹ್ಯಾಗಾದರೂ ಈ ಮೂರು ಬಗೆ ಸಮಯ ಸಾಧಿಸಿ, ಅವರಂನ ಹೊಡೆಯುವಲ್ಲಿ ಅಂತರ

[1] ಕೈರು ಕಾಯುದ್ದೇನೆ. [2] ಇಕ್ಕಟ್ಟಾದ. [3] ಅಥವಾ. [4] ಜನಜಂಗುಳಿಯಲ್ಲಿ.

ವಿಲ್ಲಾ ಯಂಬದಾಗ, ಬರದು ಕಳುಹಿದಲ್ಲಿ, ಅದಂನು ನೋಡುತ್ತಲೇ ಟೀಪುಸುಲ್ತಾನರು ತಂಮ ಕಾರ್ಯ ಆದೀತು ಯಂತಾ, ಬಹಳ ಸಂತೋಷ ಬಟ್ಟು, ಚಿಕ್ಕಂದಿನಿಂದ ಸಾಕಿದಂಥಾ, ಇತಬಾರಿ ವುಳ್ಳ ಲಿಸ್ತು ಹೋಡೆಯುವಂಥಾ, ತಂಮ ಅನದುಲ್ಲಾಯ ಚೇಲ್ಯರು ಇಬ್ಬರಂನು ಆರಿಸಿ, ಆ ಯರಡು ಜನಕ್ಕೂ ವಂದೊಂದು ಜನಕ್ಕೆ ಬಾರು ಬಂದೂಕು ವಂದು, ಸುಲ್ತಾನಿ ಕೋಟ ತುಂಬಿದಂಥಾ ಕೋನ್ತಾನಿ ವಂದು, ಖಾಸಾ ಮದ್ದು ಕತ್ತಿ ವಂದು, ಕಠಾರಿ ವಂದು, ಬಾಂಕು ವಂದು, ಬಿಚುವಾ ವಂದು, ಈ ಮ್ಯರೆ ಯರಡು ಜನಕ್ಕೂ ಜಂಗ್ಯ ಸಾಮಾನು ಕೊಟ್ಟು, ತಯಾರು ಮಾಡಿ, ದಾರಿ ಕೋರಿಸುವ ಬಗ್ಯ ಯರಡು ಜನ ಮುಸಲ್ಮಾನರಂನು ಕೂಡಿಸಿ, ನಾಲ್ಕು ಜನಾವಳಿ ಕಾಗದಗಳ ಬರದು ಕಳುಹಿಸಿದಂಥಾ ಆ ಫಿತೂರಿಯವನ ಬಳಿಗೆ ಕಳುಹಿದಲ್ಲಿ, ಅವರು ಹಗಲು ಟೀಪುಸುಲ್ತಾನರ ಸಂಬಾದದಿನಲ್ಲು ಇದ್ದು ಕೊಂಡು, ರಾತ್ರಿ ಕಾಲದಲ್ಲಿ ಪಾರಾಟೋಪಿ ತಪ್ಪಿಸಿ, ಕಳ್ಳ ಮಾರ್ಗವಾಗಿ ಕಾಡಿನ ಲ್ಯಮೆ ಸುಹಾದ್ದಿನ ವಳಗೆ ಬರುವದು, ಬೆಳಗಾಗುತ್ತಲೆ ಕಾಡ ವಳಗೆ ಸಾಯಂಕಾಲ ಪರಿಯಂತರ ಇರುವದು. ಸಾಯಂಕಾಲವಾಗುತ್ತಲೆ ರಾತ್ರಿ ಕಾಲದಲ್ಲಿ ಈ ನಾಲ್ಕು ಜನರು ಆ ಫಿತೂರಿಯವನ ಬಳಿಯ ಚಾಕರಿ ಮಾಡುವಂಥಾ ವಬ್ಬ ಮನುಷ್ಯನ ಮನೆಗೆ ಬಂದು, ತಂಮ ಮನಸ್ಸಿನ ಅಂತರಂಗವಂನು ಆ ಮನುಷ್ಯನ ಸಂಗಡ ಹೇಳುವದು, ಅವನು ತಂನ ಖಾವಂದನಾದ ಆ ಫಿತೂರಿಯವನಿಗೆ ತಿಳಿಸುವದು. ಅವನು ಆ ನಾಲ್ಕು ಜನರ ಬಳಿಗೆ ಬಂದು, ದುಷ್ಟತನದ ಮನಸುಬಾ ಮಾಡಿ ಕೊಂಡು, ಸಮಯ ಸಾಧಿಸುತ್ತಾ ಇದ್ದಲ್ಲಿ, ಆ ನಾಲ್ಕು ಜನರ ಸಂಗಡ ಇದ್ದ ವಬ್ಬ ಮುಸಲ್ಮಾನರ ಹುಡುಗನು ಅವರಂನು ಬಿಟ್ಟು, ಮಹಾರಾಜರವರ ಬಳಿಗೆ ಬಂದು, "ಟೀಪುಸುಲ್ತಾನರು ಆ ಲಿಂಗರಾಜನು ಸಹಾ, ಕಾಗದಗಳ ಮುಖಾಂತರದಿಂದ ಮನಸುಬಾ ಮಾಡಿ, ತಂಮಂನು ಹಾಡೆಯುವ ಬಗ್ಯ ನಿಶ್ಚಯ ಮಾಡಿ ಇದ್ದಾರೆ. ಟೀಪುಸುಲ್ತಾನರು ಇಬ್ಬರು ಚೇಲ್ಯರಂನೂ ಅವರಿಗೆ ಮಾರ್ಗ ತೋರಿಸುವ ಬಗ್ಯ ಯರಡು ಜನ ಮುಸಲ್ಮಾನರ ಸಹಾ ಕೊಟ್ಟು, ಈ ನಾಲ್ಕು ಜನರಂನು ಆ ಫಿತೂರಿಯವನ ಬಳಿಗೆ ಕಳುಹಿಸಿ ಇದ್ದಾರೆ. ಟೀಪುಸುಲ್ತಾನರ ಬಳಿಯ ಆಣೆ ಭಾಷೆ ಮಾಡಿ, ಕೊಡಗನ ದೊರೆಗಳ ಹೊಡೆಯುತ್ತೇವೆ ಯಂತಾ ವೀಳ್ಯ ತೆಗದು ಕೊಂಡು, ಶಿವರಾತ್ರಿ ಹಬ್ಬದಲ್ಲಿ ಸಮಯ ಘಾತ ಮಾಡುತ್ತೇವೆ ಯಂಬದಾಗಿ, ಅವರು ಹೇಳುತ್ತಾರೆ. ನಾನು ಅವರ ಸಂಗಡ ವಂದು ವರುಷದಿಂದ ಇರುತ್ತೇನೆ. ಮಹಾದೇವನು ನನಗೆ ಈ ಮ್ಯರೆ ಬುದ್ಧಿ ಕೊಟ್ಟಿದರಿಂದ, ಈ ಹಿವರ ಜಾಹೀರು ಮಾಡ ಬೇಕು ಯಂತಾ, ನಂನ ಮನಸಿಗೆ ತಂದದರಿಂದ, ಈಗ ಜಾಹೀರು ಮಾಡಿ ಇದ್ದೇನೆ" ಯಂತಾ, ಹೇಳಿದರಿಂದ, "ಈ ಮಾತು ನೀನು ಹೇಳುವಂಥಾದ್ದು ಸಟೆಯೋ? ದಿಟವೋ?" ಯಂಬದಾಗಿ, ಆ ಹುಡುಗನ ಸಂಗಡ ಕೇಳಿದಲ್ಲಿ "ಬದ್ಧವೇ ಸರಿ. ಪರೀಕ್ಷೆ ಮಾಡ ಬೇಕು. ಯಾವ ಮ್ಯರೆ ಯಂದರೆ: ಮೂರು ದಿವಸ ಅಲ್ಲಿ ಪಹರಾ ಮಡಗ ಬೇಕು. ಅವರು ಅಲ್ಲಿಗೆ ಬಾರದೆ ಹೋದರೆ, ನಂನ ಮಾತು ಸುಳ್ಳೇ ಸರಿ. ಆವಾಗ್ಯ ನನಗೆ ತಕ್ಕ ಶಿಕ್ಷೆ ಮಾಡಿಸ ಬೇಕು" ಯಂಬದಾಗಿ, ಆ ಹುಡುಗನು ಹೇಳಿದರಿಂದ, ಅದೇ ಮ್ಯರೆ ಆ ಫಿತೂರಿಯವನ ಮನೆಗೆ ಮೂವತ್ತು ಜನ, ಅವನ ಚಾಕರನ ಮನೆಗೆ ಇಪ್ಪತ್ತು ಜನ ಸಹಾ, ರಾತ್ರೆ ಯರಡೂವರೆ ಘಳಿಗೆ ಮ್ಯಲೆ ಪಹರಾ ಕಾಯುವದು. ಬೆಳಗಾಗುವದಕ್ಕೆ ಯರಡು ಘಳಿಗೆ ಇದ್ದಂತೆ ಕಾಡ ವಳಗೆ ಇರುವ ಹಾಗೆ ಹೇಳಿ, ಗುಟ್ಟಿನಿಂದ ಮಡಗಿ ಇದ್ದಲ್ಲಿ, ಯರಡು ದಿವಸ ಕಳದು, ಮೂರನೆ ದಿವಸ ರಾತ್ರಿ ಕಾಲದಲ್ಲಿ ಆ ನಾಲ್ಕು ಜನವು ಆ ಚಾಕರ ಮನುಷ್ಯನ ಮನೆಗೆ ಬಂದದರಿಂದಾ, ಅವರಲ್ಲಿ ವಬ್ಬ ಚೇಲೆಗೆ[1] ಪಹರಾ ಇದ್ದವರು ಹಿಡಿದು ಕೊಂಡಲ್ಲಿ, ಅವನು ಕೂಗಿದ್ದರಿಂದಾ, ಮತ್ತೊಬ್ಬ ಚೇಲೆ ದಾರಿ ತೋರಿಸುವಂಥಾ ವಬ್ಬ ಮುಸಲ್ಮಾನ ಸಹಾ ಕಾಡಿಗೆ ವೋಡಿ ಹೋಗುತ್ತಿದ್ದಲ್ಲಿ, ಪಹರೆಯವರು ಬೆಂನಟ್ಟಿದಲ್ಲಿ, ಆ ಮುಸಲ್ಮಾನನು ಸಿಕ್ಕದೆ, ಕಾಡು ಬಿದ್ದು ವೋಡಿ ಹೋದನು. ಆ ಚೇಲ್ಯನು ಅದೇ ಮ್ಯರೆ ವೋಡಿ ಹೋಗುತ್ತಿದ್ದಲ್ಲಿ, ಆ ಪಾರೆಯ ಜನದಲ್ಲಿ ವಬ್ಬನು ಕತ್ತಿಯಿಂದ ಅವನಿಗೆ ಜಖಮಿ ಮಾಡಿದ್ದಲ್ಲಿ ಬಿದ್ದು, ಮತ್ತು ಯದ್ದು ಹೋಗುವದಕ್ಕೆ ನೋಡಿದಲ್ಲಿ, ಮತ್ತೊಂದು ಜಖಮಿ ಮಾಡಿ, ಅವನ ಮುಸುಕಿ ಕಟ್ಟಿದರು. ಸಂಗಡ ಇದ್ದ ಮತ್ತೊಬ್ಬ ಮುಸಲ್ಮಾನನು ಅದೇ ಮ್ಯರೆ ವೋಡಿ ಹೋಗುತ್ತಿದ್ದಲ್ಲಿ, ಪಹರೆಯವರು ಅವನ ಬೆಂನಟ್ಟಿದಲ್ಲಿ, ಅವನು ಕತ್ತಿ ಬೀಸಿದರಿಂದ, ಅವನಿಗೂ ಜಖಮಿ ಮಾಡಿ ಮುಸುಕಿ ಕಟ್ಟಿದರು.

ಈ ಗುಲ್ಲು ಆದಂಥಾದ್ದು ಆ ಫಿತೂರಿಯವನು ಕೇಳಿ, ಯೇನೋ ಮೋಸವಾಯಿತೆಂತಾ ತಿಳದು, ನಾಲ್ಕು ಬ

---

[1] ಶಿಷ್ಯನು.

ದು ಜನರ ಸಂಗಡ ಕರ ಕೊಂಡು, ಕತ್ತಿ ತೆಗದು ಕೊಂಡು, ಮನೆಯಿಂದ ಹೊರಟು, ಆ ಚೇಲ್ಯರ ಬಿಡಿಸ ಬೇಕೆಂತಾ ಹೋಗುವಾಗಯೆ, ಅವನ ಮನೆ ಸುತ್ತ ಗುಡ್ಡೆನಲ್ಲಿ ಇದ್ದ ಪಹರೆಯವರು ಅವನ ಸಂಗಡ ಇದ್ದ ಜನರಲ್ಲಿ ಯರಡು ಜನರ ಹಿಡಿದು ಕೊಂಡರು. ಆವಾಗಯೆ ಆ ಫಿತೂರಿಯವನು ಅರಮನೆ ಶಿಪಾಯಿ ಜನ ಯರಡಕ್ಕೆ ಕತ್ತಿಯಿಂದ ಜಖಮಿ ಮಾಡಿದರಿಂದ, ಅರಮನೆ ಶಿಪಾಯಿಗಳಿಗೆ ಜಾಯ ಮಾಡಿ, ಚೇಲ್ಯರನು ಸಂಗಡ ಕರದು ಕೊಂಡು, ಟೀಪುಸುಲ್ತಾನರ ಬಳಿಗೆ ವ್ಯಾಡಿ ಹೋಗುತ್ತಾನೆ ಯಂತಾ, ಊಕೆ ಪಹರೆಯ ಜನರು ತಿಳಿದು, ಅವನಿಗೂ ಅವನ ಸಂಗಡ ಇದ್ದ ವಬ್ಬ ಕಾಡಗನಿಗೂ ಕತ್ತಿಯಿಂದ ಹೊಡದು ಹಾಕಿದರು.

ಆ ಬಳಿಕ ತಲಚೇರಿ ಸರದಾರರು ಹೊಂಡಲಿ ಯಸತುಮೆರು ಸಾಹೇಬರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ, ಟೀಪು ಸುಲ್ತಾನರ ಚೇಲ್ಯರು ಮೋಸಗಾರಿಕೆಯಿಂದ ನಮ್ಮನು ಪರ್ರಾಘಾತ ಮಾಡುವ ಬಗ್ಗೆಯೆ ಬಂದು ಇದ್ದರು. ಅವರಲ್ಲಿ ವಬ್ಬ ಚೇಲಿಗೆ ಜಖಮಿ ಆಗಿ, ಮತ್ತೊಬ್ಬನಿಗೆ ಯೇನೂ ಗಾಯವಿಲ್ಲದೆ ಸಿಕ್ಕಿ ಇದ್ದಾರೆ. ಇವರಿಗೆ ಹೊಗ ಕ್ಯಾನಿಸುವ ಬಗ್ಗೆಯೆ, ಇವರ ಸಂಗಡ ಇಬ್ಬರು ಮುಸಲ್ಮಾನರು ಇದ್ದರು. ಅವರಲ್ಲಿ ವಬ್ಬ ಕಾಡು ಬಿದ್ದದು ವ್ಯಾಡಿ ಹೋದಾ. ಮತ್ತೊಬ್ಬ ಮುಸಲ್ಮಾನರವನಿಗೆ ಘಾಯ ಹೆಚ್ಚಾಗಿ, ಮೂರು ದಿವಸ ಪರಿಯಂತರ ಇದ್ದದು, ಆ ಬಳಿಕ ಸತ್ತು ಹೋದನು. ಆ ಯರಡು ಜನ ಚೇಲ್ಯರ ಕೈಯ ಇದ್ದ ಹತಯಾರು: ಚಕಮುಕಿ ಬಂದೂಕು ಯರಡು, ಕ್ಯಾಸ್ತಾನು ಯರಡು, ಕಠಾರಿ ವಂದು, ಕತ್ತಿ ಯರಡು, ಬಾಂಕು ವಂದು, ಬಿಚುವಾ ವಂದು ಸಹಾ, ಆ ಯರಡು ಜನ ಚೇಲ್ಯರ ಸಂಗಡ ಇದೆ. ಈ ಮೋಸದ ಸಾಕ್ಷಿ ಬಗ್ಗೆಯೆ ನಮಗೆ ಸುದ್ದಿ ಹೇಳಿದಂಥಾ ಮುಸಲ್ಮಾನರ ಹುಡುಗ ವಂದು, ಆ ಸಮಯದಲ್ಲಿ ಹಾಜರು ಇದ್ದ ಕೊಂಬಾ ಜನ ವಂದು, ನಮ್ಮ ಚಾಕರ ವೆಂಕಟಾಚಲ ಜನ ವಂದು, ಸಹಾ ಕಳುಹಿಸಿ ಇದ್ದೇವೆ. ಸಯುಕ್ತಯದಿಂದ ಅವಂದಿರ ವಿಚಾರಿಸಿದರೆ, ಯಾವತ್ತು ವಿವರವು ತಮಗೆ ತಿಳಿಯ ಬಂದೀತು. ಈ ಇಬ್ಬರು ಚೇಲ್ಯರು ಬಹಾಳ ತಕ್ಷೀರುವಂತರಿದ್ದಾರೆ. ಮಾಫು ಮಾಡುವಂಥಾದ್ದಕ್ಕೆ ತಕ್ಕಂಥವರಲ್ಲಾ. ಫಿರಂಗಿ ಬಾಯಿಗೆ ಕಟ್ಟಿ ಹಾರಿಸಿ ಕೊಂದು ಹಾಕುವಂಥಾದ್ದು ವಿಹಿತವದೆ. ಅಕಾಪಿಸಿ[1] ತಾವು ಅವರಿಗೆ ಶಿಕ್ಷೆ ಮಾಡದೆ ಇದ್ದರೆ, ಇಲ್ಲಿಗೆ ಕಳುಹಿಸಿ ಕೊಡುವಂತೆ ಮಾಡಿಸ ಬೇಕು. ಅವರಿಗೆ ತಕ್ಕ ಶಿಕ್ಷೆ ಮಾಡಿಸುತ್ತಾ ಇದ್ದೇವೆ. ಅವಂದಿರಿಗೆ ಶಿಕ್ಷೆ ಮಾಡದೆ ಬಿಟ್ಟು ಬಿಟ್ಟರೆ, ನಮ್ಮ ಶೀಮೆ ಹೋಗಗಳನೆಲ್ಲಾ ಬಹಳ ದಿವಸ ಈ ಶೀಮೆಯಲ್ಲಿ ಇದ್ದದು ಕಂಡು ಇದ್ದಾರೆ, ಮತ್ತು ಇದ್ದೇ ಮೇರೆಗೆ ಹತ್ತು ಇಪ್ಪತ್ತು ಜನರ ಸಂಗಡ ತೆಗದು ಕೊಂಡು ಬಂದು ದಗಾ ಮಾಡಯಾರು. ಆದ್ದರಿಂದ ಇವಂದಿರ ಉಳಿಸ ಬಾರದು. ತಾವು ನಮಗೆ ಅತಯಂತ ದೋಸ್ತದಾರರೆ ಇದ್ದೀರಿ. ಹೆಚ್ಚಾಗಿ ಬರೆಯ ತಕ್ಕದು ಯೇನು ಇದೆ. ಸುಂದರಜಿ ಪರಭುವಿನ ಮುಖವಚನದಿಂದ ಯಲ್ಲಾ ವಿವರವು ತಿಳಿಯ ಬಂದೀತು. ಮೇಲಾಗಿ ಬಂಗಾಳದ ಮಹಾರಾಜಶ್ರೀ ಜನರಾಲ್ ಸರ್ ರಾಬರ್ಟ್ ಆಬರಕರಂಬಿ ಸಾಹೇಬ ಬಹಾದ್ದರವರಿಗೆ ಕಾಗದ ವಂದು, ಮುಂಬಾಯಿ ಗವರನರ್ ಜನಾಟನ್ ಡಾಂಕಿಂನ್[2] ಸಾಹೇಬ ಬಹಾದ್ದರವರಿಗೆ ಕಾಗದ ವಂದು ಸಹಾ ಇದೇ ವಿವರವಾಗಿ ಬರೆಸಿ ಕಳುಹಿಸಿ ಇದ್ದೇವೆ. ಅಲ್ಲಲ್ಲಿಗೆ ತಲಪಿಸಿ, ಅದರ ಜವಾಬು ತರಿಸಿ ಕಳುಹಿಸ ಬೇಕು ಯಂಬದಾಗಿ ಬರದು, ಆ ಯರಡು ಜನ ಚೇಲ್ಯರನೂ ಅವರ ಹತಯಾರು ಸಹಾ ಕಳುಹಿಸಿ ಕೊಟ್ಟರು.

ಹೀಗೆ ಇರುತ್ತಿದ್ದಲ್ಲಿ ವೀರರಾಜೇಂದ್ರ ವಡೆಯರವರ ಮೊದಲಿನ ಕುಟುಂಬದ ಗರ್ಭದಲ್ಲಿ ಕುಮಾರರು ಉದ್ಭವಿಸಲಿಲ್ಲವಾದ ಕಾರಣ, ಕಲಿ ಸಂದ ೪೮೯೮ನೆ ನಳ ಸಂವತ್ಸರದ ಮಾಘ ಶು ೧೩ ರಾಜಪಟ್ಟಾಭಿಷೇಕ ವಿವಾಹಾವರನತ ಸಹಾ ಆಗ ಬೇಕು ಯಂಬದಾಗಿ ನಿಶ್ಚೈಸಿ, ಮಹಾರಾಜಶ್ರೀ ಬಂಗಾಳದ ಜನರಾಲ್ ಸರ್ ರಾಬರ್ಟ್ ಆಬರಕರಂಬಿ ಸಾಹೇಬ್ ಬಹಾದ್ದರವರಿಗೂ, ಮುಂಬಾಯಿ ಗವರನರ್ ಗಜುನ್ ಹರಜಂಗ್ ಮುಮ್ತಾಜ್ ಉದ್ದವಲಾ ಡಾಂಕಿನ್ ಸಾಹೇಬ್ ಬಹಾದ್ದರವರಿಗೂ, ಮತ್ತು ಕೆಲವು ಇಂಗ್ರೇಜಿ ಸರದಾರರಿಗೆ ಸಹಾ, ಈ ಶುಭ ಮಹೋತ್ಸವ ಆಗುವ ವರ್ತಮಾನಕ್ಕೆ ಕಾಗದ ಬರೆಸಿ ಕಳುಹಿಸಿ ಕೊಟ್ಟದರಿಂದ, ಈ ಶುಭ ಕೆಲಸವನು ತಾವು ನಿಶ್ಚಯ ಮಾಡಿದ ದಿವಸಕ್ಕೆ ಶೀಘ್ರವಾಗಿ ಆಗು ಮಾಡ ಬೇಕು ಯಂಬದಾಗಿ, ಸಂತೋಷ ಪಟ್ಟು ಜವಾಬುಗಳ ಬರೆಸಿ ಕಳುಹಿಸಿ ಕೊಟ್ಟರು.

1 ಅಥಾಪಿ. 2 Governor Jonathan Duncan.

ಅದೇ ಮೇರೆ ನಾಲ್ಕುನಾಡ ಅರಮನೆಯಲ್ಲಿ ರಾಜಪಟ್ಟಾಭಿಷೇಕದ ಗದ್ದಿಗೆ ವಿವಾಹ ಮಂಟಪ ಸಹಾ ಬಹು ರಮಣೀಯವಾಗಿ ರಚಿಸಿ, ಆ ಬಳಿಕ ಮಹಾರಾಜರವರು ತಮಗೆ ರಾಜಪಟ್ಟಾಭಿಷೇಕ ವಿವಾಹಪ್ರಸ್ತ ಸಹಾ ನಿಶ್ಚಯಿಸಿ ಇದ್ದೇವೆ. ಈ ಬಗ್ಯೆ ನಾವು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ದೋಸ್ತದಾರರಾದ್ದರಿಂದ, ಈ ಶುಭ ಕೆಲಸಕ್ಕೆ ತಾವೇ ಇಲ್ಲಿಗೆ ಬರ ಬೇಕು. ತಮಗೆ ಸರಕಾರದ ಜಂಬ್ರ ಇದ್ದು, ಬರುವದಕ್ಕೆ ಅನುಕೂಲವಾಗದಿದ್ದರೆ ಒಬ್ಬರು ಸರದಾರರನು, ಯರಡು ಜನ ಸಾಹೇಬರನು, ಕೆಲು ಸರಕಾರದ ಶಿಪಾಯಿಗಳನು, ಸರಕಾರದ ನಿಶಾನಿ ಸಹಾ ಕಳುಹಿಸ ಬೇಕು ಯಂಬದಾಗಿ, ಮಳೆವಾರಿ ಕಮಿಶನರಲ್ಲಿ ಮುಖ್ಯಸ್ಥರಾಗಿ ಇದ್ದಂಥಾ ಉಲಿಸಂನ್[1] ಸಾಹೇಬರವರಿಗೆ ಬರಸಿ ಕಳುಹಿಸಿ ಕೊಟ್ಟಲ್ಲಿ, ಅವರು ಅತ್ಯಂತ ಹರುಷಿತರಾಗಿ, ಸರಕಾರದ ಜಂಬ್ರವಾದ್ದರಿಂದ, ನಮಗೆ ಬರುವದಕ್ಕೆ ಸಂದರ್ಭ ಆಗದರಿಂದ, ಈ ಶುಭ ಕೆಲಸ ಆಗು ಮಾಡುವ ಬಗ್ಯೆ, ಸರದಾರರು ಅಲೆಕ್ಸಾಂಡರ ಬೆಲ್[2] ಸಾಹೇಬರ ಸಂಗಡ ಒಬ್ಬರು ಕಪಿತಾನ್ ಸಾಹೇಬರನು ಒಂದು ಕುಂಪನಿ ಶಿಪಾಯಿಗಳ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ನಿಶಾನಿ ಸಹಾ, ಕಳುಹಿಸಿ ಇದ್ದೇವೆ, ಯಂಬದಾಗಿ ಜವಾಬು ಬರದು ಕಳುಹಿದರು.

ಅದೇ ಮೇರೆ ಆ ಸರದಾರರು, ಶಿಪಾಯಿಗಳು, ಸರಕಾರದ ನಿಶಾನಿ ಸಹಾ ಕೊಡಗಿಗೆ ಬಂದಲ್ಲಿ, ಈ ಸರದಾರರನು ಮಹಾ ಉತ್ಸಾಹದಿಂದ ಇದುರು ಗೊಂಡು ಕರ ಕೊಂಡು ಬಂದು, ಸಲಾಮು ಫಿರಂಗಿಗಳ ಹಾರಿಸಿ, ಬಿಡಾರದಲ್ಲು ಇಳಿಸಿ, ನಾಲ್ಕಾಡೆ ದೇಶದಿಂದ ಈ ಮಹೋತ್ಸವಕ್ಕೆ ಬರುವಂಥಾ ಸರ್ವ ಜನರನು ಅಡಚಿ ಪಾರಕತ್ತು ಮಾಡದೆ, ಬಿಡುವಂತೆ, ತಂಮ ಶೀಮೆ ಉಕ್ಕಡ ಪಹರೆಯವರಿಗೆ ಅಪ್ಪಣೆ ಕೊಟ್ಟು ಇದ್ದಲ್ಲಿ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಶೀಮೆಯಿಂದಲೂ ಟೀಪುಸುಲ್ತಾನರ ಶೀಮೆಯಿಂದಲೂ ಅನೇಕ ಜನರು ಮಹಾ ಸಂತೋಷದಿಂದ ಬಂದು ಕೂಡಿದರು.

ಬಂದಂಥಾ ಜನರಿಗೆಲ್ಲಾ ಇಳುದು ಕೊಳ್ಳುವ ಬಗ್ಯೆ, ಪಡಿಬಿಡಾರ, ಬ್ರಹಾಂಮಪುರಿ ಮುಂತಾಗಿ ತಯಾರಾಗಿ ಇದ್ದದರಲ್ಲಿ ಇಳಿಸಿ, ಈ ಯಾವತ್ತು ಜನರಿಗೆ ಬಹಳ ಸಂತೋಷ ಪಡಿಸಿ, ಅನೇಕ ಉತ್ಸಹಾ ಸಂಭ್ರಮದಿಂದ ಕಲಿಸಂದ ೪೮೯೮ ನೆ ನಳ ಸಂವತ್ಸರದ ಮಾಘ ಶು ೧ ವು ಭಾನುವಾರ ಬೆಳಗಾದ ಗಳಿಗೆ ಐದಕ್ಕೆ ರಾಜಾಧಿರಾಜಯೋಗ ಕೂಡಿದಂಥಾ ಶುಭಲಗ್ನ ಶುಭಮುಹೂರ್ತದಲ್ಲಿ ವೀರರಾಜೇಂದ್ರ ಒಡೆಯರವರಿಗೆ ರಾಜಪಟ್ಟಾಭಿಷೇಕವು ಸಲಕ್ಷಣದಿಂದ ಅನೇಕ ಸಂಭ್ರಮದಿಂದ ಆಯಿತು. ಈ ಪಟ್ಟಾಭಿಷೇಕ ಆಗುವಾಗ್ಯೆ ಗುರು ಹಿರಿಯರಾದಂಥವರೆಲ್ಲಾ ಅನೇಕ ಆಶೀರ್ವಾದಗಳ ಮಾಡಿ, ಸೇಸೆಯನಿಕ್ಕಿದರು. ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸರದಾರ ಸಾಹೇಬರು ಬಂದು, ರಾಜಾಧಿರಾಜರಾಗಿ ಚಿರಂಜೀವಿಯಾಗಿ ಯಂದು, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದ ಬಹುಮಾನವಾದ ಉಡುಗರೆಯನು ಕೊಟ್ಟು, ಸೇಸೆಯನಿಕ್ಕಿದರು. ಮೇಲಾದ ಪರಿವಾರ ಸಮಸ್ತ ಜನರು ಕಾಣಿಕೆಗಳ ಮಡಗಿ, ಸೇಸೆಯನಿಕ್ಕಿದರು.

ಈ ಮೇರೆ ರಾಜಪಟ್ಟಾಭಿಷೇಕವಾದ ಬಳಿಕ, ಮುಂದೆ ರಾಜತ್ವಕ್ಕೆ ಪಟ್ಟದ ಕುಮಾರರು ಆಗ ಬೇಕು ಯಂಬ ಅಪೇಕ್ಷೆಯಿಂದ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಸರದಾರರನೂ ಶಿಪಾಯಿಗಳನೂ ಇಂಗ್ರೇಜ ಸರಕಾರದ ನಿಶಾನಿ ಸಹಾ ಬಹಳ ಮಾನ ಮರಿಯಾದಿಯಿಂದ ಇದರುಗೊಂಡು, ಕರ ತಂದು, ಸಲಾಮು ಫಿರಂಗಿಗಳನು ಹಾರಿಸಿ, ಸಮಸ್ತ ಜನರನು ಬರ ಮಾಡಿ, ಸಭೆ ನೆರಿಸಿ, ಲಗ್ನವನು ಸಾಧಿಸಿ, ಕಲ್ಯಾಣ ಆಗುವಾಗ್ಯೆ, ಮಹಾದೇವಮ್ಮಾಜಿಯವರಿಗೆ: "ನಿಂಮ ಗರ್ಭದಲ್ಲು ಜನಿಸಿದಂಥಾ ಮಕ್ಕಳಿಗೆ ನಂಮ ಕೊಡಗಿನ ಸಂಸ್ಥಾನದ ರಾಜತ್ವವನು ಕೊಡುತ್ತೇವೆ" ಯಂಬದಾಗಿ ಪ್ರತಿಜ್ಞೆ ಮಾಡಿ, ಸಮಸ್ತ ಜನರ ಮುಂಚಿಟ್ಟು, ಇಂಗ್ರೇಜ ಸರದಾರರ ಶಾಯಿದಿಯಿಂದ, ಗುರು ಹಿರಿಯರ ಕೈಯಿಂದ, ಶುಭ ಮುಹೂರ್ತದಲ್ಲಿ ಬಹಳ ವೇದೋಕ್ತಿಯಿಂದ ವೀರರಾಜೇಂದ್ರ ಒಡೆಯರವರು ಮಹಾದೇವಮ್ಮಾಜಿಯವರನು ಇದೇ ಮಾಘ ಶು ೧ ವು, ಭಾನುವಾರ, ರಾತ್ರೆ ಗಳಿಗೆ ೧೮ ಕ್ಕೆ, ವೃಶ್ಚಿಕ ಲಗ್ನದಲ್ಲಿ, ಧಾರೆಯ ನೆರಿಸಿ ಕೊಂಡು, ವಿವಾಹವಾದರು. ಇವರ ಗರ್ಭದಲ್ಲಿ ಜನಿಸಿದಂಥಾ ಕುಮಾರರು ವೀರರಾಜೇಂದ್ರ ಒಡೆಯರವರ ಹೆಸರಿಗೂ ದವಲತ್ತಿಗೂ ರಾಜಪಟ್ಟಕ್ಕೂ ಬಾಧ್ಯರಿದ್ದಾರೆ. ಇಂಗ್ರೇಜ ದೊಡ್ಡ ಸರಕಾರಕ್ಕೆ ಅರಿಕೆ ಆಗುವ ಬಗ್ಯೂ, ಸಮಸ್ತ ಜನರು ತಿಳಿಯುವ ಬಗ್ಯೂ, ಈ ಸಾಧನದಲ್ಲಿ ಬರೆಸಿ, ಕೊಡಗಿನ ರಾಜಸ್ಥಾನದಲ್ಲಿ ಇಟ್ಟು ಇದೆ.

---

1 Wilson. 2 Alexander Bell.

ಈ ಮೇರೆ ಇರುತಿದ್ದಲ್ಲಿ, ಕೆಲವು ದಿವಸದ ಮೇಲೆ ಬಂಗಾಳದ ಸರ್ ಜಾನ್ ಶೋರು[1] ಸಾಹೇಬ್ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ, "ದುಷ್ಮಾನರಾದ ಟೀಪುಸುಲ್ತಾನರ ಕಡೆಯಿಂದ ನಾಲ್ಕು ಜನ ತಂಮಂನ ಘಾತ ಮಾಡುವ ಬಗ್ಯೆ ಬಂದು ಇದ್ದರು ಯಂಬದ ಕೇಳುವದು ನಂಮ ಮನಸ್ಸಿಗೆ ಬಹಳ ಕರಕರೆ ಆಯಿತು. ಆ ಮೇಲೆ ಮಹಾದೇವನ ಕಟಾಕ್ಷದಿಂದ ತಾವು ಆ ದುಷ್ಮಾನರ ಕೈಯಿಂದ ಸಲಾಮತ್ತು ಆಗಿ ಇದ್ಧೀರಿ ಯಂಬದು ಕೇಳಿ, ಸಂತೋಷವಾಯಿತು. ತಾವು ಭೇದವಿಲ್ಲದೆ, ಕುಂಪನಿ ಸರಕಾರದ ಕ್ಷೇಮ ಹಾರೈಸುವಂಥವರಿದ್ಧೀರಿ, ಆದ್ದರಿಂದ ಈ ಮಲಾಮತ್ತು ಬಂದು ಇದ್ದಂಥಾದ್ದು ಮಹಾದೇವನ ಕಟಾಕ್ಷದಿಂದ ಪರಿಹಾರವಾಯಿತು. ಮಹಾದೇವನು ಹಮ್ಮೇಷ ಇದೇ ಮೇರೆ ದುಷ್ಮಾನರ ಕೈಯಿಂದ ತಮಗೆ ಸಲಾಮತ್ತಾಗಿ ಮಡಗ ಬೇಕು" ಯಂಬದಾಗಿ, ಮಹಾರಾಜರವರ ಹೆಸರಿಗೆ ಬರದು ಇದ್ದರು.

ಇದೇ ವಿವರವಾಗಿ ಸರ್ ಜನರಾಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದರವರು ಬರೆಸಿ ಕಳುಹಿಸಿ ಇದ್ದರು. ಇದೇ ನಳ ಸಂವತ್ಸರದ ಪುಷ್ಯ ಶು ೧ಲು ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬ್ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ! "ಟೀಪುಸುಲ್ತಾನರು ತಮಗೆ ದಗಾ ಮಾಡುವ ಬಗ್ಯೆ ಕಳುಹಿದ ಚೇಲೇರಂನು ಮಲೆವಾರಿ ಕಮಿಶನ್ ಸಾಹೇಬರವರ ಬಳಿಗೆ ಕಳುಹಿಸಿ ಇದ್ಧೀರಷ್ಟೆ. ಆ ಚೇಲೇರಂನು ತಂಮ ಹುಕುಂ ಆದಾಗ್ಯೆ, ತಂಮ ಬಳಿಗೆ ಕಳುಹಿಸಿ ಕೊಟ್ಟಾರು. ಟೀಪುಸುಲ್ತಾನರು ಯಂಥವರು ಇದ್ಧಾರೆ ಯಂದರೆ, ಯಾವಾಗಲಾದರೂ ತಂಮ ಕಡೆ ಮನುಷ್ಯರಿಗೆ ಕೊಡಗಿನ ದಾರಿಗಳು ಕಾಂದು ಹೋಗಿ ಇದ್ಧಾರೆ ಯಂತ, ಫಿರಿಯಾದಿ ಮಾಡ್ಯಾರು. ಈ ಚೇಲೇರ ಸ್ವಾಬತಿನಲ್ಲಿ ಇದ್ದ ಯರಡು ಜನಕ್ಕೆ ತಾವು ಬಂವಾಗಿ ಶಿಕ್ಷೆ ಮಾಡಿದಂಥಾದ್ದು, ಲೋಕದ ಯಾವತ್ತು ಜನರು ತಿಳಿದು ಇದ್ಧಾರೆ. ಈ ಚೇಲೇರಂನು ಕೈದಿನಲ್ಲಿ ಜೀವ ಸಹಿತ ಮಡಗಿದರೆ, ಟೀಪುಸುಲ್ತಾನರು ಫಿರಿಯಾದಿ ಮಾಡಿದಾಗ್ಯೆ, ತಾಯಿದಿ ಕಾಡ ಬಹುದು" ಯಂಬದಾಗಿ, ಬರೆಸಿ ಕಳುಹಿದರಿಂದಲೂ, ಮಲೆವಾರಿ ಕಮಿಶನರಾಗಿ ಇದ್ದ ರಿಬಟ್ಟ ಸಾಹೇಬರವರು ಆ ಯರಡು ಜನ ಚೇಲೇರಂನು ಪಹರೆಯ ಮೇಲೆ ಕಳುಹಿಸಿ ಕೊಟ್ಟದರಿಂದಲೂ, ಆ ಚೇಲೇರು ಮಾಡಿದ ತಕ್ಷೀರಿಗೆ ಜೀವ ಸಹಿತ ಬಿಡ ಬಾರದು, ಆದಾಗ್ಯೂ ನಾಳೆ ಸಾಕ್ಷಿ ಬಗ್ಯೆ ಬೇಕಾದೀತು. ಈ ಬಗ್ಯೆ ಇವರು ಈ ಸೀಮೆಯಲ್ಲಿ ಬ್ಯಾರವ್ಖತಿಯಲ್ಲಿ ತಿರಿಗಿ ಕಾಡು ಮಾರ್ಗ ಯಾವತ್ತು ಕಂಡು ಇದ್ಧಾರೆ. ಆದ್ದರಿಂದ ಈ ಜನರ ಹೀಗೆ ಮಡಗಿದರೆ, ವಿಕಲ್ಪ ಮಾಡ್ಯಾರು, ಯಂಬದಾಗಿ ಗ್ರಹಿಸಿ, ಆ ಯರಡು ಜನ ಚೇಲೇರಂನು ವಂದೊಂದು ಕಾಲು ಕುಯಿಸಿ, ಅವಂದಿರಿಗೆ ಅಂನ ಬಟ್ಟೆಯಂನು ಅರಮನೆ ತರದಿಂದ ಕೊಡಿಸಿ ಕಾಡುತ್ತಾ, ಸಾಕ್ಷಿ ಬಗ್ಯೆ ವೀರರಾಜೇಂದ್ರ ಪೇಟೆಯಲ್ಲಿ ಮಡಗಿಸಿದರು.

ಈ ಬಗ್ಯೆ ವಿಲಾಯತಿಯಿಂದ ಮುಂಬಾಯಿ ಗವರ್ನರ್ ಜನಾಟಂನ್ ಡಾಂಕಿನ್ ಸಾಹೇಬರವರ ಹೆಸರಿಗೆ ಬರದು ಕಳುಹಿದ ಕಾಗದದ ನಕಲಂನು ಮಲೆವಾರಿ ಕಮಿಶನ್ ಸಾಹೇಬರವರು ರಾಜರವರ ಬಳಿಗೆ ಕಳುಹಿಸಿ ಇದ್ದರು. ಅದರಲ್ಲಿ ಬರದು ಇರುವ ವಿವರ: "ವಿಲಾಯತಿ ದಾಸಂನ್ ಸಾರದಲ್ಲು ಇರುವಂಥಾ ಪ್ರಧಾನರು ಮುಂಬಾಯಿ ಗವರ್ನರ್ ಸಾಹೇಬರವರಿಗೆ ಬರದ ವಿವರ: ಕೊಡಗಿನ ರಾಜರವರಿಗೆ ದಗಾ ಮಾಡುವದಕ್ಕೆ ಟೀಪುಸುಲ್ತಾನರು ಸಿದ್ಧಾಂತ ಸ್ವಾಧಿದಲ್ಲಿ, ಫಲವಿಲ್ಲದ ಹಾಗೆ ಹೋಯಿತು ಯಂತ, ತಿಳಿದು ಇದ್ಧೇವೆ. ಆದ್ದರಿಂದ ನಮಗೆ ಯಷ್ಟೋ ಸಂತೋಷವೂ ಉತ್ಸಾಹವೂ ಆಗುತ್ತಾ ಇದೆ" ಯಂಬದಾಗಿ, ಬರದು ಇದ್ದರು.

ಆ ಬಳಿಕ ಟೀಪುಸುಲ್ತಾನರ ಕಡೆ ಸೇರ್ಖಾನ, ಮೋಜುಂಖಾನ ಸಹಾ ಫೌಜ ಸಮೇತ ಬಿಸಲೆಗಟ್ಟದ ಮಾರ್ಗವಾಗಿ ಕೊಡಿಯಾಲಕ್ಕೆ ಬಂದು, ಕುಂಬಳೆ ರಾಮಂತರಸ ಯಂಬವನು ಟೀಪುಸುಲ್ತಾನರ ಸೀಮೆ ಮೇಲೆ ತರಾರತ್ತು ಮಾಡುತ್ತಾ ಇದ್ದದರಿಂದ, ಅಲ್ಲಿಗೆ ಹೋಗಿ, ಅವನಿಗೆ ತಂಬಿ ಹಮುಂಬಾಯಿಸಿ, ಪುನಹಾ ಕೊಡಿಯಾಲಕ್ಕೆ ಹೋದರು.

ಆ ಬಳಿಕ ಕೊಡಿಯಾಲದ ಆಸಫ ಶೇಖ್ ಶಾಬುದ್ದೀನನು ತಲಚೇರಿ ಕ್ವಾಟೆ ಕಮಿಶನರ ಹೆಸರಿಗೆ ಬರದು ಇದ್ದ ಕಾಗದದಲ್ಲಿ, ಕಾಂತಮಂಗಲ, ಕಲ್ಲೂರಬಾಟಿ, ಸೂಳ್ಯಅಮರದ ಸೀಮೆ ಪರಾಪತ್ಯಯ ಸರಕಾರದ ತಾಲೂಕು ಇರುವಲ್ಲಿ, ಇತ್ತಲಾಗಿ ಸರಕಾರಕ್ಕೂ ನಿಂಮ ಕುಂಪನಿಯವರಿಗೂ ಸವಲ್ಪ ಕಟ್ಟಟಿ ಬಂದ ಸಮಯದಲ್ಲಿ, ಕೊಡಗಿನ ರಾಜರು ಕಲ್ಲೂರಬಾಟಿ, ಕಾಂತಮಂಗಲ, ಸೂಳ್ಯಅಮರ ಸೀಮೆ ವಗೈರೆ ಹೋಗಿ ಕೊಂಡು, ರೈತರ ಕಡೆಯಿಂದ

1 Sir John Shore.

ಹಾಗೆ ಕಾಲು ಯತ್ತಿ ಕೊಂಡರು. ಸರಕಾರಕ್ಕೂ, ತಂಮ ಕುಂಪನಿಗೆ ಸಹಾ ಸಲ್ಲಾ ಆದ ಬಳಿಕ, ಈ ಕೊಡಗಿನ ದೊರೆಗಳು ಸದರಹು ಆ ಶೀಮೆ ಬಿಡದೆ, ಹಾಳಿ ಕೊಂಡು ಬರುವದರಿಂದ, ಈ ಕೈಫಿಯತ್ತು ಹಜೂರಲ್ಲು ಅರಿಕೆ ಆಗಿ, ಕಾಂತಮಂಗಲ, ಕಾಲ್ಲೂರಬಾಟಿ, ಸೂಳ್ಯ ಹಟರೆ ಸಾಟಕು ಸರಕಾರದ ಇಲಾಖೆ ವಳಗೆ ಇರುವ ಶೀಮೆಯಂನು ಯಥಾಪ್ರಕಾರ ಸರಕಾರ ತಾಲೂಕು ಮಾಡಿ, ಕಾಲ್ಲೂರಬಾಟಿ, ಕಾಂತಮಂಗಲದಲ್ಲು ಕೋಟೆ ಕಟ್ಟಿ ಬರುವಂತೆ ಮೀರ ಆಸಫ್ ಸಿರಖಾನರಿಗೆ, ಮೀರ ಸದೂರು, ಮೀರ ಇಬ್ರಾಹೀಮ್ ಸಾಹೇಬರಿಗೆ ಸಹಾ ಅಪ್ಪಣೆ ಆದಕಾರಣ, ಖಾಸಿ ಫೌಜ ಸಮೇತ ಬಂದು, ಜಮಾಲಾಬಾದಿಗೆ ದಾಖಲಾದಲ್ಲಿ. ನಮಗೂ ಅವರ ಸಂಗಡ ಇರುವಂತೆ ಅಪ್ಪಣೆ ಬಂದು ಇರುವದರಿಂದ, ಸದರಿ ಬರದ ವಿವರವಂನು ಆ ಸರದಾರರು ನಂಮ ಸಂಗಡ ಹೇಳಿ, ಕೊಡಗಿನ ರಾಜರು ಕುಂಪನಿ ಆಶ್ರಯದಲ್ಲಿ ಇದ್ಧಾರೆ, ನಾವು ಫೌಜ ಸಮೇತ ಆ ಶೀಮೆಗೆ ಹೋದರೆ, ಲಡಾಯಿ ಆಗುವದು ಸರಿ. ಇಂಗ್ರೇಜಿಯವರು ಕುಂಮಕು ಮಾಡ್ಯಾರು ಯಂತಾ ಹೇಳಿದಲ್ಲಿ, ಇಂಗ್ರೇಜ ಸರಕಾರಕ್ಕೂ ನಂಮ ಸರಕಾರಕ್ಕೂ ಖಾಸಿ ಜವಾಬು ಸವಾಲಿನಿಂದ ಸಲ್ಲಾ ಆಗಿ ಇರುವಂಥಾ ವಿಷಯ ಇದುವರಿಗೂ ಕುಂಪನಿ ಸರಕಾರದವರು ಯಾವದೊಂದು ಸರಕಾರದ ಕೆಲಸದಲ್ಲಿಯೂ ವಿವೇಕದಿಂದಲ್ ನಡದು ಬಂದು ಇದ್ಧಾರೆ. ಕೊಡಗಿನ ದೊರೆಗಳು ಈ ಶೀಮೆ ಹಾಳಿ ಕೊಂಡು ಇರುವಂಥಾದ್ದು ಕುಂಪನಿ ಸರಕಾರಕ್ಕೆ ದಾಖಲು ಇಲ್ಲಾ. ಈ ವಿವರ ಅವರಿಗೆ ತಿಳಿದರೆ, ಆ ಶೀಮೆ ಬಿಡಿಸಿ ಕೊಟ್ಟಾರೆಂಬದಾಗಿ, ನಾವು ಅರಿಕೆ ಮಾಡಿದಲ್ಲಿ, ಹಾಗಾದರೆ ನಿಂಮ ಹೆಸರಿಂದ ಬರದು ಕಳುಹಿಸಿ ಯಂತಾ, ನಮಗೆ ಹುಕುಂ ಕೊಟ್ಟದರಿಂದ, ನಾವು ತಮಗೆ ತಿಳಿಸಿ ಇದ್ಧೇವೆ ಯಂಬದಾಗಿ, ಬರದು ಕಳುಹಿದಲ್ಲಿ, ಅದಕ್ಕೆ ದರಜವಾಬಾಗಿ ಮಲೆಹಾರಿ ಕಮೀಶನ್ ಜ್ಯಾನ ಇಸಪೆನಸರ[1] ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ: "ಶ್ರೀರಂಗ ಪಟ್ಟಣದಲ್ಲು ಸಲ್ಲಾ ಕರಾರುನಾಮೆ ಆದಂಥಾ ಯೆಳನೇ ಕಲಮಿನಲ್ಲಿ ಗಡಿ ಸರಹದ್ದಿನಲ್ಲಿ ಯೇನೊಂದು ತಂಟೆ ತಕರಾರು ಬಂದಾಗ್ಯೂ, ಉಭಯ ಕಡೆಯಿಂದಲೂ ಜನ ನಿಂತು, ನ್ಯಾಯಹಿದ್ದ ಪ್ರಕಾರ ಹಾಸಲಿ ಆಗಿ ತೀರಿಸ ಬೇಕು ಯಂತಾ ಕರಾರು ಬರದು, ಉಭಯ ಕಡೆಯಲ್ಲು ಮಡಗಿ ಇದೆ. ಹೀಗೆ ಇರುವಲ್ಲಿ ಕಾಂತಮಂಗಲ, ಕಾಲ್ಲೂರಬಾಟಿ ಯಂದರೆ, ಸೂಳ್ಯದ ಶೀಮೆ ವಳಗಾಗಿ ತೋರುತದೆ, ಸೂಳ್ಯ ಅಮರ ಶೀಮೆಯು ಕೊಡಗಿನ ದೊರೆಗಳದಾಗಿ ತೋರುತದೆ. ನೀವು ಫೌಜ ಸಮೇತ ಜೋರಾವರಿಯಿಂದ ಆ ಶೀಮೆ ವಳಸುಗಿದ್ದ್ಯೆ ಆದರೆ, ಶ್ರೀರಂಗ ಪಟ್ಟಣದಲ್ಲು ಸಲ್ಲೆ ಕರಾರುನಾಮೆ ಬರದ ಪ್ರಕಾರ, ಸಖಿ ಆಗಿ ನಡಸುವಂಥಾದಕ್ಕೆ ಟೀಪುಸುಲ್ತಾನರ ಮನಸಿಗೆ ಇಲ್ಲಾ ಯಂಬದಾಗಿ ತೋರಿಸಿ ಕೊಟ್ಟದ್ದು ಆಗುತಾ ಇದೆಯಷ್ಟೆ. ಆ ಪ್ರಕಾರ ಆದ್ದ್ಯೆ ಹಾವುದಾದರೆ, ಈ ವರ್ತಮಾನ ಅತ್ಯಷ್ಟೂ ಹಿಂದುಸ್ಥಾನದಲ್ಲಿ ಬಹು ಮಾನವಾದ ಬಂಗಾಳದ ಸಂಸ್ಥಾನಕ್ಕೆ ತಿಳಿಯ ಪಡಿಸ್ಯೆವು. ಆದಕಾರಣ ಸಖಿತವ ಪ್ರಕಾರ ನಡೆಯ ಬೇಕು" ಯಂಬದಾಗಿ ಬರದು ಕಳುಹಿಸಿ, ಕಮೀಶನ್ ಸಾಹೇಬರು ಕಲಿ ಸಂದ ೪೯೦೦ನೇ ಕಾಳಯುಕ್ತಿ ಸಂವತ್ಸರದ ಚೈತ್ರ ಶು ೧೩ಲು, ವೀರರಾಜೇಂದ್ರ ವಡೆಯರವರಿಗೆ ಬರಸಿ ಕಳುಹಿದ ಕಾಗದದಲ್ಲಿ: ಜಮಾಲಾಬಾದ ದಿವಾನನಿಂದ ವಂದು ಕಾಗದ ತಲಚ್ಚೇರಿ ಕಮೀಶನ್ ಸರದಾರರ ಹೆಸರಿಗೆ ಬಂದದರ ಅಭಿಪ್ರಾಯ ತಮಗೆ ತಿಳಿಯುವ ಬಗ್ಯೆ ಅದರ ನಕಲು ಕಳುಹಿಸಿ ಇದ್ದೇವೆ. ಅದರಲ್ಲು ಕಾಂತಮಂಗಲದಲ್ಲಿ, ಕಾಲ್ಲೂರಬಾಟಿಯಲ್ಲಿ, ಕೋಟೆ ಕಟ್ಟ ಬೇಕೆಂಬದಾಗಿ, ಸೂಳ್ಯ ಅಮರ ಶೀಮೆ ಆಕರಮಿಸಿ, ಸರಕಾರಕ್ಕೆ ದಾಖಲು ಮಾಡ ಬೇಕು ಯಂಬದಾಗಿಯೂ, ಟೀಪುಸುಲ್ತಾನರ ಅಪ್ಪಣೆ ಬಂದಿರುವದರಿಂದ, ಆ ದೇಶ ಬಿಟ್ಟು ಕೊಡ ಬೇಕೆಂಬದಾಗಿ, ತಮಗೆ ಬರದು ಕಳುಹಿಸ ಹೇಳಿ ಬರದು ಇರುವದಂನು ವೋದಿ ನೋಡಿದರೆ, ತಿಳಿಯ ಬಂದೀತು. ಅದಕ್ಕೆ ಜವಾಬು ನಾವು ಬರದ ನಕಲಂನು ಈ ಕಾಗದದ ಸಂಗಡ ಬರದು ಕಳುಹಿಸಿ ಇದ್ಧೇವೆ. ಅದು ತಮಗೆ ಪಹಚಿದರೆ, ತಂಮಿಂದ ಬೇಕಾದ ಪ್ರಕಾರ ಹೇಳಲಿಕ್ಕೆ ಮಾರ್ಗ ಉಂಟಷ್ಟೆ. ಸೂಳ್ಯದ ಶೀಮೆಯಲ್ಲಿ ಟೀಪುಸುಲ್ತಾನರು ಜೋರಾವರಿಯಿಂದ ಬರುತಾರೆ ಯೆಂಬದಾಗಿ, ತಮಗೆ ವರ್ತಮಾನ ಬಂದರೆ, ಅದಕ್ಕೆ ಬಹುಮಾನವಾದ ಇಂಗ್ರೇಜ ಕುಂಪನಿ ಸಂಸ್ಥಾನದಿಂದ ಬಹಳ ಸಖ್ತಿ ಟೀಪುಸುಲ್ತಾನರಿಗೆ ಹೇಳಿ ಇರುವ ಪ್ರಕಾರ, ತಾವುನು[2] ಅವರಿಗೆ ಹೇಳ ಬೇಕು. ಅದು ಯೇನು ಯಂದರೆ, ಉಭಯ ಕಡೆಯಿಂದಲೂ ಆಳುಗಳ ಸಮನಾಗಿ ನಿಲ್ಲಿಸಿ, ಸರಹದ್ದು ತಕರಾರು ವಿಸ್ತಾರ ಮಾಡ ಬೇಕು ಯಂಬದಾಗಿ ಹೇಳುವದು. ಕುಂಪನಿಯಿಂದ ಮೊಕರರು ಮಾಡಿದ ಪ್ರಕಾರ ನೀವು ಸಖಿ ಆಗಿ ವಿಚಾರಿಸಿ, ನಿಶ್ಚಯ ಮಾಡುವದಕ್ಕಾಗಿ ವಂದು ಮಾರ್ಗ ಉಂಟಾದರೆ,—ಜ

1 Mr. J. Spenser. 2 ತಾವು.

ಲದಾಗ ಜ್ಯಾರಾವರಿಯಿಂದ ಸೀಮೆಯಲ್ಲಿ ಬಂದು, ಅವಕಾಶ ಆಕ್ರಮಿಸಿ ಕೊಳ್ಳುವದಕ್ಕಿಂತಾ ನಷ್ಟ ಪರಕಾರ ತೀರಿಸುವಂಥಾದ್ದು, ಮಾನವಾಗಿಯೂ ಬುದ್ಧಿ ಆಗಿಯೂ ವಳ್ಳೆದಾಗುತ್ತಾ ಇದೆ ಯಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಈ ಅಮರಸೂಳ್ಯದ ಮಾಗಣಿ ವಾಜಬಿ ದೊಯಾಪ್ತು ಮಾಡುವ ಬಗ್ಯೆ, ಮಲೆವಾರಿ ಕಮಿಶನ್ ಸಾಹೇಬರು ಕಪಿತಾನ್ ಮಾಹಿನಿ[1] ಸಾಹೇಬರವರಂನು ಕೊಳಯುಕ್ತಿ ಸಂವತ್ಸರದ ಮೇಶ್ಯ ಮಾಸದಲ್ಲಿ ಕಳುಹಿಸಿ ಕೊಟ್ಟದರಿಂದ, ಆ ಸಾಹೇಬರು ಬಂದು, ಮಹಾರಾಜರವರಂನು ಕಂಡು, ಭೇಟಿ ಆಗಿ ಕೊಡಗಿನ ಸಂಸ್ಥಾನದ ಕರ್ಗೇಕ ಸುಬ್ಬಯ್ಯನಂನು ಕೂಡಿಸಿ ಕೊಂಡು, ಅಮರಸೂಳ್ಯದ ಸರಹದ್ದಿನಲ್ಲು ಹೋಗಿ, ಇಳುಕೊಂಡು, "ನಾವು ಕುಂಪನಿ ಬಹಾದ್ದರ ಸರಕಾರದ ಕಡೆಯಿಂದ ಕೊಡಗಿನ ಮಹಾರಾಜರ ತಾಲೂಕಿನ ಅಮರಸೂಳ್ಯದ ಸೀಮೆ ಸರಹದ್ದಿನ ಹೂಶು ತೀರಿಸುವ ಬಗ್ಯೆ ಬಂದು ಇದ್ದೇವೆ," ಯಂಬ ವಿವರವಾಗಿ, ಮೀರ ಆಸಫ್ ಸೇರಖಾನಗೆ ಬರದು ಕಳುಹಿಸಿ ಕೊಟ್ಟಲ್ಲಿ ಆ ಸೇರಖಾನನು: "ನಂಮ ಕಡೆಯಿಂದ ವಟಟ ವಕೀಲಗೆ ಕಳುಹಿಸಿ ಕೊಡುತ್ತೇವೆ," ಯಂತಾ, ಮೊದಲು ಬರದು ಕಳುಹಿದನು. ಅಷ್ಟರಲ್ಲಿ ಕೊಡೆಯಾಲಕ್ಕೆ ಫರಾಶೀಸರ[2] ಕೆಲವು ಮಂದಿ ಬಂದು, ಇಳುದ್ದರಿಂದ[3], "ಈಗ ಮಳೆಗಾಲ ಸಮೀಪವಾಯಿತು. ಈ ಮಳೆಗಾಲದಲ್ಲಿ ನಂಮ ಫೌಜು ಇಲ್ಲಿ ನಿಲ್ಲಿಸುವದಿಲ್ಲಾ. ಈ ಸರಹದ್ದಿನ ತಕರಾರು ಮುಂದೆ ಕಾರ್ತಿಕ ಮಾಸದಲ್ಲಿ ನ್ಯಾದಿಕೊಳ್ಳ ಬಹುದು," ಯಂಬದಾಗಿ ಯರಡನೆ ದಫಾ ಕಾಗದ ಬರದು ಕಳುಹಿಸಿ, ತಂನ ಫೌಜು ತೆಗದು ಕೊಂಡು, ಜಮಾಲಾಬಾದಿಗೆ ಹೋದನು.

ಕಪಿತಾನ್ ಮಾಹಿನಿ ಸಾಹೇಬರವರು ವೀರರಾಜೇಂದ್ರ ವಡೆಯರವರ ಬಳಿಗೆ ಬಂದು ಭೇಟಿ ಆಗಿ, ಮಳೆಗಾಲ ಯರಡು ತಿಂಗಳು ಇದ್ದು, ಶ್ರಾವಣ ತಿಂಗಳಲ್ಲು ಪುನಹಾ ಗಟ್ಟಾ ಇಳಿದು, ಕಲ್ಲಿಕೋಟೆಗೆ ಮಲೆವಾರಿ ಕಮಿಶನ್ ಸಾಹೇಬರವರ ಬಳಿಗೆ ಹೋದರು.

ಫರಾಶೀಸರ ಇಬ್ಬರು ಸರದಾರರು, ಯೆಪ್ಪತ್ತು ಯಂಬತ್ತು ಜನ ಸಹಾ, ಕೊಡೆಯಾಲದಲ್ಲಿ ಇದ್ದವರಂನು ಸೇರಖಾನನು ಕರದು ಕೊಂಡು ಪಟ್ಟಣಕ್ಕೆ ಹೋದನು.

ಹೀಗೆ ಇರುತ್ತಿದ್ದಲ್ಲಿ ಕೊಳಯುಕ್ತಿ ಸಂವತ್ಸರದ ಆಶ್ವೀಜ ಬ ೧ಲು ಕಪಿತಾನ್ ಮಾಹಿನಿ ಸಾಹೇಬರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ, "ಇದೇ ಸಂವತ್ಸರದ ಶ್ರಾವಣ ಮಾಸ ಕರ್ಕಟಕ ಇಪ್ಪತ್ತನೇ ತೇದಿಯಲ್ಲಿ ಫರಾಶೀಸರ ದೊಡ್ಡ ಜಹಾಜು ಹದಿಮೂರು, ಇಂಗ್ರೇಜಿಯವರ ಜಹಾಜು ಹದಿಮೂರು, ಇದು ವಂದಕ್ಕೊಂದು ಭೇಟಿ ಆಯಿತು. ಫರಾಶೀಸರ ಜಹಾಜು ಕೆಲವು ಜಹಾಜಿನಲ್ಲಿ ಯಪ್ಪತ್ತಯರಡು ತೋಪು ಇತ್ತು. ಯಂಭತ್ತು ತೋಪು ಕೆಲವು ಜಹಾಜಿನಲ್ಲಿ ಇತ್ತು. ವಂದು ಜಹಾಜಿನಲ್ಲಿ ನೂರಯಿಪ್ಪತ್ತು ತೋಪು ಇತ್ತು. ಇಂಗ್ರೇಜಿಯವರ ಜಹಾಜಿನಲ್ಲಿ, ಹಂನೆರಡು ಜಹಾಜಿನಲ್ಲಿ ಸರಾಸರಿ ಯಪ್ಪತ್ತನಾಲ್ಕು ತೋಪು ಇತ್ತು. ವಂದರಲ್ಲಿ ಐವತ್ತು ತೋಪು ಇತ್ತು. ದೊಡ್ಡ ಲಡಾಯಿ ಆರಂಭವಾಗಿ, ಹದಿನೆಂಟು ಘಂಟೆ ತನಕ ಆಯಿತು. ಕಡೆಗೆ ಇಂಗ್ರೇಜ ಸರದಾರರು ದೊಡ್ಡ ಹತಿ ಮಾಡಿದರು. ಫರಾಶೀಸರ ಹದಿಮೂರು ಜಹಾಜಿನಲ್ಲಿ ವಂಭತ್ತು ಜಹಾಜು ಹಿಡುದರು. ಯರಡು ಜಹಾಜು ಬೆಂದು, ಹಾರಿ ಹೋಯಿತು. ಅದರಲ್ಲಿ ವಂದು ಜಹಾಜಿನಲ್ಲಿ ನೂರಯಿಪ್ಪತ್ತು ತೋಪು ಇತ್ತು. ಯಾವತ್ತು ಹುಡಿಹುಡಿ ಆಗಿ ಹೋಯಿತು. ಅದರಲ್ಲಿ ಫರಾಶೀಸರ ಸರದಾರ ಇದ್ದವನು ಸತ್ತು ಹೋದಾ. ಯರಡು ಜಹಾಜು ಲಡಾಯಿದ ಹೊಗೆಯಲ್ಲಿ ವಾಡಿ ಹೋಯಿತು. ಫರಾಶೀಸರವರಲ್ಲಿ ಯಷ್ಟು ಜನ ಇದ್ದರೊ? ಯೇನೇನು ಇತ್ತೊ? ಅದು ವಂದು ಸಂಖ್ಯೆ ಯಾರಿಗೂ ತಿಳಿಯದು. ಇದು ದೊಡ್ಡ ಜಹಾಜಿನ ವರ್ತಮಾನ. ಇನು ಚಿಕ್ಕ ಜಹಾಜುಗಳು ಯಷ್ಟು ಇತ್ತೊ? ಯಷ್ಟು ಹೋಯಿತೊ? ಯೇನಾ? ಇದು ವಂದು ಯಾರಿಗೂ ಲೆಖ್ಖವಿಲ್ಲಾ. ಇಂದಿನವರಿಗೆ ಇಂಥಾ ಲಡಾಯಿ ಯಲ್ಲಿಯೂ ಆದ್ದಿಲ್ಲಾ. ಇಂಗ್ರೇಜ ಬಹಾದ್ದರವರ ಕೈಲಿ ಸಿಕ್ಕಿದ್ದು ಜಹಾಜು ವಂಭತ್ತರಲ್ಲಿ ಯೆಳುನೂರು ತೋಪು ಇತ್ತು. ದೊಡ್ಡದು ಯರಡು ಜಹಾಜು ಬೆಂದು ಹೋದ್ದದರಲ್ಲಿ, ಇನೂರ ತೋಪು ಇತ್ತು. ಈಗ ಫರಾಶೀಸರವರು ಸಮುದ್ರದಲ್ಲು ಇಳುದು ಮೊಕಾ[4] ಕೊರಿಸುವದಕ್ಕೆ ಕೂಡದು. ಕಳ್ಳತನವಾಗಿ ಯಲ್ಯಾದರೂ ವಾಡ್ಯಾಡುವದಲ್ಲದೆ, ಇಂಗ್ರೇಜ ಜಹಾಜು ಇರುವ ಕಡೆಗೆ ಬರುವದಿಲ್ಲಾ. ಈ ಸಂಗ್ರಾಮಕ್ಕೆ ಜನರಾಲ್ ಸಾಹೇಬರ ಹುಕುಂ ಮೇರೆ ಇಪ್ಪತ್ತನಾಲ್ಕು ತೋಪು ಹೊಡದರು

1 Captain Mahoney. 2 French. 3 ಇಳಿದದರಿಂದ. 4 ಮುಖ.

ತಂಮ ನಂಮ ಸರಕಾರ ಯರಡು ಭೇದವಿಲ್ಲವಾದ ಕಾರ್ಣ, ನಂಮ ಮನಸಿನಲ್ಲಿ ಇರುವ ಸಂತ್ತೋಷ ತಮಗೆ ತಿಳಿಯ ಪಡಿಸ ಬೇಕೆಂಬದಾಗಿ, ಜನರಾಲ್ ಹಾರ್ಟಳಿ[1] ಸಾಹೇಬ ಬಹಾದ್ದರವರ ಹುಕುಂ ಮೇರೆ ಬರದು ಇದ್ಧೇವೆ„ ಯಂಬದಾಗಿ, ಬರದು ಇದ್ದದರಿಂದ, ಇದಕ್ಕೆ ದರ ಜವಾಬಾಗಿ ಮಹಾರಾಜರು ಬರದು ಕಳುಹಿದ ಕಾಗದದಲ್ಲಿ "ಈ ವರ್ತಮಾನ ಕೇಳಿ ನಮಗೆ ಬಹಳ ಸಂತ್ತೋಷವಾಯಿತು. ಆ ದೊಡ್ಡ ಸರಕಾರಕ್ಕೆ ಜಯಶ್ರೇಯಸ್ಸು ದವಲತ್ತು ದಿನೇ ದಿನೇ ವರ್ಧನೆ ಆಗ ಬೇಕು ಯಂತಾ, ನಾವು ಮಹಾದೇವನಿಗೆ ಬೇಡಿ ಕೊಳ್ಳುತ್ತೇವೆ. ಇಂಥಾ ಜಯಮುಖಸಂತ್ತೋಷದ ವರ್ತಮಾನ ತಾವು ಬರೆಸಿ ಕಳುಹಿದರಿಂದ, ಇಂಥಾ ಸಂತ್ತೋಷ ನಮಗೆ ಈ ವರಿಗೂ ಉಂಟಾಗಲಿಲ್ಲಾ. ಯಾತರಿಂದ ಯಂದರೆ: ನಂಮ ಮನಸಿಗೆ ಐದು ಸಂತ್ತೋಷ ಉಂಟಾಯಿತು. ವಂದನೆ ಸಂತ್ತೋಷ: ಆ ದೊಡ್ಡ ಸರಕಾರಕ್ಕೆ ಜಯಮುಖವಾದ್ದು. ಯರಡನೆ ಸಂತ್ತೋಷ: ಇಂಗ್ರೇಜ ಬಹಾದ್ದರ ಸರಕಾರಕ್ಕೆ ಶತ್ರು ಆದ ಫರಾಶೀಸರಿಗೆ ಅಪಜಯವಾದಂಥಾದ್ದು. ಮೂರನೆ ಸಂತ್ತೋಷ: ಫರಾಶೀಸರು ಕುಂಮಕು ಬರುತ್ತಾರೆ ಯಂತಾ, ಟಿಪುಸುಲ್ತಾನರು ಬಹಳ ನಂಬಿಕೊಂಡು ಅವರ ದಾರಿ ನೋಡುತ್ತಾ ಇದ್ದರಷ್ಟೆ. ಆ ಸಂತ್ತೋಷವು ಬೆಂಕಿ ವಳಗೆ ಬಿದ್ದು, ಅವರಿಗೆ ಬಲ ತಪ್ಪಿದಂಥಾದ್ದು. ನಾಲ್ಕನೆ ಸಂತ್ತೋಷ: ಟಿಪುಸುಲ್ತಾನರು ನಂಮ ಶೀಮೆ ಸಮೀಪದಲ್ಲಿ ಇರುವದರಿಂದ, ಇಂಗ್ರೇಜ ಸರಕಾರಕ್ಕೆ ಜಯವಾದ ಸಂತ್ತೋಷಕ್ಕೆ ನಂಮ ರಾಜ್ಯದಲ್ಲು ಇರುವ ಸರ್ವೇ ಜನರು ಕೇಳಿ, ಸಂತ್ತೋಷ ಪಡುವಂಥಾದಂನು ಟಿಪುಸುಲ್ತಾನರು ಕೇಳಿ, ಅವರ ಹಿಂಮತ್ತು ಗರ್ವ ಭಂಗವಾಗಿ, ಮೋರೆ ಚಿಕ್ಕದು ಮಾಡಿಕೊಂಡದ್ದ ಕೇಳಿ, ನೋಡುವಂಥಾದ್ದು. ಐದನೆ ಸಂತ್ತೋಷ: ಇದಕ್ಕೆ ಸಮುದ್ರದ ತೆರೆ ಉಕ್ಕಿ ಬರುವ ಹಾಗಾದಿ ನಂಮನಸಿಗೆ[2] ಹರುಷ ಉಕ್ಕಿ ಬರುವಂಥಾದ್ದು. ಈ ಮೇರೆ ನಂಮ ಮನಸಿಗೆ ಅನೇಕ ಹರುಷವಾಗಿ ಇಂಗ್ರೇಜ ಸರಕಾರಕ್ಕೆ ದಿನೇ ದಿನೇ ಜಯಮುಖವಾಗಿ ದವಲತ್ತು ಅಭಿವೃದ್ಧಿ ಆಗಿ ಬರ ಬೇಕೆಂಬದಾಗಿ ಪ್ರಾರ್ಥನೆ ಮಾಡಿ, ಆ ದೊಡ್ಡ ಸರಕಾರದ ಕೆಲಸ ಫತ್ತೆ ಆಗುವಂತೆ, ಫರಾಶೀಸರ ನಿಗ್ರಹ ಮಾಡಿದಂಥಾ ಸರದಾರರಿಗೆ ಇಪ್ಪತ್ತವಂದು ಸಲಾಂ ಫಿರಂಗಿಯಂನು ಹಾರಿಸಿ ಇದ್ಧೇವೆ„ ಯಂಬದಾಗಿ ಬರದು ಕಳುಹಿದರು.

ಆ ಬಳಿಕ ಇದೇ ಸಂವತ್ಸರದ ಆಶ್ವೀಜ ಬ ೯ ಲು ಮಲೆವಾರ ಕಮೀಶನ್ ಇಸ್ಪೇನ್ಸರ್ ಸಾಹೇಬರವರು ಬರಸಿ ಕಳುಹಿದ ಕಾಗದದಲ್ಲಿ! "ಅಮರಸೂಳ್ಯ, ಯೇಳುಸಾವಿರಶೀಮೆ ಸಹಾ ತಮಗೆ ಅವಕಾಶವೋ? ಟಿಪುಸುಲ್ತಾನರಿಗೆ ಅವಕಾಶವೋ? ಯಂಬದ ವಿಚಾರಿಸಿ ತಿಳಿಯುವ ಬಗ್ಯೆ, ಕಮೀಶನರಲ್ಲಿ ಇರುವ ಜಾನ್ಸನೆ ಯುಟಾಫು[3] ಸಾಹೇಬರ, ಕಪಿತ್ತಾನ್ ಮೂನಿನಿ ಸಾಹೇಬರ ಸಹಾ ತಂಮ ಬಳಿಗೆ ಕಳುಹಿಸಿ ಇದ್ಧೇವೆ. ಇದೇ ಬಗ್ಯೆ ಟಿಪುಸುಲ್ತಾನರು, ಈ ತರ್ಕ ತೀರಿಸುವ ಬಗ್ಯೆ, ತಂಮ ಕಡೆಯಿಂದ ಸೇಖ್ಶಯಾಬುದ್ದೀನರಿಗೂ[4] ಮೀರಮಹಾಂಮದಲ್ಲಿಯಂನೂ ಕಳುಹಿಸಿ ಇದ್ಧಾರೆ. ಕುಂಪನಿ ಸರಕಾರದ ಯರಡು ಸಾಹೇಬರು ಟಿಪುಸುಲ್ತಾನರ ಕಡೆಯವರ ಬಳಿಗೆ ಹೋಗ್ಯಾರು. ಆದ್ದರಿಂದ ಅಮರಸೂಳ್ಯ, ಯೇಳುಸಾವಿರಶೀಮೆ ಮಾತಿನ ಬಗ್ಯೆ ಸರಹಾದ್ದು ಮಾತ ಕಥೆ ತಿಳುದಂಥಾ ಜನರಂನು ತಯಾರು ಮಾಡಿ, ಈ ಸಾಹೇಬರು ಹೇಳಿದ ಮೇರೆ ಕೊಡ ಬೇಕು. ವಾಜಬಿ ಮಾಡ್ಯಾರು„ ಯಂಬದಾಗಿ, ಬರದು ಕಳುಹಿಸಿ ಇದ್ದರು.

ಅದೇ ಪ್ರಕಾರ ಆ ಯರಡು ಸಾಹೇಬರು ಬಂದಲ್ಲಿ, ಅವರ ವಶಕ್ಕೆ ಸರಹಾದ್ದಿನ ಮಾತು ಕಥೆ ತಿಳುದಂಥಾ ಹಳಬ ಮನುಷ್ಯರು, ಕರ್ಣೀಕ ಸುಬ್ಬಯ್ಯನ ಸಹಾ, ಕೊಟ್ಟಲ್ಲಿ, ಇವರು ಸೂಳ್ಯದ ಮಾಗಣೆಗೆ ಹೋಗಿ, ನಾಗಂಗ್ರೋಲಿ ಯಂಬಲ್ಲಿ ಇಳುಕೊಂಡು, ಉಭಯ ಕಡೆ ಶೀಮೆ ಮಾತು ಕಥೆ ಕೇಳಿ ನಿರ್ಣಯ ಮಾಡುವ ಬಗ್ಯೆ, ಟಿಪುಸುಲ್ತಾನರ ತಾಲೂಕಿನ ಐನಾಡು ಯಂಬ ಗ್ರಾಮದಲ್ಲಿ ಜಾಗಾ ಮಾಡಿ, ಕುಂಪನಿ ಸರಕಾರದ ಸರದಾರರೂ ಟಿಪುಸುಲ್ತಾನರ ಕಡೆಯವರೂ ಈ ಅಮರಸೂಳ್ಯದ ಸರಹಾದ್ದಿನ ಮಾತು ಕಥೆ ಬಗ್ಯೆ ಯರಡು ಕಡೆ ಜನಾ ಕೂಡಿ, ಸವಾಲು ಜವಾಬು ಮಾಡಿದಲ್ಲಿ, ಅಮರಸೂಳ್ಯ ಯಂಬ ಯರಡು ಮಾಗಣೆಯು ಇಕ್ಕೇರಿ ಸಂಸ್ಥಾನಕ್ಕೆ ಸೇರಿದ್ದು ಯಂತಾ, ಟಿಪುಸುಲ್ತಾನರ ಕಡೆಯವರು ಹೇಳಿದಲ್ಲಿ, „ಈ ಮಾತು ಸಹಾಜವೇ ಸರಿ. ಪ್ರಾಕು ಈ ಶೀಮೆ ಇಕ್ಕೇರಿಯವರದು. ಇತ್ತಲಾಗಿ ಚರಕಲ ರಾಜರು ಇಕ್ಕೇರಿ ಸಂಸ್ಥಾನಕ್ಕೆ ಕೊಡ ತಕ್ಕಂಥಾ ಖಂಡಣೆ ಹಣಕ್ಕೆ ಕೊಡಗಿನ ಸಂಸ್ಥಾನದವರಿಗೆ ಜಾಮೀನು ಹೇಳಿಸಿ, ಅರೆವಾಸಿ ಹಣ ಕೊಟ್ಟು, ಅರೆವಾಸಿ ಕೊಡದೆ ದಗಾ ಮಾಡಿದರಿಂದ, ಈ ಸಂಸ್ಥಾನದಿಂದ

1 General Hartly. 2 ನಂಮ ಮನಸ್ಸಿಗೆ. 3 Josiah Utoff. 4 ಶರಣು.

ಆ ಬಾಕಿ ದ್ರವ್ಯವನ್ನು ಸಲಾಯಿಸಿ ಕೊಟ್ಟಲ್ಲಿ, ಆ ಚರಕಲ ರಾಜರು ಮೋಕಿ ಹೋಗ ಕೊಡದೆ, ದಗಾ ಮಾಡಿದಾಗ್ಯೂ, ಆ ಬಗೆ ಹೇಗ ತಂಮ ಕೈಯಿಂದ ಕೊಟ್ಟೆವು. ತಮಗೆ ಬಹಳ ಲುಕ್ಸಾನು ಆಯಿತು ಯಂಬದಾಗಿ, ಇಕ್ಕೇರಿ ಸಂಸ್ಥಾನದ ಸ್ವಾಮಿಶ್ರೀಖುರನಾಯಕರು, ಈ ದಾಕ್ಷಿಣೀಯ ಉದ್ದಿಶ್ಯ ಮೂಡ ವಂಬತ್ತು ಮಾಗಣೆಗಳಿಂದ ಈ ಗಟ್ಟದ ಸರಹದ್ದಿಗೆ ಸೇರಿದ ಕೆಲವು ಗ್ರಾಮಗಳನ್ನು ವಿಂಗಡಿಸಿ, ಹಾಲು ಬೆಣ್ಣೆ ಬಗ್ಗೆಯೆ ಯಂತ, ಆ ಗ್ರಾಮಗಳಿಗೆ ಅಮರದ ಮಾಗಣೆ ಯಂತ, ಹೆಸರು ಇಟ್ಟು, ಕ್ರಯ ಕಟ್ಟಿ, ದೊಡ್ಡ ವೀರಪ್ಪ ಒಡೆಯರವರಿಗೆ ಮಂಗಲೂರ ತಾಲೂಕಿನಿಂದ ಬಿಟ್ಟು ಕೊಟ್ಟರು. ಆ ಬಳಿಕ ಕಾವೇರಿ ಅಂಮ ದೇವರಿಗೆ ಮೋಜೆ ಬಗ್ಗೆಯೆ, ಈ ಕೊಡಗಿನ ಸೀಮೆಯಲ್ಲಿ ತೆಂಗಿನಕಾಯಿ ಫಲ ಇಲ್ಲವಾದ್ದರಿಂದ, ಈ ಬಗ್ಗೆಯೆ ಸೂಳ್ಯದ ಮಾಗಣೆಯನ್ನು ಬಿಟ್ಟು ಕೊಡಬೇಕು. ಅದರ ಕ್ರಯದ ಹಣವನ್ನು ಕೊಡುತ್ತೇವೆ ಯಂಬದಾಗಿ, ದೊಡ್ಡ ವೀರಪ್ಪ ಒಡೆಯರವರು ಹೇಳಿದಲ್ಲಿ ಈ ಮಾತಿಗೆ ಸ್ವಾಮಿಶ್ರೀಖುರನಾಯಕರವರು ಒಪ್ಪಿ, ಸೂಳ್ಯದ ಮಾಗಣೆಯನ್ನು ವಿಂಗಡಿಸಿ, ಬೇಗಮಲೆ ಒಡ್ಡಿನಲ್ಲಿ ಕ್ರಯ ಕಟ್ಟಿಸಿ, ಬಿಟ್ಟು ಕೊಟ್ಟರು. ಇದರ ಕ್ರಯದ ಹಣವನ್ನು ಕಾವೇರಿ ಅಂಮ ದೇವರ ಭಂಡಾರದಿಂದ ಕೊಟ್ಟು ಇದ್ಧಾರೆ," ಯಂಬದಾಗಿ ಹೇಳಿದಲ್ಲಿ, "ಈ ಮಾಗಣೆಗಳು ನಿಂಮದಾಗಿ ಇದ್ದರೆ, ಲೆಖ್ಖ ಕೊಡಿ" ಯಂತ, ಟೀಪುಸುಲ್ತಾನರ ಕಡೆಯವರು ಕೇಳಿದರು. ಅದಕ್ಕೆ ಜವಾಬು ಮಹಾರಾಜರವರ ಕಡೆಯವರು ಹೇಳಿದ್ದು. ನಂಮ ರಾಜರಿಗೆ ದೋಸ್ತಿಯಲ್ಲಿ ದಗಾ ಮಾಡಿ, ಈ ಸಂಸ್ಥಾನವನ್ನೇ ನಿಂಮ ಟೀಪುಸುಲ್ತಾನರು ತೆಗದು ಕೊಂಡರಷ್ಟೆ. ನಂಮಲ್ಲಿ ಲೆಖ್ಖ ಹ್ಯಾಗೆ ಇದ್ದೀತು? ಲೆಖ್ಖವು ನಿಂಮಲ್ಲೆ ಇದ್ದೀತು ಯಂಬದಾಗಿ, ಹೇಳಿದಲ್ಲಿ ಇಕ್ಕೇರಿ ಸಂಸ್ಥಾನದಲ್ಲು ಬರದ ಲೆಖ್ಖ ಯಂತ, ವಂದು ಕಡುತ ತಂದು, ಮಡಗಿ ಕೊಂಡು, ಕೊಡಗಿನ ಸಂಸ್ಥಾನದಿಂದ ಯರಡು ಸಾವಿರ ಜನ ಇಕ್ಕೇರಿ ಸಂಸ್ಥಾನದಲ್ಲಿ ಚಾಕರಿ ಮಾಡಿ ಕೊಂಡು ಇದ್ದರು. ಅವರ ಸಂಬಳದ ಭತ್ತೆನ ಉದ್ದಿಶ್ಯ ಸವಾಬ ಹೈದರಲ್ಲೀಖಾನರು ನಗರದ ಸಂಸ್ಥಾನವನ್ನು ತೆಗದು ಕೊಂಡ ಚಿತ್ರಭಾನು ಸಂವತ್ಸರಕ್ಕೆ ಆರುವತ್ತನೆ ವರಾಕು ಕಳಿದ ಚಿತ್ರಭಾನು ಸಂವತ್ಸರದಲ್ಲಿ, ಅಮರದ ಮಾಗಣೆಯನ್ನು ಇಕ್ಕೇರಿ ಸ್ವಾಮಿಶ್ರೀಖುರನಾಯಕರವರು ಕೊಟ್ಟದ್ದು ಯಂಬದಾಗಿ, ಲೆಕ್ಕದಲ್ಲು ಬರದು ಇದೆ. ನೋಡಿ" ಯಂತ, ಕಡುತ ಬಿಟ್ಟಿ, ಶೈಖು ಶಯಾಬುದ್ದೀನನು ಮೀರಮಹಂಮದಲ್ಲಿ ಸಹಾ ಕಮಿಶನ್ ಜಾನ್ ಯುಟಾಪು ಸಾಹೇಬರಿಗೆ, ಮೂಕಿನಿ ಸಾಹೇಬರವರಿಗೆ ಸಹಾ, ಕಾಣಿಸಿದಲ್ಲಿ, ಆ ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರದು ಇದ್ದದನ್ನು ಮಹಾರಾಜರ ಕಡೆಯವರು ತಿಳಿದು, ವಂದು ಹಾಸಿಗೆ ಮೇಲೆ ಕೆಳಗೆ ಸಹಾ ಪಟ್ಟನ ಬರಹಾ, ಮಧ್ಯ ಮೂರು ಪಂಕ್ತಿ ತಿಕ್ಕಿ, ಕೊಡಗಿನ ಸಂಸ್ಥಾನದ ಯರಡು ಸಾವಿರ ಜನದ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಇಕ್ಕೇರಿ ಸಂಸ್ಥಾನದಿಂದ ಬಿಟ್ಟು ಕೊಟ್ಟದ್ದು ಯಂತ, ಹೊಸತಾಗಿ ತಿಕ್ಕಿ ಬರದ್ದಾಗಿ ಕಾಣುತ್ತಾ ಇದೆ, ಈ ಲೆಖ್ಖ ನಾವು ಒಪ್ಪಲಿಕ್ಕಿಲ್ಲಾ, ಯಂಬದಾಗಿ ಹೇಳಿದಲ್ಲಿ," ಹಾಗಾದರೆ, ಈ ಲೆಖ್ಖ ಸುಳ್ಳೋ? ಯಂತ, ಕೇಳಿದರು. ಆವಾಗಯೆ ಇದರ ಜವಾಬು ನಾಳೆ ದಿವಸ ಹೇಳಿಯೇವು; ನೀವು ಹೋಗಿ ಇಳುಕೊಳ್ಳಿ, ನಾವು ಹೋಗಿ ಇಳುಕೊಳ್ಳುತ್ತೇವೆ ಯಂಬದಾಗಿ, ಇಂಗ್ರೇಜ ಸರಕಾರದ ಕಡೆ ಸಾಹೇಬರು ಹೇಳಿ, ಹಾಳಂಗೇರಿಗೆ ಬಂದರು. ಅವರು ಬೆಳ್ಳಾರೆಗೆ ಹೋಗಿ ಇಳುಕೊಂಡರು.

ಆ ಬಳಿಕ ಕರ್ಣಾಟಕ ಸುಬ್ಬೆಯನ ಸಂಗಡ ಇಂಗ್ರೇಜ ಸರದಾರರು ಹೇಳಿದ್ದು: "ಈ ವಿವರ ದಾರೆಗಳು ನಮಗೆ ತಿಳಿಸಲಿಲ್ಲಾ. ಈ ಬಗ್ಗೆಯೆ ನೀನು ಈಗ ಅರ್ಜಿ ಬರಕೊಂಡು, ದಾರೆಗಳು ತಿಳಿದು ಇರುವದನ್ನು ಬರದು ತರಿಸು" ಯಂಬದಾಗಿ, ಹೇಳಿದಲ್ಲಿ, ಅವನು ಆ ವಿವರಕ್ಕೆ ಬಿಂನವತ್ತಳೆ ಬರಕೊಂಡದರಿಂದ, ಅದಕ್ಕೆ ಜವಾಬಾಗಿ ಕರ್ಣಾಟಕ ಸುಬ್ಬೆಯನಿಗೆ ಅಪ್ಪಣೆ ಕೊಡಿಸಿದ ವಿವರ:

"ಈ ಸಂಸ್ಥಾನದಿಂದ ಯರಡು ಸಾವಿರ ಕೊಡಗು ಮಂದಿ ಇಕ್ಕೇರಿ ಸಂಸ್ಥಾನದಲ್ಲು ಸಂಬಳಕ್ಕೆ ನಿಂತು, ಚಾಕರಿ ಮಾಡಿದರಿಂದ, ಆ ಜನದ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಬಿಟ್ಟು ಕೊಟ್ಟು ಇದ್ಧಾರೆ ಯಂಬದಾಗಿ, ಟೀಪುಸುಲ್ತಾನರ ಕಡೆಯವರು ಹೇಳುತ್ತಾರಷ್ಟೆ. ಆ ಅಮರದ ಮಾಗಣೆ ಯರಡು ಸಾವಿರ ವರಹಾ ಶಿಸ್ತಿನದು ಇದೆ. ಇದಲ್ಲದೆ ಈ ಕೊಡಗಿನ ರಾಜ್ಯದ ಕೊಡಗು ಮಂದಿ ಈ ಸೀಮೆ ಬಿಟ್ಟು ಪರಸಂಸ್ಥಾನಕ್ಕೆ ಹೋಗಿ, ಈವರೆಗೂ ಸಂಬಳಕ್ಕೆ ಚಾಕರಿ ನಿಂತದ್ದಾಗಿ ಇಲ್ಲಾ. ಆದಾಗ್ಯಾದರೂ ಯರಡು ಸಾವಿರ ಜನಕ್ಕೆ ಸಂಬಳದ ಉದ್ದಿಶ್ಯ ಯರಡು ಸಾವಿರ ವರಹಾ ಶಿಸ್ತಿನ ಅಮರದ ಮಾಗಣೆ ಕೊಟ್ಟರೆ, ಜನ ವಂದಕ್ಕೆ ವರುಷ ವಂದಕ್ಕೆ ವಂದು ವ

ರವಾಗದ ಮೇರೆ ಬಿತ್ತಿತಷ್ಟೆ. ಇದರಿಂದ ಆ ಜನರ ಅಂನ ಬಟ್ಟೆ ಮುಂತಾದ ಖರ್ಚು ಯಾವ ಮೇರೆ ಕಳೆಯುತ್ತಾ ಇತ್ತು. ಆ ಜನರು ತಂಮ ಹೆಂಡರು ಮಕ್ಕಳಿಗೆ ಅಂನ ವಸ್ತ್ರ ಕೊಟ್ಟು ಯಾವ ಮೇರೆ ನಿಭಾಯಿಸುತ್ತಾ ಇದ್ದರು. ಇಷ್ಟು ಮಂದಿಯಂನು ನಂಮ ದೊಡ್ಡ ಅಜ್ಜೆಯನವರು ಇಕ್ಕೇರಿಯವರ ಬಳಿಯ ಚಾಕರಿಗೆ ನಿಲ್ಲಿಸಿ, ಅವರ ಹೆಂಡರ ಮಕ್ಕಳ ಆರೈಕೆ ತೂಡುವಂಥಾದಕ್ಕೆ ಈ ಮಾಗಣೆಯಿಂದ ಆ ಜನರ ಖರ್ಚು ಕಳುದು, ಇವರಿಗೆ ಯೇನು ಫಾಯಿದೆ ಬರುತ್ತಾ ಇತ್ತು. ಇದಂನೆಲ್ಲಾ ತಂಮ ಮನಸಿನಲ್ಲಿ ದರಿಯಾಫ್ತು ಮಾಡಿದಲ್ಲಿ, ಆ ಟೀಪುಸುಲ್ತಾನರ ಕಡೆಯವರು ಹೇಳುವಂಥಾ ಮಾತು ಸಹಜ, ಅಸಹಜ ಯಂಬದು, ತಮಗೆ ತಿಳಿಯ ಬಂದೀತು ಯಂಬದಾಗಿ, ಯುಟಾಫು ಸಾಹೇಬರು ಮಾಹಿನಿ ಸಾಹೇಬರಿಗೆ ಸಹಾ ಜಾಹೀರು ಮಾಡುವದು" ಯಂಬದಾಗಿ, ಬರೆಸಿ ಕಳುಹಿದರಿಂದ, ಇದೇ ವಿವರವಂನು ಕರ್ಣೀಕ ಸುಬ್ಬಯ್ಯನು ಆ ಸಾಹೇಬರಿಗೆ ಜಾಹೀರು ಮಾಡಿದಲ್ಲಿ, ಅವರು ಕರ್ಣೀಕ ಸುಬ್ಬಯ್ಯನಂನು ಕರದು ಕೊಂಡು, ಆ ಬೆಳಿಗ್ಗೆಯೆ ಐನ್ವಾಡು ಯಂಬಲ್ಲಿಗೆ ಹೋಗಿದಲ್ಲಿ, ಆ ಕಡೆ ನೈಜುಶ್ಯಾಟುದ್ದೀನನು, ಮೀರಮಹಾಂಮದಲ್ಲೀ ಸಹಾ, ಬಂದರು. ಅವರ ಸಂಗಡ ಈ ಸಾಹೇಬರು ಹೇಳಿದ್ದು: "ಕೊಡಗಿನ ದೊರೆಗಳು ಇಕ್ಕೇರಿ ಸಂಸ್ಥಾನದಲ್ಲಿ ಯರಡು ಸಾವಿರ ಜನ ಚಾಕರಿ ಇಟ್ಟದರಿಂದ, ಆ ಜನರ ಸಂಬಳದ ಉದ್ದಿಶ್ಯ ಅಮರ ಉತ್ತಾರವಾಗಿ ಬಿಟ್ಟು ಕೊಟ್ಟು ಇದ್ದರು. ಈಗ ಅವರ ಕಡೆ ಜನವು ಚಾಕರಿಯಲ್ಲಿ ಇಲ್ಲಾ. ಈ ಮಾಗಣೆಯಂನು ಬಿಟ್ಟು ಕೊಡುವದಿಲ್ಲಾ, ಯಂತಾ ಹೇಳಿದಿರಷ್ಟೆ. ಈ ಬಗ್ಗೆಯೆ ಕೊಡಗಿನ ರಾಜರು ಆ ಮೇರೆ ಯರಡು ಸಾವಿರ ಜನವಂನು ಚಾಕರಿಗೆ ನಿಲ್ಲಿಸಿದ್ದಕ್ಕೆ, ಸಂಬಳದ ಉದ್ದಿಶ್ಯ ಅವರು ಅಮರ ಯರಡು ಸಾವಿರ ವರಹಾದ ಮಾಗಣೆ ಬಿಟ್ಟು ಕೊಟ್ಟರೆ, ಜನ ವಂದಕ್ಕೆ ವಂದು ವರುಷಕ್ಕೆ ವಂದು ವರಹಾ ಆಯಿತಷ್ಟೆ. ಈ ಸಂಬಳ ತೆಗದು ಕೊಂಡು ಆ ಜನರು ತಂಮ ಅಂನ ವಸ್ತ್ರ ಖರ್ಚು, ತಂಮ ಕುಟುಂಬ ಮಕ್ಕಳ ಅಂನ ಬಟ್ಟೆ ಖರ್ಚು ಮುಂತಾಗಿ, ಯಾವ ಮೇರೆ ನಿಭಾಯಿಸುತ್ತಾ ಇದ್ದರು. ಈ ಮೇರೆ ತಂಮ ಜನ, ಇಕ್ಕೇರಿಯವರಲ್ಲಿ ಚಾಕರಿಗೆ ನಿಲ್ಲಿಸಿ, ಅವರ ಸಂಬಳದ ಖರ್ಚಿನ ಉದ್ದಿಶ್ಯ ಈ ಮಾಗಣೆಯಂನು ದೊಡ್ಡ ವೀರಪ್ಪ ಒಡೆಯರವರು ತೆಗದು ಕೊಂಡು, ಆ ಮಂದಿ ಖರ್ಚು ಕಳುದು, ತಮಗೆ ಯೇನು ಫಾಯಿದೆ ಉಂಟು ಯಂತಾ, ಈ ಕೆಲಸಕ್ಕೆ ಒಪ್ಪಿ ಕೊಂಡರು. ಈ ತಪಶೀಲು ಹೇಳ ಬೇಕು" ಯಂತಾ, ಕೇಳುವಾಗ್ಯೆ, ಅವರು ಹೇಳಿದ್ದು: "ಇವರ ಕಡೆ ಯರಡು ಸಾವಿರ ಜನದ ಸಂಬಳವಂನು ಇಕ್ಕೇರಿಯಲ್ಲೇ ನಗದು ಕೊಡುತ್ತಿದ್ದರು. ದ್ಯಾಸ್ತಿ ಉದ್ದಿಶ್ಯ ಕೊಡಗಿನ ರಾಜರಿಗೆ ಈ ಅಮರದ ಮಾಗಣೆಯಂನು ಬಿಟ್ಟು ಕೊಟ್ಟು ಇದ್ದರು ಯಂತಾ, ಹೇಳಿದರಿಂದ, ಆ ಮಾತಿಗೆ ಯುಟಾಫು ಸಾಹೇಬರು, ಮಾಹಿನಿ ಸಾಹೇಬರು ಸಹಾ, ಹೇಳಿದ್ದು: ಆ ಇಕ್ಕೇರಿಯವರ ಬಳಿಯಲ್ಲಿ ಯರಡು ಸಾವಿರ ಜನ ಚಾಕರಿ ಇಟ್ಟದ್ದಕ್ಕೆ ಅವರ ಸಂಬಳ ಅಲ್ಲೇ ಕೊಡುತ್ತಿದ್ದರು. ಈಗ ರಾಜರ ಕಡೆ ಜನ ಚಾಕರಿಯಲ್ಲು ಇಲ್ಲಾ, ನೀವು ಸಂಬಳವು ಕೊಡ ಕೆಲಸವಿಲ್ಲಾ, ದ್ಯಾಸ್ತಿ ಉದ್ದಿಶ್ಯ ಬಿಟ್ಟು ಕೊಟ್ಟಂಥಾ ಅಮರದ ಮಾಗಣೆ ನಮಗೆ ಸಲ ಬೇಕು ಯಂಬದಾಗಿ ಕೇಳುವದಕ್ಕೆ ಕಾರಣವೇನು? ನವಾಬ ಹೈದರಲ್ಲೀ ಖಾನರು ಇಕ್ಕೇರಿ ಸಂಸ್ಥಾನ ತೆಗದು ಕೊಂಡ ಚಿತ್ರಭಾನು ಸಂವತ್ಸರಕ್ಕೆ ಆರುವತ್ತನೆ ಮೊದಲ ಚಿತ್ರಭಾನು ಸಂವತ್ಸರದಿಂದ ಕೊಡಗಿನ ಸಂಸ್ಥಾನಕ್ಕೆ ಸೇರಿ ಬಂದಂಥಾ ಅಮರ ಸೂಳ್ಯವು ನಿಮಗೆ ಬರ ಬೇಕು ಯಂಬದಾಗಿ, ವ್ಯಾಜ್ಯ ಹಿಡಿದು, ಮೊಂನೆ ದಿವಸ ಜನದ ಸಂಬಳದ ಉದ್ದಿಶ್ಯ ಬಿಟ್ಟದ್ದು ಯಂತಾ, ಹೇಳಿದಿರಿ. ಈ ದಿನ ಕೇಳುವಾಗ್ಯೆ, ಆ ಜನದ ಸಂಬಳ ಇಕ್ಕೇರಿಯಲ್ಲೇ ಸಲುತ್ತಾ ಇತ್ತು. ಇದಂನು ದ್ಯಾಸ್ತಿ ಉದ್ದಿಶ್ಯ ಬಿಟ್ಟದ್ದು ಯಂತಾ ಹೇಳುತ್ತೀರಿ. ಈ ಪರಕಾರ ಗಳಿಗ್ಗೆಯೆ ವಂದೊಂದು ಮಾತು ಆಗುವದರಿಂದ, ನಿಂಮ ಮಾತು ತಫಾವತು ಆಗಿ ಕಾಣುತ್ತದೆ" ಯಂಬದಾಗಿ, ಇಂಗ್ರೇಜಿ ಸರದಾರರು ಹೇಳಿದಲ್ಲಿ, ಅದಕ್ಕೆ ಟೀಪುಸುಲ್ತಾನರ ಕಡೆಯವರು ಜವಾಬು ಕೊಡುವದಕ್ಕೆ ಮಾತು ಇಲ್ಲದೆ ಸುಂಮನಾದರು.

ಆ ಬಳಿಕ ಯೇಳುಸಾವಿರಸೀಮೆ ತಕರಾರು ಯೇನು ಯಂತಾ, ಟೀಪುಸುಲ್ತಾನರ ಕಡೆ ವಕೀಲರ ಕೇಳಿದಲ್ಲಿ, ಅದರ ವಿವರ ನಮಗೆ ತಿಳಿಯದು ಯಂಬದಾಗಿ, ಹೇಳಿದರು.

ಆವಾಗ್ಯೆ ಈ ಅಮರ ಸೂಳ್ಯ ಯೇಳುಸಾವಿರಸೀಮೆ ಸಹಾ ತಕರಾರು ಫೈಸಲಾ ಮಾಡಿ ತೀರಿಸುವ ಬಗ್ಗೆ, ನೈಜುಶ್ಯಾಟುದ್ದೀನ್ ಮೀರಮಹಾಂಮದಲ್ಲಿಗೆ ಸಹಾ, ವಕೀಲತನ ನೇಮತಾ ಮಾಡಿ ಕಳುಹಿದ್ದೇವೆ ಯಂತಾ, ಟೀಪುಸುಲ್ತಾನರು ಇಂಗ್ರೇಜ ಸರಕಾರಕ್ಕೆ ಬರದು ಕಳುಹಿದ ಕಾಗದ ಹಾಜರು ಇದೆ ಯಂತಾ ಕಾಗದ ತೆಗದು ತೋರಿಸಿ, ನಿಂ

ಮ ಖಾವಂದರು ಈ ಮೇರೆ ದಸ್ತೈವಜು ಬರದು ಕಳುಹಿಸಿದಂತೆ, ಅವರನೊಳಯದ ಮಾತಿಗೆ ನಾವು ಬಂದವರು ಯಂಬದಾಗಿ ಹೇಳಿ, ಯೆಳು ಸಾವಿರ ಶೀಮೆ ಮಾತಿಗೆ ನಾವು ತಿಳಿದವರಲ್ಲಾ ಯಂಬದಾಗಿ ಹೇಳಿದರೆ, ಇದು ಯಾವ ಸಲುವಳಿ ಮಾತು? ನಿಂಮ ಮಾತಿನಲ್ಲಿ, ಲೆಖ್ಖದಲ್ಲಿ ಸಹಾ, ಹಂದೂ ಸಹಜ ಕಾಣುವದಿಲ್ಲಾ. ಸುಂಮನೆ ತಕರಾರು ಮಾಡುವದಾಗಿ ಕಾಣುತ್ತಾ ಇದೆ ಯಂತಾ, ಯುಟಾಮ ಸಾಹೇಬರು, ಮಾಹಿನಿ ಸಾಹೇಬರು ಸಹಾ ಹೇಳಿದಲ್ಲಿ, ಇದಕ್ಕೆ ಬದಲು ಜವಾಬು ಹೇಳುವದಕ್ಕೆ ಮಾರ್ಗವಿಲ್ಲದೆ, "ಈಗ ನಮಗೆ ಜರೂರು ಕೆಲಸವಿದೆ. ನಾವು ಹೋಗುತ್ತೇವೆ. ನೀವು ಹೋಗಿ" ಯಂತಾ ಹೇಳುವಾಗ್ಯೆ, "ಮಾತಿನ ಜವಾಬುಸವಾಲಿನ ಉದ್ದಿಶ್ಯ ಬಂದು, ಇದ ತೀರಿಸದೆ, ಈಗ ನಾವು ಹೋಗುತ್ತೇವೆ. ಜರೂರು ಕೆಲಸವಿದೆ ಯಂದರೆ, ಇದು ಯಾವ ವಿವೇಕವಿದೆ" ಯಂತಾ, ಕೇಳುವಾಗ್ಯೆ, "ನಮಗೆ ಇದು ತಿಳಿಯುವದು ಇಲ್ಲಾ. ಟಿಪುಸುಲ್ತಾನರಿಗೆ ಬರದು ಕಳುಹಿಸಿ, ಅಲ್ಲಿಂದ ಬರದು ಬಂದ ವಿವರಕ್ಕೆ ಬರದು ಕಳುಹಿಸುತ್ತೇವೆ. ಈಗ ನೀವು ಹೋಗಿ. ನಾವು ಹೋಗುತ್ತೇವೆ" ಯಂತಾ ಹೇಳಿ, ಅವರು ಡೇರೆಯಾಲಕ್ಕೆ ಹೋದರು.

ಯುಟಾಮ ಸಾಹೇಬರು, ಮಾಹಿನಿ ಸಾಹೇಬರು ಸಹಾ, ನಾಲ್ಕುನಾಡ ಅರಮನೆಗೆ ಬಂದು, ವೀರರಾಜೇಂದ್ರ ಒಡೆಯರವರ ಕಂಡು, ಈ ಹರಸಾವ ಯಾವತ್ತೂ ಹೇಳಿ, ಕೆಲವು ದಿವಸ ಇದ್ದು, ಆ ಬಳಿಕ ಮಹಾರಾಜರವರು, ಯುಟಾಮ ಸಾಹೇಬರು ಸಹಾ, ಕಾಳಾಯುಕ್ತಿ ಸಂವತ್ಸರದ ಪುಷ್ಯ ಶು ೧ ವು ಚಂದ್ರವಾರ ದಿವಸ ನಂಜರಾಯಪಟ್ಟಣಕ್ಕೆ ಬೇಟೆ ಬಗ್ಯೆ ಹೋದರು. ಮಾಹಿನಿ ಸಾಹೇಬರವರು ಶರೀರಕ್ಕೆ ಅಲಸ್ಯವಾಗಿ, ವೀರರಾಜೇಂದ್ರಪೇಟೆಗೆ ಹೋಗಿ ಇದ್ದರು.

ಅಷ್ಟು ಹೊತ್ತಿಗೆ ಮಹಾರಾಜಶ್ರೀ ಬಂಗಾಳದ ಗವರ್ನರ್ ಜನರಾಲ್ ಲಾರ್ಡ್ ಮಾರನಿಂಗಟನ್[1] ಸಾಹೇಬ ಬಹಾದ್ದರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದವು ನಂಜರಾಯಪಟ್ಟಣಕ್ಕೆ ಬಂದು ಮುಟ್ಟಿತು. ಅದರಲ್ಲು: "ಇಂಗ್ರೇಜ ಸರಕಾರದ ತಾಲೂಕು ಹಿಂದುಸ್ಥಾನದ ಬಂದುಬಸ್ತಿನ ಕೆಲಸದ ಬಗ್ಯೆ, ಬಂಗಾಳಕ್ಕೆ ನಾವು ಬಂದಂಥಾ ಸಮಾಚಾರ ತಿಳಿದು ಇದ್ದೀತು. ತಾವು ಭೇದವಿಲ್ಲದೆ ದೋಸ್ತಿಯಿಂದ ಕೂಡಿ ಇರುವಂಥಾದ್ದು ತಿಳಿದು ಇದೆ. ಮತ್ತೆ ತಂಮ ದೋಸ್ತಿ ಹಳ್ಳೇತನ, ತಾವು ಜಾಹೀರು ಮಾಡಿದರಿಂದ, ಮಾಲುಂ ಆಯಿತು. ಅದೇ ಮೇರೆ ನಿಂಮ ಲಾಭ ಹಳ್ಳೇತನವಾಗಿ ಇರುವಂಥಾದ್ದು ಅಂತರವಿಲ್ಲದೆ ಇಂಗ್ರೇಜ ಕುಂಪನಿ ಸರಕಾರದ ಹಾಗೆ ಕೂಡಿ ಇದೆ. ಈ ಸಮಯದಲ್ಲಿ ಹೀಗೆ ತಿಳಿದದ್ದರಿಂದ, ತಂಮ ಶೀಮೆ ಆರೈಕೆ ಬಗ್ಯೂ, ನಿಗಾಬಾನಿಯಿಂದ ನಡಸುವದಕ್ಕೂ, ಲಡಾಯಿ ಹರಯತ್ನಗಳು ಜರೂರು ಇದೆ. ಆದ್ದರಿಂದ, ತಮಗೆ ಸಮಾಚಾರ ಕಾಡುತ್ತೇವೆ. ಟಿಪುಸುಲ್ತಾನರು ಹಶಿಲರ ಮೊಸ್[2] ಬಂದರಕ್ಕೆ ಫರಾಶೀಸರ ಬಳಿಗೆ ಕಳುಹಿಸಿದ್ದು, ಇಂಗ್ರೇಜ ಸರಕಾರದ ಸಂಗಡ ಲಡಾಯಿ ಮಾಡುವ ಬಗ್ಯೆ ಯಂತಾ, ಈ ಸಮಾಚಾರ ನಿಶ್ಚಯವಾಗಿ ತಿಳಿಯ ಬಂತು. ಆ ಬಳಿಕ ಆ ವಿವರದಿಂದ, ಆ ದುಷ್ಮಾನ ಫರಾಶೀಸರ ಫೌಜ ಅವರ ಶೀಮೆಯಲ್ಲಿ ಇಳಿಯುವಂಥಾ ದಾರಿ ನೋಡುತ್ತಾ ಇದ್ದಾರೆ. ಅವರು ಬಂದ ಕೂಡಲೇ, ಕುಂಪನಿ ಬಹಾದ್ದರ ಸರಕಾರದ ಸಂಗಡ ಲಡಾಯಿ ಮಾಡ್ಯಾರು ಯಂತಾ, ಟಿಪುಸುಲ್ತಾನರ ಕಡೆಯಿಂದ ಈ ವಿವರ ತಿಳಿಯ ಬರುತ್ತಾ ಇದೆ. ಇದು ಯಾವತ್ತು ತಮಗೆ ಕೇಳಪಟ್ಟು ಇದ್ದೀತು. ಹಿಂದುಸ್ಥಾನದಲ್ಲಿ ಇರುವ ಯಾವತ್ತರಿಗೂ ತಿಳುವಳಿಕೆ ಆಗಿ ಇದ್ದೀತು. ಶ್ರೀರಂಗ ಪಟ್ಟಣದಲ್ಲಿ ಇಂಗ್ರೇಜ ಸರಕಾರಕ್ಕೂ, ಇವರ ಕೂಡಿದ್ದ ಸರಕಾರಕ್ಕೂ, ಟಿಪುಸುಲ್ತಾನರಿಗೂ ಸಲ್ಲಾನಾಮಾ ಹೊತರು ಆದಂಥಾದ್ದಕ್ಕೆ, ಅಂದಿನಾರಭ್ಯ ಸದರಿ ಸರಕಾರದಿಂದ ಅದಕ್ಕೆ ಹೆಚ್ಚುಕಡಮೆ ತಫಾವತು ಆಗಲಿಲ್ಲಾ. ಈ ಮೂರು ಸರಕಾರದಿಂದಲೂ ಟಿಪುಸುಲ್ತಾನರಲ್ಲಿ ದೋಸ್ತಿ ನಡಸುವದಕ್ಕೆ ಸಲ್ಲಾ ಮಾಡುವ ಬಗ್ಯೆ ಯಾವಾಗಲೂ ಕಡಮೆ ಇಲ್ಲದೆ ಅಪೇಕ್ಷಿಸುತ್ತಾರೆ. ಹೀಗೆ ಇರುವಲ್ಲಿ ಟಿಪುಸುಲ್ತಾನರ ಕೆಲಸದಿಂದ ಇಂಗ್ರೇಜ ಬಹಾದ್ದರ ಸರಕಾರಕ್ಕೂ ಅವರ ದೋಸ್ತಿ ಮಾಡಿದಂಥಾ ಸರಕಾರ್ಕೂ ವಿರಲ್ಪದಿಂದ ಬದಲು ಯೋಚಿಸುವದು ಹೊರತು, ಮತ್ತೊಂದು ಕಾಣುವದಿಲ್ಲಾ. ಇದರಿಂದ ಇಂಗ್ರೇಜ ಸರಕಾರಕ್ಕೂ, ಅವರಿಗೆ ಹಳ್ಳೇದು ಹಾರೈಸುವಂಥಾ ದೋಸ್ತಾರ ಸರಕಾರಕ್ಕೂ, ಹುಷಾರಿಯಿಂದ ತಂಮ ಜಾಗರತೆಯಲ್ಲಿ ಇರುವದಕ್ಕೆ ಬೇಕಾಗಿ ಇದೆ. ಇದರಿಂದ ನಂಮ ಜಾಗಾ ಸಂರಕ್ಷಣೆಯ ಮಾಡುವ ಬಗ್ಯೆ, ಗುಪ್ತದಿಂದ ಹರಯತ್ನ ಮಾಡುವಂಥಾದ್ದಕ್ಕೆ ಜರೂರು ಇದೆ ಮಾಡ ಬೇಕು. ಇದರ ಮೇಲೂ ಟಿಪುಸುಲ್ತಾನರ ಕಡೆಯಿಂದ ಇಂಥಾ ತಂಟೆ

1 Lord Mornington. 2 Mauritius.

ಸಾಹೇಬರು ಆದದ್ದರಿಂದಲೂ, ಟೀಪುಸುಲ್ತಾನರು ಮುಚ್ಚುಮರೆ ಇಲ್ಲದೆ ಖಸ್ತು ಮಾಡಿದರಿಂದ ಇಂಗ್ರೇಜ ಬ
ಹಾದ್ದರ ಕುಂಪನಿ ಸರಕಾರದ ಫೌಜ ತಯಾರು ಮಾಡುವದಕ್ಕೆ ನಮಗೆ ಜರೂರು ಆಯಿತು. ಈಗ ಜಲದಿನಿಂದ ಲ
ಡಾಯಿ ಮಾಡುವದಕ್ಕೆ ಸಿದ್ಧವಾಗ ಬೇಕೆಂಬದು ನಿಶ್ಚಯವಾಗಿಯೂ ನಂಮ ಮನಸ್ಸಿನಲ್ಲಿ ಇತ್ತಿಲ್ಲಾ.[1] ಈ
ಸಲ್ತಾನಂನು ಹಿಂದುಸ್ಥಾನದಲ್ಲಿ ಮತ್ತು ಕಾಯಂ ಮಡಗ ಬೇಕು ಯಂಬದು ನಮಗೆ ಇರಾದೆ ಇತ್ತು. ಮೊದ
ಲು ವೇಳ್ಯದಲ್ಲಿ ಇಂಗ್ರೇಜ ಸರಕಾರ ಆ ಸರಕಾರಕ್ಕೆ ಕೂಡಿದಂಥಾ ಸರಕಾರಕ್ಕೂ ವಿಧಾನವಾದ ಹಾಗಾತಿನಲ್ಲಿ ಮ
ನಸಿಗೆ ಸಮಾಧಾನವಾಗಿ ಇತ್ತು. ಈಗ ಆ ಸುಲ್ತಾನಿಂದ ಈ ಸರಕಾರಗಳಿಗೆ ಆಗುವಂಥಾದರಿಂದ ಯಾವತ್ತು ನಿಶ್ಫ
ಲವಾಗಿ ಕಾಣುವದ್ಯೆ ಹಾಗಾತ್ತು, ಫಲ ಕಾಣ ಬರುವದಿಲ್ಲಾ. ಲಡಾಯಿ ಮಾಡ ಬೇಕೆಂಬ ಇರಾದೆ ನಂಮ ಮನಸಿನಲ್ಲು
ಇತ್ತಿಲ್ಲಾ. ಆದಾಗ್ಯೂ ಮುಂದೆ ಹ್ಯಾಗೆ ಆಗುತ್ತದ್ಯೋ ಯಂಬ ಸಂಶಯದಿಂದ ದೂರದ್ರಷ್ಟಿ ಇಟ್ಟು,
ತಯಾರು ಮಾಡುವಂಥಾದ್ದು ಜಾಗ್ರತವಿದೆ. ಇದರಿಂದ ಕುಂಪನಿ ಬಹಾದ್ದರ ಸರಕಾರದ ಫೌಜ ಜಮಾ ಆಗಿ, ಸಂ
ದು ಸಮಯದಲ್ಲಿ ಕೆಲಸಕ್ಕೆ ಕೂಡಿ ಬರುವಂತೆ, ಅವಸ್ಥೆ ಆಗಿ ಇದೆ. ಇದಲ್ಲದೆ ನಂಮ ಸರಕಾರಕ್ಕೆ ಕೂಡಿದಂ
ಥಾ ಸರಕಾರದವರು, ಟೀಪುಸುಲ್ತಾನರ ಸಂಗಡ ಮೊದಲು ಕರಾರು ಯಾವ ಮೇರೆ ಆಯಿತ್ತೋ, ಆ ಪ್ರಕಾರ ತಂಮ ತಂಮ
ಶೀಮೆಯಂನು ಬಂದುಬಸ್ತು ಮಾಡಿ ಕೊಂಡು, ಸುಖದಿಂದ ಇರ ಬೇಕಲ್ಲದೆ, ಈ ಮೇರೆ ದುಷ್ಟಮಾನಸನ ಅಪೇಕ್ಷಿಸ
ಬಾರದು ಯಂಬದಾಗಿ ಕೇಳುವಂತೆ ಹುಕುಂ ಮಾಡಿ ಇದೆ. ಲಡಾಯಿ ಆಗುವಂಥಾದ್ದರ ವಳಗೆ, ಮಹಾದೇವನು ಆ
ಕಷ್ಟ ಪರಿಹರಿಸಯಾನು. ಟೀಪುಸುಲ್ತಾನರ ಫೌಜಿನ ಪರಾಕ್ರಮವು ಸಂಶಯವಿಲ್ಲದೆ ನಿಂಮ ಶೀಮೆ ಮೇಲೆ ತಿಳಿ
ಯ ಬಂದೀತು. ಇದುಕಾರಣ ದೋಸ್ತಿಯಿಂದ ಬರೆಯುತ್ತಾ ಇದ್ದೇವೆ. ತಂಮ ಶೀಮೆ ರಕ್ಷಣೆಯಾಗುವ ಬಗ್ಗೆಯೆ
ಬೇಕಾದ್ದು ತಯಾರು ಮಾಡಿಕೊಂಡು, ದೋಸ್ತರ ಸಂಗಡ ಕೂಡಿ ಇರುವಂಥಾದ್ದು ವಳ್ಳೇದು ಇದೆ. ತಾವು ಫೌಜ
ತಯಾರು ಮಾಡುವಲ್ಲಿ ಶೀಘ್ರ ಜಮಾಯಿಸ ಬೇಕೆಂಬ ಮನಸು ಇದುತ್ತೇವೆ ಈ ಫೌಜ ಜರೂರು ಹಾಗಾತಿನಲ್ಲಿ
ಕುಂಪನಿ ಬಹಾದ್ದರ ಸರಕಾರ, ಅವರ ಕೂಡಿ ಇರುವಂಥಾ ಸರಕಾರದ ಫೌಜಿನ ಸಂಗಡ ಯಕ್ಯಕರವಾಗಿ, ಆವಾಗ್ಯೆ ಕೆಲ
ಸ ಬಿದ್ದರೆ, ಲಡಾಯಿ ತೀರಿಸುವ ಬಗ್ಗೆಯೆ ಕೂಡಿ ಇರುವಂತೆ, ತಯಾರು ಮಾಡುತ್ತಾ ಇರ ಬೇಕು. ಶಿವನ ಕಟಾಕ್ಷದಿಂದ
ತಾವು ಬಹಳ ಬುದ್ಧಿವಂತರು, ದೂರದ್ರಷ್ಟಿ ಇಡುವಂಥವರು ಇದ್ದೀರಿ. ಈ ಕೈಫೀಯತು ಯಾವತ್ತು ತಿಳಿಯ
ಬರುತ್ತಾ ಇದ್ದೀತು. ಈಗ ರೂಬರೂಬು ಬಂದು ಇರುವಂಥಾ ಕಷ್ಟ ಪರಿಹರಿಸುವದಕ್ಕೆ ಇದ್ದೇ ವಳ್ಳೇದು ಇ
ದೆ. ಅದು ಯೇನಂದರೆ—ಲಡಾಯಿಗೆ ಜವಾಬು ಕೊಡುವದಕ್ಕೆ ಯಲ್ಲಾರಿಗಿಂತಲೂ ಮುಂಚಿತವಾಗಿ ತಾವು ಯಾವತ್ತೂ
ತಯಾರು ಮಾಡ ಬೇಕು. ತಮಗೆ ವಳ್ಳೇದು ಆಗುವ ಬಗ್ಗೆಯೆ, ಫೌಜ ತಯಾರು ಮಾಡುವದಕ್ಕೆ ಇಲ್ಲಿಂದ ಬರೆಯ
ಬೇಕಾಯಿತು. ಅದು ತಂಮ ರಕ್ಷಣೆಯು ಯಂತಾ ಕಾಣ ಬೇಕು. ಯಾವಾಗ್ಯೂ ತಂಮ ಫೌಜ ತಯಾರು ಮಡಗುವದರಲ್
ಲಿ ಪರಾಂಬರಿಕೆ ಮಡಗಿ, ಅಥಾಪಿಸಿ, ಅಂಥಾದ್ದಾಂದು ಟೀಪುಸುಲ್ತಾನರಿಂದ ಲಡಾಯಿ ಬೀಳುವ ಸಂಗತಿ ಬಂದರೂ
ನಿಧಾನಿಸ ಬೇಕು. ಇದರಿಂದ ತಮಗೆ ವಳ್ಳೇದು ಇದೆ„ ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಈ ಕಾಗದವಂನು ನೋಡಿಕೊಂಡು, ದೊರೆಗಳವರು, ಯುಟಾಪ ಸಾಹೇಬರು ಸಹಾ, ವೀರರಾಜೇಂದ್ರಪಯಾಟೆಗೆ ಬಂ
ದು, ಬಂಗಾಳದ ಗವರ್ನರ ಸಾಹೇಬರು ಬರದ್ದಕ್ಕೆ ಬದಲು ಜವಾಬು: "ತಾವು ಬರದ ಮೇರೆ ನಂಮಿಂದ ಆಗುವಂ
ಥಾದ್ದಂನು ತಯಾರು ಮಾಡಿ ಕೊಂಡು, ನಂಮ ಸರಹದ್ದು ದಾಟದೆ, ಬಂದುಬಸ್ತಾಗಿ ಇರುತ್ತೇವೆ. ಟೀಪುಸುಲ್ತಾ
ನರು ವಿಕಲ್ಪ ಯೋಚಿಸಿ ಇದ್ದಾರೆ ಯಂಬದು ನಮಗೆ ತಿಳಿಯುವ ಬಗ್ಗೆಯೆ, ಮೆಹೆರಬಾನಗಿಯಿಂದ ತಾವು ಬರೆಸಿ ಕಳು
ಹಿಸಿದ್ದು ತಿಳಿದು, ಬಹಳ ಸಂತೋಷವಾಯಿತು„ ಯಂಬ ಇತ್ಯಾದಿ ವಿವರಗಳಾಗಿ ಬರೆಸಿ, ಈ ಕಾಗದವಂನು ಬಂಗಾಳಕ್ಕೆ
ಕಳುಹಿಸುವ ಬಗ್ಗೆಯೆ, ಜನರಾಲ್ ಹಾರ್ಟ್ಲಿ ಸಾಹೇಬರವರ ಬಳಿಗೆ ಕಳುಹಿಸಿ ಕೊಟ್ಟರು.

ಆ ಬಳಿಕ ಜನರಾಲ್ ಹಾರ್ಟ್ಲಿ ಸಾಹೇಬರವರು ಪುಷ್ಯ ಶು ೨ಲು ಮಹಾರಾಜರವರಿಗೆ ಬರೆಸಿ ಕಳುಹಿದ
ಕಾಗದದಲ್ಲಿ: "ಹಿಂದು ಶೀಮೆಯಲ್ಲಿ ಸರ್ವ ಕಾಯಿಂವು ಬಹುಮಾನವಾದ ಇಂಗ್ರೇಜ ಕುಂಪನಿಗೆ ಅವಕಾಶಗಳು
ಸ್ವಾಧೀನ ಮಾಡಿ ಕೊಳ್ಳ ತಕ್ಕ ಬೇಕಾದಕ್ಕೂ, ಅವಕಾಶಗಳು ಕುಂಪನಿ ದೋಸ್ತದಾರರು ಬಿಡುವ ಬಗ್ಗೆಯೂ, ಟೀಪುಸುಲ್ತಾ
ನರು ಫರಾಶೀಸರ ಸಂಗಡ ದೋಸ್ತಿ ಆಗಿ ಇರುವ ಸಂಗತಿಯಿಂದ ಸುಲ್ತಾನರಿಗೆ ಜಯಿಸ ಬೇಕಾದ್ದಕ್ಕೆ ಅಗತ್ಯವಾಗಿ

1 ಇದ್ದಿಲ್ಲಾ.

ಇರುವದನ್ನು ಸಹಾ, ತಮಗೆ ವಿವರವಾಗಿ ತಿಳಿಸುವ ಬಗ್ಯೆ, ಬಹುಮಾನವಾದ ಬಂಗಾಳದ ಗವರ್ನರ್ ಸಾಹೇಬರವರು ತಂಮ ಹೆಸರಿಗೆ ಬರದು ಕಳುಹಿದ ಕಾಗದವನ್ನು ತಂಮ ಕೈಯಲ್ಲಿ ಕೊಡುವ ಹಾಗೆ, ಈ ಇಪ್ಪತ್ತಮೂರನೆ ತೇದಿ, ಮಾರ್ಗಶಿರ ಬ ೧೪ ದಿವಸ ಕಪಿತಾನ್ ಮಾಪಿನಿ ಸಾಹೇಬರವರ ಬಳಿಗೆ ಕಳುಹಿಸಿ ಇದ್ದೇವೆ. ಟೀಪುಸುಲ್ತಾನರು ಇಲ್ಲಿಗೆ ಬರುವವರಾಗಿ ಇದ್ದಾರೆ. ಆದ್ದರಿಂದ ಅದ ವಿಗ್ರಹ ಮಾಡ ಬೇಕಾದಾಗ್ಯೂ, ಅವರು ನಡೆಯುವ ಸಂಗತಿಗೆ ತಕ್ಕ ಹಾಗೆ ಅಲ್ಲಿಗೆ ಹೋಗುವ ಹಾಗೆ ಬೇಕಾಗಿ ಬಂದರೆ, ಆ ಹರಕಾರ ಮಾಡುವದಕ್ಕೂ, ಫೌಜ ನಿಲ್ಲುವ ಬಗ್ಯೂ, ಇಳಿಸುವ ಬಗ್ಯೂ ಸಹಾ, ಬಹುಮಾನವಾದ ಗವರ್ನರ್ ಸಾಹೇಬರವರು ಯೋಚನೆ ಮಾಡಿ, ಅಪ್ಪಣೆ ಕೊಟ್ಟು ಇದ್ದಾರೆ. ಇದರ ನಿಮಿತ್ತಯವಾಗಿ ಬಹುಮಾನವಾದ ಇಂಗ್ರೇಜು ಫೌಜುಗಳು, ಮರಾಟಿಯವರ ಫೌಜು, ನಿಜಾಮಲ್ಲಿ ಫೌಜ ಸಹಾ ಕೂಡಿ, ಅಲ್ಲಿ ಅಲ್ಲಿ ಸರಹದ್ದುಗಳ ಬಳಿಗೆ ಬಂದು, ಕೂಡುತ್ತಾ ಇದೆ. ಬಹುಮಾನವಾದ ಇಂಗ್ರೇಜ ಕುಂಪನಿ ದ್ಯಾಸ್ತಾರರಿಂದ ಆಗುವಂಥಾ ಸಹಾಯಗಳು ಬೇಕಾಗಿ ಬರುತ್ತಾ ಇದೆ. ಅಕ್ಕಿ, ಆಳು, ಯತ್ತು, ಇಂತು ಬೇಕಾದ ಸಾಮಾನು ಸರಂಜಾಮುಗಳನ್ನು, ತಯಾರು ಮಾಡುವ ಹಾಗೆ ಬರಸಿ, ಮೊದಲು ಕಳುಹಿಸಿ ಇದೆ ಯಷ್ಟೆ. ಹರಾಕು ನೀವು ಬಹುಮಾನವಾದ ಇಂಗ್ರೇಜ ಕುಂಪನಿ ಸರಕಾರಕ್ಕೆ ಬೇಕಾದ ಸಹಾಯ ಸಂಪತ್ತುಗಳ ಮಾಡಿ ಕೊಟ್ಟು ಇರುವ ಹಾಗೆ, ತಾಮಸ ಮಾಡದೆ, ಅಗತ್ಯವಾಗಿಯೂ ಅತಿ ಜಾಗ್ರತೆ ಆಗಿಯೂ ಸಹಾಯ ತಾವು ಮಾಡ್ತೀರಿ ಯಂಬದಾಗಿ, ನಾವು ನಿಶ್ಚಯ ಮಾಡಿ ಇದ್ದೇವೆ. ಲಡಾಯಿಗೆ ಬೇಕಾದ್ದ[1] ತಯಾರು ಮಾಡುವದಕ್ಕೆ ಹರಯತ್ನ ಮಾಡುತ್ತಾ ಇದ್ದೀತು. ಆದಾಗ್ಯೂ ಯುದ್ಧಕ್ಕೆ ಹೋಗ ಬೇಕೆಂಬದಾಗಿ, ನಿಶ್ಚೈಸಲಿಲ್ಲ. ಆದ್ದರಿಂದಾ ಲಡಾಯಿ ಮಾಡುವಾ ಯಂಬದಾಗಿ, ತಮಗೆ ನಿಶ್ಚಯವಾಗಿ ಬರದು ಕಳುಹುವ ಹೊಯಂತರಕ್ಕೂ, ಟೀಪುಸುಲ್ತಾನರ ಅವಕಾಶವಾಗಿರುವ ರಾಜ್ಯದಲ್ಲಿ ತಾವು ಹೆಚ್ಚು ಕಡಮೆ ಮಾಡ ಬಾರದು ಯಂಬದಾಗಿ, ತಂಮ ಮನಸಿಗೆ ನಿಶ್ಚಯವಾಗಿ ತಿಳಿಸ ಬೇಕು ಯಂಬದಾಗಿ, ಬಹುಮಾನವಾದ ಗವರ್ನರ್ ಸಾಹೇಬರಿಂದ ನಮಗೆ ಬರದು ಬಂದು ಇದೆ. ಯುದ್ಧಾ ಮಾಡ ಬೇಕೆಂಬದಾಗಿ ನಿಶ್ಚಯವಾಗಿ ಬರದು ಬಂದರೆ, ಆ ಕ್ಷಣಾ ತಮಗೆ ಬರದು ಕಳುಹುತ್ತಾ ಇದ್ದೇವೆ. ಆ ಮಧ್ಯೆ ತಂಮಿಂದ ಆಗುವಂಥಾ ಹರಯತ್ನಗಳ ಮಾಡಿ, ಮೈಸೂರಿಗೆ ಹೋಗ ಬೇಕಾದಕ್ಕೆ ಪಳ್ಳೆ ರಹದಾರಿ ಮಾಡಿ, ನಿಂಮ ಹರಯತ್ನದಿಂದ ಆಗುವಂಥಾ ಸಾಮಾನು ಸರಂಜಾಮು ತಯಾರು ಮಾಡಿ, ತಂಮ ಸೀಮೆಯಲ್ಲಿ ಫೌಜ ನಿಲ್ಲುವ ಹಾಗೆ, ಒಂದು ಸ್ಥಳ ಮುಂತಾದ್ದು ತಯಾರು ಮಾಡಿಕೊಳ್ಳ ಬೇಕು. ತಾವು ಕುಂಪನಿಗೆ ಬಾಯಿಬಾರ ದ್ಯಾಸ್ತಾರರಾದ್ದರಿಂದ, ಇದಕ್ಕಿಂತಾ ಅಧಿಕವಾಗಿ ಬರದು ಕಳುಹಾ ತಕ್ಕದ್ದಿಲ್ಲವಷ್ಟೆ" ಯಂಬದಾಗಿ, ಬರದು ಇದ್ದರು.

ಇದಕ್ಕೆ ಜವಾಬು ಪುಷ್ಯ ಶು. ೧೦ ಲು ಮಹಾರಾಜರವರು ಬರಸಿ ಕಳುಹಿದ ಕಾಗದದಲ್ಲಿ: "ಈ ಸಮಯದಲ್ಲಿ ನಾವು ಖಬರದಾರಿ ಹುಷಾರಿಯಿಂದ ಕ್ಷೇಮದಲ್ಲಿ ಇರ ಬೇಕು ಯಂಬದಾಗಿ, ತಾವು ಹಾರೈಸಿ, ಇಂಥಾ ಸಮಾಚಾರ ಬರದು ಕಳುಹಿದ್ದೇ ಹಾಗಿತ್ತು, ಮತ್ತಾಂದಲ್ಲಾ ಯಂಬದಾಗಿ, ನಂಮ ಮನಸಿಗೆ ತಿಳಿಯ ಬಂತು. ಮಹಾರಾಜಶ್ರೀ ಬಂಗಾಳದ ಗವರ್ನರ್ ಜನರಾಲ್ ಲಾರ್ಡ ಮಾರ್ನಿಂಗ್ಟನ್ ಸಾಹೇಬ್ ಬಹಾದ್ದರವರು ನಮಗೆ ಬರಸಿ ಕಳುಹಿದ ಫಾರಸಿ ಕಾಗದವನ್ನು ತಾವು ಕಳುಹಿದ್ದು, ಕಪಿತಾನ್ ಮಾಪಿನಿ ಸಾಹೇಬರ ಮುಖಾಂತರ ಬಂದು ನಮಗೆ ತಲುಪಿತು. ಅದರಿಂದೆಲ್ಲಾ ವಿವರವು ನಮಗೆ ತಿಳಿಯ ಬಂತು. ಅದಕ್ಕೆ ಈಗ ಬದಲು ಜವಾಬು ಬರಸಿ, ತಂಮ ಬಳಿಗೆ ಕಳುಹಿಸಿ ಇದ್ದೇವೆ. ಇದನ್ನು ಅವರಿಗೆ ಮುಟ್ಟಿಸಿ, ಇದಕ್ಕೆ ಬದಲು ದರ ಜವಾಬು ತರಿಸಿ ಕಳುಹಿಸ ಬೇಕು. ಇದಲ್ಲದೆ ಇಂಗ್ರೇಜ ದಂಡು ಗಟ್ಟಾ ಹತ್ತಿ ಬರುತ್ತಾ ಇದೆ. ನಮಗೆ ಬಹಳ ಸಹಾಯ ಸಂಪತ್ತು ಮಾಡ ಬೇಕು ಯಂತಾ, ಬರೆಸಿದ್ದು ಸರಿಯಷ್ಟೆ. ಈ ಬಗ್ಯೆ ಹರಾಕು ಇಂಗ್ರೇಜ ಅಫಸರು ಇಲ್ಲಿಗೆ ಬಂದು ಇದ್ದಾಗ್ಯೆ, ನಾವು ಮೆಹೆನತ್ತು ಮಾಡಿದಂಥಾದ್ದು ತಮಗೂ ಜಾಹೀರು ಇದೆ. ಅದಕ್ಕಿಂತಾ ಹೆಚ್ಚು ಹಾಲು ಹೆಚ್ಚಾಗಿ ಇಂನೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಸಹಾಯ ಮಾಡ ಬೇಕು ಯಂಬದಾಗಿ, ನಾವು ನಿಶ್ಚೈಸಿ ಇದ್ದೇವೆ. ಅದು ತಾವು ಇಲ್ಲಿಗೆ ಬಂದ ಮೇಲೆ ತಮಗೆ ತಂದು ಬಂದೀತು" ಯಂಬ ವಿವರವಾಗಿ ಬರೆಸಿ ಕಳುಹಿಸಿ ಕೊಟ್ಟರು.

ಆ ಮೇಲೆ ಯುಟಾಮು ಸಾಹೇಬರು, ಮಾಪಿನಿ ಸಾಹೇಬರು ಸಹಾ: "ಇಂಗ್ರೇಜ ಸರಕಾರದ ಕೆಲಸಕ್ಕೆ ಕೆಲವು

---

[1] ಬೇಕಾದದ್ದನ್ನು.

ಅಕ್ಕಿ ಮುಂತಾದ್ದು ಬೇಕಾಗುತ್ತಾ ಇದೆ. ತಾವು ಯಷ್ಟು ಜಮಾಯಿಸಿ ಇಟ್ಟೀರಿ" ಯಂಬದಾಗಿ, ದೊರೆಗಳವರ ಕೇಳಿದ
ಲ್ಲಿ, "ಆ ದೊಡ್ಡ ಸರಕಾರಕ್ಕೆ ನಮ್ಮಿಂದ ಯಷ್ಟು ಕುಮಕು ಆದೀತು ಯಂತಾ, ತಾವು ಹೇಳ ಬೇಕು. ನಮ್ಮ
ಶೀಮೆಯಿಂದ ಯೇಳು ಸಾವಿರ ಖಟ್ಟಿ ಅಕ್ಕಿಯನ್ನು ಮೂರು ತಿಂಗಳ ವಳಗೆ ಹೆಗ್ಗಳದಿಂದ ಇತ್ತಲಾಗಿ ಬಂದು ಹಾರ
ದಾರಿ ವಳಗೆ ಜಮಾಯಿಸಿ ಕೊಟ್ಟೇವು. ಇದು ಆದ ಮೇಲೆ, ಮತ್ತು ನಮ್ಮಿಂದ ಆಗುವಷ್ಟು ವಂಚನೆ ಇಲ್ಲದೆ
ಪ್ರಯತ್ನ ಮಾಡಿ, ಜಮಾಯಿಸಿ ಕೊಟ್ಟೇವು ಯಂಬದಾಗಿ ಹೇಳಿ, ಈ ಅರ್ಥಕ್ಕೆ ಇಂಗ್ರೇಜಿ ಸರಕಾರಕ್ಕೆ ಬರ ಕೊ
ಟ್ಟರು.

ಈ ಬಗ್ಯೆ ಆ ಯರಡು ಸಾಹೇಬರು ಮಹಾರಾಜರವರಿಗೆ ಬರದು ಕೊಟ್ಟ ವಿವರ: "ಗಟ್ಟದ ಮೇಲೆ ಇರು
ವ ಕೊಡಗಿನ ಶೀಮೆಯಲ್ಲಿ ಸರಕಾರದ ಕೆಲಸದ ಉದ್ದಿಶ್ಯವಾಗಿ ಅಕ್ಕಿ ಆಗ ಬೇಕಾದ್ದರಿಂದ, ಮಿಸ್ಟರ ಯುಟಾ
ಫ ಸಾಹೇಬರು, ಕಪಿತಾನ್ ಮಾಹಿನಿ ಸಾಹೇಬರು ಸಹ, ನಾವು ಯರಡು ಜನವು ಕೊಡಗಿನ ಶೀಮೆಯಲ್ಲಿ ಕಮಿಶನರಾ
ದೆವು. ಕುಂಪನಿ ಸರಕಾರದ ಕಡೆಯಿಂದ ಕೊಡಗು ಸಂಸ್ಥಾನದ ಹಾಲೇರಿ ವೀರರಾಜೇಂದ್ರ ವಡೆಯರವರ ಸಂಗಡ ಮೊಕ
ರರು ಮಾಡಿದೆವು. ಅದು ಯೇನು ಯಂದರೆ—ಸರಕಾರಕ್ಕೆ ಅಕ್ಕಿ ಮುಂತಾದ್ದು ಕಡಮೆ ಆಗ ಬಾರದು. ಅದನ್ನು ದೊ
ರೆಗಳವರು ತಮ್ಮ ಕೈಯ ಹಣದಿಂದ ಜಮಾ ಮಾಡಿ ಕೊಡ ಬೇಕು. ಈ ಬಗ್ಯೆ ನಮ್ಮ ಯರಡು ಜನದ ಹೆಸರಿನಿಂದ
ಬಂದು ಬರ ಕೊಡ ಬೇಕು ಯಂದು, ರಾಜರವರು ಹೇಳಿದರಿಂದ, ನಾವು ಬರ ಕೊಟ್ಟು ಇದ್ದೇವೆ. ಇಂಗ್ರೇಜಿ ರಾಜಲು
ಯರಡಕ್ಕೆ ಹಕಾ ನೇರು ಬಂದು, ಇಂಥಾ ನೇರು ಅರುವತ್ತಕ್ಕೆ ಅಕ್ಕಿ ಖಟ್ಟಿ ಬಂದು, ಈ ಮೇರೆ ಅಕ್ಕಿ ಖಟ್ಟಿ
ಯೇಳು ಸಾವಿರ ಖಟ್ಟಿ ಅಕ್ಕಿಯನ್ನು ಜಮಾ ಮಾಡಿ, ಅಗ್ಗದಿಂದ ಸರಕಾರಕ್ಕೆ ಕೊಟ್ಟೇವು" ಯಂಬದಾಗಿ, ದೊರೆಗಳು
ಹೇಳಿದರು. ಶಿದ್ದೇಶ್ವರನ ಗದ್ದಿಗೆ ಇತ್ತಲಾಗಿ, ಹದಿಟ್ಟೇರಿ ಗಟ್ಟದ ಇತ್ತಲಾಗಿ, ಬಂದು ಹಾರದಾರಿ ವಳಗ, ಈ ತಿ
ಥಿ ಆರಭ್ಯೆಯ ಮೂರು ತಿಂಗಳ ವಳಗೆ, ನಾವು ಹಾಯಾಗಿ ಕೊಡುವದಕ್ಕೆ ಆದೀತು ಯಂಬದಾಗಿ, ದೊರೆಗಳು ಹೇಳಿದರು.
ಮತ್ತೆ, ಹ್ಯಾಗಾದರೂ ಪ್ರಯತ್ನ ಮಾಡಿ ಈ ಅಕ್ಕಿ ಮೂರು ತಿಂಗಳ ವಳಗೆ ಕೊಟ್ಟೇವು. ಇದರಲ್ಲಿ ಇನ್ನು ಬಂ
ದು ತಿಂಗಳ ವಳಗೆ ಕೆಲು ಅಕ್ಕಿ ಕೊಡುತ್ತೇವೆ. ಮತ್ತೆ ಯರಡು ತಿಂಗಳಿಗೆ ಯಾವತ್ತು ಅಕ್ಕಿ ಕೊಟ್ಟೇವು ಯಂತಾ, ಹೇ
ಳಿದರು. ನಾವು ಯರಡು ಜನವು ಮನಸಿನಲ್ಲಿ ತಿಳಿದು ಇದ್ದೇವೆ. ದೊರೆಗಳವರ ಕಡೆಯಿಂದ ಮೂವತ್ತು ಸಾವಿರ ಖ
ಟ್ಟಿ ಅಕ್ಕಿ ನಮ್ಮ ಕುಂಪನಿ ಸರಕಾರಕ್ಕೆ ಸಂದೀತು. ಈ ಪ್ರಕಾರ ನಾವು ಇಬ್ಬರೂ ಸಹಿ ಹಾಕಿ, ಅನರೆಬಲ್[1] ಕುಂಪನಿ
ಮೊಹರ ಮಾಡಿ, ಕೊಡಗಿನ ಸಂಸ್ಥಾನದ ವೀರರಾಜೇಂದ್ರಪ್ಯಾಟೆಯಲ್ಲಿ ಈ ಕಾಗದ ಬರದು ಕೊಟ್ಟು ಇದ್ದೇ
ವೆ." ಇದೇ ವಿವರವಾಗಿ ದೊರೆಗಳವರು ಬಂದು ಕಾಗದ ಬರದು ಕೊಟ್ಟು ಇದ್ದಾರೆ. ಅದರಲ್ಲಿ ಇಷ್ಟು ವಿವರ ಬರೆ
ಯಲಿಲ್ಲ. ಆದಾಗ್ಯೂ ನಾವು ಹೇಳಿದ ಮಾತಿಗೆ ತಪಾಹು ಬಾರದು. ನಾವು ಆಡಿದ ಮೇರೆ ಜಮಾಯಿಸಿ ಕೊ
ಟ್ಟೇವು ಯಂಬದಾಗಿ ಹೇಳಿದರು" ಯಂದು, ಜನವರಿ ತಾರೀಕು ೧೨ ವರುಷ ೧೭೯೯. ಈ ಪ್ರಕಾರ ಮಹಾರಾಜರವರಿ
ಗೆ ಬರದು ಕೊಟ್ಟು, ಈ ಯರಡು ಸಾಹೇಬರು ಗಟ್ಟಾ ಇಳಿದು, ಕಲ್ಲಿಕ್ಕೋಟೆಗೆ ಹೋದರು.

ಮಹಾರಾಜರವರು ತಮ್ಮ ಸರಕಾರದಿಂದ ಹಣ ಕೊಟ್ಟು, ಶೀಮೆಯಿಂದ ಅಕ್ಕಿಯನ್ನು ತರಿಸಿ, ವೀರರಾಜೇಂದ್ರ
ಪ್ಯಾಟೆಯಲ್ಲು ಮೋದಿಖಾನೆ ಕಟ್ಟಿಸಿ, ಜಮಾಯಿಸುತ್ತಾ ಇರುತ್ತಾ[2] ಇರಲಾಗಿ, ಆ ಬಳಿಕ ಇದೇ ಸಂವತ್ಸರದ ಮಾ
ರ್ಗಶಿರ ಬ ೧೩ ಲು ಮುಂಬಾಯಿ ಗವರನರ್ ಜನಾಥನ್ ಡಾಂಕಿನ್[3] ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ
"ತಾವು ಸದಾಸರ್ವಕಾಲದಲ್ಲು ಕುಂಪನಿ ವಿಶ್ವಾಸಿಗಳಾಗಿ ನಡದು ಬಂದು ಇದ್ದಿರಷ್ಟೆ. ಈಗ ಇಂಗ್ರೇಜಿ ಬಹಾ
ದ್ದರವರು, ರಾಜಶ್ರೀ ಪೇಶ್ವೆಯವರು, ನಿಜಾಮಲ್ಲಿಯವರು ಸಹಾ ಕೂಡಿ, ಟೀಪುಸುಲ್ತಾನರು ಸಕಲರಿಗೂ ದೊಡ್
ಡ ಶತ್ರುವಾದ್ದರಿಂದ, ಈಗ ಆತನ ಕೈಯ ಲಡಾಯಿ ಮಾಡುವ ಬಗ್ಯೆ ಹೊರಟು ಇದ್ದಾರೆ. ಆ ಬಗ್ಯೆ
ಈ ಕೆಲಸ ನಿಮಿತ್ತಯವಾಗಿ ತಾವು ಬಹಳ ವಿಶ್ವಾಸವಾಗಿ ನಡದು ಕೊಳ್ಳುತ್ತೀರಿ ಯಂತಾ, ನಮಗೂ ವಿಶ್ವಾಸವಾಗಿ
ಕಾಣಬರುತ್ತಾ ಇದೆ. ಟೀಪುಸುಲ್ತಾನರು ಫರಾಶೀಸರ ವಿಶ್ವಾಸ ಹಿಡಿದು ನಡದು ಕೊಳ್ಳುವದರಿಂದ, ಈ ಮೂರು ರಾ
ಜ್ಯದ ಖಾವಂದರು ಅವರ ಮೇಲೆ ನೀತಿ ನ್ಯಾಯ ಪ್ರಕಾರ ಯುದ್ಧ ಶಿಟಬಿಗ್ಯಾಸ್ತಕರ ಹೊರಟು ಬಂದರು. ಆ
ಬಗ್ಯೆ ಅವರ ಫೌಜುಗಳು ಅವರ ಗಡಿ ಸಂಹಾದ್ದಿನಲ್ಲಿ ಬಂದು ನಿಲ್ಲುವ ಪ್ರಕಾರ ಬಂದು ಇದ್ದಾರೆ ಬೇರೆ ಮ

1 Honorable. 2 ಇರುತ್ತಾ pleon. 3 Jonathan Duncan.

ದುರಾಜಿಯಿಂದ ಇಂಗ್ರೇಜ ಬಹಾದ್ದರವರ ಫೌಜ ಪೂರ್ವಮಾರ್ಗದಿಂದ ಶ್ರೀರಂಗ ಪಟ್ಟಣದ ಪೂರ್ವಭಾಗಕ್ಕೆ ಬಂದು ತಲಪುವದರೊಳಗೆ, ಮಲೆಯಾಳದಿಂದ ಇಂಗ್ರೇಜ ಬಹಾದ್ದರ ಫೌಜ ಸರಾಹು ಬಂದ ಮೇಲೆ, ದುಷ್ಟಮಾನರ ಶೀಮೆಗೆ ಹೋಗುವ ಬಗ್ಗೆ, ತಂಮ ರಾಜ್ಯದ ಮಾರ್ಗದಿಂದ ಬಂದಾರು. ಬಂದಲ್ಲಿ ಸರಾಹು ಸರಾರ ಫೌಜಿಗೆ ಬೇಕಾದ ದಿನಿಸು[1] ಸರಂಜಾಮು, ತಂಮ ರಾಜ್ಯದಿಂದ ಆಗುವಷ್ಟು ರಸತು, ಮುತಸದ್ದಿ, ಬೇಕಾದ ಸಾಮಾನು, ಗಾಡಿ ಬಗ್ಯೆ ಯತ್ತುಗಳು, ಕೋಟೆ ತಂದುಕೊಳ್ಳಂಸು ಮುಚ್ಚುವ ಬಗ್ಯೆ ಮೋರ್ಚೆ ಸಾಮಾನುಗಳು, ಬೇಕಾದ ಸಾಮಾನು ಯಾವತ್ತೂ ಬೇಗದಿಂದ ತಯಾರು ಮಾಡಿಸುವದಕ್ಕೆ ಸಹಾಯ ಮಾಡ ಬೇಕು. ಮುಂಬಾಯಿ ತಾಲೂಕಿನಲ್ಲಿ ಇದ್ದ ಕುಂಪನಿ ಫೌಜಿಗೆ, ಪಾದಶಹಾರ ಕಡೆ ಜನಕ್ಕೆ ಸಹಾ, ದೊಡ್ಡ ಫೌಜಿನ ಧಾಮಂದರಾಗಿ ರಾಜಶ್ರೀ ಜನರಲ್ ಇಸ್ಟೋರ್ಟ[2] ಸಾಹೇಬರು ಸರದಾರರಾಗಿ ಬಂದಾರು. ಇವರು ಬಹಳ ಕೆಲಸಗಳ ಜಯಿಸಿ ಇದ್ದದರಿಂದ, ದಂಡಿಗೆ ದೊಡ್ಡ ಸರದಾರರಾಗಿ ಇದ್ಧಾರೆ. ಇದರಿಂದ ಸರ್ ಜನರ್ಲ್ ರಾಬರ್ಟ್ ಅಬರ್ಕರಂಬಿ ಸಾಹೇಬ್ ಬಹಾದ್ದರವರು ತಂಮ ಸಂಗಡ ಯಾವ ಮೇರೆ ದ್ಯಾನತಿ ಮಡಗಿ ಇದ್ದರ್‍ಯೊ, ಅದೇ ಮೇರೆ ಇವರು ಇದ್ದಾರು" ಯಂಬ ವಿವರಗಳಾಗಿ, ಬರೆಸಿ ಕಳುಹಿಸಿ ಇದ್ದರು.

ಅದಕ್ಕೆ ದರ ಜವಾಬಾಗಿ ಕಾಡಗಿನ ಮಹಾರಾಜರವರು ಪುಷ್ಯ ಶು ೧೨ಲು ಬರೆಸಿ ಕಳುಹಿದ ಕಾಗದದಲ್ಲಿ: "ನಂಮ ರಾಜ್ಯದ ಹಳಗೆ ಬಕತ[3] ವಂದು ಹೊತ್ತು ಮೇಲಾದ ವಿದ್ಯ ಸವಧಾನ್ಯ ಮುಂತಾದ್ದು ಆಗುವದಿಲ್ಲಾ ಯಂಬದು ತಮಗೂ ತಿಳುದು ಇದೆಯಷ್ಟೆ. ಈ ಬಗ್ಯೆ ನಂಮ ಶೀಮೆಗೆ ಮೂರು ದಿಕ್ಕು ದುಷ್ಟಮಾನರಾದ ಟೀಪುಸುಲ್ತಾನರ ಶೀಮೆ ಮುಟ್ಟಿ ಇದೆ. ವಂದೇ ಜನ ಆಟೆ ಈಟೆಗೆ ತಿರುಗದಂತೆ, ಯೇಳೆಂಟು ತಿಂಗಳಿಂದ ಬಂದು ಮಾಡಿ ಇದ್ಧಾರೆ. ಆದಾಗ್ಯೂ ನಂಮ ರಾಜ್ಯದಲ್ಲಿ ಆಗುವಂಥಾದ್ದಂನು ನಾವು ಮೆಹನತ್ತು ಮಾಡಿ, ಇದ್ದದಷ್ಟು ಕಾಡಿಸಿ ಕೊಟ್ಟೇವು ಯಂತಾ, ಯಬಾಹು ಸಾಹೇಬರಿಗೆ ಮಾಹಿನಿ ಸಾಹೇಬರಿಗೆ ಸಹಾ ಬರದು. ಕೊಟ್ಟು ಇದ್ಧೇವೆ. ಇದಲ್ಲದೆ ನಂಮ ರಾಜ್ಯದಲ್ಲಿ ಇಲ್ಲದಂಥಾದ್ದ ಪರಶೀಮೆಯಿಂದಾದರೂ ಪರಯತ್ನ ಮಾಡಿ ತ್ರಿಸಿ ಕಾಡಿ ಯಂತಾ, ಬಂದಂಥಾ ಜನರಲ್ ಸಾಹೇಬರು ನಮಗೆ ಯಾವಾಗ ಹೇಳುತ್ತಾರ್‍ಯೊ, ಆವಾಗ ನಂಮ ರಾಜ್ಯದಲ್ಲಿ ಇರುವಂಥಾದ್ದ ಕೊಟ್ಟು, ಇಲ್ಲದಕ್ಕೆ ಪಂಚವೆ ಇಲ್ಲದೆ ಸರ್ಗಾಪರಯತ್ನ ಮಾಡಿ, ದುಷ್ಟಮಾನರ ಶೀಮೆಯಿಂದ ತಂದು ಕೊಟ್ಟು, ಕುಂಪನಿ ಸರಕಾರಕ್ಕೆ ಸಹಾಯ ಮಾಡ ಬೇಕು ಯಂಬ ಅಪೇಕ್ಷೆ ಸಂತೋಷ ನಂಮಲ್ಲಿ ಬಹಳ ಇದೆ. ಮೊದಲಿಂತಲೂ ಹಾಗು ಹಾಲು ಪೇಚಾಗಿ ದ್ಯಾನತಿಯಿಂದ ಕುಂಪನಿ ಸರಕಾರದ ಕೆಲಸಾ ಮಾಡಿಯೇವು. ನಾವು ಮಾಡುವಂಥಾ ಸಹಾಯವಂನು[4] ಜನರಲ್ ಸಾಹೇಬರು ಇಲ್ಲಿಗೆ ಬಂದ ಬಳಿಕಾ ಅವರ ಕಡೆಯಿಂದ ತಮಗೆ ತಿಳಿದೀತು" ಯಂಬ ವಿವರವಾಗಿ ಬರೆಸಿ ಕಳುಹಿದರು.

ಆ ಬಳಿಕ ಬಂಗಾಳದ ಮಹಾರಾಜಶ್ರೀ ಗವರ್ನರ್ ಜನರಲ್ ಲಾರ್ಡ್ ಮಾರನಿಂಗಟನ್ ಸಾಹೇಬ್ ಬಹಾದ್ದರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬರವರು ವರುಷ ೧೭೯೯ನೇ ಜನವರಿ ತಾರೀಕು ೪ಲು ತಮಗೆ ಬರೆಸಿ ಕಳುಹಿದ ಕಾಗದದ ನಕಲು ನಂಮ ಬಳಿಗೆ ಕಳುಹಿಸಿ ಇದ್ದರು. ಅದರ ಮೊದಲು ನಾವು ವಂದು ದ್ಯಾನತಿ ಕಾಗದ ನವೆಂಬರು ತಿಂಗಳು ೧ನೇ ತಾರೀಕು ವರುಷ ೧೭೯೮ಲು ಬರೆಸಿ ಕಳುಹಿಸಿ ಇದ್ದೆವಷ್ಟೆ. ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ, ಮತ್ತು ಕೂಡಿ ಇರುವಂಥಾ ಸರಕಾರಕ್ಕೂ, ಟೀಪುಸುಲ್ತಾನರು ದುಷ್ಟಮಾನತನದಿಂದ ತಿಗಿ ಬಿದ್ದದರಿಂದ, ನಿಭಾಯಿಸುವದಕ್ಕೆ ಬೇಕಾದ ಸಾಮಾನು ಜಮಾಯಿಸುವ ಜರೂರು ಆಯಿತು. ಆದ್ದರಿಂದ ತಮಗೆ ಕಾಗದ ಬರೆಸಿ ಕಳುಹಿಸಿ ಇದ್ದೆವಷ್ಟೆ. ಮೇಲೆ ಬರದ ನಕಲು ವಿಚಾರಿಸಿದಲ್ಲಿಯೂ, ಅದೇ ಮೇರೆ ನಿಗಾವಾನಿ ಸಾಮಾನು ತಯಾರು ಮಾಡಿಸುವದಕ್ಕೆ ಆ ಸಾಹೇಬರು ತಮಗೆ ಬರೆಸಿ ಕಳುಹಿಸಿ ಇದ್ಧಾರೆ ಯಂಬದು ತಿಳಿಯ ಬಂತು. ಈ ಅಭಿಪ್ರಾಯವಾಗಿ ನಂಮ ಮನಸಿನಲ್ಲು ಇರುವಂಥಾ, ಮೇಲೆ ಬರದ ತಾರೀಕಿನ ಕಾಗದದಿಂದ ವಿವರವಾಗಿ ತಿಳಿಯ ಬಂದು ಇದ್ದೀತು. ದ್ಯಾನತಿಯಿಂದ ತಿಳಿಸಿ ಇದ್ಧೇವೆ. ವಂದು ಸಮಯದಲ್ಲಿ ಇಂಗ್ರೇಜ ಸರಕಾರದವರು, ಮತ್ತು ಕೂಡಿ ಇರುವಂಥಾ ಸರಕಾರದವರು ಸಹಾ, ಮೂರು ಸರಕಾರದವರು ಟೀಪುಸುಲ್ತಾನರ ಸಂಗಡ ಸಮಾಧಾನವಾದ ಸಮಯದಲ್ಲಿ, ನಾನಾಪ್ರಕಾರ ಹಳ್ಳೇದು ಆಗುವ ಬಗ್ಯೆ ಮಾಡಿದಂಥಾದ್ದಕ್ಕೆ ಅಲ್ಲುಹವೇ ಹೋತ್ತು, ಮತ್ತೊಂದು ಕಾಣುವದಿಲ್ಲಾ. ಅದಾಯ ಆಗ ಬೇಕೆಂಬ ಅಪೇಕ್ಷೆ ನಮಗೆ ಇತ್

1 ಜಿನಸು. 2 General Stuart. 3 ಭಕ್ತ. 4 ಸಹಾಯವು.

ತಿಲ್ಲಾ. ತಮಗೆ ನಾವು ದೋಸ್ತಿಯಿಂದ ಕಾಗದ ಬರದು ಇದ್ದೆವಲ್ಲಾ. ಅಂದಿನಾರಭ್ಯ ಈ ವರಿಗೂ ಇಂಗ್ರೇಜ ಸರಕಾರದ ಫೌಜು, ಇದಕ್ಕೆ ಕೂಡಿದ ಸರಕಾರದ ಫೌಜು ಸಹಾ, ತಯಾರಾಗುತ್ತಾ ಇದೆ. ಮೊದಲು ಇಂಗ್ರೇಜ ಸರಕಾರಕ್ಕೂ ಟೀಪುಸುಲ್ತಾನರಿಗೂ ಆದಂಥಾ ಸಲ್ಲವಂನು ಈ ಹಿಂದುಸ್ಥಾನದ ವಳಗೆ ಕಾಯಂ ಮಡಗ ಬೇಕು ಯಂಬದು ಈಗಲೂ ನಂಮ ಮನಸಿನಲ್ಲು ಅಭಿಲಾಷೆ ಇರುತ್ತಾ ಇದೆ. ಅದರ ವಳಗೆ ಯಾವ ತರದಲ್ಲೂ ಕಡಮೆ ಆಗಲಿಲ್ಲಾ, ಬದಲು ಮಾಡ ಬೇಕೆಂಬದು ಯೋಚಿಸಲಿಲ್ಲಾ. ತಮಗೆ ಮಾಲುಂ ಆಗ ಬೇಕೆಂತಾ ಬರದು ಇದ್ಧೇವೆ. ಟೀಪುಸುಲ್ತಾನರ ಕೆಲಸ ಆಗುವದರ ವಳಗೆ ವಳ್ಳೆತಾಗಿ ಇರ ಬೇಕು ಯಂಬ ಗುರ್ತು ವಿಚಾರ ಕಾಣಾ ಬರುವದಿಲ್ಲಾ. ಟೀಪುಸುಲ್ತಾನರು ಮುಂದಾಗಿ ದಖುಷ್ಟಿ ಇಡದದ್ದರಿಂದ, ಲಡಾಯಿ ಆಗುವಂಥಾ ಕೆಲಸ ಯಲ್ಲಿ ಬೀಳುತ್ತಾ ಇದ್ದಾರೆ, ಆ ಮೇರೆ ಮಹಾದ್ಯೇವನು ಮಾಡ ಬಾರದು. ತಮಗೂ ವಿಹಿತವದೆ. ಲಡಾಯಿಕ್ಕೆ ಬೇಕಾದ ಸಾಮಾನು ತಯಾರು ಮಾಡುವಲ್ಲಿ ಕಡಮೆ ಮಾಡ ಬಾರದು. ಮುಂದೆ ತಯಾರು ಮಾಡಿ ಮಡಗ ಬೇಕು: ಮೊದಲಾಗಿ ತಂಮ ಕಡೆಯಿಂದ ವಂದು ಹಾರಕತ್ತು ಆಗದಂತೆ ಜಾಗ್ರತೆ ಆಗಿ, ತಂಮ ಜಾಗಾದಲ್ಲಿ ತಯಾರಾಗಿ ಇರ ಬೇಕು. ಇದರ ಮೇಲು ಆಚಾರಿಯಿಂದ ಲಡಾಯದ ಕೆಲಸ ಬಿದ್ದರೆ, ಇಂಗ್ರೇಜ ಕುಂಪನಿ ಬಹಾದ್ದರರ ಲಷ್ಕರು ನಡೆಯುವಂಥಾ ಮಾರ್ಗ, ಲಡಾಯಿಕ್ಕೆ ಬೇಕಾದ ವಿವರ ಸಹಾ ಹಿಂದಳಿಂದ[1] ತಿಳಿಯ ಬಂದೀತು. ಆ ಸಾಹೇಬರು, ಲಡಾಯಿಕ್ಕೆ ಬೇಕಾದ ಯಾವದಾಂದು ಕುಮಕು ಸರಂಜಾಮು ತಯಾರು ಮಾಡ ಬೇಕು ಯಂತಾ, ಬರದು ಕಳುಹಿಸಿದ್ಧಾರ್ಯ, ಅದೇ ವಿವರ ಮೇಲೆ ಬರದು ಇದ್ಧೇವೆ. ಮಲೆವಾರಿ ಶೀಮೆ ಫೌಜಿಗೆ ಮೊಕರರು ಆಗಿ ಇರುವ ಜನರಾಲ್ ಇಷ್ಟುಆರ್ಟ ಸಾಹೇಬರ ಕಡೆಯಿಂದ ಕಾಗದಗಳು ತಮಗೆ ತಲಪೀತು. ಜನರಾಲ್ ಸಾಹೇಬರ ಫೌಜು ರವಾನೆ ಆಗುವ ಬಗ್ಯೆ ಬೇಕಾದ ಸಾಮಾನು, ಸರಂಜಾಮು, ತಂಮಿಂದ ಆಧಷ್ಟು ಸಹಾಯ ಮಾಡೀರಿ ಯಂಬ ಅಪೇಕ್ಷೆ ನಮಗೆ ಇದೆ. ಮತ್ತು ನಂಮ ಕಡೆಯಿಂದ ವಂದರ ಹಿಂದೆ ವಂದು ಕಾಗದಗಳು ಬಂದು ತಲಪೀತು. ತಾವು ಮಾಡುವಂಥಾ ಪ್ರಯತ್ನದಿಂದ ನಮಗೆ ವಳ್ಳೇದು ಆದೀತು ಯಂಬ ನಿಶ್ಚಯವಿದೆ. ಇದಕ್ಕೆ ಮೊದಲು ಈ ಕಡೆಯಿಂದ ಮೀರ ಮಜಲೀಸ್ ಮಲೆವಾರಿ ಕಮಿಶನ್ ಇಸ್ಪೆನ್ಸರ್ ಸಾಹೇಬರಿಗೆ ಅಪ್ಪಣೆ ಕೊಟ್ಟು ಇದ್ಧೇವೆ. ಅವರು ವಂದು ಸಾಹೇಬರ ತಂಮ ಬಳಿಯ ಇರುವ ಬಗ್ಯೆ ವಕೀಲನ್ಯಾಹಾದಿ, ಈ ವಿಕಲ್ಪಗಳು ತೀರುವ ಪರಿಯಂತರ, ಮೊಕರರು ಮಾಡ್ಯಾರು. ಅವರು ಬಂದು ತಲಪಿದ ಬಳಿಕ, ಅವರಂನು ನಂಮ ಸರಿಯಾಗಿ ಕಂಡು, ದೋಸ್ತುದಾರರ ಕೆಲಸ ವಳ್ಳೇದಾಗುವಂಥಾದಕ್ಕೆ ಅವರು ಹೇಳಿದಂಥಾದ್ದಂನು ಕಬೂಲು ಮಾಡಿ, ಕೇಳ ಬೇಕು" ಯಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಇದಕ್ಕೆ ಜವಾಬು ಮಾಹೆ ತಾ ೧ ಲು ಬರಸಿ ಕಳುಹಿದ ಕಾಗದದಲ್ಲಿ: "ತಾವು ಬರಸಿ ಕಳುಹಿದ ಕಾಗದದಲ್ಲಿ ಮುಂಬಾಯಿ ಗವರ್ನರ್ ಸಾಹೇಬರವರು ಜನವರಿ ಮಾಸ ೪ ನೆ ತೇದಿಯಲ್ಲು ತಮಗೆ ಬರಸಿ ಕಳುಹಿದ ಕಾಗದದ ನಕಲು ನಂಮ ಬಳಿಗೆ ಕಳುಹಿಸಿ ಇದ್ದರು. ಅದರಲ್ಲಿ ಟೀಪುಸುಲ್ತಾನರು ಬಹುಮಾನ ಪಟ್ಟ ಇಂಗ್ರೇಜ ಕುಂಪನಿಯವರಂನೂ, ಅವರ ಬಂಧು ಜನಗಳಂನೂ, ಆಕ್ರಮಿಸುವದಕ್ಕೆ ಕ್ಷಾಮಿಸಿ ಇರುವದಕ್ಕೆ ವಿರುದ್ಧಾ ಮಾಡುವದಕ್ಕೆ ಪ್ರಯತ್ನ ಮಾಡ ಬೇಕು ಯಂತಾ, ಹೋದ ಸಪ್ಟಂಬರ ಮಾಸ ೧ ನೆ ತೇದಿಯಲ್ಲಿ ನಾವು ತಮಗೆ ಬರದು ಕಳುಹಿದ ತಾತ್ಪರ್ಯವಾಗಿ ಡಾಂಕಿನ್ ಸಾಹೇಬರು ತಮಗೆ ಬರದು ಕಳುಹಿಸಿದ್ಧಾರಷ್ಟೆ. ಅದೇ ಮೇರೆ ತಾವು ಪ್ರಯತ್ನ ಮಾಡೀರಿ ಯಂಬ ವಿವರಗಳಾಗಿ ಬರೆಸಿ ಕಳುಹಿದ್ದು ಸರಿಯಷ್ಟೆ. ಈ ಬಗ್ಯೆ ಮುಂಬಾಯಿ ಗವರ್ನರ್ ಡಾಂಕಿಂನ್ ಸಾಹೇಬರವರ ಕಾಗದಕ್ಕೆ ದರ ಜವಾಬು ವಿವರವಾಗಿ ನಾವು ಬರಸಿ ಕಳುಹಿಸಿ ಇದ್ಧೇವೆ. ಆ ವಿವರವು ಡಾಂಕಿಂನ್ ಸಾಹೇಬರವರ ಕಾಗದದಿಂದ ತಮಗೆ ಜಾಹೀರಾಗಿ ಇದ್ದೀತು. ತಾವು ನಮಗೆ ಬರಸಿ ಕಳುಹಿದ ಕಾಗದಕ್ಕೂ ಜವಾಬು ಬರಸಿ ಕಳುಹಿಸಿ ಇದ್ಧೇವೆ. ಅದು ತಂಮ ಬಳಿಗೆ ಬಂದು ತಲಪಿ ಇದ್ದೀತು. ಮೇಲಾಗಿ ಮಹಾರಾಜಶ್ರೀ ಸರ್ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರು ಈ ಕಡೆಗೆ ಬಂದು ಇದ್ದಾಗ್ಯೆ, ನಾವು ಕುಂಪನಿ ಕೆಲಸದ ಮೇಲೆ ಮೆಹನತ್ತು ಮಾಡಿದಂಥಾದ್ದು ಸಾಹೇಬ ಜನರ ಕಡೆಯಿಂದ ತಮಗೆ ಜಾಹೀರಾಗಿ ಉಂಟಷ್ಟೆ. ಅದಕ್ಕಿಂತಲೂ ಹೆಚ್ಚಾಗಿ ಈಗ ನಂಮ ಸರ್ವ ಶಕ್ತಿಯಿಂದ ನಂಮಿಂದ ಆಗುವಷ್ಟು ನಾವು, ತನುಮನ ವಂಚನೆ ಇಲ್ಲದೆ, ಮೆಹನತ್ತು ಮಾಡಿ, ಸಹಾಯ ಮಾಡ ಬೇಕು ಯಂಬ ಅಪೇಕ್ಷೆ, ಸಂತೋಷ ನಂಮ ಮನಸಿನಲ್ಲಿ ಬಹಳ ಇ

1 [illegible]

ದೆ. ಈ ಬಗ್ಯೆ ಜನರಾಲ್ ಇಷ್ಟಾರ್ಟ ಸಾಹೇಬರವರು ಇಲ್ಲಿಗೆ ಬಂದ ಮೇಲೆ, ನಾವು ಕುಂಪನಿ ಕೆಲಸದಲ್ಲಿ ಮೆಹನತ್ತು ಮಾಡುವಂಥಾದ್ದನ್ನು[1] ಅವರ ಕಾಗದಗಳಿಂದ ತಮಗೆ ಜಾಹೀರು ಆದೀತು. ಮೇಲಾಗಿ, ಈಗ ತಾವು ಬರೆಸಿ ಕಳುಹಿಸಿ ಇರುವ ಕಾಗದದಲ್ಲಿ, ಯುದ್ಧ ಮಾಡುವದಕ್ಕಿಂತಾ ಮುಂಚೆ ಟೀಪುಸುಲ್ತಾನರ ಶೀಮೆಯಲ್ಲಿ ಹೋಗಿ ತರಾರತ್ತು ಮಾಡದೆ ಇರ ಬೇಕು ಯಂಬದಾಗಿ, ಬರೆಸಿ ಇದ್ದದ್ದು ಸರಿಯಷ್ಟೆ. ಈ ಬಗ್ಯೆ ಬಹುಮಾನವಾದ ಇಂಗ್ರೇಜಿ ಕುಂಪನಿ ಬಹಾದ್ದರ ಸರಕಾರದ ದ್ಯಾಸ್ತಿ ನಮಗೆ ಫಲಿಸಿದಾರಭ್ಯದಿಂದಾ ಇಂದಿನವರಿಗೆ ಕುಂಪನಿ ಸರಕಾರದ ಹುಕುಂ ಮೇರೆ ಹೆಚ್ಚು ಕಡಮೆ ಇಲ್ಲದೆ ನಡದು ಬಂದು ಇರುವದರಿಂದ, ಇನ್ನು ಮುಂದೆಯೂ ಕುಂಪನಿ ಹುಕುಮನ್ನು ಮೀರಿ ನಡೆಯಲಿಕ್ಕೆ ಇಲ್ಲಾ" ಯಂಬದಾಗಿ, ಬರೆಸಿ ಕಳುಹಿದರು.

ಆ ಬಳಿಕ ಮುಂಬಾಯಿ ಗವರ್ನರ್ ಜನಾಬ್ ಡಾಂಕಿನ್ ಸಾಹೇಬರವರು ಹುಷ್ಯ ಬ ೪ ಲು ಬರೆಸಿ ಕಳುಹಿದ ಕಾಗದದಲ್ಲಿ: "ಟೀಪುಸುಲ್ತಾನರ ಶೀಮೆ ಕೆಡಿಸುವ ಬಗ್ಯೆ, ಮುಂಬಾಯಿ ಫೌಜು ತೆಗದು ಕೊಂಡು, ರಾಜಶ್ರೀ ಜನರಾಲ್ ಇಷ್ಟಾರ್ಟ ಸಾಹೇಬ ಶಿಪಾಸಾಲಾರವರು ಮಲೆಹಾಸಿ ಮಾರ್ಗವಾಗಿ ಹೊರಟು ಬರುತ್ತಾರೆ. ಇವರೂ ತಾವೂ ಕೂಡಿ ಯೇಕಸ್ಥರಾಗಿ ಇರ ಬೇಕು ಯಂಬದರಿಂದ ಬರದು ಇದ್ದೇವೆ. ಈಗ ತಮಗೆ ಪೆರಮೂಗಿ ಕೊಟ್ಟು ಬರಸುತ್ತೇವೆ. ಇವರು ಯಾವ ವೇಳ್ಯಕ್ಕೆ, ಯೇನು ಬೇಕು ಯಂತಾ, ಬರದು ಕಳುಹಿಸ್ಯಾರ್ಯು, ಅದನ್ನು ಅವರು ಬರೆಸಿ ಕಳುಹಿದ ಪ್ರಕಾರಕ್ಕೆ ಆಗಲೇ ಸರಂಜಾಮು ಮಾಡಿಸಿ ಕೊಡಿಸ ಬೇಕು. ಈ ಪ್ರಕಾರ ಮಾಡಿಸಿದರೆ, ತಮ್ಮ ಹೆಸರು ಬಹಳ ಕೀರ್ತಿ ಆಗುತ್ತಾ ಇದೆ. ಸರಕಾರ ಕುಂಪನಿ ಬಹಾದ್ದರವರ ಮೆಹರ್ಬಾನಿಗಿ ತಮ್ಮ ಮೇಲೆ ಇದ್ದೀತು. ಇವರು ಹೇಳಿದ ಪ್ರಕಾರಕ್ಕೆ ನಡಸಿ ಕೊಡ ಬೇಕು ಯಂತಾ, ನಮಗೆ ಈ ಕೆಲಸದಲ್ಲು ಬಹಳ ಅಪೇಕ್ಷೆ ಇದೆ. ಇದರ ಬದಲಿಗೆ ಹಳ್ಳಿತಾಗಿ ಬಂದೀತು. ಈ ಕೆಲಸದಲ್ಲೂ ಯವದಾದು ಕೆಲಸದಲ್ಲಿಯೂ ತಮ್ಮ ರಾಜ್ಯದಿಂದ ಆಗುವಂಥಾ ಸಾಹಿತ್ಯ ಮಾಡಿಸಿ ಕೊಟ್ಟು, ಕೆಲಸ ಅನುಕೂಲ ಮಾಡಿಸಿ ಕೊಟ್ಟಲ್ಲಿ, ತಮ್ಮ ಉಪಕಾರ ನಮ್ಮೇಲೆ ಬಹಳ ಆಗುತ್ತಾ ಇದೆ" ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ದರ ಜವಾಬು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಸರಕಾರ ಕುಂಪನಿಗೆ ಕುಮಕು ಮದತ್ತು ಮಾಡ ಬೇಕೆಂಬ ಅಭಿಪ್ರಾಯಗಳಾಗಿ ಬರೆಸಿ ಕಳುಹಿಸಿ ಇದ್ದೀರಿ. ನಾವು ಕುಂಪನಿ ಸರಕಾರದ ದ್ಯಾಸ್ತರಾಗಿ ಇದ್ದೇವೆ. ಪರಾಕು ಸರ್ ಜನರಾಲ್ ರಾಬರ್ಟ್ ಆಬರಕ್ರಂಬಿ ಸಾಹೇಬ ಬಹಾದ್ದರವರ ದಿವಸಕ್ಕೆ ನಮ್ಮಿಂದ ಆಗುವಷ್ಟು ಸಹಾಯ ಮಾಡಿ ಇದ್ದೇವೆ. ಈಗಲೂ ಅದಕ್ಕಿಂತಾ ಹೆಚ್ಚಾಗಿ ನಮ್ಮಿಂದ ಆದಷ್ಟು ಸಹಾಯ ಸಂಪತ್ತು ಮಾಡಿಯೇವು. ಈ ಬಗ್ಯೆ ಲಷ್ಕರು ತೆಗದು ಕೊಂಡು ಜನರಾಲ್ ಸಾಹೇಬರು ಬಂದಲ್ಲಿ, ನಾವು ಮಾಡುವಂಥಾ ಕುಂಪನಿ ಕಾರ್ಯಗಳು, ಸಹಾಯ ಸಂಪತ್ತು ಸಹಾ, ಅವರ ಕಡೆಯಿಂದ ತಮಗೆ ಜಾಹೀರಾದೀತು" ಯಂಬದಾಗಿ ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಜನರಾಲ್ ಇಷ್ಟಾರ್ಟ ಸಾಹೇಬರವರು ಹುಷ್ಯ ಬ ೩೦ ಲು ಬರೆಸಿ ಕಳುಹಿದ ಕಾಗದದಲ್ಲಿ: "ನಮಗೆ ಸಖಿ ಆದ ಮುಂಬಾಯಿ ಗವರ್ನರ್ ಡಾಂಕಿನ ಸಾಹೇಬರವರು ತಮಗೆ ಬರದು ಇರುವ ಕಾಗದವನ್ನು, ಈ ಕಾಗದದ ಸಂಗಡ ತಮ್ಮ ಬಳಿಗೆ ಕಳುಹಿಸುವದರಿಂದ, ನಮಗೆ ಬಹಳ ಸಂತೋಷವಾಗಿ ಇದೆ. ಆ ಕಾಗದದಲ್ಲಿ ಬರದು ಇರುವ ಪ್ರಕಾರ, ಕಾರ್ಯಗಳ ನಡಸುವ ಬಗ್ಯೆ, ನಾವು ಮಲೆಯಾಳಕ್ಕೆ ಬಂದು ಇದ್ದೇವೆ ಯಂಬದಾಗಿ, ತಮಗೆ ಸಮಾಚಾರ ತಿಳಿಸುವದರಿಂದಾ, ನಮಗೆ ಅತ್ಯಂತ ಸಂತೋಷವಾಗಿ ಇದೆ. ಈಗ ತಾವು ವದಗಿಸಿ ಕೊಡುವಂಥಾ ಉಪಕಾರಗಳು ವಂದು ಕ್ಷಣಾದಲ್ಲಿ ತಮ್ಮ ಸ್ವತಾಪ್ರಯತ್ನದಿಂದಾ ತಯಾರು ಮಾಡಿ ಕೊಟ್ಟಂಥಾದ್ದು ಜನರಾಲ್ ಹಾರ್ಟ್ಲಿ ಸಾಹೇಬರವರ ಮುಖವಚನದಿಂದಾ ತಿಳಿದು, ಬಹಳ ಸಂತೋಷವಾಯಿತು. ಬಹುಮಾನವಾದ ಕುಂಪನಿ ಸರಕಾರಕ್ಕೆ ಸಹಾಯವಾಗಿ ಇರುವಂಥಾ ಆಗ್ರಹಾ ತಮಗೆ ಇದೆ ಯಂಬದಾಗಿಯೂ, ಯೇನಾದರೂ ಹುಕುಂ ಮಾಡಿದ ಪ್ರಕಾರ, ಸಂದಾಧರೂ ತಪ್ಪದೆ, ವಿಶ್ವಾಸವಾಗಿ ನಡಸುವಂಥವರು ಯಂಬದಾಗಿಯೂ, ನಾವು ಹಲವು ಪ್ರಕಾರದಲ್ಲು ಬಹಳ ದಿನದಿಂದ ಕೇಳಿ ಇದ್ದೇವೆ. ಈ ಪ್ರಕಾರವಾಗಿ ಇರುವ ತಮ್ಮ ಮರಿಯಾದೆಯೂ ತಮ್ಮ ಸ್ವಾಮ್ಯಬುದ್ಧಿಯೂ ತಮ್ಮ ದೃಢ ಚಿತ್ತವೂ ಸಾಕ್ಷಿ ಇರಲಿಕ್ಕಾಗಿ, ತಮ್ಮ ರಾಜ್ಯಕ್ಕೆ ಸುಖ ಸಂತೋಷದಲ್ಲಿ ಇರಿಸಲಾದೀತು. ತಮ್ಮ ಸಂಸ್ಥಾ

[1] ಥಾರ್ಥು.

ನಕ್ಕೆ ಟೀಪುಸುಲ್ತಾನರನು ಬಹಳ ವರುಷದಿಂದ ಅತ್ಯಂತ ಬಹಳ ದೊಡ್ಡ ದುಷ್ಮಾನರಾಗಿ ಇರುವಂಥಾದ್ದು ಯಾವತ್ತು ತಮಗೆ ಬರಸಿ ಕಳುಹಿಸ ಬೇಡವಷ್ಟೆ. ಟೀಪುಸುಲ್ತಾನರು ಬಹುಮಾನವಾದ ಇಂಗ್ರೇಜಿ ಕುಂಪಣಿಗೂ ಇವರ ಬಂಧುಗಳಿಗೂ, ಅವರವರ ಗುಣ ದ್ರೋಹಗಳು ಇಲ್ಲದ ಹಾಗೆ, ಉಪದ್ರ ಪಡಿಸುವ ದಾರಿ ಉಂಟು ಮಾಡ ಬೇಕು ಯಂಬದಾಗಿ, ಕೆಲು ದಿವಸದ ಮುಂಚೆ ಯೋಚನೆ ಮಾಡಿ ಕೊಂಡು ಇದ್ದಾರೆ. ಇದರ ತಕ್ಕಂಥಾ ನ್ಯಾಯವಾಗಿ ನಡಸುವ ಬಗ್ಗೆ, ಈಗ ಪ್ರಯತ್ನ ಮಾಡಿದ್ದು, ಇಂನು ಇದಕ್ಕಿಂತ ಹೆಚ್ಚಾಗಿ ತಾವು ಮಾಡಿಕೋರಿ ಯಂಬದಾಗಿ, ನಮಗೆ ನಿಶ್ಚಯ ಉಂಟು. ಅಷ್ಟರ ಮಧ್ಯೆ ಈಗ ಯೋಚನೆ ಮಾಡಿ ಇರುವ ದಾರಿಯಲ್ಲಿ ನಡದ ಕಾರ್ಯಗಳು ಯಾವತ್ತು ನಿಶ್ಚಯ ಮಾಡಿ ಇಟ್ಟ ಪ್ರಕಾರ, ಸಫಲವಾಗಿ ನಡಸುವ ಬಗ್ಗೆ ಯುಟಾಮು ಸಾಹೇಬರು ಮೂಪಿನಿ ಸಾಹೇಬರು ಸಹಾ ತಂಮಿಂದ ಕರಾರು ಮಾಡಿ ಇರುವ ಪ್ರಕಾರ, ಅತಿ ಜಾಗ್ರತೆ ಮಾಡಿ ಇರುವಂಥಾದ್ದು ತಂಮಿಂದ ಆವಂಥಾ ಪ್ರಯತ್ನಗಳು[1] ತಾವು ಮಾಡಿಸ ತಕ್ಕದ್ದು. ಈ ಪ್ರಕಾರ ತಾವು ಮಾಡಿಸುವಂಥಾ ಸಹಾಯಗಳು ಅದರ ಸಲವಾಗಿ ತಾವು ಕಟ್ಟು ಮಾಡುವಂಥಾದ್ದು ಸಮಗ್ರವಾಗಿ ತಮಗೆ ಲಕ್ಷವಾದೀತು. ಇದಲ್ಲದೆ ಈ ಸಮಯದಲ್ಲಿ ಬಹುಮಾನವಾದ ಕುಂಪಣಿ ಅವರ ಬಂಧುಗಳು ಸಹಾ ಕೂಡಿ ನಡಸುವಂಥಾ ಕಾರ್ಯಗಳು ತಂಮ ಸಹಾಯದಿಂದಾ ಸಫಲವಾಗಿ ಬಂತು ಯಂಬದಾಗಿ, ಬಂಗಾಳದ ಬಹುಮಾನವಾದ ಗವರ್ನರ್ ಜನರಾಲ್ ಲಾರ್ಡ್ ಮಾರನಿಂಗ್ಟನ್ ಸಾಹೇಬ ಬಹಾದ್ದರವರಿಗೆ ಶ್ರುತ ಪಡಿಸುವದರಲ್ಲಿ ನಮಗೆ ಅತ್ಯಂತ ಆಗತ್ಯವಾಗಿ ಇರುವ ಸಂತೋಷ ಉಂಟಾಗಿ ಇದೆ ಯಂಬದಾಗಿ, ತಾವು ಪೂರಾಸಿ ಮನಸಿನಲ್ಲಿ ನಿಶ್ಚಯ ಮಾಡಿ ಕೊಂಡು ಇರ ಬೇಕು. ಈ ಸಹಾಯವಲ್ಲದೆ ಆನೆಗಳಂನೂ, ಯತ್ತುಗಳಂನೂ ಯಷ್ಟಾದರೂ ಶಿಕ್ಕಿದಷ್ಟು ಆಗ ಮಾಡಿಸಿ ಕಾಡ ಬೇಕು. ಸ್ವಲ್ಪ ದಿವಸದಲ್ಲಿ ಇಂಗ್ರೇಜಿ ಅಫಸರು ತಂಮ ಶೀಮೆ ದಾರಿಗಾಗಿ ಹೋಗ ಬೇಕೆಂಬದಾಗಿ ನಿಶ್ಚಯ ಮಾಡಿ ಇರುವದರಿಂದಾ, ತಂಮು ನಂಮು ಭೇಟಿ ಆಗುವ ಸಂಗ್ರಹಿಯಿಂದಾ, ತಂಮ ನಂಮ ಸತ್ಯದಿಂದಾ ಕೆಲವು ಸಮಾಚಾರಗಳ ಯಾವತ್ತು ಹೇಳಿಕೊಳ್ಳುವ ಬಗ್ಗೆ ಸಮಯ ಉಂಟಾದೀತು ಯಂಬದಾಗಿ, ನಾವು ಅತ್ಯಂತ ಸಂತೋಷದಿಂದ ಇದ್ದೇವೆ "ಯಂಬದಾಗಿ, ಬರೆಸಿ ಕಳುಹಿದರಿಂದಾ ಇದಕ್ಕೆ ದರ ಜವಾಬಾಗಿ, —

ಮಹಾರಾಜರವರು ಮಾಘ ಶು ೩ಲು ಬರೆಸಿ ಕಳುಹಿದ ಕಾಗದದಲ್ಲಿ: ಡಾಂಕಿನ್ ಸಾಹೇಬರವರು ಬರಸಿ ಕಳುಹಿದ ಕಾಗದವು ತಂಮ ಕಾಗದದ ಸಂಗಡ ಬಂದು ತಲಪಿತು. ಅದಕ್ಕೆ ಜವಾಬು ಬರೆಸಿ, ಇದೇ ಕಾಗದದ ಸಂಗಡ ಕಳುಹಿಸಿ ಇದ್ದೇವೆ. ಅದಂನು ಅಲ್ಲಿಗೆ ತಲಪಿಸ ಬೇಕು. ತಾವು ಯಾವಾಗ ಇಲ್ಲಿಗೆ ಬಂದೀರಾ, ಯಾವಾಗ ತಂಮ ಭೇಟಿ ಲಭಿಸೀತಾ, ತಾವು ನಾವು ಕೂಡಿ ಯಾವಾಗ ಮೊಖ್ತಾ ಪರಸಂಗಿಸಿಯೇವಾ ಯಂಬ ಅಪೇಕ್ಷೆಯಿಂದ, ತಂಮ ದಾರಿ ನೋಡುತ್ತಾ ಇದ್ದೇವೆ. ಮೇಲಾಗಿ ಕುಂಪಣಿ ಕೆಲಸದ ಬಗ್ಗೆ ಯತ್ತು ಆನೆ ಸಹಾ ಶಿಕ್ಕಿದಷ್ಟು ಕಾದಿಸ ಬೇಕು ಯಂತಾ ಬರದ ಬಗ್ಗೆ, ಇಲ್ಲಿ ನಂಮ ಬಳಿಯ ಹಾತಕು ಹದಿನೈದು ಆನೆ ಇತ್ತು. ಅದರಲ್ಲಿ ಮುಂಬಾಯಿ ಗವರ್ನರ್ ಡಾಂಕಿನ್ ಸಾಹೇಬರು ಬರಸಿ ಕಳುಹಿದ ಮೇರೆ ಮೆಸ್ತರ ಮೆಕಾನಾಕಿ[2] ಸಾಹೇಬರಿಗೆ ಐದು ಆನೆ ಕೊಟ್ಟು ಇದ್ದೇವೆ. ಈ ಬಳಿಕ ನಮಗೆ ದೋಸ್ತುದಾರರಾದ ಇಂಗ್ರೇಜಿ ಸರದಾರರಿಗೆ ಕೆಲು ಆನೆ ಕೊಟ್ಟು ಹೋಯಿತು. ಬಾಕಿ ನಿಂತ ಆನೆಯಲ್ಲಿ ಸಣ್ಣ ಮರಿಯಾಗಿ ಕುಂಪಣಿ ಚಾಕರಿಗೆ ಬಾರದಂಥಾ ಯರಡು ಮೂರು ಮರಿ ಆನೆ ಇಲ್ಲಿ ಹುಡಗಿ ಕೊಂಡು ಇದ್ದದರಲ್ಲಿ, ದೊಡ್ಡದ್ದಾಗಿ ಇದ್ದ ಐದು ಆನೆಯಂನು ಕೆಲು ದಿವಸದಲ್ಲಿ ಜನರಾಲ್ ಹಾಟ್ಲಿ ಸಾಹೇಬರವರ ಬಳಿಗೆ ಕಳುಹಿಸಿ ಇದ್ದೇವೆ, ಇಂನು ಕುಂಪಣಿ ಕೆಲಸಕ್ಕೆ ಆಗುವಂಥಾ ದೊಡ್ಡ ಆನೆ ಹಾಜರು ಇಲ್ಲಾ. ಇದಲ್ಲದೆ ಯತ್ತಿನ ವಿಷಯವಾಗಿ ಬರದ ಬಗ್ಗೆ, ನಂಮ ಶೀಮೆಗೆ ಮೂರು ದಿಕ್ಕು ದುಷ್ಮಾನರ ಶೀಮೆ ಆದ್ದದರಿಂದ, ನಂಮ ಶೀಮೆಗೆ ಪಂದ್ಯೆ ತಕ್ಕಾಗಿ ಬಾರದಂತೆ, ಪಥಮಾಗ್ರವೆಲ್ಲಾ ಈಗ ಯೆಳು ಯಂಟು ತಿಂಗಳಿಂದ ಬಂದು ಮಾಡಿ, ಬಹಳ ಮುಷ್ಕಿಲು ಮಾಡಿ ಇದ್ದಾರೆ. ನಂಮ ಶೀಮೆಗೆ ತಲಚೇರಿ ಮಾರ್ಗ ಒಂದು ಸರಾಗವಿದೆ. ಅಲ್ಲಿಗೆ ಇಲ್ಲಿಂದ ಯತ್ತುಗಳು ಹೋಗುವದಕ್ಕಲ್ಲದೆ, ಅಲ್ಲಿಂದ ಇಲ್ಲಿಗೆ ಬರುವದಿಲ್ಲಾ. ಇದರ ಮೇಲೆ ವೀರರಾಜೇಂದ್ರಪ್ಯಾಟೆ ಮುಂತಾದ ಪ್ಯಾಟೆ ಪಟ್ಟಣದ ಬಳಿಯ ಇದ್ದ ಯತ್ತು ಕರುಗಳು ಯಲ್ಲಾ ಅವರವರು ತೆಗದು ಕೊಂಡು ಹೋಗಿ, ಬಾಡಿಗೆ ಬಗ್ಗೆ ಕುಂಪಣಿ ಸರಕಾರದಲ್ಲು ಚಾಕರಿಗೆ ನಿಂತು ಇದ್ದಾರೆ. ಇದರ ಮೇಲೆ ನಾಡುಮಲೆ ರೈತ

1 Nominative instead of Accusative. 2 Mr. Maconochee.

ರ ಆರಂಬದ ಬಗ್ಯೂ, ತಂಮ ತಂಮ ಚಲವಿಗೆ ಗಟ್ಟದ ಕೆಳಗೆ ಹೋಗ್ಯಾ, ಉಪ್ಪು ಮುಂತಾದ್ದು ತಂದು ಕೊಳ್ಳುವ ಬಗ್ಯೂ, ವಕ್ಕಲು ವಂದಕ್ಕೆ ವಂದಾರು ಯರಡು ಆರು ಯತ್ತು ತರು ಇದೆ. ಇದಕ್ಕೆ ನಾವು ಕುಂಪನಿ ಸರಕಾರಕ್ಕೆ ಕೊಡುವ ಬಗ್ಯೆ ವಹಿಸಿ ಕೊಂಡು ಇರುವ ಅಕ್ಕಿಯಂನು ಬರ ಕೊಟ್ಟದಕ್ಕೆ ದ್ವಿಗುಣವಾಗಿ ಜಮಾಯಿಸ ಬೇಕು ಯಂತಾ ನಾವು ಯೋಚಿಸಿ, ರೈತರಿಗೆ ಅಕ್ಕಿ ಕರೆಯದ ಹಾಗೆ ಕೊಟ್ಟು, ಶ್ರೀಮೆಯಿಂದ ಬರ ತಕ್ಕ ಹಾಳಕ್ಕೂ ಅಕ್ಕಿಯಂನ್ನೇ ಕೊಡ ಬೇಕೆಂತಾ, ನಾವು ಜರೂರು ಮಾಡುವದರಿಂದಾ, ವೀರರಾಜೇಂದ್ರಪೇಟೆ ಉಗ್ರಾಣಕ್ಕೆ, ದಿವಾ ರಾತ್ರಿಯಲ್ಲು ಘರಸು ಇಲ್ಲದೆ, ಅಕ್ಕಿ ಹೇರುತ್ತಾರೆ. ಈ ಸಮಯದಲ್ಲಿ ರೈತರ ಬಳಿಯ ಇರುವ ಯತ್ತುಗಳ ನಾವು ತೆಗೆದರೆ, ಕುಂಪನಿ ಸರಕಾರಕ್ಕೆ ಜಮಾಯಿಸುವ ಅಕ್ಕಿ ಜಲ್ದು ಬಾರದೆ, ತಾಮಸವಾದೀತು. ಇದು ಕಾರಣ, ನಂಮ ಮನಸಿನಲ್ಲಿ ಇರುವ ಪ್ರಕಾರ, ಕುಂಪನಿ ಸರಕಾರಕ್ಕೆ ಕೊಡ ತಕ್ಕಾ ಬಗ್ಯೆ, ಹದಿನೈದು ಸಾವಿರ ಭಟ್ಟಿ ಅಕ್ಕಿ ಜಮಾ ಆದ ಬಳಿಕ, ವಿಚಾರಿಸಿ ತಳಾಸು ಮಾಡಿ, ಶಿಕ್ಕಿದಷ್ಟು ಯತ್ತು ನಾವು ಹಂಚನೆ ಇಲ್ಲದೆ ಕುಂಪನಿ ಚಾಕರಿಗೆ ಹಾಜರು ಮಾಡಿಯೇವು, ಬಂಗಾಳದ ಮಹಾರಾಜಶ್ರೀ ಸರ್ ಜನರಾಲ್ ರಾಬರ್ಟ್ ಆಬರ್ಕರಂಬಿ ಸಾಹೇಬ ಬಹಾದ್ದರವರ ದಿವಸದಲ್ಲಿ ನಾವು ಕುಂಪನಿ ಕೆಲಸ ಯಷ್ಟು ಮಾಡಿ ಇದ್ಧೇವಾ, ಅದಕ್ಕಿಂತಾ ಹೆಚ್ಚಾಗಿ ಈಗ ನಂಮಿಂದ ಆಗುವಷ್ಟು ಪರಯತ್ನ ಬಟ್ಟು, ಕುಂಪನಿ ಸರಕಾರಕ್ಕೆ ಸಹಾಯಿ ಮಾಡ ಬೇಕು ಯಂಬ ಅಪೇಕ್ಷೆ ಬಹಳ ಇದೆ. ಈ ಬಗ್ಯೆ ತಾವು ಇಲ್ಲಿಗೆ ಬಂದ ಮೇಲೆ, ಕುಂಪನಿ ಸರಕಾರದ ಕಾರ್ಯ ನಾವು ಮಾಡುವಂಥಾದ್ದು ತಾವು ಕಾಣುವಂಥಾದಕ್ಕೆ ವಿಶೇಷ ಬರೆಸಿ ಕಳುಹಾ ತಕ್ಕದ್ದು ಯೇನು ಇದೆ?" ಯಂತಾ ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಜನರಾಲ್ ಹಾಟ್ಲಿ ಸಾಹೇಬರವರು ಪುಷ್ಯ ಶು ೬ ಲು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಶ್ರೀಮೆಯಲ್ಲಿ ನಮಗೆ ಕೊಡುವ ಬಗ್ಯೆ ತಯಾರು ಮಾಡಿ ಇರುವ ಅಕ್ಕಿ ಜತೆ ಮಾಡುವದಕ್ಕೆ ಮುಂಚೆ, ದಂಡು ಇದ್ದ ಠಾವಿನಲ್ಲಿ ಮನೆ ಕಟ್ಟುವ ಹಾಗೆ, ಆ ಬಗೆ ಸಾಮಾನು ಶೇಖರ ಮಾಡುವ ಬಗ್ಯೂ, ಈ ಇಂಜನೇರು ಕಪ್ಪಿತಾನ್ ಜಾನ್ಸನ್ ಸಾಹೇಬರು ಹೇಳಿದ ಸಾಮಾನು ತಯಾರು ಮಾಡುವಂತೆ ಸಹಾ, ಹುಕುಂ ಕೊಟ್ಟು ಇದ್ಧೇವೆ. ಅವರಿಗೆ ಬೇಕಾದ ಸಾಮಾನುಗಳಂನೂ ಆಳುಗಳಂನೂ ಕಳುಹಿಸಿ ಕೊಡ ಬೇಕು" ಯಂಬ ವಿವರವಾಗಿ, ಬರೆಸಿ ಕಳುಹಿಸಿದಲ್ಲಿ, ಅದಕ್ಕೆ ಜವಾಬಾಗಿ, ಮಹಾರಾಜರವರು ಪುಷ್ಯ ಶು ೧೧ ಲು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಬರೆಸಿ ಕಳುಹಿದ ಮೇರೆ ಬೇಕಾದ ಸಾಮಾನು, ಕಾಮಗಾರಿ ಕೆಲಸಾ ಮಾಡುವ ಬಗ್ಯೆ ಆಳುಗಳ ಸಹಾ, ದಾರಕಿಸಿ ಕೊಟ್ಟು, ನೀವು ಬರೆದ ಮೇರೆ ಈಗ ಜಾನ್ಸನ್ ಸಾಹೇಬರ ವಶಕ್ಕೆ ಇಂನೂರ ಮೂವತ್ತೈದು ಜನವಂನು ಕಳುಹಿಸಿ ಇದ್ಧೇವೆ, ಇಂನು ಶಿಕ್ಕಿದಷ್ಟು ಜನ ಕಳುಹಿಸುತ್ತೇವೆ. ಕುಂಪನಿ ಚಾಕರಿ ಬಗ್ಯೆ ಐದು ಆನೆಯಂನು ಫಾಶಿ ಬೆಲಾಪನ ಸಂಗಡ ನಿಂನೇ ದಿನ ತಂಮ ಬಳಿಗೆ ಕಳುಹಿಸಿ ಇದ್ಧೇವೆ" ಯಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಯುಟಾಪು ಸಾಹೇಬರ ಮಾಮಿನಿ ಸಾಹೇಬರ ಸಂಗಡ ನೀವು ಹೇಳಿ ಬರೆಸಿ ಕೊಟ್ಟ ಮೇರೆ ಅಲ್ಲದೆ, ಅಧಿಕವಾಗಿ ಯೇನು ಸಾಮಾನು ಶಿಕ್ಕೀತು ಯಂತಾ, ಜನರಾಲ್ ಹಾಟ್ಲಿ ಸಾಹೇಬರು ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬು ಪುಷ್ಯ ಬ ೧೦ ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಮೆಸಾತರ ಯುಟಾಪ ಸಾಹೇಬರೂ[1] ಕಪಿತಾನ್ ಮಾಮಿನಿ ಸಾಹೇಬರಿಗೆ ಸಹಾ, ನಾವು ಬರೆಸಿ ಕೊಟ್ಟ ಕಾಗದದಲ್ಲಿ: ರಾತಲು ವಂದಕ್ಕೆ ರೂಪಾಯಿ ತೂಕ ನಾಲ್ವತ್ತು, ಇಂಥಾ ರಾತಲು ಯರಡಕ್ಕೆ ಪಕ್ಕಾ ಸೇರು ವಂದು, ಇಂಥಾ ಪಕ್ಕಾ ಸೇರು ಅರುವತ್ತಕ್ಕೆ ಭಟ್ಟಿ ವಂದು, ಇಂಥಾ ಭಟ್ಟಿಯಲ್ಲಿ ಯೇಳು ಸಾವಿರ ಭಟ್ಟಿ ಅಕ್ಕಿಯಂನು ಕುಂಪನಿ ಸರಕಾರಕ್ಕೆ ಮೂರು ತಿಂಗಳ ವಳಗೆ ಸಂದಾಯ ಮಾಡಿ ಕೊಡುತ್ತೇವೆ ಯಂಬದಾಗಿ, ಬರೆಸಿ ಕೊಟ್ಟು ಇರುವದು ಸರಿಯಷ್ಟೆ. ಆ ಬಗೆ ಯೇಳು ಸಾವಿರ ಭಟ್ಟಿ ಅಕ್ಕಿಯು ಈ ವರೆಗೆ ವೀರರಾಜೇಂದ್ರಪೇಟೆ ಮೋದಿಖಾನೆಯಲ್ಲಿ ಹಾಜರು ಇದೆ. ಈ ಅಕ್ಕಿ ತಾವು ಯಾವಾಗ ಕೇಳಿದಾಗ್ಯೂ, ಆ ಕ್ಷಣ ನಾವು ಕಳುಹಿಸಿ ಕೊಟ್ಟೇವು. ಇದಲ್ಲದೆ ಇಂನು ಯೆಳೆಂಟು ಸಾವಿರ ಭಟ್ಟಿ ಅಕ್ಕಿಯಂನು ಯೇನಾ ಪ್ರಯತ್ನದಿಂದಾದರೂ ಜಮಾಯಿಸಿ, ಇಂಗರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಹತ್ತು ಹದಿನೈದು ಸಾವಿರ ಭಟ್ಟಿ ಅಕ್ಕಿಯಂನು ಇಂದಿಗೆ ತಿಂಗಳು ವಳಗೆ ಕೊಡ ಬೇಕೆಂಬದಾಗಿ ನಂಮ ಮನಸಿನಲ್ಲಿ ಯೋಚಿಸಿ, ಈಗ ಯೆಳೆಂಟು ಸಾವಿರ ಭಟ್ಟಿ ಅಕ್ಕಿಗೆ ಕೊಡ ತಕ್ಕ ಕ್ರಯವಂನು ಕೊಟ್ಟು ವಿಚಾರ ಮಾಡಿ ಇದ್ಧೇವೆ. ಈ ಅಕ್

[1] It is allowed in Canarese to decline the last word alone, where in other languages the preceding word or words would have the same case as the last one.

ಕಿಯಂನು ವೀರರಾಜೇಂದ್ರಪೇಟೆ ಉಗ್ರಾಣದಲ್ಲಿ ಕೂಡಿಸಿ, ಇಂಗ್ರೇಜ ಲಷ್ಕರು ಇಲ್ಲಿಗೆ ಬಂದು, ಮುಂದೆ ಹೊರಟಾಗುವದರ ವಳಗೆ, ಇಂಗ್ರೇಜ ಸರಕಾರಕ್ಕೆ ವಪ್ಪಿಸ ಬೇಕು ಯಂಬದಾಗ, ನಾವು ನಿಶ್ಚಯ ಮಾಡಿ ಇದ್ಧೇವೆ. ಈ ಬಗೆ ಹದಿನೈದು ಸಾವಿರ ಖಂಡಿ ಅಕ್ಕಿಯಂನು ವಪ್ಪಿಸಿ, ಇದರ ಮೇಲೆ ಮತ್ತೂ ಸಿಕ್ಕಿದಷ್ಟು ಮೆಹನತು ಮಾಡಿ ಕೂಡಿಸ್ತೇವು. ಉಳಿಕೆ ವಿದಳ ಮುಂತಾದ ಸಾಮಾನು ನಂಮ ರಾಜ್ಯದಲ್ಲಿ ಬೆಳೆಯುವದಿಲ್ಲ. ಪರ ತಾಲೂಕಿನಿಂದ ಬರ ಬೇಕು ಯಂಬದು, ತಾವು ಬಲ್ಲಿರಿ. ಈ ಬಗ್ಯೆ ನಂಮ ಸೀಮೆಗೆ ಮೂರು ದಿಕ್ಕು ದುಷ್ಮಾನರ ಸೀಮೆ ಆದ್ದರಿಂದಾ, ಈ ಕಡೆಗೆ ವಂದು ತಖ್ಮೀ ಬಾರದಂತೆ, ಟಿಪುಸುಲ್ತಾನರು ಗಡಿ ಗಡಿಗೆಲ್ಲಾ ಜನ ಇಟ್ಟು, ಬಂದುಬಸ್ತು ಮಾಡಿ ಇದ್ಧಾರೆ. ಈ ವಿವರ ಯುಟಾಪು ಸಾಹೇಬರು ಮಾವಿನಿ ಸಾಹೇಬರು ಸಹಾ ಕಂಡು ಕೇಳಿ ಇದ್ಧಾರೆ. ಇದರ ಮೇಲೆ ಲಡಾಯಿ ಶುರು ಆದ ಬಳಿಕ, ತಂಮ ರಾಜ್ಯದಲ್ಲಿ ಇಲ್ಲದಕ್ಕೆ ತಂಮ ಕಡೆ ಜನ ಕಳುಹಿಸಿ, ಪರತಾಲೂಕಿನಿಂದ ಪ್ರಯತ್ನ ಮಾಡಿ, ಸಂಪಾದಿಸಿ ಕೊಡ ಬೇಕು ಯಂತಾ ತಾವು ಯಾವಾಗ ಹುಕುಂ ಕೊಡುತ್ತೀರ್ರಾ, ಆವಾಗ್ಯೆ ಪರತಾಲೂಕಿಗೆ ಜನ ಕಳುಹಿಸಿ, ಸಿಕ್ಕಿದ್ದಂನು ತರಿಸಿ ಕೊಟ್ಟೇವು. ಹೀಗೆ ಇರುವಲ್ಲಿ ಇಂಥಾ ಸಾಮಾನು ಲಿಕ್ಕಯಾತು[1] ಯಂತಾ, ಈಗಲೇ ಹ್ಯಾಗೆ ಬರೆಸಿ ಕಳುಹಿಸ ಬೇಕು? ಮೇಲಾಗಿ ಜಾನಸಂನ್[2] ಸಾಹೇಬರ ವಶಕ್ಕೆ ಇಂನೂರ ಮೂವತ್ತೈದು ಕಾಮಾಟಿ ಜನ ಮೊದಲು ಕೊಡಿಸಿದ್ದಲ್ಲದೆ, ಈಚೆಗೆ ಕೆಲ ಆಳು ಜಮಾಯಿಸಿ, ನಾನೂರು ಜನ ತುಮಾರು ಕೊಡಿಸಿದಲ್ಲಿ, ಇಷ್ಟು ಆಳು ಕೆಲಸವಿಲ್ಲಾ ಯಂತಾ, ಮುಂನೂರನಾಲ್ಕು ಜನ ಮಡಗಿ ಕೊಂಡು, ಉಳಿಕೆ ಜನರಂನು ಕುಂಪನಿ ಸರಕಾರಕ್ಕೆ ಇರುವ ಅಕ್ಕಿ ಮಾಡುವ ಬಗ್ಯೆ ಕಳುಹಿಸಿ ಕೊಟ್ಟರು" ಯಂಬದಾಗ, ಬರೆಸಿ ಕಳುಹಿದರು.

ಇದಕ್ಕೆ ಜವಾಬಾಗಿ ಮಾಷ ತಾ ೨ ಲು ಜನರಾಲ್ ಹಾರ್ಟ್ಲಿ ಸಾಹೇಬರು ಬರೆಸಿ ಕಳುಹಿದ ಕಾಗದದಲ್ಲಿ: "ಯುಟಾಪು ಸಾಹೇಬರು ಮಾವಿನಿ ಸಾಹೇಬರ ಸಂಗಡ ಕರಾರು ಮಾಡಿದ ಅಕ್ಕಿ ವೀರರಾಜೇಂದ್ರಪೇಟೆ ಮೋದಿಖಾನೆಯಲ್ಲಿ ಹಾಜರು ಇದೆ ಯಂಬದಾಗಿಯೂ, ಇದಲ್ಲದೆ ಯೇಳೆಂಟು ಸಾವಿರ ಖಂಡಿ ಅಕ್ಕಿ ಸರ್ವ ಪ್ರಯತ್ನದಿಂದ ಇಂಗ್ರೇಜ ಕುಂಪನಿ ಸರಕಾರಕ್ಕೆ ಕೊಟ್ಟೇವು ಯಂಬದಾಗಿಯೂ, ದ್ಯಾಸ್ತಿಯಿಂದ ಬರೆಸಿ ಕಳುಹಿದ ವಿವರ ತಿಳಿಯಲಾಯಿತು. ಈ ಕಾಗದದಿಂದ ಇಷ್ಟು ಪರಿಯಂತರ ಬಹು ಮಾನವಾದ ಇಂಗ್ರೇಜ ಕುಂಪನಿ ಸರಕಾರಕ್ಕೆ ಸಹಾಯ ಮಾಡುವಂಥಾದ್ದು ತಂಮ ಪ್ರಯತ್ನದಿಂದ ಸಫಲವಾಯಿತು. ಇಂನು ವಂದು ತಿಂಗಳ ವಳಗೆ ಅಧಿಕವಾಗಿ ಸಹಾಯ ಮಾಡ ಬೇಕಾದ್ದಕ್ಕೆ ಕರಾರು ಮಾಡಿ ಇರುವ ವರ್ತಮಾನ ತಿಳಿದು, ನಮಗೆ ಅತ್ಯಂತ ಬಹಳ ಸಂತ್ಯೋಷವಾಗಿ ಇದೆ. ಬಹು ಮಾನವಾದ ಇಂಗ್ರೇಜ ಕುಂಪನಿಯಿಂದ ತಂಮಲ್ಲಿರುವ ಸ್ನೇಹ ವಿಶ್ವಾಸ ಪರಿಪೂರ್ಣವಾಗಿ ಇರುವದರಿಂದ, ತಮಗೂ ಕುಂಪನಿಯಲ್ಲಿ ಇರುವ ಬಾಯಿಚಾರ ದ್ಯಾಸ್ತಿಯೂ, ತಂಮ ಶ್ರೇಯಸ್ಸೂ ನಮಗೆ ಚಂನಾಗಿ ತಿಳಿದು ಇರುವದರಿಂದ, ಈಗ ಕುಂಪನಿ ಸರಕಾರಕ್ಕೆ ಈ ಪ್ರಕಾರವಾಗಿ ಇರುವ ಅಗತ್ಯದ ಕೆಲಸಕ್ಕೆ ನಿಂಮಿಂದ ಆದಂಥಾ ಪ್ರಯತ್ನಗಳು ಬೇಕಾಗಿ ಇದೆ. ಅದಂನು ತಾವು ಬೇಕಾಗಿ ಇರುವ ಅಗತ್ಯವಲ್ಲದೆ, ತಂಮಲ್ಲಿ ಕುಂಪನಿಗೆ ಅನುಭವಿಸುವಂಥಾದ್ದು ನಿಜವೇ ಸರಿ ಯಂಬದಾಗಿ, ನಮಗೆ ನಿಶ್ಚಯವಾಗಿ ತಿಳಿದು ಇರುವದು ನಿಜವೇ ಸರಿ" ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಆ ಬಳಿಕ ಮಾಷ ತಾ ೮ ಲು ಜನರಾಲ್ ಹಾರ್ಟ್ಲಿ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ. "ತಂಮ ಬಳಿಯ ಇರುವದಕ್ಕಾಗಿ ಪರಿಚಾರಿಕೆ ಇರುವವರಲ್ಲಿ ವಬ್ಬರ ಇರಿಸುವದಕ್ಕೆ ಬಹುಮಾನವಾದ ಗವರ್ನರ ಜನರಾಲ್ ಲಾರ್ಡ ಮಾರನಿಂಗ್ಟನ್ ಸಾಹೇಬರವರು, ಮಲೆಯಾಳದಲ್ಲಿ ಇರುವ ಕಮಿಶನ್ ಇಸ್ಪೆನ್ಸರ ಸಾಹೇಬರವರು ಬರೆಸಿ ಕಳುಹಿದ ಪ್ರಕಾರ, ತಾವು ತಿಳಿದು ಇದ್ಧೀರಷ್ಟೆ. ಅದೇ ಪ್ರಕಾರ ತಂಮ ಬಳಿಯ ಇರುವದಕ್ಕಾಗಿ ಇಸ್ಪೆನ್ಸರ ಸಾಹೇಬರವರು ಕಪಿತಾನ್ ಮಾವಿನಿ ಸಾಹೇಬರವರಂನ ನೇಮಕ ಮಾಡಿ ಇದ್ಧಾರೆ. ಇಂಗ್ರೇಜ ಲಷ್ಕರಿಗೆ ಸೇನಾಪತಿ ಆಗಿ ಇರುವ ಲುತಿನಂತ[3] ಜನರಾಲ್ ಇಷ್ಟಾರ್ಟ ಸಾಹೇಬ ಬಹಾದ್ದರವರು ಕಪಿತಾನ್ ಮಾವಿನಿ ಸಾಹೇಬರವರಂನ ತಂಮ ಬಳಿ ಇರುವದಕ್ಕಾಗಿ ವಳ್ಳೇ ಸಂತ್ಯೋಷವಾಗಿದ್ಧಾರೆ. ಈಗ ಬಹುಮಾನವಾದ ಇಂಗ್ರೇಜ ಕುಂಪನಿ ಕೆಲಸಕ್ಕೆ ಬಹಳ ಅಗತ್ಯ ಇರುವದರಿಂದ, ಕಪಿತಾನ್ ಮಾವಿನಿ ಸಾಹೇಬರವರಂನ ಕೊಡಗಿನ ಸೀಮೆಗೆ ಈಗಲೇ ಕಳುಹ ಬೇ

1 ಸಿಕ್ಕಿತು. 2 Johnston. 3 Lieutenant.

ಕಾಗಿ ಇದೆ. ಆ ಪ್ರಕಾರ ಮಾವಿನಿ ಸಾಹೇಬರು ನಡಕೊಳ್ಳುವದಕ್ಕೆ ಹುಕುಂನಾಮೆ ಬರೆಯುವದಕ್ಕೆ ಮೊದಲೇ ಪಯಣ ಮಾಡಿ ಕಳುಹಿಸ ಬೇಕಾಗಿರುವದರಿಂದ, ಆ ಹುಕುಂನಾಮೆ ಹಿಂದಳಿಂದ[1] ಬಂದು ಸೇರೀತು. ಮಾವಿನಿ ಸಾಹೇಬರು ತಂಮ ಬಳಿಗೆ ಬಂದು ಸೇರಿದ ಮೇಲೆ, ಬಹುಮಾನವಾದ ಇಂಗರೇಜ ಕುಂಪನಿಯೂ ತಾವೂ[2] ಉಂಟಾದ ಲೇವಾದೇವಿ ಯಾವತ್ತು ಮಾವಿನಿ ಸಾಹೇಬರ ಮುಖಾಂತರ ಬೇಕಾಗಿ ಇರುವದರಿಂದ, ಈ ಸಮಯದಲ್ಲಿ ತಂಮ ಮನಸಿನಲ್ಲಿ ಸವಲ್ಪವಾದರೂ ವಂಚನೆ ಇಲ್ಲದೆ, ಮಾವಿನಿ ಸಾಹೇಬರಿಗೆ ತಿಳಿಸ್ಯೇರಿ ಯಂಬದಾಗಿ, ನಾವು ನಿಶ್ಚಯ ಮಾಡಿ ಇದ್ದೇವೆ. ಬಹುಮಾನವಾದ ಇಂಗರೇಜ ಕುಂಪನಿಗೆ ಬಹಳ ಜರೂರಾಗಿ ಇರುವ ಕೆಲಸಕ್ಕೆ ತಾವು ಬಹಳ ಬಹುಮಾನವಾದ ಪ್ರಯತ್ನ ಮಾಡಿ ಕೂಡಿಸಿ ಕೊಡುವಂಥಾದ್ದು ನಡದು ಬರುವಂಥಾದ್ದರಲ್ಲಿ ಮಾವಿನಿ ಸಾಹೇಬರಂನ ನೇಮಕ ಮಾಡಿದ ಪ್ರಕಾರ, ಇವರ ಸಂಗಡ ತಂಮಿಂದ ಆದಷ್ಟು ಪ್ರಯತ್ನ ಮಾಡ್ಯೇರಿ ಯಂಬದಾಗಿ, ಒಂದೂ ಸಂಶಯವಿಲ್ಲದೆ, ನಾವು ನಿಶ್ಚಯ ಮಾಡಿ ಇದ್ದೇವೆ. ಇಷ್ಟು ದಿವಸ ಪರಿಯಂತರವು ತಮಗೂ ಮಾವಿನಿ ಸಾಹೇಬರಿಗೂ ಅತ್ಯಂತ ಸಖಿ ಆಗಿ ಇರುವದರಿಂದ, ಈ ಸಮಯದಲ್ಲಿ ಇದಕ್ಕಿಂತಾ ಅಧಿಕವಾಗಿ ಬರದು ಕಳುಹಿಸ ಕೆಲಸವಿಲ್ಲವಷ್ಟೆ. ತಮಗೆ ತಿಳಿಸುವಂಥಾದ್ದು ಯಾವತ್ತು ಮಾವಿನಿ ಸಾಹೇಬರು ಚಂನಾಗಿ ತಿಳಿದು ಇದ್ದಾರೆ. ಮಾವಿನಿ ಸಾಹೇಬರು ತಮಗೆ ತಿಳಿಸುವಂಥಾದ್ದು ಯಾವತ್ತು ನಾವು ಮುಖತಾ ಕಂಡು ಹೇಳಿ ಕೊಳ್ಳುವ ಮೇರೆಗೆ ಆಗುತ್ತಾ ಇದೆ ಯಂಬದಾಗಿ, ನಿಶ್ಚಯವಾದೀತು ಯಂತಾ, ನಾವು ಸಂತೋಷದಿಂದ ಇದ್ದೇವೆ” ಯಂಬದಾಗಿ, ಬರದು ಇದ್ದರು.

ಇದೇ ಮೇರೆ ಇವರಂನು ವಕೀಲತನಕ್ಕೆ ಕಳುಹಿಸಿ ಇದ್ದೇವೆ ಯಂತಾ, ಜನರಾಲ್ ಇಷ್ಟಾರಟ ಸಾಹೇಬರು ಕಮಿಶನ್ ಇಸಪೆನ್ಸರ್ ಸಾಹೇಬರು ಸಹಾ ಬರದು ಇದ್ದರು.

ಅದೇ ಪ್ರಕಾರ ಮಾವಿನಿ ಸಾಹೇಬರವರು ವೀರರಾಜೇಂದ್ರ ಒಡೆಯರವರ ಕಂಡು, ಖೈಟಿ ಆಗಿ ವಕೀಲರಾಗಿ ನಿಂತರು.

ಆ ಬಳಿಕ ಜನರಾಲ್ ಇಷ್ಟಾರಟ ಸಾಹೇಬರವರು ಮಾರ್ಚ ೩ ಲು ಬರೆಸಿ ಕಳುಹಿದ ಕಾಗದದಲ್ಲಿ: “ತಾವು ಮಾಡಿದಂಥಾ ಪ್ರಯತ್ನಗಳು ಕೇಳಿ, ನಮಗೆ ಸಂತೋಷ ಉಂಟಾದ್ದು ಯರಡನೆ ಸಾರಿ ತಮಗೆ ಬರದು ಕಳುಹಿಸುವ ಸಂಗತಿ ಉಂಟಾಯಿತು. ಮೊದಲು ಯುಟಾಪು ಸಾಹೇಬರು, ಮಾವಿನಿ ಸಾಹೇಬರು, ತಾವು ಸಹಾ ಕರಾರು ಮಾಡಿ ಇರುವದು, ಯೆಳು ಸಾವಿರ ಖಂಡಿ ಅಕ್ಕಿ ಕೊಡುತ್ತೇವು ಯಂಬದಾಗಿ ಅಷ್ಟೆ ನಿಶ್ಚಯ ಮಾಡಿದ್ದು. ಯರಡನೆ ಸಾರಿ ಜನರಾಲ್ ಹಾಟ್ಲಿ ಸಾಹೇಬರವರಿಗೆ ಬರದು ಕಳುಹಿದ ಕಾಗದದಲ್ಲಿ, ಯೆಳೆಂಟು ಸಾವಿರ ಖಂಡಿ ಅಕ್ಕಿ ಕುಂಪನಿ ಸರಕಾರಕ್ಕೆ ಹೊಟ್ಟಾಗಿ ಕೊಡುತ್ತೇವೆಂಬದಾಗಿ, ಬರದು ಇದ್ದೀರಷ್ಟೆ. ಈಗ ವಿಶೇಷವಾಗಿ, ಬರುವ ತಿಂಗಳ ಒಳಗೆ ಅಂತೂ ಇಪ್ಪತ್ತೈದು ಸಾವಿರ ಖಂಡಿ ಅಕ್ಕಿ ಆಗು ಮಾಡಿ ಕೊಡ ಬೇಕು ಯಂಬದಾಗಿ, ಪ್ರಯತ್ನ ಮಾಡುತ್ತಾ ಇದ್ದೀರಿ ಯಂಬದಾಗಿ, ಇರುವ ಸಂಗತಿ ನಮಗೆ ಖಾತ್ರಿ ಇರುವದರಿಂದ, ತಮಗೆ ಸಿಕ್ಕಿದಷ್ಟು ಯಷ್ಟಾದರೂ ತಯಾರು ಮಾಡಿ ಕೊಡ ಬೇಕು. ಅಕ್ಕಿ ಇಲ್ಲಿಂದ, ನಾಲ್ಕು ಕಡೆ ಗಟ್ಟ ಹಾಕಿಸುತ್ತೇವೆಂಬದಾಗಿ, ತಾವು ಕೇಳಿ ತಿಳಿದು ಇರುವದರಿಂದ, ತಂಮ ಸೀಮೆಯಲ್ಲಿ ಸಿಕ್ಕಿದಷ್ಟು ಕುಂಪನಿಗೆ ಬೇಕಾಗಿ ಬರುವದಿಲ್ಲಾ ಯಂತಾ, ತಾವು ನಿಶ್ಚೈಸದೆ, ಬಹಳ ಪ್ರಯತ್ನ ಮಾಡಿ ಸಿಕ್ಕಿದ್ದು ಯಾವತ್ತಂನು ತಯಾರು ಮಾಡಿಸಿ ಕೊಡಿಸ ಬೇಕು. ಅದು ಯಷ್ಟಾದರೂ ಯಾವತ್ತೂ ಬಹುಮಾನವಾದ ಇಂಗರೇಜ ಕುಂಪನಿ ಸರಕಾರಕ್ಕೆ ತೆಗದು ಕೊಳ್ಳುತ್ತಾ ಇದ್ದೇವೆ. ಆದ್ದರಿಂದ ಇಷ್ಟು ದಿನ ಪರಿಯಂತರ ಉಂಟಾದ ಪ್ರಯತ್ನಗಳ ಹಾಗೆ ಇಂನೂ ಅದೇ ಪ್ರಕಾರ ಪ್ರಯತ್ನ ಉಂಟಾದೀತು ಯಂಬದಾಗಿ, ನಮಗೆ ನಿಶ್ಚಯ ಉಂಟು. ತಂಮ ಸೀಮೆ ಒಳಗೆ ಭತ್ತಾ ಕುಯಿದು ಆದ ಸಮಯವಾದ್ದರಿಂದ, ಅದು ಆದ ಕೂಡಲೇ ಸರಕಾರಕ್ಕೆ ಸಹಾಯ ಮಾಡುವದಕ್ಕಾಗಿ ಅಧಿಕ ಮನುಷ್ಯರು ಉಂಟಾದೀತು ಯಂಬದಾಗಿ, ನಮಗೆ ಖಾತ್ರಿ ಇರುವದರಿಂದ, ಕಲ್ಲು ಹಾಳೆ ಗಟ್ಟದ ಬುಡದಿಂದಲೂ ಲಷ್ಕರು ಇರುವ ಜಾಗದಲ್ಲಿ ಸಾಮಾನು, ಸರಂಜಾಮು, ರಸದುಗಳ ಸಾಗಿಸುವ ಬಗ್ಯೆ, ಇಲ್ಲಿ ಆಳು ಸಾಲದೆ ಇರುವದರಿಂದ, ಈ ಕಾರ್ಯಕ್ಕೆ ಕೆಲವು ಮನುಷ್ಯರ ಅಪ್ಪಣೆ ಕೊಟ್ಟು ತಾವು ಕಳುಹಿದರೆ, ಅಧಿಕವಾಗಿ ಇರುವ ಸಹಾಯ ಆಗುತ್ತಾ ಇದೆ. ತಂಮ ರಾಜ್ಯದಲ್ಲಿ ನಿಡುಂಬರೆ ಕಟ್ಟು

[1] ಹಿಂದಗಡೆ. [2] ತಾವು.

ವ ಕೆಲಸದಲ್ಲಿ ಮುಂನೂರು ಚಿಲುವಾನು ಆಳು ಉಂಟಷ್ಟೆ. ಆ ಕೆಲಸ ಸ್ವಲ್ಪ ದಿವಸದಲ್ಲಿ ಕಟ್ಟಿ ಆದೀ ತಷ್ಟೆ. ಆ ಬಗ್ಯೆ ಆಳುಗಳು, ಸಾಮಾನು ಹೋಗುವ ಬಗ್ಯೆ, ಉಂಟಾದೀತೆಂಬ ಅಪೇಕ್ಷೆಯಲ್ಲಿ ಇದ್ಧೇವೆ" ಯಂಬ ವಿವರವಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬಾಗಿ ಈ ಶು ೮ ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಕುಂಪನಿ ಸರಕಾರಕ್ಕೆ ಕಾಡ ತಕ್ಕ ಬಗ್ಯೆ ಇರುವ ಅಕ್ಕಿಯಂನು ವೀರರಾಜೇಂದ್ರಪ್ಪೇಟೆ ಮೋದಿಖಾನೆಗೆ ಹಾಕುವ ಕೆಲಸದಲ್ಲಿ ನಂಮ ಶೀಮೆಯಲ್ಲಿ ಇರುವ ಯಾವತ್ತೂ ಜನರು ರಾತ್ರೆ ಹಗಲು ಅದೇ ಕೆಲಸದ ಮೇಲೆ ಇದ್ಧಾರಾದ್ದರಿಂದಾ, ಈ ಸಮಯದಲ್ಲಿ ಗಟ್ಟದ ಕೆಳಗಿಂದ ರಸದು ಮುಟ್ಟಿಸುವಂಥಾದ್ದಕ್ಕೆ ಯತ್ತು ಆಳುಗಳು ಶಿಕ್ಕುವದಕ್ಕಿಲ್ಲಾ. ಈಗ ವೀರರಾಜೇಂದ್ರಪ್ಪೇಟೆ ಮೋದಿಖಾನೆಯಲ್ಲಿ ಇಪ್ಪತ್ತೈದು ಸಾವಿರ ಖಟ್ಟಿ ಅಕ್ಕಿ ಜಮಾ ಆಗಿ ಇದೆ. ಇದರ ಮೇಲೆ ಇಂನು ಯಂಟು ಹತ್ತು ಸಾವಿರ ಖಟ್ಟಿ ಅಕ್ಕಿಯಂನು, ಲಷ್ಕರು ಬರುವದರ ವಳಗೆ, ಜಮಾ ಮಾಡ ಬೇಕೆಂಬ ಪ್ರಯತ್ನದಲ್ಲು ಇದ್ಧೇವೆ. ಈ ಖಾಸಿ ಕೆಲಸ ತೀರಿದ ಬಳಿಕ, ಆದಷ್ಟು ಯತ್ತು ಆಳು ಜಮಾ ಮಾಡಿ ಕಾಟ್ಟೇವು" ಯಂಬ ಇತ್ಯಾದಿ ವಿವರಗಳಾಗಿ, ಬರೆಸಿ ಕಳುಹಿಸಿ ಕಾಟ್ಟರು.

ಇದಕ್ಕೆ ಮಾಘ ಶು ೧೨ ಲು ಜನರಾಲ್ ಇಷ್ಟ್ಯಾರಟ ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ: "ತಾವು ಬರದಂಥಾದ್ದು ನಿಜವೇ ಸರಿ ಯಂಬದಾಗಿ, ನಮಗೆ ತ್ಯಾರಿ ಇದೆ. ದಂಡಿಗೆ ಅಕ್ಕಿ ಕಾಡುವ ಬಗ್ಯೆ, ಅಲ್ಲಿ ಉಂಟಾಗುವಂಥಾ ಅಕ್ಕಿ ಯಾವತ್ತು ತಯಾರು ಮಾಡಿಸಿ ಇರಿಸ ಬೇಕು ಯಂಬದಾಗಿ, ಇರುವ ಖಾಸಿ ಕೆಲಸವಾದ್ದರಿಂದಾ, ಅಕ್ಕಿ ತಲಪಿಸುವ ಬಗ್ಯೆ ಬೇಕಾದ ಆಳುಗಳಂನೂ ಯತ್ತುಗಳಂನೂ ಸದ್ಯ ಇಲ್ಲಿಗೆ ಕಳುಹ ಬೇಡವಷ್ಟೆ. ಅಕ್ಕಿ ಸಿಕ್ಕಿದಷ್ಟು ತಯಾರು ಮಾಡುವದಕ್ಕೆ ಮೊದಲ್ಯೆ ಆಳುಗಳು ಯತ್ತುಗಳು ನಮಗೆ ಜರೂರು ಇಲ್ಲಾ. ಆ ಕೆಲಸ ತಯಾರು ಆದ ಮೇಲೆ, ಆ ಬಗೆ ಆಳು ಯತ್ತುಗಳಂನು ಬೇಕಾಗಿ ಇರುತ್ತದೆ. ಆವಾಗ್ಯೆ ತಾವು ಕಾಟ್ಟೀರಿ ಯಂಬದಾಗಿ, ನಿಶ್ಚಯ ಮಾಡಿ ಇದ್ಧೇವೆ. ಈಗ ವೀರರಾಜೇಂದ್ರಪ್ಪೇಟೆಯಲ್ಲಿ ಅಕ್ಕಿ ತಯಾರು ಮಾಡಿ ಇಟ್ಟು ಇರುವದೂ, ಇಂನು ಸ್ವಲ್ಪ ದಿವಸದಲ್ಲಿ ಯಂಟು ಹತ್ತು ಸಾವಿರ ಖಟ್ಟಿ ಅಕ್ಕಿ ಕಾಡ ಬೇಕು ಯಂಬದಾಗಿ ತಾವು ನಿಶ್ಚಯ ಮಾಡಿ ಇರುವದೂ, ಬರದು ಬಂದದರಿಂದಾ, ಅತ್ಯಂತ ಸಂತೋಷವಾಯಿತು. ತಾವು ಪ್ರಯತ್ನ ಮಾಡಿ ಇರುವಂಥಾದ್ದೂ ಮಾಡುವಂಥಾದ್ದೂ, ಅದು ಅತ್ಯಂತ ಬಹಳ ಬಹುಮಾನ ಯಂಬದರಿಂದಾ, ನಂಮ ನಸಿನಲ್ಲಿ ಬಿಟ್ಟು ಹೋಗದಂತೆ ಚಂನಾಗಿ ಇಟ್ಟು ಇದ್ಧೇವೆ" ಯಂಬ ವಿವರವಾಗಿ, ಬರದು ಕಳುಹಿಸಿ ಕಾಟ್ಟರು.

ಆ ಬಳಿಕ ಕೆಲು ದಿವಸದ ಮೇಲೆ ಇಂಗ್ರೇಜ ಸರಕಾರದ ಲಷ್ಕರಂನು ತೆಗದು ಕಾಂಡು, ಜನರಾಲ್ ಇಷ್ಟ್ಯಾರಟ ಸಾಹೇಬರು, ಹಾಟ್ಲಿ ಸಾಹೇಬರು ಸಹಾ, ಹೆಗ್ಗಳದ ಗಟ್ಟಾ ಹತ್ತಿ ಬಂದು ಹೆಗ್ಗಳದಲ್ಲು ಇಳಿದರು. ಆ ದಂಡಿಗೆ ವೀರರಾಜೇಂದ್ರ ವಡೆಯರವರು ಹ್ಯಾದಲ್ಲಿ, ಸಲಾಂ ತಿರಂಗಿಗಳ ಹಾಕಿಸಿ, ಯಾವತ್ತು ಸರದಾರರು ಕಂಡು, ಮಿಲ್ಯಾಖತ್ತು ಆಯಿತು. ಅಲ್ಲಿಂದ ದಂಡು ಕೂಟಾಗಿ ಬಂದು, ವೀರರಾಜೇಂದ್ರಪ್ಪೇಟೆಯಲ್ಲು ಮೊಕ್ಕಾಂ ಆಯಿತು. ಅಲ್ಲಿ ಕುಂಪನಿ ಸರಕಾರಕ್ಕೆ ಕಾಡುವ ಉದ್ದಿಶ್ಯ ಜಮಾ ಮಾಡಿದಂಥಾ ಅಕ್ಕಿ ಮೋದಿಖಾನೆಯಂನು ನ್ಯಾಡಿ, ಜನರಾಲ್ ಸಾಹೇಬರು, "ಇದರಲ್ಲು ಯಷ್ಟು ಅಕ್ಕಿ ಉಂಟು" ಯಂಬದಾಗಿ, ಕೇಳಿದಲ್ಲಿ, "ನಾಲ್ವತ್ತು ಸಾವಿರ ಖಟ್ಟಿ ಅಕ್ಕಿ ಇದೆ" ಯಂಬದಾಗಿ, ಮಹಾರಾಜರು ಹೇಳುವಾಗ್ಯೆ, "ತಾವು ಕರಾರು ಮಾಡಿ ಕಾಂಡದ್ದಕಿಂತಾ ಹತ್ತು ಪಾಲು ಹೆಚ್ಚಾಗಿ ಜಮಾಯಿಸಿದ್ಧೀರಿ; ಇಷ್ಟು ರಸದು ಜಮಾ ಆದೀತು ಯಂಬದಾಗಿ, ನಂಮ ಮನಸಿನಲ್ಲು ಇತ್ತಿಲ್ಲಾ;[1] ಈ ಕೆಲಸ ಮತ್ತಾಬ್ಬರಿಂದಾ ಆಗಲಿಕ್ಕಿಲ್ಲಾ; ಇದು ಬಹಳ ಉಪಕಾರವಾಯಿತು" ಯಂಬದಾಗಿ, ಜನರಾಲ್ ಸಾಹೇಬರು ಬಹಳ ಸಂತೋಷ ಪಟ್ಟು, ಆ ಬಳಿಕ: "ಇಂಗ್ರೇಜ ಸರಕಾರದ ರಸದು ಯಾವತ್ತಂನು ಮಲೆಯಾಳದವರು ತಂದು ಗಟ್ಟದ ಕೆಳಗೆ ಕಲ್ಲುಹಾಳೆ ಬಳಿಯ ಹಾಕಿದ್ಧಾರೆ; ಆ ರಸದಂನು ಗಟ್ಟದ ಮೇಲಕ್ಕೆ ಹೆಗ್ಗಳದ ಮೋದಿಖಾನೆಗೆ ಜಲ್ದಾಗಿ ತಂದು ಹಾಕ ತಕ್ಕ ಬಗ್ಯೆ, ಇಂನಾದರೂ ಯತ್ತು ಆಳು ಕುಮುಕು ಮಾಡಿಸಿ ಕಾಡ ಬೇಕು" ಯಂಬದಾಗಿ ಹೇಳಿದಲ್ಲಿ, "ನಾಲ್ವತ್ತನಾಲ್ಕು ಸಾವಿರ ಖಟ್ಟಿ ಅಕ್ಕಿಗೆ ಸರಿಯಾಗಿ ಜಮಾ ಮಾಡ ಬೇ

[1] ಇದ್ದಿಲ್ಲಾ.

ಕು ಯಂಬದಾಗ, ನಾವು ಯೋಚಿಸಿ, ಈಗಲು ರಾತ್ರೆ ಹಗಲಾಗಿ ಸೀಮೆ ರೀತಿಂದ ಅಕ್ಕಿ ಹೇರಿಸುತ್ತೇವೆ. ಇಂಥಾದರಲ್ಲಿ ಮಲೆಯಾಳದ ಸೀಮೆ ಯಾವತ್ತು ಜನರು ಕೂಡಿ, ಗಟ್ಟದ ಕೆಳಗೆ ತಂದು ಹಾಕಿ ಇರುವಂಥಾ, ಅಷ್ಟು ತ್ಯಾರಾ ರಸದು ಯಾವತ್ತನ್ನು ನಾವು ಹ್ಯಾಗೆ ಗಟ್ಟದ ಮೇಲಕ್ಕೆ ಸಾಗಿಸ ಬೇಕು” ಯಂಬದಾಗ ಹೇಳಿದಲ್ಲಿ, “ತಾವು ಕುಮಕು ಮಾಡದಿದ್ದರೆ, ರಸದು ಖರಾಬಾದ್ದೀತು. ಹ್ಯಾಗಾದರೂ ಸಾಗಿಸಿ ಕೊಡ ಬೇಕು” ಯಂತಾ ಹೇಳಿದ್ದರಿಂದ, ಮೋದಿಖಾನೆಗೆ ಜಮಾಯಿಸುವಂಥಾ ಅಕ್ಕಿ ಹೇರಿ ಹಾಕುವ ಬಗ್ಯೆ ಬೇಕಾದ ಜನ, ಯತ್ತು ಸಹಾ ಬಿಟ್ಟು, ಬಾಕಿ ಯತ್ತು ಆಳು ಯಾವತ್ತು, ಸೀಮೆ ಹೆಂಗಸು ಗಂಡು ಜನ, ಅರಮನೆ ಹಂಗಿಯದ ಜನ ಯತ್ತು ಸಹಾ, ಜಮಾಯಿಸಿ, ಗಟ್ಟದ ಕೆಳಗೆ ಕಲ್ಲುಹಾಳೆ ಬಳಿಯ ಇದ್ದಂಥಾ ರಸದನ್ನು ಹೆಗಗಳಕ್ಕೆ ತಂದು ಹಾಕುವಂತೆ, ಧೊರೆಗಳು ಅಪ್ಪಣೆ ಕೊಟ್ಟು, ಸಾಗಿಸುತ್ತಾ ಇದ್ದರು.

ಆ ಬಳಿಕ: “ದಂಡಿನಲ್ಲಿ ಇರುವಂಥಾ ಸಾಮಾನು ಹೇರುವ ಯತ್ತು, ಗಾಡಿ ಯತ್ತು ಸಹಾ, ಬಹಳ ಲಾಗರಾಗಿ ಇದೆ. ಇದರಿಂದ ಕೆಲಸ ಸಾಗುವದಿಲ್ಲಾ. ಈ ಯತ್ತುಗಳನ್ನು ಚರಾಯಿ ಬಗ್ಯೆ ನಿಲ್ಲಿಸಿ, ಇದಕ್ಕೆ ಬದಲು ಯತ್ತು, ರಸದು ಹೇರುವ ಬಗ್ಯೆ, ಗಾಡಿ ಬಗ್ಯೆ ಸಹಾ, ಒಳ್ಳೇ ಯತ್ತುಗಳನ್ನು ಕೊಡಿಸ ಬೇಕು” ಯಂತಾ, ಜನರಾಲ್ ಸಾಹೇಬರು ಹೇಳಿದರಿಂದಾ; ಮಹಾರಾಜರು ಹೇಳಿದ್ದು:

“ಲಷ್ಕರು ನಮ್ಮ ಸೀಮೆಯಿಂದ ಕೂಟಾಗಿ ಹೋಗುವದರೊಳಗಾಗಿ ಸಿಕ್ಕಿದಷ್ಟು ಕೊಟ್ಟೇವು” ಯಂಬದಾಗ ವಹಿಸಿ ಕೊಂಡು, ಅರಮನೆ ಹಂಗಿಯದಲ್ಲು ಇದ್ದಂಥಾ ಒಳ್ಳೆ ಒಳ್ಳೆ ಅನುವಾದಂಥಾ ಯತ್ತುಗಳು, ಸೀಮೆ ರೈತರಲ್ಲಿ ಇದ್ದಂಥಾ ಒಳ್ಳೆ ಒಳ್ಳೆ ಯತ್ತುಗಳ ತಲಾಸು ಮಾಡಿಸಿ, ಕವುದಿ, ಗೋಣಿ, ಬಿಗಿ ಬಾಲನ್ನು ಸಹಾ, ತಯಾರು ಮಾಡಿಸಿ, ಆವಾಗ್ಯೆ, ಜರೂರು ಸಿಕ್ಕಿದಷ್ಟು, ಒಳ್ಳೆ ಅನುವಾದ ಯತ್ತುಗಳನ್ನು ವೀರರಾಜೇಂದ್ರಪ್ಯಾಟೆಯಿಂದಾ ಕುಂಪನಿ ಸರಕಾರದ ಲಷ್ಕರಿಗೆ ಕೊಟ್ಟು, ಸಂದದ್ದಕ್ಕೆ ವಕೀಲ ಮಾಹಿನಿ ಸಾಹೇಬರವರ ಕೈಯ ರಶೀತಿ ತೆಗದು ಕೊಂಡು, ಲಷ್ಕರಿನಲ್ಲು ಇದ್ದಂಥಾ ಲಾಗರಾದ ಯತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗದು ಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು.

ಆ ಬಳಿಕ ದಂಡು ಕೂಟಾಗಿ ಹೋಗಿ, ಕರಡಿಗೋಡಮಾಳದಲ್ಲು ಮೊಕ್ಕಾಂ ಆಗಿ ಇದ್ದಲ್ಲಿ, ಮಹಾರಾಜರವರು ದಂಡಿನ ಸಂಗಡಲೇ ಹೋಗಿ ಇದ್ದರು.

ಆವಾಗ್ಯೆ ಮಲೆಯಾಳದ ಕಡೆ ಮಾಪಿಳ್ಳೇರು ಕೂಡಿ ಬಂದು, ಕಲ್ಲುಹಾಳೆ ಬಳಿಯ ಹಾಕಿ ಇದ್ದ ಸರಕಾರದ ರಸದಿನ ಬಳಿಯ ಹಾರಾ ಇದ್ದಂಥಾ ಜನರ ಮೇಲೆ ಗುಂಡು ಹಾಕಿ, ಜಗಳಾ ಮಾಡಿ, ಕೆಲವು ರಸದನ್ನು ಲೂಟಾಯಿಸಿದ್ದರಿಂದಾ, ಈ ಸಮಾಚಾರ ಜನರಾಲ್ ಸಾಹೇಬರು ಕೇಳಿ: “ಈ ಪ್ರಕಾರ ಮಲೆಯಾಳದವರು ತರಾರತ್ತು ನಡಿಸಿ ಇದ್ಧಾರೆ. ತಮ್ಮ ಕಡೆ ಮಂದಿ ಕಳುಹಿಸಿ, ಬಂದುಬಸ್ತು ಮಾಡಿಸ ಬೇಕು” ಯಂಬದಾಗ ಹೇಳಿದರಿಂದಾ, ಮಹಾರಾಜರವರು ಮುನ್ನೂರು ಕೊಡಗು ಜನರನ್ನು ಕಲ್ಲುಹಾಳೆ ಬಳಿಗೆ ಕಳುಹಿ, ಅಲ್ಲಿ ತರಾರತ್ತು ಮಾಡುತ್ತಿದ್ದ ಕುಂಟರಿಗೆ ತಂಬಿ ಫಾವುಟಾಯಿಸಿ, ರಸದು ಯಾವತ್ತನ್ನು ಗಟ್ಟದ ಮೇಲಕ್ಕೆ ಸಾಗಿಸಿ, ಇನ್ನು ಮುಂದೆ ಕುಂಟರು ಗಟ್ಟದ ಮೇಲಕ್ಕೆ ಬಾರದಂತೆ, ಆ ಜನರನ್ನು ಅಲ್ಲೇ ಠಾಂಗ್ಯಯ ಮಡಗಿದರು. ಇದಲ್ಲದೆ: “ದಂಡಿನಲ್ಲು ಕಾಯಿಲೆ ಆಜಾರಿ ಆದಂಥಾ ಜನರನ್ನು ವೀರರಾಜೇಂದ್ರಪ್ಯಾಟೆಗೆ ಕಳುಹುತ್ತೇವೆ. ಈ ಜನ ಇರುವ ಬಗ್ಯೆ ಮನೆ ಕಟ್ಟಿಸಿ ಕೊಟ್ಟು, ಈ ಜನಕ್ಕೆ ಬೇಕಾದ ಸಾಮಾನು ಕೊಡಿಸ ಬೇಕು” ಯಂತಾ ಜನರಾಲ್ ಸಾಹೇಬರು ಹೇಳಿದರಿಂದಾ, ಅದೇ ಮೇರೆ ವೀರರಾಜೇಂದ್ರಪ್ಯಾಟೆಯಲ್ಲು ಮನೆ ಕಟ್ಟಿಸಿ ಕೊಟ್ಟು, ಕಾಯಿಲೆ ಜನಕ್ಕೆ ಬೇಕಾದ ಸಾಮಾನು ಯಾವತ್ತನ್ನು ಕೊಟ್ಟು, ಆರೈಕೆ ಮಾಡಿಸುವಂತೆ, ವೀರರಾಜೇಂದ್ರಪ್ಯಾಟೆ ಸುಬೆದಾರಗೆ[1] ನೇಮಕ ಮಾಡಿ ಮಡಗಿದರು.

ಆ ಬಳಿಕ: “ಕ್ಯಾತೆ ಅರಸುಗಳಿಗೆ, ಕೆಲ ಮಂದಿ ತೆಗದು ಕೊಂಡು, ಕೊಡಗಿನ ಸೀಮೆ ಒಳನುಗ್ಗಿ, ತರಾರತ್ತು ಮಾಡು ಯಂಬದಾಗ, ಟಿಪ್ಪುಸುಲ್ತಾನರು ಹೇಳಿ ಇದ್ಧಾರಂತೆ; ಆದ್ದರಿಂದಾ ಆತನ ಸಹಾಯಕ್ಕೆ ಕ್ಯಾತೆ ಅರಸುಗಳು ಮಂದಿ ತೆಗದು ಕೊಂಡು, ಕುಟ್ಟದ ಮಾರ್ಗವಾಗಿ ಬರುವ ಸುದ್ದಿ ಇದೆ; ಅಲ್ಲಿ ಕೆಲ ಮಂದಿ ಇಡ ಬೇಕು ಯಂತಲೂ, ಕರಿಷ್ಣಾಪ್ಪನಾಯಕನು ಮಂಜರಾಬಾದು ಕಡೆಯಿಂದ ದಂಡು ತೆಗದು ಕೊಂಡು, ತಮ್ಮ ಸೀಮೆ ಒಳನುಗ್ಗಿ ಬರುವ ಸ

1 ಸುಬೆದಾರನನ್ನು.

ಮೋಟಾರ ಇದೆ ಯಂತಲೂ, ಈ ಪ್ರಕಾರ ನಾಲ್ಕಾಕಡೆಯಲ್ಲಿ ತಯಾರ್ತಾಗಿ, ಒಂದು ಸಮಯದಲ್ಲಿ ಒಳನುಗ್ಗಿ ಬಂದರೆ, ಪೇಟೆಳ ರಸ್ತು ಮುಸ್ತಿದೆ ಇರುವಂಥಾದ್ದು ಖಾಲಿ ಆದೀತು. ತಂಮ ಕಡೆ ಜನ ಇಲ್ಲಿ ದಂಡಿನ ಸಂಗಡ ಇರಬೇಕು ಯಂಬದು ಇಲ್ಲಾ, ತಂಮ ಶೀಮೆ ನಾಲ್ಕಾಕಡೆ ಸರಹದ್ದಿನಲ್ಲು ಮಂದಿ ಇಟ್ಟು, ಬಂದೋಬಸ್ತು ಮಾಡ ಬೇಕೆಂತಾ" ಜನರಾಲ್ ಸಾಹೇಬರು ಹೇಳಿದರಿಂದಾ, ಆ ಮಾತಂನು ಮಹಾರಾಜರವರು ಕೇಳಿ, ಕೋಟೆ ಅರಸುಗಳು ಬರುವದಕ್ಕೆ ಯೋಚಿಸಿದ ಕಟ್ಟದ ಮಾರ್ಗದಲ್ಲಿ ಕೆಲವು ಮಂದಿಯಂನು ಮಡಗಿದರು; ಯಡವಾದು ಮಾರ್ಗದಲ್ಲಿ ಕೆಲವು ಮಂದಿಯಂನು ಮಡಗಿದರು; ವೀರರಾಜೇಂದ್ರಪಯಾಟೆ ಹೋದಿಖಾನೆ ನಿಗಾಹಾನಿ ಬಗ್ಯೆ ಮುಂನೂರು ಮಂದಿ ಮಡಗಿದರು.

[a]ಮೇರೆ ಇಂಇರುತ್ತಿದ್ದಲ್ಲಿ ಅಷ್ಟು ಹೊತ್ತಿಗೆ ಬಂಗಾಳದ ಲಾರ್ಡ್ ಮಾರನಿಂಗ್ಟಂನ್ ಸಾಹೇಬ ಬಹಾದ್ದರವರು ರಂಮಜಾನು ತಿಂಗಳು ೨೬ ನೇ ಸನ್ ೧೨೧೩ ನೇ ಹಿಜರಿ, ಮಾರ್ಚ್ ತಿಂಗಳು ೪ ನೇ ಸನ್ ೧೭೯೯ ನೇ, ಕಾಳಾಯುಕ್ತಿ ಸಂವತ್ಸರದ ಮಾರ್ಗಶಿರ ೨೬ ನೇ ತಾರೀಕಿನಲ್ಲಿ ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಬಹಾದ್ದರ ಸರಕಾರ್ರದ ದೃಷ್ಟಿ ತಂಮ ದೋಸ್ತಿ ಮಡಗುವದಕ್ಕೆ ತಮಾಶೀಗಾಗಿ ನಿಶ್ಚಯವದೆ. ಮೊದಲು ವೇಳ್ಯದಲ್ಲು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದಲ್ಲಿ, ಅವರ ಕೂಡಿದ ಸರಕಾರದಲ್ಲಿ ಸಹಾ, ಟೀಪುಸುಲ್ತಾನರ ಶರೀರಂಗಪಟ್ಟಣದಲ್ಲಿ ಸಲ್ಲಾ ಆದಂಥಾದ್ದು ಟೀಪುಸುಲ್ತಾನರ ಕಡೆಯಿಂದ ಮುರುದ್ದರಿಂದ,[1] ಕುಂಪನಿ ಸರಕಾರದ ಶೀಮೆ, ಉಳಿಕೆ ಶೀಮೆ ಸಹಾ, ನಿಗಾಹಾನಿ ಮಾಡುವಂಥಾದ್ದಕ್ಕೆ ಜರೂರು ಇದೆ ಯಂಬದಾಗಿ, ತಮಗೆ ಸುದ್ದಿ ಕೊಟ್ಟು ಇದ್ಧೇವಷ್ಟೆ. ಅಂದಿನಾರಭ್ಯ ದೋಸ್ತಿ ಸವಾಲು ಜವಾಬಿನಿಂದಾ ಹಮ್ಮೇಶ ಸಲ್ಲಾ ಕಾಯಂ ಇರ ಬೇಕು ಯಂತಾ, ಸತ್ಯವಾಗಿಯೂ ಇಂಗ್ರೇಜ ಸರಕಾರದವರು, ಇದಕ್ಕೆ ಕೂಡಿದ ಸರಕಾರದವರು ಸಹಾ, ಯತ್ನ ಮಾಡಿದೆವು. ಅದು ಯಾವತ್ತು ಅವರಿಗೆ ಅಲಕ್ಷವಾಗಿ ಕಾಣಿಸಿ ಕೊಟ್ಟಿತು. ಕಡೆಗೆ ನಂಮ ನಿಗಾಹಾನಿ ಉದ್ದೇಶ್ಯ ಲೋಟಾರಿಯಿಂದಾ ಲಡಾಯಿ ಮಾಡುವದಕ್ಕೆ ಮೊಕರರು ಆಯಿತು. ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದಾ ಈ ತಂಟೆ ತಪ್ಪಿಸಿದರೆ, ಇದರಿಂದಾ ಕೂಡಿದ ಯಾವತ್ತು ಸರಕಾರದವರಿಗೂ ಒಳ್ಳೇದು ಇದೆ ಯಂಬದಾಗಿ ಮೊಕರರು ಮಾಡಿದ್ದಂಥಾ ಇಸ್ತಿಹಾರನಾಮೆ ನಕಲು ಕಪಿತಾನ್ ಮಾಲ್ಕಿನಿ ಸಾಹೇಬರು, ತಮಗೆ ತೋರಿಸುವ ಬಗ್ಯೆ, ತರುತ್ತಾ ಇದ್ಧಾರೆ. ಅದರಿಂದ ಯಲ್ಲಾ ವಿವರವು ತಿಳಿಯ ಬಂದೀತು. ನಂಮ ಸರಕಾರಕ್ಕೆ ಕೂಡಿದಂಥಾ ಯಲ್ಲಾ ಸರಕಾರ ಯಲ್ಲಿ ಸಾರಿಯಂತರ ಇದೆ; ಅವರು ಯಲ್ಲರು, ಬಹಳ ಬಗೆಯಿಂದಾ ಸಾಧಿದಾಗ್ಯಾಯೂ, ಲಡಾಯ ಹೊತ್ತು ಸಂದರ್ಭ ಆಗಲಿಕ್ಕಿಲ್ಲಾ ಯಂಬದರಿಂದಾ, ಲೋಟಾಗಿ ಲಡಾಯ ಮೊಕರರು ಮಾಡಿದರು. ನಿಂಮ ಲೋತ್ತ ಲುಕ್ಸಾನು ಸಹಾ ಇಂಗ್ರೇಜ ಸರಕಾರದ ಲೋತ್ತ ಲುಕ್ಸಾನಿನ ಒಳಗೆ ಕೂಡಿ ಇದೆ ಯಂಬ ದೃಷ್ಟಿ ಮೇಲೆ, ತಂಮಿಂದ ಆಗುವಷ್ಟು ಸಹಾಯದಿಂದ ಈಗ ಬಂದಿರುವಂಥಾ ಕೆಲಸದಲ್ಲಿ ಕೂಡಿ ಇರುವಂಥಾದ್ದು ತಮಗೆ ಮರಿಯಾದೆ ಇದೆ. ನಾವು ಯಾವ ಪ್ರಕಾರ ಬರೆಯುತ್ತೇವೋ, ಆ ಮೇರೆ ತಯಾರು ಇರುತ್ತೀರಿ ಯಂತಾ ಕೇಳಿ, ನಂಮ ಮನಸಿಗೆ ಬಹಳ ಬಹಳ ಸಂತೋಷವಾಯಿತು. ಈಗ ತಮಗೆ ತಿಳಿಯ ಬೇಕೆಂಬದಾಗಿ, ಬರೆಯುತ್ತಾ ಇದ್ಧೇವೆ. ಕೂಡಿದಂಥಾ ಸರಕಾರದ ಒಳಗೆ ಈ ಇಸ್ತಿಹಾರನಾಮೂ ಬರದಂಥಾ ವಿವರದಿಂದಾ ನಂಮ ಕೂಡಿದಂಥಾ ಸರಕಾರದ ಒಳಗೆ ಟೀಪುಸುಲ್ತಾನರಿಗೆ ಲಡಾಯಿ ಮೊಕರರು ಆಯಿತು. ಈ ಇಸ್ತಿಹಾರನಾಮೂ ಪ್ರಚಾರಿಸಿದರೆ ಜಾಹೀರು ಆದೀತು. ಇಷ್ಟು ಆದಾಗ್ಯಾಯೂ, ಇಂನು ಸವಾಲು ಜವಾಬಿನ ಮಾರ್ಗ ನಿಂತು ಇಲ್ಲಾ.[2] ಮನಸಂನು ಒಳ್ಳೆ ಮಾರ್ಗದಲ್ಲು ಇಟ್ಟು, ಲಡಾಯಿ ಯಂಬ ಹಿಡಿ ಸಾಧಿಸುವಂಥಾ ಯತ್ನಯಾರು

**The above translation of the proclamation being almost unintelligible, a better one has been given below.**

a. ಸನ್ ೧೭೯೯ ನೇ ಮಾರ್ಚ್ ತಾರೀಕು ೪ರ ಮೊರ್ನಿಂಗ್ಟನ್ ಪ್ರಭುವು [illegible]

1 ಮುರಿದು ಹೋದ್ದರಿಂದ. 2 ನಿಂತದ್ದಿಲ್ಲಾ.

ಇಂನು ಟೀಪುಸುಲ್ತಾನರ ವಶಗೆ ಬಾಕಿ ಉಂಟು. ತಮಗೆ ಕಪಿತಾನ್ ಮಾಮಿನಿ ಸಾಹೇಬರು ಹಿಶಾರೆ ಮಾಡಿದ ಮೇರೆ, ತಂಮ ಸರಕಾರದ ಫೌಜಿಗೆ ಬಂದುಬಸ್ತು ಮಾಡ ಬೇಕು. ಲಡಾಯಿ ವೇಳ್ಯದಲ್ಲು ಆ ಸಾಹೇಬರು ಯಾವ ಮೇರೆ ಹೇಳುತ್ತಾರ್ಯೊ, ಆ ಮೇರೆ ನಡಂಬಡ ಬೇಕು. ಬಾಕಿ ಯಾವತ್ತು ವಿವರವು ಆ ಸಾಹೇಬರವರ ಕಡೆಯಿಂದಾ ತಂಮ ವಿಚಾರಕ್ಕೆ ಬಂದೀತು" ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

"[a]ಈ ಕಾಗದದ ಸಂಗಡ ಬಂದ ಇಸ್ತಿಹಾರನಾಮೆ ವಿವರ:—ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡಲೂ, ಅವರ ದೋಸ್ತರು ನಿಜಾಮ ಅವರ ಸಂಗಡಲೂ, ಪೇಶವೆ ಅವರ ಸಂಗಡಲೂ, ಇವರ ಬಗೆ ಹಿಂದುಸ್ಥಾನದ ಶೀಮೆಯಲ್ಲು ಇಂಗ್ರೇಜ ರಾಜ್ಯದ ಫೌಜುಗಳಿಗೂ ಸಕಲ ಕಾರ್ಯಕ್ಕೂ ಬಹುಮಾನವಾದ ಇಂಗ್ರೇಜ ಕುಂಪನಿ ಗವರ್ನರ ಜನರಾಲ್ ಸಾಹೇಬರವರ ಸಂನಿಧಾನದಿಂದ ಬರದು ತಿಳಿಸುವಂಥಾದ್ದು: [b]ಅದಾಗಿ, ಬಹುಮಾನವಾದ ಇಂಗ್ರೇಜ ಕುಂಪನಿಯು, ನವಾಬ ಆಸಫಜಾ, ಪೇಶವೆ ಸಹಾ ವಂದು, ನವಾಬ ಟೀಪುಸುಲ್ತಾನ ವಂದು, ಇವರು ತಂಮಲ್ಲಿ ಶ್ರೀರಂಗಪಟ್ಟಣದಲ್ಲಿ ಸಮಾಧಾನವಾಗಿಯೂ ದೋಸ್ತಿ ಆಗಿಯೂ ಇರುವ ಬಗ್ಯೆ, ವಂದು ಕರಾರು ಮಾಡಿ ತೀರಿಸಿದರು.[1] ಆ ದಿವಸ ಪರ್ಯಂತರ ಲಡಾಯಿ ಆದರೂ, ದೂರ್ಯವಾದರೂ, ಇದ್ದದ್ದು ತೀರಿ ಹೋಯಿತು. ಆ ಹೊತ್ತಿನ ಇಾತಿಗೆ ಬಂಧುಗಳಾಗಿ ಇರುವ ಮೂರು ಸಂಸ್ಥಾನದವರು, ಆ ಕರಾರಿನಿಂದಾ ಟೀಪುಸುಲ್ತಾನ ಸಹಾ ಮಾಡ ತಕ್ಕ ಕಾರ್ಯಗಳು ಯಾವತ್ತು ಸಿದ್ಧವಾಗಿ ಇರುವಂಥಾದ್ದು ತಾನೆ ಯಂದು, ಯಾವಾಗಲೂ ಕರಾರು ಪ್ರಕಾರ ಮನಮುಟ ಮಾಡಿ ಇದ್ದರು. ಇದಕ್ಕೆ ಬಂಧುಗಳು[2] ಹಲವು ಸಾಕ್ಷಿಗಳು[3] ಈ ಪ್ರಕಾರ ಯಂಬದಾಗಿ, ಆಗಾಗ್ಯೆ ಕೊಟ್ಟರು. ಮೈಸೂರ ರಾಜ್ಯದ ಸರಹದ್ದಿನ ಬಗ್ಯೆ ಯೇನಾದರೂ ತಕರಾರುಗಳು ಮುಂತಾದ್ದು ಮೊಕದ್ದಮೆ ಅಲ್ಲದೆ, ನ್ಯಾಯ ಬೇಕಾದ ಪ್ರಕಾರ, ಕರಾರು ಮಾಡಿ ಇಟ್ಟ ಮೇರೆಗೆ, ದೋಸ್ತಿ ಆಗಿ ಇದ್ದರು. ಸಮಾಧಾನ ಪ್ರಕಾರ ನಡೆಯುವ ಬಗ್ಯೆ ಬಂಧುಗಳಾಗಿ ಇರುವವರಿಗೆ ಇರುವ ಆಗತ್ಯ ಬಹಳ ದೊಡ್ಡದಾಗಿ ಇರುವದರಿಂದಾ, ಟೀಪುಸುಲ್ತಾನನು ಸ್ವಲ್ಪ ದಿವಸದಿಂದಾ ದೋಸ್ತಿ ಆಗಿರುವಂಥವರಿಗೆ ಸ್ಪಷ್ಟವಾಗಿ ವಕೀಲರ ನೇಮಕ ಮಾಡಿ ಕಳುಹಿಸಿದ್ದಂನೂ, ಯುದ್ಧ ಸಂಭಾರಕ್ಕೆ ಬೇಕಾದ್ದು ಯಾವತ್ತು ತಯಾರು ಮಾಡುವಂಥಾದ್ದಂನೂ, ಇದು ಯಾವತ್ತಂನು ಯಾವ ಸಂಗತಿಯಿಂದಾ ನಡುಸುತ್ತಾನೆ ಯಂಬದಾಗಿ ಕೇಳುವದಕ್ಕಾಗಿಯೂ, ಲಡಾಯಿಕ್ಕೆ ತಾನೆ ಹೋಗುವದಕ್ಕಾಗಿಯೂ, ನ್ಯಾಯವಾಗಿ ದೊಡ್ಡದಾಗಿ ಇರುವ ಸಂಗತಿಯಿಂದಾದಾಗ್ಯೂ, ದೋಸ್ತಾದರಾದಂಥವರು ಟೀಪುಸುಲ್ತಾನರ ಸಂಗಡ ಯೇನೂ ಕೇಳದೆಯೂ, ಯುದ್ಧಕ್ಕೆ ಹೋಗದೆಯೂ, ಇಷ್ಟು ದಿನ ಪರ್ಯಂತರ ಇರುವಂಥಾದ್ದು ಸಮಾಧಾನ ಪ್ರಕಾರ ಬೇಕಾದದಕ್ಕೆ ದೋಸ್ತುದಾರರಾದಂಥವರ ಅಪೇಕ್ಷೆ ಆಗುತ್ತಾ ಇದೆಯಾಗಿ, ಟೀಪುಸುಲ್ತಾನರ ವಿಶ್ವಾಸ ಮಾಡಿ ಕಾಂಬದಕ್ಕೂ ಅವರ ಮನಸಿನಲ್ಲಿ ಸ್ಪಷ್ಟವಾಗಿ ಇರುವ ಗುಣಗಳು ಚಂನಾಗಿ ಇರುವದಕ್ಕೆಯೂ, ಅವರ ನ್ಯಾಯವಾಗಿ ಇರುವ ಅವಕಾಶಗಳು ಕೊಟ್ಟು ಇರುವದರಿಂದಲೂ, ಸಮಾಧಾನ ಮಾಡಿ ಇರುವದಂನು ಪ್ರತಿಕೂಲ ಮಾಡಿ ಇರುವ ಸಂಶಯಗಳು ಉಪೇಕ್ಷೆ ಮಾಡಿ ಇರುವದರಿಂದಲೂ, ಬಹುಮಾನವಾದ ಇಂಗ್ರೇಜ ಸಂಸ್ಥಾನದ ಬಗ್ಯೆ ಪ್ರಿಯತ್

---

ಸುವದು ಸುಲ್ತಾನನ ಕೈಯಲ್ಲಿ ಇದೆ. ಆತನು [illegible] ಮಾತುಗಳಿಗೆ ಕಿವಿ ಕೊಟ್ಟು, ಆತನ ಅಪೇಕ್ಷೆಗೆ ಅನುಸಾರವಾಗಿ ಲಡಾಯಿ ಮಾಡ ಬೇಕೆಂತಾ ಇಚ್ಛೈಸುತ್ತಾನೆ. [illegible]

a ಹಿಂದುಸ್ಥಾನದಲ್ಲಿ [illegible] ಗವರ್ನರ್ ಜನರಲ್ (ಸಭಾಪತಿ) [illegible]—

b ಬಹುಮಾನದ [illegible] ಕುಂಪನಿ, ನವಾಬ ಆಸಫಜಾ, ಪೇಶವೆ ಸಹಾ ವಂದು ಪಕ್ಷವಾಗಿಯೂ, ನವಾಬ ಟೀಪುಸುಲ್ತಾನ ಮತ್ತೊಂದು ಪಕ್ಷವಾಗಿಯೂ [illegible]

1 ತೀರಿಸಿದರು. 2 Allies. 3 [illegible]

ನಾಳು ಯಾವತ್ತಂನೂ ನಡಸಿ ಇದ್ಧೀವು. ಸಮಾಧಾನ ಮಾಡಿ ಇರುವ ಪ್ರಕಾರ ಮಾಡ ಬೇಕೆಂಬದಾಗಿ ಇರುವ ಅಗತ್ಯ, ಟೀಪಾಡ ಕರಾರು ಆಗಿ ಇದ್ದ ಬಗ್ಯೆ ಗವರ್ನರ್ ಜನರಾಲ್ ಸಾಹೇಬರವರು ತಿಳಿಸಿ ಇರುವದರಿಂದಲೂ, ಅವರನೂಳ್ಯದ ಕರಾರುಕ್ಕೆ ಗೊಳಿಸುವ ಬಗ್ಯೆ ನೇಮಕ ಮಾಡಿದ್ದರಿಂದಲೂ, ಈ ಬಗ್ಯೆಲ್ಲಾ ಪ್ರತ್ಯೇಕವಾಗಿ ಬರದು ಕಳುಹಿಸಿ ಇದ್ಧೇವೆ. ಹಿಂದುಸ್ಥಾನಿ ರಾಜ್ಯದಿಂದಾ ಇಂಗ್ರೇಜ ಸಂಸ್ಥಾನವು ಟೀಪುಸುಲ್ತಾನರ ಸಂಗಡ, ಸಕಲವಾದ ಕಾಯಿಗಳಲ್ಲಿ ಉಂಟಾದ ಬಗೆಗಳು, ಇಂಗ್ರೇಜ ಸಂಸ್ಥಾನದ ಪರಿಪಾಲನೆ ಮಾಡುವ ಬಹುಮಾನವಾದ ಇಂಗ್ರೇಜ ಕುಂಪನಿ ಹಿಂದುಸ್ಥಾನಿ ರಾಜ್ಯದಲ್ಲಿ ಇರುವ ಅರಸುಗಳ ಸಂಗಡ ಸಮಾಧಾನವಾಗಿಯೂ, ನ್ಯಾಯವಾಗಿಯೂ, ಯಥಾರ್ಥವಾಗಿಯೂ, ವಿಶ್ವಾಸವಾಗಿಯೂ, ನಡಸುತ್ತಾ ಇದ್ಧೇವೆ ಯಂಬದಾಗಿಯೂ, ನಿಶ್ಚಯವಾಗಿಯೂ ನಿಜವಾಗಿಯೂ ವಂದು ಪ್ರಮಾಣ ಮಾಡಿ ಇಟ್ಟು ಇರುವದರಿಂದ ತಾನೆ, ಆಗುತ್ತಾ ಇದೆ. [a]ಶ್ರೀರಂಗಪಟ್ಟಣದಲ್ಲಿ ಸಮಾಧಾನ ಮಾಡಿ ತೀರಿ ಹೋದಲ್ಲಿ, ಮೇಲೆ ದ್ಯಾಸ್ತರಾದಂಥವರ ವಿಶ್ವಾಸದ ಸಮಾಧಾನವಾಗಿ ಇರುವ ಆಗ್ರಹಕ್ಕೆ ಟೀಪುಸುಲ್ತಾನ ಕಾಲ ಮಾಡಿದ್ದು ಇಲ್ಲಾ. ಅವರ ನಡತೆಗೆ ಅನ್ಯಾಯಕ್ಕೆ ಯೇನಾದರೂ ಮಾಡುವದಕ್ಕೆ ಹ್ರಾವನೆ ಮಾಡದೆ, ಯಲ್ಲಾ ಸಮಯದಲ್ಲು ಅವರ ನ್ಯಾಯವು ಯಥಾರ್ಥವಾಗಿ ಇರುವ ಅವಕಾಶ ಸನ್ಮತವಾಯಿತು. ಸರಿಸಮಾನರಾಗಿ, ದ್ಯಾಸ್ತರಾಗಿಯೂ ಸಂತ್ಯೋಷವಾಗಿಯೂ ಇರುವ ನಡತೆ ಸಂರಕ್ಷಣೆಯ ಮಾಡಿ ಗಟ್ಟಿ ಪಡಿಸುವ ಬಗ್ಯೆ, ನಿಂವ ಆಗ್ರಹಾ ದೊಡ್ಡದಾಗಿಯೂ ಬಹಳ ಹಾಲವು ಪ್ರಕಾರದಲ್ಲೂ ತಿಳಿಸಿ ಇದ್ಧೇವೆ. [b]ಟೀಪುಸುಲ್ತಾನನು ಈ ಪ್ರಕಾರ ಸಖಿ ಆಗಿ ಇರುವ ಮೇರೆಗೆ ಹೇಳುವ ಸಮಯದಲ್ಲಿ, ಟೀಪಾಡು ಶ್ರೀಮೆ ನಿಂವ ಅವಕಾಶಕ್ಕೆ ಶೇರಿದ್ದು ಯಂಬದಾಗಿ, ಪಿರ್ಯಾದಿ ಮಾಡಿದಲ್ಲಿ, ನಿಮಗೆ ಶೇರಿದ್ದು ನಿಜವೇ ಯಂಬದಾಗಿ, ಇಂಗ್ರೇಜ ಸಂಸ್ಥಾನದಿಂದಾ ಹುಕುಂ ಮಾಡುವ ಸಮಯದಲ್ಲಿ, ಶ್ರೀರಂಗಪಟ್ಟಣದ ಕರಾರುನಾಮೆಯು ದ್ಯಾಸ್ತರಾದಂಥವರಿಗೆ, ಸಖಿ ಆಗಿ ಇದ್ದಾರೆ ಯಂಬದಾಗಿ ನಿಶ್ಚಯವಾಗಿ ಹೇಳಿದ್ದು ಉಪೇಕ್ಷೆ ಮಾಡಿ, ಟೀಪುಸುಲ್ತಾನರು; ಫರಾಶೀಸರು ಸಹಾ ಕರಾರು ಮಾಡಿ ಇರುವ ಕಾರ್ಯಗಳು ಕೇಳಿಯೂ ಯಲ್ಲಾ ದಾಸ್ತರಾದಂಥವರಿಗೆ ಬಹಳ ಆಶ್ಚರ್ಯವಾಗಿಯೂ ಕ್ಲ್ಯಾಪವಾಗಿಯೂ ಬಂತು. [c]ಟೀಪುಸುಲ್ತಾನನು ವಳ್ಳೇ ಮಾತು ಹೇಳಿದರಲ್ಲಿಯೂ, ಕರಾರು ಮಾಡಿದಕ್ಕೆ ಬೇಕಾದ ಹಾಗೆ ನಡದು ಇದ್ಧೇನೆಂಬದಾಗಿಯೂ ಇಟ್ಟು ಇರುವ ನಡತೆ ನಿಶ್ಚಯ ಮಾಡಿ ಇರುವಲ್ಲಿಯೂ ಯರಡು ವಕೀಲರ ನೇಮಕ ಮಾಡಿ, ಫರಾಶೀಸರ ದ್ವೀಪಿನಲ್ಲಿ[1] ಹುಕುಂ ಮಾಡಿ ಕಳುಹಿಸಿದರು. ಅವರು ಹಿಂದುಸ್ಥಾನಿ ರಾಜ್ಯದಲ್ಲಿ ಸಮಾಧಾನವಾಗಿ ಇರುವ ಸಮಯದಲ್ಲಿ, ಬಹುಮಾನವಾದ ಇಂಗ್ರೇಜ ಕುಂಪನಿಯಲ್ಲಿಯೂ ಅವರ ಬಂಧುಗಳು ಪೇಶವೆ ಅವರಂನೂ ನಿಜಾಮಲ್ಲಿಯಂನೂ ಇವರ ಸಂಗಡ ಅವಕಾಶದಲ್ಲಿ ಹೋಗಿ ಯುದ್ಧಾ ಮಾಡುವದಕ್ಕೆ, ಫರಾಶೀಸರು ಟೀಪುಸುಲ್ತಾನರ ಹೆಸರಿಗೆ ವಂದು ಕರಾರುನಾಮಾ ಬರದು ಇಟ್ಟು ಇದ್ಧಾರೆ. [d]ಈ ವಕೀಲರು ಟೀಪು

[illegible]

[a] [illegible]

[b] [illegible]

[c] [illegible]

[d] [illegible]

1 Isle of France i. e. Mauritius.

ಸುಲ್ತಾನರ ಪೇಷರಿಗೆ ಲಡಾಯಿಕ್ಕೆ ಬೇಕಾದ ಸಹಾಯಗಳ ಫರಾಸೀಸರ ಸಂಗಡ ಕೇಳಲು, ಯುದ್ಧಾ ಮಾಡ ಬೇಕು ಯಂಬದಾಗಿ ನಿಶ್ಚಯ ಮಾಡಿದ್ದಕ್ಕೆ, ಫರಾಸೀಸರ ದ್ವೀಪದಿಂದಾ ಯುದ್ಧಾ ಮಾಡುವದಕ್ಕಾಗಿ ವಂದು ಕುಮಕು ಮಾಡಿ ಕೊಂಡು ಇದ್ಧೀರಿ. [a] ಈ ವಕೀಲರು ವಂದು ಫರಾಸೀಸರ ಜಹಾಜಿನಲ್ಲಿ ಹತ್ತಿ, ಫರಾಸೀಸರ ದ್ವೀಪದಿಂದ ಹೊರಟು ಬರುವಾಗ್ಯೆ, ದಾಸ್ತಾರಾದಂಥಾವರ ಸಂಗಡ ಯುದ್ಧಾ ಮಾಡುವದಕ್ಕೆ ವಕೀಲರ ಕರಕೊಂಡು ಬಂದು, ನಿಂಮ ರಾಜ್ಯದಲ್ಲಿ ಇಳಿಸಿ ಬರುವದಕ್ಕೆ ಸಂಮತಿಸಿದ ಮ್ಯೇಲೆ, ಆ ಕುಂಮಕು ತಾನೆ ಟೀಪುಸುಲ್ತಾನರ ದಂಡಿನಲ್ಲಿ ಕರೆಸಿ ಇಟ್ಟು ಕೊಂಡು ಇದ್ಧಾರೆ. ಈ ಪ್ರಕಾರ ನಿಂಮ ನಡತೆಯಿಂದಾ ನಿಂಮ ವಕೀಲರ ನಡತೆ ನುಡುತೆಯೂ ಮಾತೂ ಜಾಹೀರ ಮಾಡಿ ಕೊಂಡು ಇದ್ಧೀರಿ. [b] ಬಹುಮಾನವಾದ ಇಂಗ್ರೇಜ ಕುಂಪನಿಗೆ ಸೇರಿದ ಅವಕಾಶಗಳಲ್ಲಿ ಇಟ್ಟು ಇರುವ ಪ್ರಕಾರ, ಕೂಡಲೇ ಜಮಾಯಿಸಿ ಬಂದು ಯುದ್ಧಾ ಮಾಡಿ ಕುಂಮಕು ಬಂದದ್ದು ಬೇಕಾದಷ್ಟು ಇಲ್ಲದೆ ಇರುವದರಿಂದಾ, ಫರಾಸೀಸರು ತಾವು ಕರಾರುನಾಮೆದಲ್ಲು ಬರದು ಇರುವ ಯುದ್ಧಕ್ಕೆ ಸಾಧನೆ ಮಾಡಿ ಇದ್ಧೀರಷ್ಟೆ. ಫರಾಸೀಸರ ಸಂಗಡ ಕೇಳಿ ಇರುವ ಜಾರಿ ಕುಂಮಕು ಬಂದರೆ, ಕುಂಪನಿ ಸೀಮೆಗೆ ಬಂದು, ಯುದ್ಧಾ ಮಾಡುವದರಲ್ಲಿ ತಯಾರಾಗಿ ಇದ್ಧೀರಿ. [c] ಮ್ಯೇಲಾಗಿ, ಮಹಾದೇವನ ಕಟಾಕ್ಷವೂ, ಇಂಗ್ರೇಜ ರಾಜ್ಯದ ಜಯವಾಗಿ ಇರುವ ಬಲವೂ, ಟೀಪುಸುಲ್ತಾನರ ಅಪೇಕ್ಷೆಯೂ,[1] ಮಲೆಯಾಳದ ರಾಜ್ಯದಲ್ಲಿ ಫರಾಸೀಸರು ಬರುತ್ತಾರೆ ಯಂಬದಾಗಿ ಹಿಟಾರಿಸಿ ಕೊಂಡು ಇರುವ ಸಮಯದಲ್ಲಿ, ಇಜಿಪ್ತ[2] ರಾಜ್ಯದಲ್ಲಿ ಫರಾಸೀಸರು ಬರುವದು ನಿಲ್ಲಿಸಿ ಇದ್ಧೇವೆ. [d] ಇಂಗ್ರೇಜ ಸಂಸ್ಥಾನವೂ ಪ್ಯೇಶವೆಯೂ[3] ನಿಜಾಮಲ್ಲಿಯೂ ಅವರವರ ಅವಕಾಶ ಮಾಡಿ ರಕ್ಷಣೆಯ ಮಾಡುವದಕ್ಕೆ ಬೇಕಾದ ಪ್ರಕಾರ ಅವರವರ ಬಲಗಳು ಕೂಡಿ ನಿಲ್ಲಿಸದೆ ಇರಲಿಲ್ಲಾ. ಟೀಪುಸುಲ್ತಾನನು, ಫರಾಸೀಸರು ಸಹಾ, ಕರಾರು ಮಾಡಿ ಇರುವದು ತಿಳಿದು ಇರುವದರಿಂದಾ, ಟೀಪುಸುಲ್ತಾನಗೆ ಬೇಕಾದ ಸಹಾಯ ಬರುವದಕ್ಕೆ ಮೊದಲ್ಯೇ ಅವನ ಅವಕಾಶದಲ್ಲಿ ದ್ವೇಷಿ ಆಗಿ ಇರುವಂಥವರು ಬಂದು, ಲಡಾಯಿ ಮಾಡಿದ್ದುಂಟಾದರೆ, ಆ ಪ್ರಕಾರ ಜಾಹೀರವಾಗಿ ನಡದು ಬರುವ ಬಗ್ಯೆ, ಹಿಟಾರಿಸಿ ನ್ಯಾಯದಲ್ಲಿ, ನ್ಯಾಯವಾದ್ದೇ ಸರಿ ಯಂಬದಾಗಿ ತೋರ ಪಟ್ಟಿತು. ಮ್ಯೇಲಾಗಿ, ಟೀಪುಸುಲ್ತಾನರಿಗೆ ಅಗತ್ಯವಾದಷ್ಟು ಬಹಳ ಕುಮುಕು ತೆಗದು ಕೊಂಡು, ಫರಾಸೀಸರು ಜಹಾಜ ಹತ್ತಿ ಇಜಿಪ್ತ ರಾಜ್ಯಕ್ಕೆ ಬರುವದಕ್ಕೆ ಇಂಗ್ರೇಜರಿಗೆ ಜಯ ಕಾಡುವ ಜಹಾಜಿನಿಂದ ಹಿಡಿದ ವರ್ತಮಾನ ಖುಷಿಯಿಂದ ಕೇಳಿದ್ದು ಟೀಪುಸುಲ್ತಾನನ ಸಂಗಡ ಲಡಾಯಿ ಮಾಡಿಸದೆ ಇರುವ ಬಗ್ಯೆ ಸಾಬಕು ಕರಾರು ಮಾಡಿ ಇರುವ ಪ್ರಕಾರಕ್ಕೆ, ಟೀಪುಸುಲ್ತಾನರು ಸಹಾ ದ್ವೇಷಿ ಆಗಿಯೂ ಸಮಾಧಾನವಾಗಿಯೂ ಇದಿಸುವಂಥಾ ಅಗರಾಹಕ್ಕೆ ತಗ್ಗು ಬರುವದಕ್ಕೆ ಇಲ್ಲಾ. ಟೀಪುಸುಲ್ತಾನರು ಮಾಡತಕ್ಕ ಕಾರ್ಯದ ತಂನ ಸೌಖ್ಯಕ್ಕೂ ವಿಶ್ವಾಸಕ್ಕೂ ಬೇಕಾದ ಹಾಗೆ ಯಥಾರ್ಥವಾಗಿ ನಡೆಯ ತಕ್ಕದ್ದಕ್ಕೆ ಇರುವ ನಂಮ ಸಂಮತಿಗೆ ಟೀಪುಸುಲ್ತಾನರಿಗೆ ತಿಳಿಸುವ ಬಗ್ಯೆ, ಸಮಾಧಾನವಾಗಿ ಇರುವ ಬರಹಾದಿಂದಾ, ತಿಳಿಸುತ್ತಾ ಇದ್ಧೇವೆ. ಕಜಿಯಾ ಆಗಿ ಇರುವಂಥಾದ್ದು ವಿಸ್ತಾರ ಮಾಡುವದರಲ್ಲಿ ಖುಲಾಯಿಸುವದಕ್ಕೆ ಸೌಖ್ಯವಾಗಿ ಇರುವಂಥಾದ್ದಕ್ಕೆ ಮೇಷಮ್ಯಯ ಬಾರದೆ ಇರುವಂತೆಯೂ ಬಹಳ ಪ್ರಯತ್ನಗಳ ಮಾಡಿದರು.

---

[a] ನಾಯಕಾರಿಗಳು ಫ್ರೆಂಚರ ದ್ವೀಪದಿಂದ ಫ್ರೆಂಚ ಹಡಗದಲ್ಲಿ ಹತ್ತಿ ಬಂದಾಗ, ಟೀಪುಸುಲ್ತಾನನು, ಅವರು ಮಿತ್ರಸಂಸ್ಥಾನಗಳವರ ಮೇಲೆ ಯುದ್ಧಮಾಡುವ ಉದ್ದೇಶ್ಯವಾಗಿಯೇ ಕೂಡಿಸಿದ ಯುದ್ಧದ ದಂಡನ್ನು ತನ್ನ ದೇಶದಲ್ಲಿ ಇಳಿಯ ಬಿಟ್ಟು, ಕಡೆಯಲ್ಲಿ ತನ್ನ ಸೈನ್ಯದಲ್ಲಿ ಸೇರಿಸಿದನು. ಈ ಪ್ರಕಾರ ಸ್ವಂತ ನಾಯಕರಿಂದ ತನ್ನ ನಾಯಕಾರಿಗಳ ಪ್ರವರ್ತನೆಯನ್ನು ಸ್ಪಷ್ಟವಾಗಿ ಸ್ಥಿರಪಡಿಸಿದ್ದಾಯಿತು.

[b] ಹೀಗಾಗಿಯೂ ಈ ಯುದ್ಧದ ದಂಡು, ಕುಂಪನಿಯವರ ಸ್ವಾಧೀನದಲ್ಲಿ ಇರುವ ಊರುಗಳನ್ನು ತತ್ಕ್ಷಣದಲ್ಲಿ ಮುತ್ತಿಗೆಹಾಕುವದಕ್ಕೆ, ಸಾಕಷ್ಟು ಬಲವಾಗಿಲ್ಲ. ಆದರೆ ತನ್ನ ಮಧ್ಯ ಅವನು ಫ್ರೆಂಚರ ಸಂಗಡ ಮಾಡಿದ ಪ್ರಬಂಧಕ್ಕೆ ಅನುಕೂಲವಾಗಿ ಕಳುಹಿಸುವ ಸಹಾಯಗಳನ್ನು ನಿರೀಕ್ಷಿಸುತ್ತಾ ಇದ್ದನು. ಇದಲ್ಲದೆ ಫ್ರೆಂಚ ಜನಾಂಗದಿಂದ ಅತಿ ಆತುರವಾಗಿ ಬೇಡಿ ಕೊಂಡ ಸಾಕಾದ ಸಹಾಯಗಳನ್ನು ಪಡೆ ಕೊಂಡ ಕೂಡಲೆ, ಕುಂಪನಿಯವರ ಸೀಮೆಗಳಲ್ಲಿ ತನ್ನ ಸೈನ್ಯ ನಡಿಸುವದಕ್ಕೆ ಸಿದ್ಧನಾಗಿದ್ದನು.

[c] ಅದಾಗ್ಯೂ ದೇವರ ದಯವೂ ಬ್ರಿಟಿಷ ಜನಾಂಗದ ಜಯವುಳ್ಳ ಸೈನ್ಯವೂ ಅವನ ನಿರೀಕ್ಷೆಯನ್ನು ನಿರರ್ಥಕ ಮಾಡಿತು. ಮಲಬಾರ ತೀರಕ್ಕೆ ಅನಿರೀಕ್ಷಿತವಾಗಿ ಫ್ರೆಂಚರ ಬರೋಣವನ್ನು ನಿರೀಕ್ಷಿಸುತ್ತಿರುವ ಘಳಿಗೆಯಲ್ಲಿಯೇ, ಐಗುಪ್ತ ದೇಶದಲ್ಲಿ ಫ್ರೆಂಚರ ಹೊಂಚು ನಿಲ್ಲಿಸಿತು.

[d] ಬ್ರಿಟಿಷ ಸಂಸ್ಥಾನವೂ ನಿಜಾಮನೂ ಪೇಶ್ವೆಯೂ ತಮ್ಮ ತಮ್ಮ ರಾಜ್ಯಗಳನ್ನು ಕಾಪಾಡುವ ಬಗ್ಗೆ, ತಮ್ಮ ದಂಡುಗಳನ್ನು ಕೂಡಿಸಲಿಕ್ಕೆ ಬೇಕಾದ ಜಾಗರತೆ ಇಡದೆ ಹೋಗಲಿಲ್ಲ. ಅನ್ಯಮನಸ್ಕನಾಗಿ ಸತ್ಯ ನ್ಯಾಯದ ಪ್ರಕಾರವೇ ಮಿತ್ರಸಂಸ್ಥಾನಗಳವರು ಈ ಕಾಲದಲ್ಲಿಯೇ ಟೀಪುಸುಲ್ತಾನನ ಸೀಮೆಗಳಲ್ಲಿ ತಕ್ಷಣ ಬಂದಿದ್ದರಾದರೆ, ಸಮವಾಗಿ ಬಹುದಿತ್ತು. ಆದರೆ ನೀತಿ ನಡಿಯು ಬಾಯಲ್ಲಿ ಬ್ರಿಟಿಷ ಹಡಗಗಳಿಗೆ ಮಹಾ ಜಯವಾಯಿತೆಂಬ ಸಂತೋಷದ ವರ್ತಮಾನವು ಬಂದಾಗ್ಯೂ ಸಹಾ, ಟೀಪುಸುಲ್ತಾನನ ಸಂಗಡ ಸ್ನೇಹಾ ಸಮಾಧಾನಗಳ ಭಾವವನ್ನು ಕಾಪಾಡ ಬೇಕೆಂಬ ಅತ್ಯಂತ ಅಪೇಕ್ಷೆಯು ಮಿತ್ರಸಂಸ್ಥಾನಗಳವರಲ್ಲಿ ಕಡಿಮೆಯಾಗಲಿಲ್ಲ. ಅವರು ನಿಧಾನದ ಕಾಗದದಿಂದ ಅವನಲ್ಲಿ ನ್ಯಾಯದ ಮನಸ್ಸನ್ನು ಮತ್ತೆ, ಬುದ್ಧಿಗೂ ರಾಜಕಾರ್ಯಕ್ಕೂ ಯೋಗ್ಯವಾಗಿರುವ ಸತ್ಯಭಾವವನ್ನೂ ಹುಟ್ಟಿಸುವದಕ್ಕೆ ಪ್ರಯತ್ನ ಮಾಡಿದರು. ಇದಲ್ಲದೆ ಸಂಧಾನದ ಮೂಲಕ ಸಹಾ ಮಾಡುವದಕ್ಕೂ, ಸ್ನೇಹಭಾವದಿಂದ ಸಮಜಾಯಿಸಿಯ ದಾರಿಗಳನ್ನು ಸುಲಭ ಮಾಡುವದಕ್ಕೂ ಆಗುವಷ್ಟು ಪ್ರಯತ್ನ ಮಾಡಿದರು. ಈ ಸ್ನೇಹಯುಕ್ತವಾದ ಅಭಿಪ್ರಾಯದಲ್ಲಿ ಮನಸ್ಸಿಟ್ಟು, ಸರ್ವಾಧಿಪತಿಯು (ಗವರ್ನರ್ ಜನರಲ್) ೧೭೯೮ ನೇ ನವಂಬರ ೮ ನೆ ಮಿತ್ರಸಂಸ್ಥಾನಗಳವರ ಹೆಸರಿನಲ್ಲಿ ಟೀಪುಸುಲ್ತಾನನ ಬಳಿಗೆ ನಾಯಕಾರಿಯನ್ನು, ಸ್ನೇಹದ ಬಂಧಗಳನ್ನು ನವೀಕರಿಸುವದಕ್ಕೂ, ಹೊಸದಾಗಿ

---

1 ಅಪೇಕ್ಷೆಯೂ. 2 Egypt. 3 ಪೇಶ್ವೆಯೂ.

ಈ ಪ್ರಕಾರವಾಗಿ ಇರುವ ಪ್ರೇಕ್ಷುಮಿಂದಾ ಗವರ್ನರ್ ಜನರಾಲ್ ಸಾಹೇಬರವರು ೧೭೯೮ ನೆ ನವಂಬರ ತಿಂಗಳು ೮ ನೆ ತಾರೀಕು, ಶೇರಿ ಇರುವ ಸ್ನೇಹಿತನ ಬಂಧುತ್ವ ಪಾಗಸ್ತಾಗಿ ಮಾಡಿಸುವ ಬಗ್ಯೆ, ಪರಸ್ಪರವಾಗಿ ಇರುವ ಸಮಾಧಾನ ಮುಂದೆ ಚಲನ ಬಾರದಂತೆಯು ರಕ್ಷಣೆಯ ಮಾಡುವದಕ್ಕೆ, ವಂದು ದಾರಿ ಮಾಡಿ ಇಡಿಸುವದಕ್ಕೆ ದ್ಯಾನಸ್ತುದಾರರಾದಂಥವರ ಪೈಕಿಗೆ ವಂದು ವಕೀಲು ಟೀಪುಸುಲ್ತಾನರ ಬಳಿಗೆ ನೇಮಿಸಿ ಕಳುಹಿಸುವಾ ಯಂಬದಾಗಿ, ಬರದು ಕಳುಹಿಸಿ ಇದ್ದೀತು. ಅದರ ಮೇಲೆ ಡಿಜಂಬರ ತಿಂಗಳು, ೧೦ ನೆ ತಾರೀಕು, ಆ ಪ್ರಕಾರ ತಾನೆ ವಂದು ಬರದು ಕಳುಹಿಸಿ ಇದ್ದೀತು. [a]ದ್ಯಾನಸ್ತಿ ಆಗಿ ಇರುವವರ ಬಗ್ಯೆ ಈ ಪ್ರಕಾರ ಸಮಾಧಾನವಾಗಿಯೂ ಸಖಿ ಆಗಿಯೂ ತೋರಿಸಿ ಕೊಟ್ಟಂಥಾದ್ದು ಟೀಪುಸುಲ್ತಾನನು ಹಲವು ಬಗೆಯಲ್ಲು ಅಪೇಕ್ಷು ಆಗಿ ಇರುವ ವಿರೋಧಗಳಿಂದಾ ಶೇರದೆ ಹೋಯಿತು. ಅಮರ ಸೂಳ್ಯದ ಕರಾರು ಬಗ್ಯೆ ತಾಮಿಸಿ ಉಂಟಾದ ವಿಸ್ತಾರ ವಿರೋಧ ಮಾಡಿ, ಹೋದ ಡಿಜಂಬರ ತಿಂಗಳಲ್ಲಿ ಕರೆ ಕಳುಹಿಸಿ ಕೊಂಡದರಿಂದಲೂ ಸರಹದ್ದುಗಳಲ್ಲಿ ತಂಮ ಆಳುಗಳಿಂನೂ ಕುಂಪನಿ ಆಳುಗಳಿಂನೂ ಅಲ್ಲಿಗೂ ಇಲ್ಲಿಗೂ ಹೋಗಿ ಬರುವ ಗುಣದೋಷಗಳು ವಿರೋಧ ಮಾಡಿದ್ದರಿಂದಲೂ, ಉಂಟಾಗಿರುವ ಚಲನಾ ನಿಗ್ರಹಾ ಮಾಡಿ, ಸಮಾಧಾನ ಮಾಡಿ ಇರಿಸ ಬೇಕಾದ್ದಕ್ಕೆ ನಿಶ್ಚಯ ಮಾಡಿದ ದಾರಿ ಟೀಪುಸುಲ್ತಾನ ಉಪೇಕ್ಷೆ ಮಾಡುವದಕ್ಕೆ ಉಂಟಾದ ಆಗ್ರಹಾ ತೋರಿಸಿ ಕೊಟ್ಟನು. ೧೭೯೯ ನೆ ಜನವರಿ ತಿಂಗಳು, ೯ ನೆ ತಾರೀಕು, ಗವರ್ನರ್ ಜನರಾಲ್ ಸಾಹೇಬರವರು ಚೆಂನಪಟ್ಟಣಕ್ಕೆ ಬಂದು ಶೇರಿದ ಮೇಲೆ, ಈ ಪ್ರಕಾರ ಟೀಪುಸುಲ್ತಾನನು ನಿಧಾನ ಕೇಡು ಮಾಡುವಂಥಾದ್ದಂನೂ, ಅವನ ನಡತೆ ನುಡುತೆಯಂನೂ, ಅವನು ಮಾಡುವ ಗುಣದೋಷಗಳಂನೂ ವಿಚಾರಿಸದೆ, ಟೀಪುಸುಲ್ತಾನರ ಬಳಿಗೆ ವಂದು ವಕೀಲಗೆ ಕಳುಹಿಸ ಬೇಕು, ಯಂಬ ಆಗ್ರಹಾ ನಿಷ್ಕರ್ಷೆಯಿಂದ, ಮತ್ತು ವಂದು ಸಹಿ ಬರದು ಕಳುಹಿಸಿ ಇತ್ತು. [b]ಈ ಕಾಗದ ಟೀಪುಸುಲ್ತಾನರ ಬಳಿಗೆ ಶೇರಿದರೆ, ದರ ಜವಾಬು ವಂದು ದಿವಸದ ವಳಗಾಗಿ ಬರದು ಕಳುಹಿಸ ಬೇಕು, ಯಂಬದು ಅಗತ್ಯವಾಗಿ ಅಪೇಕ್ಷಿಸಿ ಕೊಂಡೆವು. ಆ ಪ್ರಕಾರ ದರ ಜವಾಬು ಬರೆಯುವಂಥಾದ್ದು ಟೀಪುಸುಲ್ತಾನನ ಅವಕಾಶಗಳಿಗೂ ಸ್ಥಾನ ಮಾನಕ್ಕೂ ದುಷ್ಟು ಕಾಡುವದಕ್ಕೆ ಉಂಟಾದ ಸಂಗತಿಗಳು ಅಲ್ಲದೆ, ಹೋನಸ್ತಾಗಿಯೂ ವೈಷಮ್ಯಗಾಗಿಯೂ ಅಲ್ಲದೆ ಇರುವ ಸಂಗತಿಯಿಂದ ಆಲೋಚನೆ ಮಾಡಿ ಇದ್ಧೀರಿ. ಜವಾಬು ಬರೆಯುವದಕ್ಕೆ ವಂದು ದಿನಕ್ಕೆ ಅಧಿಕ ಬೇಕಾಗಿ ಬರುವದು ಇಲ್ಲವಷ್ಟೆ. ಜನವರಿ ತಿಂಗಳು, ೯ ನೆ ತಾರೀಕು, ಟೀಪುಸುಲ್ತಾನನಿಗೆ ಗವರ್ನರ್ ಜನರಾಲ್ ಸಾಹೇಬರವರು ಬರದು ಕಳುಹಿದ ಕಾಗದದಲ್ಲಿ ಸಮಾಧಾನವಾಗಿ ಆಲೋಚನೆ ಮಾಡತಕ್ಕ ಬಗೆಗಳು ವಂದು ಜವಾಬು ಬರುವದಕ್ಕೆ ಗವರ್ನರ್ ಜನರಾಲ್ ಸಾಹೇಬರವರು ಬಹಳ ಸುಂಮನೆ ಇದ್ದರು. ಆ ಕಾಗದ ಟೀಪುಸುಲ್ತಾನನ ಬಳಿಗೆ ಜನವರಿ ತಿಂಗಳು, ೧೫ ನೆ ತಾರೀಕು, ಶೇರಿ ಇದ್ದೀತು. ಆ ಕಾಗದದಲ್ಲಿ ತೋರಿ ಕಾರ್ಯಗಳಿಗೆ ತಾಮಸವಾದರೆ, ಕೂಟಾಗುವಂಥಾ ಫಲ ಅನುಭವಿಸ್ಯೆನು ಯಂಬದಾಗಿ, ಟೀಪುಸುಲ್ತಾನಗೆ ಹೇಳಿ ಬಿಟ್ಟು ಆದರೂ, ಟೀಪುಸುಲ್ತಾನ ದರ ಜವಾಬು ವಂದು ಬರದು ಕಳುಹಿಸದೆ ಇದ್ದನು. ಅದರ ಮಧ್ಯ ಯುದ್ಧದ ಪ್ರಾರಂಭಕ್ಕು ಆಗಿ ಇರುವ ಸಮಯ ಜಲ್ದು ಆಗುವದರಿಂದಾ, ಬಂಧುಗಳ ಸೌಖ್ಯಕ್ಕೆ ಈ ಚಲನ ವಂದು ತಾಮಸವಿಲ್ಲದೆ ಆಗು ಮಾಡಿಸ ಬೇಕಾಗಿ ಇದೆ. ಈ ಪ್ರಕಾರ ಇರುವಲ್ಲಿ, ಜನವರಿ ತಿಂಗಳು, ೯ ನೆ ತಾರೀಕು, ಗವರ್ನರ್ ಜನರಾಲ್ ಸಾಹೇಬರವರು ಬರದು ಕಳುಹಿಸಿದ ಕಾಗದಕ್ಕೆ ಶ್ರೀರಂಗಪಟ್ಟಣದಿಂದ ದರ ಜವಾಬು ಬರದು ಕಳುಹಿಸುವ ಸಮಯ ಮೀರಿ ಹೋಗಿ, ಮತ್ತೆ ಯಂಟು ದಿವಸದ ಮೇಲೆ, ದ್ಯಾನಸ್ತರಾದಂಥವರ ಸೌಖ್ಯಕ್ಕೆ ಟೀ

---

[illegible] ತಿಳಿಸಿದನು. [illegible]

a [illegible]

b [illegible]

ಪುಸುಲ್ತಾನರಾದರೂ ಫರಾಶೀಸರಾದರೂ ವಂದು ನಾಶ ಮಾಡದೆ ಇರುವದಕ್ಕಾಗಿ, ಅದಕ್ಕೆ ಬೇಕಾದ ಅನುಕೂಲಗಳು ಅಡಗಿಸುವ ಬಗ್ಗೆ ವಂದು ಅಲ್ಲದೆ, ಬೇಕಾದ ನಡತೆಗಳು ಕಾಣಿಸ ಬೇಕೆಂಬದಾಗಿ, ಫೆಬ್ರವರಿ ತಿಂಗಳು, ೩ನೆ ತಾರೀಕು, ಗವರ್ನರ್ ಜನರಾಲ್ ಸಾಹೇಬರು ಅವರ ದೋಸ್ತುದಾರರಾದಂಥವರಿಗೆ ತಿಳಿಸಿದರು. ಇದಕ್ಕೆ ಸಲವಾಗಿ ಫೆಬ್ರವರಿ ತಿಂಗಳು, ೩ನೆ ತಾರೀಕು, ಗವರ್ನರ್ ಜನರಾಲ್ ಸಾಹೇಬರವರು ಇಂಗ್ರೇಜ ಫೌಜ ಹೊರಡಿಸ ಬೇಕಾದ್ದಕ್ಕೆ ಹುಕುಂ ಫರಮಾಯಿಸಲು, ಹಿಂದುಸ್ಥಾನ ಶೀಮೆಯಲ್ಲಿ ಇಂಗ್ರೇಜ ಅರಸಿನವರ ಫೌಜುಗಳ ಸೇನಾಪತಿಗೆ: "ಟೀಪುಸುಲ್ತಾನನು ಸಮಸ್ಥವಾಗಿ ಇರುವಂಥಾ ದೋಸ್ತಿ ಮಾಡಿ ಕೊಳ್ಳ ಬೇಕು ಯಂತಾ ಕಾಣಿಸಿದ್ದಕ್ಕೆ ಒಪ್ಪುವದಿಲ್ಲಾ ಯಂಬದಾಗಿ, ಇರುವ ಆಲೋಚನೆ ಮಾಡ ಬೇಕಾಗಿ ಇದೆ" ಯಂಬದಾಗಿ, ತಿಳಿಸಿ ಇದ್ದೇವೆ. [a]ಆ ಮೇಲೆ ಫೆಬ್ರವರಿ ತಿಂಗಳು, ೧೩ನೆ ತಾರೀಕು, ಟೀಪುಸುಲ್ತಾನರ ಕಡೆಯಿಂದ ವಂದು ಕಾಗದ ಗವರ್ನರ್ ಜನರಾಲ್ ಸಾಹೇಬರವರಿಗೆ ಬಂದು ತಲಪಿತು. ಅದರಲ್ಲಿ ಟೀಪುಸುಲ್ತಾನರು ಗವರ್ನರ್ ಜನರಾಲ್ ಸಾಹೇಬರವರಿಗೆ ತಿಳಿಸಿ ಇರುವದು: "ನಮಗೆ ಶಿಕಾರಿ ಬೇಟೆ ಹೋಗುವದಕ್ಕಾಗಿ ಮನಸ್ಸಾಗಿ ಇದೆ. ಆದ್ದರಿಂದಾ ಈಗ ಶಿಕಾರಿಗೆ ಹೋಗುತ್ತೇವೆ ಯಂಬದಾಗಿಯೂ, ಮೇಜರ್ ಡವಟಿಂನ್[1] ಸಾಹೇಬರವರಂನ, ಮತ್ತಯಾರೂ ಕೂಡದೆ, ನಂಮ ಬಳಿಗೆ ಕಳುಹಿಸಲಿ ಯಂಬದಾಗಿಯೂ ಆಗುತ್ತಾ ಇದೆ."

[b]ಈ ಕಾಗದ ಬಂದದರಲ್ಲಿ, ಈ ಇರುವ ಅಭಿಪ್ರಾಯ ಇಂಥಾ ಪ್ರಕಾರ ಯಂಬದಾಗಿ, ದೋಸ್ತಾರರಾದಂಥಾವರು ವಿಚಾರಿಸದೆ ಇದ್ದರಷ್ಟೆ. ಮೇಲಾಗಿ, ಸುಲ್ತಾನರ ಜವಾಬು ಬರುವದಕ್ಕೆ ಇಷ್ಟು ತಾಮಸವಾದದ್ದು ದೋಸ್ತಾರರಾದಂಥವರು ಫೌಜುಗಳ ಕೂಡಿಸಿ ಕೊಂಡು, ಪ್ರಯತ್ನ ಮಾಡಿದರೆ, ಆಗುವಂಥಾ ಅನುಕೂಲವದ ಗುಣ ಫಲವು ತಾಮಸದಿಂದ ಬಾರದೆ ಇರಿಸುವದಕ್ಕಾಗಿ ತಾಮಸ ಬೇಕು ಯಂಬದಾಗಿ ಅಲ್ಲದೆ, ಮತ್ತೊಂದು ಬೇಕಾಗಿ ಅಲ್ಲವಷ್ಟೆ ಯಂಬದಾಗಿ, ಹಿಂದುಸ್ಥಾನಿ ರಾಜ್ಯದಲ್ಲಿ ಯಲ್ಲರಿಗೂ ತಿಳಿಯಲಾರದೇ ಇಷ್ಟೆ. ಶ್ರೀರಂಗಪಟ್ಟಣದ ಕರಾರುನಾಮೆ ಟೀಪುಸುಲ್ತಾನನು ಉಪೇಕ್ಷೆ ಮಾಡಿದ್ದಂನೂ, ಬಹುಮಾನವಾದ ಕುಂಪನಿ ಸಂಗಡ ಯುದ್ಧಾ ಮಾಡುವದಕ್ಕಾಗಿ ಫರಾಶೀಸರು ಸಹಾ ಕೂಡಿ ಇದ್ದು ಕರಾರು ಮಾಡಿದ್ದಂನೂ ಸ್ಪಷ್ಟ ತಿಳಿದದ್ದರಿಂದಾ, ಈ ಅನುಕೂಲದಿಂದ ತಾನೆ ಟೀಪುಸುಲ್ತಾನನ ಸಂಗಡ ವಂದು ಕರಾರು ನಾಮೂ ಮಾಡಿ ಇರಿಸುವಂಥಾ ನಡತೆ ಶಿಕ್ಷೆ ಯಂಬದಾಗಿ ವಿಶ್ವಾಸ ಮಾಡುವದೇ ಸರಿ. [c]ಟೀಪುಸುಲ್ತಾನನು ಆಲೋಚನೆ ಮಾಡಿ ತಾಮಸ ಮಾಡಿದರಿಂದ ವಂದು ಅನುಕೂಲ ಶಿಕ್ಕುವದಾದರೂ, ದೋಸ್ತಾರರಾದಂಥವರಿಗೆ ಬೇಕಾಗಿ ಇಟ್ಟದ್ದು ಬರ ಮಾಡಿಸುವದಕ್ಕಾಗಿ ಯೋಚನೆ ಮಾಡಿದ ಪ್ರಕಾರ, ಅವರ ಫೌಜ ಸಮುದ್ರದ ದಾರಿಗಾಗಿಯೂ, ಘಾಟಿ ದಾರಿಗಾಗಿಯೂ ನಡೆಯುವಂಥಾದ್ದಕ್ಕೆ ಅಟಕಾವು ಮಾಡುವದಕ್ಕಾದರೂ ಸನ್ಮತಿಸುವದು ಇಲ್ಲವಷ್ಟೆ. [d]ಟೀಪುಸುಲ್ತಾನನು ಪ್ರಸಿದ್ಧವಾಗಿರುವ ವಿಶ್ವಾಸದ ಆಕ್ಷೇಪಣೆಯ ಮೂಲಕವಾಗಿ

---

[illegible]

[a] [illegible]

[b] [illegible]

[c] [illegible]

[d] [illegible]

---

1 Major Doveton.

ದ್ಯಾನ್ತಾರರಿಂದಾ ಬಂಧಿಸಿ ಇರುವ ಸಮಯದಲ್ಲಿಯೂ, ದ್ಯಾನ್ತಾರರಾದಂಥವರಿಗೆ ಸನ್ನೈಹಿತವಾಗಿ ಇರುವದಕ್ಕಾಗಿ ಆ ಗರಹಾವಿದೆ ಯಂಬದಾಗಿ ಹೇಳುವ ಸಮಯದಲ್ಲಿಯೂ, ಕರಾರು ನಾಮದಿಂದಾ ತನಗೆ ಜಾಗರತೆ ಮಾಡಿ ಇರುವ ಶೀಮೆಗಳಲ್ಲಿ, ಅವಕಾಶಗಳಲ್ಲಿ, ಯಾರೂ ಶಕ್ಕಿ ಮಾಡದೆ ಇರುವ ಸಮಯದಲ್ಲಿಯೂ, ಟೀಪುಸುಲ್ತಾನನು, ಆ ಹೇತು ಆಗಿ ಸಮಾಧಾನವಾಗಿಯೂ ಸತ್ಯವಾಗಿಯೂ ದ್ಯಾನ್ತಿಯಿಂದಾ ಇದ್ದದ್ದಕ್ಕೆ ಉಪೇಕ್ಷೆ ಮಾಡಿ, ದ್ಯಾನ್ತಾರರಾದಂಥವರ ಅವಕಾಶಗಳು ಸಂಕ್ಷೋಭವು ಮಾನವು ರಕ್ಷಂಗೆಯು ಮಾಡುವದಕ್ಕೆ ಜ್ಯೋರಾವರಿ ನಡಸಿದರು. [a]ಮನ್ನಾರಾಜ್ಯವಾಗಿ ಇರುವದಕ್ಕೆ ಪ್ರತ್ಯುಪಕಾರ ಮಾಡುವದಕ್ಕಾಗಿಯೂ, ಹುಂಮಕು ಫರಾಶೀಸರ ಸಂಗಡ ಕೈಳಿ, ಆಗಾಗ್ಯೆ ಪಹುಂಚಾಯಿಸ್ಯಾರು ಯಂಬದಾಗಿ ಯೋಚಿಸಿ ಇರುವ ಸಮಯದಲ್ಲಿ, ದ್ಯಾನ್ತಾರರಾದಂಥವರು ಹೇಳಿದ ಸಮಾಧಾನಕ್ಕೆ ಸನ್ಮತಿಸದೆ, ಮೂರು ತಿಂಗಳ ಪರಿಗೂ ಉಪೇಕ್ಷೆ ಮಾಡಿ ಇದ್ದರು. ಜಯವಾಗಲಿ ಪ್ರತ್ಯುಪಕಾರವಾಗಲಿ ಯಂಬ ಅಪೇಕ್ಷೆ ಅನುಭವಿಸಲಿಕ್ಕೆ ಇಲ್ಲಾ ಯಂಬದಾಗಿ ನ್ಯಾಯಿ, ಈಗ ದಗಾ ಮಾಡ್ಯಾನು, ಕಾಮನಕ್ಕೆ ಉಂಟಾದ ದಾನ್ಯಾಡುತಲಾ ಇದ್ಧಾನೆ. ಈ ಪ್ರಕಾರವಾಗಿ ಇರುವ ಕಾಲವೂ ಅಭಿಪ್ರಾಯವೂ ಅಲ್ಲದೆ, ಫರಾಶೀಸರ ಫೌಜು ಕರಸಿದ್ದರಿಂದಾ ಹಿಂದೂ ರಾಜ್ಯದ ಸಮಾಧಾನವಲ್ಲದೆ ಲಡಾಯಿ ಮಾಡ ಬೇಕೆಂಬ ಭಾವನೆಯಿಂದ ಆದಷ್ಟು ವಿಚಾರಿಸಿ, ಮುಂಚೆ ಒಂದು ವಕೀಲನ ಅವನ ಬಳಿಗೆ ಕಳುಹಿಸುವದಕ್ಕೆ ಸನ್ಮತಿಸದೆ ಇದ್ದು, ಈಗ ನಿರಸವಾಗಿ ಕೈದಾಗಿ ಸನ್ಮತಿಸಿದ್ದರಿಂದ, ಬಂಧುಗಳು ಜಾಗರತೆ ಆಗಿ ಇರುವ ದಾರಿಯಲ್ಲಿ ವಿರೋಧ ಮಾಡುವದಕ್ಕೆ, ಚಂನಾಗಿ ಬರುವಂಥಾ ನಡತೆಗೆ ತಾಮಸಾ ಮಾಡುವ ಪ್ರಯತ್ನಗಳ ಮಾಡುತಲಾ ಇದ್ಧಾನೆ [b]ಟೀಪುಸುಲ್ತಾನ ಇಲ್ಲಿ ಯುದ್ಧಾ ಮಾಡುವದಕ್ಕೂ ಅಲ್ಲಿ ಮಾಡುವದಕ್ಕೂ ಅವನು ದಗಾ ಮಾಡುಹದಂನೂ ತಾಮಸಾ ಮಾಡುವದಂನೂ ಅಫಲವಾಗಿ ಮಾಡಿಸ ಬೇಕು ಯಂದು, ದ್ಯಾನ್ತಾರರಾದಂಥವರು ತಯಾರು ಮಾಡುತಲಾ ಇದ್ಧಾರೆ. [c]ಆದ್ದರಿಂದ ಟೀಪುಸುಲ್ತಾನನು ದಗಾ ಮಾಡುವಂಥಾದ್ದು ವಿರೋಧ ಮಾಡುವದಕ್ಕಾಗಿಯೂ, ಅವರ ಅವಕಾಶಗಳು ಕೆಲವು ದಿವಸದಿಂದಾ ಅದಲು ಬದಲಾಗಿ ಇರುವದು ಮುಂದೆ ಬಾರದಂತೆಯೂ, ಅದಕ್ಕೆ ಬೇಕಾದ ಪ್ರಕಾರ ಅವರ ಫೌಜುಗಳ ನಿಲ್ಲಿಸುವದಕ್ಕಾಗಿಯೂ ಅವರು ಆಲೋಚನೆ ಮಾಡಿ ನಿಲ್ಲಿಸಿ ಇದ್ಧಾರೆ. ಈ ಪ್ರಕಾರ ಆಲೋಚನೆ ಮಾಡಿ ನಿಲ್ಲಿಸಿ ಇದ್ದಾಗ್ಯೆಯೂ, ಬಂಧುಗಳಾದಂಥವರು ಟೀಪುಸುಲ್ತಾನನ ಸಂಗಡ ಒಂದು ಪೇಳೆ ತಕರಾರು ಉಂಟು ಮಾಡುವದಕ್ಕಾಗಿ ಆಗ್ರಹಿಸಿ ಇರುವದರಿಂದಾ, ಇಂಗ್ರೇಜ ಅರಸಿನವರ ದಂಡಿಗೂ, ಬಹುಮಾನವಾದ ಇಂಗ್ರೇಜಿ ಕುಂಪನಿಯವರ ದಂಡಿಗೂ ಚೋಳಮಂಡಲ ರಾಜ್ಯದಲ್ಲಿಯೂ ಮಲೆಯಾಳದ ರಾಜ್ಯದಲ್ಲಿಯೂ ಪ್ರಧಾನರಾಗಿ ಇರುವ ಲುತ್ತೆನತ್ತ ಜನರಾಲ್ ಹಾರಿಸ್[1] ಸಾಹೇಬರವರ ಬಳಿಗೆ ಟೀಪುಸುಲ್ತಾನ ವಕೀಲರಂನು ಹುಕುಂ ಮಾಡಿ ಕಳುಹಿದರೆ, ಅವರು ಮುರಿದ ಸಮಾಧಾನ ಸ್ಥಿರವಾಗಿ ಇರುವಂಥಾದ್ದು ಮಾಡ ತಕ್ಕ ಬಗ್ಯೆ ಬೇಕಾಗಿ, ತಾತ್ಪರ್ಯವಾಗಿ ಆಲೋಚನೆ ಮಾಡಿದರೆ, ಬಂಧುಗಳಿಗೆ ಅವಶ್ಯವೆಂದು ಕಾಣಿಸುವ ಪ್ರಕಾರದ ಮೇರೆಗೆ ಒಂದು ಕರಾರುನಾಮೆ ಉಂಟು ಮಾಡಿ ಇರಿಸುವರು. ೧೭೯೯ ನೆ ಪೆಬ್ರವರಿ ತಾರೀಕು ೨೨ ಲು ಬರದ್ದು; ೯೭೪ ನೆ ಕುಂಭಮಾಸ ೧೪ ನೆ ಕೈದಿ.

---

[illegible]

[a] [illegible]

[b] [illegible]

[c] [illegible]

---

1 Lieutenant General Harris.

[1]ಬಹುಮಾನವಾದ ಗವರ್ನರ್ ಜನರಾಲ್ ಲಾರ್ಡ್ ಮಾರನಿಂಗ್ಟಂನ್ ಸಾಹೇಬರವರು ಜನವರಿ ತಿಂಗಳು, ೯ ನೆ ತಾರೀಖು, ಧನುಮಾಸ ೨೯ ನೆ ಶೇದಿಯಲ್ಲು, ಟೀಪುಸುಲ್ತಾನರಿಗೆ ಬರದು ಕಳುಹಿಂದ ಕಾಗದದ ನಕಲು;—ಡಿಸಂಬರ ತಿಂಗಳು, ೧೦ ನೆ ತಾರೀಖು, ನಾವು ನಿಮಗೆ ಬರೆಸಿ ಕಳುಹಿದ ಕಾಗದದಲ್ಲಿ ಬರದು ಇರುವ ಪ್ರಕಾರ, ಈ ತಿಂಗಳು ೨೫ ತಾರೀಖು, ಕಲಕತ್ತಿನಿಂದ ಪಯಣವಾಗಿ ಜಹಾಜ ಹತ್ತಿ, ೩೧ ತಾರೀಖು ಚಿಂನ ಪಟ್ಟಣಕ್ಕೆ ಬಂದು ಶೇರಿದೆವು. ಕಲಕತ್ತಿನಿಂದ ಹೊರಡುವದಕ್ಕೆ ಮುಂಚೆ ತಂಮ ಕಾಗದ ಜಮಾದಿಸ್ಸಾನಿ ತಿಂಗಳು ೧೧ ನೆ ತಾರೀಖು, ವೃಶ್ಚಿಕ ತಿಂಗಳು ೭ ನೆ ಶೇದಿ, ಬರದದ್ದು ಬಂದು ತಲಪಿತು. ಬಹುಮಾನವಾದ ಇಂಗ್ರೇಜ ಕುಂಫನಿಯು ಅವರ ಬಂಧುಗಳ ಶೀಮೆಗಳಲ್ಲಿ, ಹೋದ ಜೂಲಾಯಿ ತಿಂಗಳು ಲಾಗಾಯತು ಯುದ್ಧಕ್ಕೆ ತಯಾರು ಮಾಡುವದಕ್ಕಾಗಿ ಯಲ್ಲಾ ದಿಕ್ಕುಗಳಲ್ಲಿಯೂ ತಯಾರು ಮಾಡುವದು ಯಾ ತರಿಂದಾ ಯಂದು, ಹೋದ ನವಂಬರ ತಿಂಗಳು, ೮ ತಾರೀಖು, ನಾವು ತಮಗೆ ಬರದು ಕಳುಹಿದರಿಂದ ತಿಳಿಸಿ ಇದ್ದೇವ ಷ್ಟೆ. ಚಿಂನ ಪಟ್ಟಣದಲ್ಲಿ ನಾವು ಶೇರಿದ ಕೂಡಲೇ, ರಜಬು ತಿಂಗಳು ೯ ತಾರೀಖು, ಧನು ೫ ನೆ ಶೇದಿ, ತಾವು ಬರೆಸಿ ಕಳುಹಿದ ಕಾಗದ ಬಂದು ತಲಪಿತು. ಈ ಕಾಗದ ನವಂಬರ ತಿಂಗಳು, ೪ ನೆ ತಾರೀಖು, ೮ ನೆ ತಾರೀಖು ಸಹಾ, ನಾವು ತಮಗೆ ಬರದು ಕಳುಹಿದ ಕಾಗದದ ಜವಾಬು ಆಗುತ್ತಾ ಇದೆ. ಅದರಲ್ಲಿ ಬಹುಮಾನವಾದ ಇಂಗ್ರೇಜಿ ಸಂಸ್ಥಾನವು, ಬಹುಮಾನವಾದ ಕುಂಪನಿ, ಯಥಾರ್ಥ ನ್ಯಾಯವಾಗಿ ಇರುವಂಥಾದ್ದಂನೂ ಸಖ್ಯವಾಗಿ ಇರುವಂಥಾದ್ದಂನೂ, ಈ ಮೇಲೆ ಅಬದ್ಧ ಬಾರದಂತೆ, ಪರಸ್ಪರಗಳಿಗೆ ಸಖ್ಯ ಕಾಡ ಬೇಕೆಂಬದಾಗಿಯೂ ಆಗ್ರಹಾವಿದೆ ಯಂಬದಾ ಗಿಯೂ ತಾವು ಬರೆಸಿ ಕಳುಹಿಸಿ ಇರುವದರಿಂದಾ ನಮಗೆ ಬಹು ಸಂತೋಷವಾಯಿತು. ತಂಮ ಬುದ್ಧಿಯು ಪ್ರಕಾರ ಇರುವ ಹಟ್ಟ ಅರಸು ಈ ಪ್ರಕಾರವಾಗಿ ಇರುವಂಥಾ ಆಲೋಚನೆಗಳು ಅದರ ಗುಣದೋಷಗಳು ಬೇಕಾದ ಹಾಗೆ ವಿಚಾರಣೆ ಮಾಡದೆ, ಹೇಳುವದಿಲ್ಲಾ ಯಂಬದಾಗಿ, ನಮಗೆ ನಿಶ್ಚಯ ಉಂಟಾಗಿ ಇರುವದರಿಂದ, ಈ ಪ್ರಕಾರ ಈ ಸಮಯದಲ್ಲಿ ನಮಗೆ ಬರದು ಬಂದದರಿಂದ, ನಮಗೆ ಅಗತ್ಯವಾಗಿ ಇರುವ ಸಂತೋಷ ಉಂಟಾಯಿತು. ಆದ್ದ ರಿಂದ ಇಂಗ್ರೇಜ ಸಂಸ್ಥಾನವೂ ಕುಂಪನಿಯೂ ಈಗ ನಡೆಯಿಸುವ ಕಾರ್ಯ ನ್ಯಾಯವಾಗಿ ಇರುವಂಥಾದ್ದಂನು ತಾವು ವಿಶ್ವಾಸ ಮಾಡಿದ್ದೇ ಸರಿ ಯಂಬದಾಗಿಯೂ, ಇಂಗ್ರೇಜ ಸಂಸ್ಥಾನಕ್ಕೆ ತಾವು ಒಂದು ಅಂನ್ಯಾಯ ತಿಳಿಸುವದ ಕ್ಕಿಲ್ಲಾ ಯಂಬದಾಗಿಯೂ, ಹಾಪಿ ಇರುವದು ಒಂದು ಸಾಕ್ಷಿ ಪ್ರಕಾರ ಆಗಿ ಇರುವದರಿಂದ, ತಂಮ ಆಲೋಚ ನೆಗಳು ಬರದು ಬಂದದ್ದು ನಾವು ಬಹಳ ಖುಷಿಯಿಂದ ಹಾಪಿ ಇದ್ದೇವೆ. ನವಂಬರ ತಿಂಗಳು ೮ ಶೇದಿ ನಾವು ತಮಗೆ ಬರದು ಕಳುಹಿದ ಕಾಗದದಲ್ಲಿ, ತಾವು ಫರಾಶೀಸರ ಕೂಡೆ ಸಖ್ಯವಾಗಿ ಇರುವ ಸಂಗತಿಗೆ ನಾವು ವಿಚಾರಣೆ ಮಾಡಿದ್ದರಲ್ಲಿ ನಮಗೆ ಸಂಕಟ ಉಂಟಾಗಿದೆಂದು ಬರದ್ದಕ್ಕೆ ದರ ಜವಾಬು ತಾವು ಬರೆಸಿ ಕಳುಹಿಸಿದ್ದರಲ್ಲಿ, "ಸಮುದ್ರದ ದಾರಿಗಾಗಿಯೂ ಗಟ್ಟದ ದಾರಿಗಾಗಿಯೂ ಅಲ್ಲಿಗೂ ಇಲ್ಲಿಗೂ ವ್ಯಾಪಾರ ನಡಸುವದರಲ್ಲಿ ಸರ ಕಾರಿ ಒಂದು ಜಹಾಜ ಇದೆ ಯಂಬದಾಗಿಯೂ, ಅವರ ಬಗೆ ಆಳು ಯರಡು ಕಂಬ ಉಳ್ಳಂಥಾ ಜಹಾಜಿನಲ್ಲಿ ಅಕ್ಕಿ ತುಂಬಿಸಿ, ವ್ಯಾಪಾರಕ್ಕೆ ಹೊರಟು ಹೋದರು ಯಂಬದಾಗಿಯೂ, ಆ ಜಹಾಜ ಮಾರಿಶಸು[2] ಯಂಬ ಒಂದು ಫರಾ ಶೀಸರ ದ್ವೀಪಾಂತರದಲ್ಲಿ ಹೋಯಿತು ಯಂಬದಾಗಿಯೂ, ಅಲ್ಲಿಂದ ಬರುವಾಗ್ಯೆ, ಫರಾಶೀಸರಂನೂ, ಕೆಲು ಕರಿ ಆಳುಗಳಂನೂ ಸಹಾ, ನಾಲ್ವತ್ತು ಆಳಿನಲ್ಲಿ ಹತ್ತು ಹಂನೆರಡು ಆಕ್ಕಸಾಲೆ ಬಡಾಯಿ ಹಗುರೆಯವರು, ಮೇಲಾ ದವರು ಚಾಕರರು ಸಹಾ, ಜಹಾಜಿನ ಮಜೂರಿ ಕಾಟ್ಟು, ತಂಮ ಶೀಮೆಗೆ ಕಾಮಗಾರಿ ಕೆಲಸಾ ಮಾಡುವ ಬಗ್ಯೆ ಬಂದು ಇದ್ಧಾರೆ ಯಂಬದಾಗಿಯೂ, ಚಾಕರಿ ಮಾಡುವದಕ್ಕೆ ಮನಸು ಇದ್ದವರಿಗೆ ಚಾಕರಿ ಕಾಟ್ಟು ಇದ್ಧೀರಿ ಯಂಬದಾ ಗಿಯೂ, ಬಾಕಿ ಮನುಷ್ಯರು ಸರಕಾರದಿಂದಾ ಹೋದರು ಯಂಬದಾಗಿಯೂ, ಫರಾಶೀಸರು ಪಂದ್ರೋಹಾ ಮಾಡುವಂ ಥವರು ದುಷ್ಟಚಿನ ಮಾಡುವಂಥವರು, ಆದ್ದರಿಂದ, ಯರಡು ಸರಕಾರವು ತಂಮ ತಂಮಲ್ಲಿ ಮನಸಿನಲ್ಲಿ ಒಂದು ಜಗಳಕ್ಕೆ ಆಕರ ಮಾಡುವದಕ್ಕೆ ಫರಾಶೀಸರು ಈ ಬಗೆಯಿಂದ ಒಂದು ವರ್ತಮಾನ ಪ್ರಸಿದ್ಧವಾಗಿ ತಿಳಿಯುವ ಹಾಗೆ ಮಾಡಿದರು" ಯಂದು ಬರೆಯಲಾಯಿತು.

ತಾವು ನಮಗೆ ಬರೆಸಿ ಕಳುಹಿಸುವದಕ್ಕೆ ಮೊದಲು, ಈ ವರ್ತಮಾನವು ವಿಚಾರದಿಂದ ನಮಗೆ ತಿಳಿಯದೆ ಹೋಯಿತು.

---

1 This letter, like the preceding proclamation, seems to be a translation of a Malayalim translation of the original, conf. for instance: ತಾನೆ where in Canarese ಎ would be affixed (ಅವನು ತಾನೆ for ಅವನೇ, ಅದರಿಂದ ತಾನೆ for ಅದರಿಂದಲೇ &c.), ದೋಷದೋಷ for ಕುಮಾರು &c. 2 Mauritius.

ಈ ಫರಾಶೀಸರು, ತಾವು ಸಹಾ, ಒಂದು ದೋಸ್ತಿ ಆದ್ದರಿಂದ, ನಂಮ ಸಂಕಟಗಳ ತಮಗೆ ಬರೆಸಿ ಕಳುಹಿದ್ದು ಈ ಕಾರ್ಯಕ್ಕೆ ಯೇನೂ ಅಲ್ಲಾ. ಉಂಟಾದ ಕಾರ್ಯಗಳೆಂನು ನಾವು ತಮಗೆ ಬರೆಸಿ ಕಳುಹಿದ್ದು ತಾವು ನಮಗೆ ಬರೆಸಿ ಕಳುಹಿದ್ದು, ಒಂದಕ್ಕೆ ಒಂದು ಶೇರದೆ ಅಜಗಜಾಂತರವಾಗಿ ಇದೆ. ನಾವು ತಮಗೆ ತಿಳಿಸಿ ಇರುವಂಥಾ ಉಂಟಾದ ಲೇವಾದೇವಿಗಳು ಯಾವತ್ತು, ತಾವು ಬಹುಮಾನವಾದ ಇಂಗ್ರೇಜ ಕುಂಪನಿಗೂ ಅವರ ದೋಸ್ತರಿಗೂ ಸಹಾ ಈ ವರಿಗೆ ಮಾಡತಕ್ಕ ಪ್ರಕಾರ ಅಲ್ಲದ ಒಂದು ಬಂಧುತ್ವ ತಮಗೂ ಫರಾಶೀಸರಿಗೂ ಇದೆ ಯಂಬದಾಗಿ, ಒಂದೂ ಸಂಶಯವಿಲ್ಲದೆ ತಿಳಿಯ ತಕ್ಕ ಬಗ್ಯೆ ಬೇಕಾದ ಸಾಕ್ಷಿ ಇಲ್ಲದೆ ಇದ್ದರೆ, ನಾವಾದರೂ ನಂಮ ಸ್ನೇಹಿತರಾದರೂ ಜಾಗ್ರತೆ ಮಾಡುವದಕ್ಕೂ ಉಪೇಕ್ಷೆ ಮಾಡುವದಕ್ಕೂ ಸಂನಾಹಕ್ಕೆ ಬೇಕಾದ್ದು ತಯಾರು ಮಾಡುವದಕ್ಕೆ ಭಾವಿಸಿ ಇರುವದರಿಂದಾ, ತಂಮ ಆಲೋಚನೆಗಳು ತರಿಸಿ ಕೊಂಡ ಭಾವನೆ ಮಾಡಿದ್ದು ತಯಾರು ಮಾಡುತ್ತಿದ್ದಿಲ್ಲವಷ್ಟೆ. ನವಂಬರ ತಿಂಗಳು, ೮ ನೆ ತಾರೀಖು, ತಮಗೆ ಬರೆಸಿ ಕಳುಹಿಸಿ ಇರುವದರಲ್ಲಿ ನಮಗೆ ತಿಳಿದು ಇರುವ ಆಲೋಚನೆಗಳು ಅದರಲ್ಲಿ ಬರದು ಇರುವದಕ್ಕಿಂತಾ ವಿವರವಾಗಿ ತಮಗೆ ಬರೆಸಿ ಕಳುಹಿಸಿ ಇದ್ದೀತು. ಬಹುಮಾನವಾದ ಇಂಗ್ರೇಜ ಕುಂಪನಿಯು ಅವರ ಬಂಧುಗಳು, ಅವರ ದೋಸ್ತಿಗೆ ಬಹಳ ತತ್ರುತ್ವವಾಗಿ ಇರುವ ಹಾನಿ ಉಂಟು ಮಾಡುವದಕ್ಕೆ, ಹಿಂದು ರಾಜ್ಯದಲ್ಲಿ ಹಲವು ಬಗೆ ಬಲಾಢ್ಯರ ಸಂಗಡ ದೋಸ್ತಿ ಆಗಿ ತಾವು ಪ್ರಯತ್ನ ಮಾಡಿದ್ದು, ಕೆಲವು ದಿವಸ ಆಗುವದಕ್ಕೆ ಮುಂಚೆ ನಮಗೆ ತಿಳಿಯಲಾಯಿತು. ಆದರೂ ಆ ಪ್ರಕಾರವಾಗಿ ಇರುವ ಹಾನಿ ಉಂಟು. ಇರುವದಕ್ಕೆ ಬೇಕಾದ್ದು ಯುದ್ಧಕ್ಕೆ ಬೇಕಾದ್ದು ಪ್ರಯತ್ನ ಮಾಡುವಂಥಾದ್ದು ಕಾಣ ಬಂದರೂ, ತಂಮ ದೋಸ್ತಿಯಿಂದ ತಿಳಿದು ಬಂದರೂ, ನ್ಯಾಯರೀತಿಯಿಂದಾ ಇದ್ದು, ರಕ್ಷಣೆಯ ಮಾಡಿ ಕೊಳ್ಳುವ ಬಗ್ಯೆ ಉಂಟಾದ ಆಲೋಚನೆಯಿಂದಲೂ, ತಂಮ ಮಾತು ಬರದು ಕಳುಹಿಸಿ ಇರುವ ಪ್ರಕಾರ ಅಲ್ಲದೆ ಇರುವದರಿಂದಲೂ, ತಂಮ ದೋಸ್ತಿಗೆ ಇರುವ ಗುಣಗಳಿಗೆ ಅಲ್ಲದೆ ಇರುವದರಿಂದಲೂ, ತತ್ರುವಾಗಿ ಇರುವಂಥಾದ್ದು ಉಂಟಾದ್ದು ಉಪೇಕ್ಷೆ ಮಾಡ್ಯೆರಿ ಯಂಬದಂನು ನಾವು ಆಗ್ರಹಿಸಿ ಇದ್ದೆವು. ಮೇಲಾಗಿ, ಬೇನಾಡ ಶೀಮೆ ತಂಮ ಅಧೀನ ಯಂದು, ತಾವು ಫಿರಿಯಾದಿ ಮಾಡಿದ್ದು ನಾವು ವಿಚಾರಣೆ ಮಾಡಿದ್ದರಲ್ಲಿ, ತಂಮ ಅವಕಾಶಕ್ಕೆ ಯಥಾರ್ಥವಾಗಿ ಇರುವ ನ್ಯಾಯಕ್ಕೆ ಕಾಡುವ ಬಗ್ಯೆ, ತಾವು ನಾವು ದೋಸ್ತರಾದ್ದರಿಂದಾ ಬಾಯಿಬಾರಕ್ಕೆ ಸಲವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ಧನೆ ಆಗಿ ಇರ ಬೇಕು, ಯಂಬದಾಗಿ ಇರುವ ಆಗ್ರಹ ನಮಗೆ ಉಂಟೆಂಬದಾಗಿ, ಒಂದೂ ಸಂಶಯವಿಲ್ಲದ ಒಂದುಸಾಕ್ಷಿ ತೋರಿಸಿ ಕೊಟ್ಟು ಇದ್ದ ಸಂಗಡಲೇ ಫರಾಶೀಸರ ದ್ವೀಪದಿಂದ ಉಂಟಾದ ಪ್ರಸಿದ್ಧವಾಗಿ ಇರುವ ಕಾಗದದ ಯಥಾರ್ಥವಾಗಿ ಇರುವ ನಕಲು ನಮಗೆ ಬಂದು ಶೇರಿತು. ಅದರ ನಕಲು ಪಾರ್ಶಿ ಬರಹದಲ್ಲು ಲಿಖಿಸಿ, ಈ ಕಾಗದದ ಸಂಗಡ ಕಳುಹುತ್ತಾ ಇದ್ಧೇವೆ. ಈ ಪ್ರಸಿದ್ಧವಾಗಿ ಇರುವ ಕಾಗದವಲ್ಲದೆ, ತಂಮ ಕಡೆ ವಕೀಲರು ಫರಾಶೀಸರ ದ್ವೀಪದಲ್ಲಿ ನಡಿಸಿ ಇದ್ದದರ ಅಭಿಪ್ರಾಯವು ಯಾವತ್ತೂ ತಾವು ಕೊಟ್ಟು ಇರುವ ಹುಕುಮಿನಲ್ಲಿ ಅವರು ನಡಸಿ ಇರುವಂಥಾದ್ದೂ, ಅವರು ಹಿಂದಕ್ಕೆ ಬಂದಮೇಲೆ ತಂಮ ನಡತೆಗಳ ಅಭಿಪ್ರಾಯವೂ ನಮಗೆ ವಿವರವಾಗಿ ತಿಳಿಯ ಬಂದು ಇದೆ. ನಂಮ ಕಡೆಯಲ್ಲಿರುವ ಸಾಕ್ಷಿಯಿಂದ ಮುಂದೆ ಬರೆಯುವಂಥಾದ್ದು ಉಂಟಾದ್ದು ಯಾವತ್ತೂ ಆಗುತ್ತಾ ಇದೆ. ತಾವು ಯರಡು ವಕೀಲರ ನೇಮಕ ಮಾಡಿ ಕಳುಹಿಸಿ ಇದ್ದು, ಅವರು ಫರಾಶೀಸರ ದ್ವೀಪಕ್ಕೆ ಹೋಗ ಬೇಕೆಂದು, ಮಂಗಲೂರಿಂದ ಜಹಾಜಿನ ಮೇಲೆ ಹತ್ತಿ, ಆ ದಿಕ್ಕಿಗೆ ೧೭೯೮ ನೆ ಜನವರಿ ತಿಂಗಳ ಕಡೇಲಿ ಹೋಗಿ, ತಲಪಿದರು. ತಂಮ ಕಡೆ ವಕೀಲರು ಹತ್ತಿ ಇರುವ ಜಹಾಜ ಫರಾಶೀಸರ ದ್ವೀಪದಲ್ಲಿ ನಾರ್ಥವೆಷ್ಟು[1] ಯಂಬ ತೋರಮುಖದಲ್ಲಿ ಬಂದು ಹೋಗುವಾಗ್ಯೆ, ತಂಮ ನಿಶಾನಿ ಜಹಾಜಿನಲ್ಲಿ ಹಾಕಿ ಇತ್ತು. ವಕೀಲರು ಅಲ್ಲಿ ಇಳಿಯುವಾಗ್ಯೆ, ಸಂತೋಷ ಫಿರಂಗಿ ಹೊಡೆಯಲು, ಮಾನ ಮರಿಯಾದೆಯಿಂದಲೂ ಬಹುಮಾನವಾಗಿಯೂ ಈ ಪ್ರಕಾರವಾಗಿ ಇರುವ ಸಂತೋಷದಿಂದಾ ಯಲ್ಲರಿಗೂ ತಿಳಿಯುವ ಹಾಗೆ ಇಳಿಸಿ, ಫರಾಶೀಸರ ಸಂಸ್ಥಾನದಲ್ಲಿ ಕಬೂಲು ಮಾಡಿ ಕೊಂಡರು. ಈ ಫರಾಶೀಸರ ದ್ವೀಪದಲ್ಲಿ ಇರುವ ಪರಿಯಂತರ ಅವರ ಸರಕಾರದವರು ವೆಚ್ಚ ಸಚ್ಚಕ್ಕೆ ಕೊಟ್ಟು ಇರಿಸಿ ಕೊಂಡು ಇದ್ದರು. ಫರಾಶೀಸರ ದ್ವೀಪದಲ್ಲಿ ತಂಮ ಕಡೆ ವಕೀಲರು ಶೇರುವದಕ್ಕೆ ಮೊದಲು, ಫರಾಶೀಸರ ಕಡೆಯಿಂದ ತಮಗೆ ಒಂದು ಸಹಾಯ ಕೊಟ್ಟೇವು ಯಂಬದಾಗಿ, ಒಂದು ವರ್ತಮಾನ ಕೇಳಲೂ, ಕಾಣಲೂ ಇಲ್ಲಾ.

[1] North-west.

ತಮಗೂ ಕುಂಪನಿಗೂ ವಂದು ಯುದ್ಧದ ಸಂದರ್ಭ ತೋರುವದಕ್ಕಾಗಿಯೂ ಕಾರಣ ತೋರುವದಕ್ಕಾಗಿಯೂ ಇಲ್ಲಾ ಮೇಲಾಗಿ, ತಂಮ ಕಡೆ ವಕೀಲರು ಅಲ್ಲಿ ಸೇರಿದ ಮೇಲೆ, ಯರಡು ದಿವಸದ ವಳಗೆ ಈಗ ತಮಗೆ ಕೊಟ್ಟು ಕಳುಹಿಸಿ ಇರುವ ಪ್ರಸಿದ್ಧವಾಗಿ ಇರುವ ಕಾಗದದ ನಕಲು ಮಾರೀಷಸ್ಟು ಯಂಬ ತೀರಮುಖದಲ್ಲಿ ಪ್ರಸಿದ್ಧವಾಗಿ ಇರುವ ದಿಕ್ಕಿನಲ್ಲಿ ಹಾಕಿಸಿ ತಿಳಿಸಿದರು. ಆ ಕಾಗದದಲ್ಲಿ ಬರದು ಇರುವ ಅಭಿಪ್ರಾಯವಾದರೂ ವಚನವಾದರೂ ಯುಕ್ತವಲ್ಲಾ ಯಂಬದಾಗಿ, ತಂಮ ವಕೀಲರು ಪ್ರಸಿದ್ಧವಾಗಿ ಹೇಳಿ ವಿರೋಧ ಮಾಡದೆ, ಅದರಲ್ಲಿ ಬಹುಮಾನವಾದ ಇಂಗ್ರೇಜ ಕುಂಪನಿಗೆ ಹಿಂದು ಸೀಮೆಯಲ್ಲಿ ಇರುವ ಅವಕಾಶಗಳಿಗೆ ಪ್ರತಿಕೂಲವಾಗಿ ತಾವು ಲಡಾಯಿ ಮಾಡುವದಕ್ಕೆ ನಿಶ್ಚೈಸಿದ್ಧೀರೆಂದು ಬರದ ಅಭಿಪ್ರಾಯವಂನು ಅವರು ಪ್ರಸಿದ್ಧವಾಗಿ ಯಲ್ಲಾ ದಿಕ್ಕಿನಲ್ಲು ತಿಳಿಸಿದರು. ಅದಲ್ಲದೆ ಪ್ರಸಿದ್ಧ ಕಾಗದದ ನಕಲು ಅವರ ಮನೆಯಿಂದ ಯಲ್ಲರಿಗೂ ಕೊಟ್ಟರು. ಈ ಪ್ರಕಾರವಾಗಿ ಇರುವದರಿಂದ ಹಿಂದೂ ಸೀಮೆಯಲ್ಲಿ, ಬಹುಮಾನವಾದ ಇಂಗ್ರೇಜ ಕುಂಪನಿಗೆ ಸೇರಿದ ಅವಕಾಶಗಳಲ್ಲಿ ತಾಮಸ ಮಾಡದೆ, ತಾವು ಜಬರದಸ್ತಿಯಿಂದ ಹದ್ದು ಮೀರಿ, ಲಡಾಯಿ ಮಾಡ್ತೀರಿ ಯಂಬದಾಗಿ, ಇರುವ ವಿಶ್ವಾಸ ಆ ದ್ವೀಪದಲ್ಲಿ ಯಲ್ಲರಿಗೂ ತಿಳಿಸಿ ಇದ್ದರು. ಸದರಹು ಬರದು ಇರುವ ಪ್ರಸಿದ್ಧವಾಗಿ ಇರುವ ಕಾಗದದ ಪ್ರಕಾರ ಫರಾಸೀಸರ ಸಂಸ್ಥಾನದವರು ನಡಸುವದಕ್ಕಾಗಿ ಸ್ಥಾಪಿಸಿ ಇರುವಲ್ಲಿ, ತಂಮ ವಕೀಲರು ದ್ವೀಪದಲ್ಲಿ ಇದ್ದರು ತಂಮ ಚಾಕರಿಯಲ್ಲಿ ಆಳುಗಳಂನ ಇರಿಸುವ ಬಗ್ಯೆ ತಂಮ ವಕೀಲರು ತಂಮ ಹೆಸರಿಗೆ ಅವರವರಿಗೆ ಈ ಪ್ರಕಾರ ಕೊಡುತ್ತೇವೆ ಯಂಬದಾಗಿ ಹೇಳಿ, ನಿಶ್ಚಯ ಮಾಡಿ ಇದ್ದರು. ಆದ್ದರಿಂದಾ ಪ್ರಸಿದ್ಧವಾಗಿ ಇರುವ ಕಾಗದ ತಿಳಿಸುವ ಬಗ್ಯೆ ಸಹಾಯ ಮಾಡಿ ಕೊಟ್ಟರು. ಕುಂಪನಿಯವರ ಸಂಗಡ ಯುದ್ಧಾ ಮಾಡುವದಕ್ಕೆ ತಂಮ ಹೆಸರಿಗೆ ಮನುಷ್ಯರಂನ ತಯಾರು ಮಾಡಿಸುವದರಲ್ಲಿ, ಅವರ ಅಧಿಕಾರವು ಯದುರು ಇಲ್ಲದೆ ಇರುವದರಿಂದ, ಆಳುಗಳು ಶಕ್ತಿದಷ್ಟು ತಯಾರು ಮಾಡ ಬೇಕೆಂಬದಾಗಿ ಹೇಳಿ, ಇಟ್ಟು ಇದ್ದರು. ಈಗ ಪ್ರಸಿದ್ಧವಾಗಿ ಇರುವ ಕಾಗದದ, ಅಭಿಪ್ರಾಯದ ಮೇರೆಗೆ ತಂಮ ವಕೀಲರು ತಂಮ ಚಾಕರಿಯಲ್ಲು ಇರುವದಕ್ಕೆ ತಂಮ ಹೆಸರಿಗೆ ಫರಾಸೀಸರು, ಮೇಲಾದವರು ಸಹಾ, ಈ ಪ್ರಕಾರ ನಡೆಯ ಬೇಕೆಂಬದಾಗಿ, ಕರಾರು ಮಾಡಿ ಇಟ್ಟರು. ಅದರಲ್ಲಿ ತಾವು ಪ್ರತ್ಯೇಕವಾಗಿ ಬಹುಮಾನವಾದ ಇಂಗ್ರೇಜಿ ಕುಂಪನಿ ಸರಕಾರದ ಸಂಗಡ ಲಡಾಯಿ ಮಾಡುವದಕ್ಕೆ ನಿಶ್ಚಯ ಮಾಡಿ ಇರುವದರಿಂದ, ಸಹಾಯ ಮಾಡುವದಕ್ಕಾಗಿ ತಂಮ ಹೆಸರಿಗೆ ಮೂಸೆರ ದುಬುಕ್[1] ಸಾಹೇಬರು ತಂಮ ಚಾಕ್ರೀಲಿರಿಸಿ, ಕರಾರು ಮಾಡಿ ಇಟ್ಟು ಇದ್ದರು. ಈ ಪ್ರಕಾರದಿಂದ ಈ ಪ್ರಸಿದ್ಧವಾಗಿ ಇರುವ ಕಾಗದ ಅವರು ಫರಾಸೀಸರ ದ್ವೀಪಕ್ಕೆ ಬಂದಾಗಲೇ ಉಂಟಾಗಿ, ಅವರ ಆಳುಗಳಿಂದ ಯಲ್ಲರಿಗೂ ತಿಳಿಸಿ, ಅವರಿಂದ ತಾನೆ ಉಂಟಾಯಿತು ಯಂದು, ಅವರ ಪ್ರಸಿದ್ಧವಾಗಿ ಇರುವ ಮಾತಿನಿಂದಲೂ ಅವರ ಸಂಮತದಿಂದಲೂ ತೋರುತ್ತದೆ. ಆ ಮೇಲೆ ಅದರ ಅಭಿಪ್ರಾಯದ ಪ್ರಕಾರವೇ ಅವರೇ ನಡಸಿದರು. ೧೭೯೮ ನೆ ಮಾರ್ಚಿ ತಿಂಗಳು ೭ ತಾರೀಕು, ತಂಮ ಕಡೆ ವಕೀಲರು ಮಾರೀಷಸ್ಟು ಯಂಬ ದ್ವೀಪಿನಿಂದ ಹೊರಟು, ತಂಮ ಹೆಸರಿಗೆ ಕೂಡಿಸಿ ಇಟ್ಟು ಇರುವ ಆಳುಗಳ ಸಂಗಡ ಲಪ್ರೆನೂಸ್[2] ಜಹಾಜಿನಲ್ಲಿ ಹತ್ತಿ, ಹೊರಟು ಬಂದರು. ಈ ಫರಾಸೀಸ ಜಹಾಜ ತಂಮ ಕಡೆ ವಕೀಲರ, ತಂಮ ಚಾಕರಿಗೆ ಬಹುಮಾನವಾದ ಇಂಗ್ರೇಜ ಕುಂಪನಿಗೆ ಶತ್ರುವಾಗಿ ಇರುವವರ ಸೀಮೆಯಿಂದಾ ನಿಶ್ಚಯ ಮಾಡಿದ ಆಳುಗಳಂನ, ೧೭೯೮ ನೆ ಯೆಪ್ರೆಲು ತಿಂಗಳು, ಯೇಕದೇಶ ೨೬ ತಾರೀಕು ಮಂಗಲಾಪುರಕ್ಕೆ ಬಂದು, ತಲಪಿಸಿತು. ಈ ಬಗೆ ಆಳುಗಳಂನ ತಂಮ ರಾಜ್ಯದಲ್ಲಿ ಇಳಿಸುವದಕ್ಕೆ ಸಂಮತಿಸಿ, ಈ ಕೆಲಸದಲ್ಲಿ ತಂಮ ಕಡೆ ವಕೀಲರ ನಡತೆ ತಮಗೆ ಅಸಂಮತವಾಗಿ ತೋರಿಸಿ ಕೊಡದೆ, ಈ ಬಗೆ ಫರಾಸೀಸ ಹಾಪಿಸರಂನೂ,[3] ಮೇಲಾದ ಮುಖ್ಯಸ್ಥರಂನು ಸಹಾ, ತಾವು ಬಹುಮಾನದಿಂದಲೂ, ತಮಗೆ ಖುಷಿ ಆಗಿ ಇರುವ ಗುರ್ತಿನಿಂದಲೂ ಸಹಾ, ಇಳಿಸಿ ಕೊಂಡಿರಿ. ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡ ಲಡಾಯಿ ಮಾಡುವದಕ್ಕೆ ಸಲುವಾಗಿ, ಈ ಪ್ರಕಾರ ಕುಂಮಕು ಮಾಡಿಸಿ ಕೊಂಡು, ಫೌಜಿನಲ್ಲಿ ಅಧಿಕವಾಗಿ ಇರುವ ಹಾಲು ಈಗ ತಂಮ ಚಾಕರಿಯಲ್ಲಿ ಇಟ್ಟು ಇದ್ಧೀರಿ. ಸದರಹು ಬರದು ಇರುವ ಅಭಿಪ್ರಾಯಗಳಲ್ಲಿ ಮುಂದೆ ಬರೆಯುವ ಪ್ರಕಾರ ಬಂದೀತು.

ವಂದನೆ ತಲಂ: ತಾವು ಫರಾಸೀಸರ ದ್ವೀಪಕ್ಕೆ ಹುಕುಂ ಮಾಡಿ ಕಳುಹಿದ ವಕೀಲರು ಬಹುಮಾನವಾದ ಇಂಗ್

1 Monsieur Du Buc. 2 La Preneuse. 3 Officer.

ರೇಜ ಕುಂಪನಿಗೂ ತಮಗೂ ಲಡಾಯಿ ಪ್ರಾಪ್ತಿಸಿ, ಲಡಾಯಿ ನಡಸ ಬೇಕಾದ್ದಕ್ಕೆ, ಫರಾಸೀಸರ ದಾರಿ ಇಟ್ಟು, ಕರಾರು ಮಾಡಿ, ನಿಶ್ಚಯ ಮಾಡಿದರು ಯಂಬದಾಗಿಯೂ, ಆ ಪ್ರಕಾರ ಉಂಟಾದರೆ, ಅವರ ಖಾಯಿಷಾರ ದೋಸ್ತರಾದ, ಪೇಶ್ವೆಯವರಿಗೂ ನಿಜಾಮಲ್ಲಿಗೂ ಸಹಾ, ಲಡಾಯಿ ಮಡಗಿ ಇದೆ ಯಂಬದಾಗಿಯೂ.

ಯರಡನೆ ಕಲಂ: ಈ ಯುದ್ಧಾ ಮಾಡಿ ಕೊಂಡು ಇರುವ ಬಗ್ಯೆ, ತಂಮ ಕಡೆ ವಕೀಲರು, ಲಡಾಯಿಕ್ಕೆ ಬೇಕಾದ ಸಹಾಯ ಫರಾಸೀಸರ ಸಂಗಡ ಕೇಳಿದರು ಯಂಬದಾಗಿಯೂ, ಕುಂಪನಿಯವರ ಸಂಗಡ ಯುದ್ಧಾ ಮಾಡುವದಕ್ಕೆ ಶುರು ಆಗಿದೆಂಬದಾಗಿಯೂ, ಫರಾಸೀಸರು ಕಾದ ಬೇಕಾದ ಸಹಾಯಗಳು ಸಿಕ್ಕುವದಕ್ಕೆ ಮಾತ್ರ ತಾಮಸವಾಗಿ ಇದೆ ಯಂಬದಾಗಿಯೂ, ಈ ಪ್ರಕಾರ ಕುಂಪನಿಯವರ ಸಂಗಡ ಲಡಾಯಿ ಉಂಟಾದರೆ, ಅವರ ದೋಸ್ತರ ಸಂಗಡ ಅದೇ ಪ್ರಕಾರ ಉಂಟಾದೀತಷ್ಟೆ ಯಂಬದಾಗಿಯೂ.

ಮೂರನೆ ಕಲಂ: ಲಡಾಯಿಗೆ ಸಲವಾಗಿ ತಂಮ ಕಡೆ ವಕೀಲರು ಕುಂಪನಿಯವರ ಕೂಡಲೂ, ಅವರ ದೋಸ್ತದಾರರಾದಂಥಾವರ ಕೂಡಲೂ, ಶತ್ರುರೂಪದಿಂದ ಕರಾರು ಮಾಡಿ ಕೊಂಡದ್ದು ಸಾಧಿಸುವ ಬಗ್ಯೆ ಪ್ರಸಿದ್ಧವಾದ ಕಾಗದದಲ್ಲಿ ಪ್ರಮಾಣವಾಗಿ ಬರೆಸಿ ಇರುವ ಪ್ರಕಾರ, ಫರಾಸೀಸರ ದ್ವೀಪದಲ್ಲಿ ವಂದು ಬಲ ಸಹಾ ಕೂಡಿಸಿ, ನಿಲ್ಲಿಸಿ ಇದ್ದರು, ಯಂಬದಾಗಿಯೂ.

ನಾಲ್ಕನೆ ಕಲಂ: ತಾವು ತಂಮ ಕಡೆ ವಕೀಲರ ನಡತೆಮುಡತೆ ಬೇಕಾದ ಹಾಗೆ ಒಳ್ಳೇದು ಯಂಬದಾಗಿ ನಿಶ್ಚಯ ಮಾಡಿ, ಬಹುಮಾನವಾದ ಇಂಗ್ರೇಜ ಕುಂಪನಿ ಸಂಗಡಲೂ ಅವರ ದೋಸ್ತರ ಸಂಗಡಲೂ ಯುದ್ಧಾ ಮಾಡುವದಕ್ಕೆ ತಯಾರು ಮಾಡಿದ ಫರಾಸೀಸರ ಕುಂಮಕು ತಂಮ ಸೀಮೆಯಲ್ಲಿ ಇಳಿಯುವದಕ್ಕೆ ಸಂಮತಿಸಿ ಇದ್ದಿರಿ. ಆ ಮೇಲೆ ಆ ಬಗೆ ಕುಂಮಕು ತಂಮ ಫೌಜ ಸಂಗಡಲೇ ನಿಲ್ಲಿಸಿ ಇದ್ದಿರಿ, ಯಂಬದಾಗಿಯೂ.

ಐದನೆ ಕಲಂ. ಈ ಪ್ರಕಾರ ತಂಮ ನಡತೆಯಿಂದಾ ಫರಾಸೀಸರ ದ್ವೀಪದಲ್ಲಿ ಪ್ರಸಿದ್ಧವಾಗಿ ಯಲ್ಲಾವರಿಗೂ ತಿಳಿಸಿದ ಕಾಗದಲ್ಲಿ ಬರೆಸಿದ ಪ್ರಕಾರ, ನಡಸ ತಕ್ಕ ಬಗ್ಯೆ ಉಂಟಾದ ಕಾರ್ಯಗಳು ಯಾವತ್ತು ಮಜಬೂತು ಮಾಡಿದಿರಿ ಯಂಬದಾಗಿಯೂ, ನಡಸ ತಕ್ಕ ಕಾರ್ಯಗಳ ನಡಸಿದಿರಿ ಯಂಬದಾಗಿಯೂ, ಪ್ರಸಿದ್ಧವಾಗಿ ಇರುವ ಕಾಗದದಲ್ಲಿ ಬರದ ಪ್ರಕಾರ ಫಲವಾಗುವ ಬಗ್ಯೆ ಆರಂಭವಾಗಿ ಇರುವ ನಡತೆ ಶುರು ಆಯಿತೆಂಬದಾಗಿಯೂ, ಅದರಿಂದ ತಂಮ ಬಗೆ ವಕೀಲರು ನಡೆಯುವ ನಡತೆ ತಂಮ ಹುಕುಂ ಪ್ರಕಾರ ಇಲ್ಲಾ ಯಂಬದಾಗಿ ಇರುವ ಆಲೋಚನೆ ಉಪೇಕ್ಷೆ ಮಾಡಿದಿರಿ ಯಂಬದಾಗಿಯೂ.

ಆರನೆ ಕಲಂ: ಬಹುಮಾನವಾದ ಇಂಗ್ರೇಜ ಕುಂಪನಿಯವರ ಸಂಗಡಲೂ ಅವರ ದೋಸ್ತಾರರ ಸಂಗಡಲೂ ಶತ್ರು ಆಗಿ ಇರುವವರಲ್ಲಿ ಕರಾರು ಮಾಡಿ ಇರುವದನ್ನು ಆ ಪ್ರಕಾರ ಮಾಡ ತಕ್ಕ ಬಗ್ಯೆ ಬೇಕಾದ ಹಾಗೆ, ತಾವು ಕೆಲವು ದಿವಸಕ್ಕೆ ಮುಂಚೆ ಲಡಾಯಿ ಶುರು ಮಾಡುವದಕ್ಕೆ ತಾವು ತಯಾರು ಮಾಡುತ್ತಾ ಇದ್ದಿರಿ ಯಂಬದಾಗಿಯೂ.

ಯೇಳನೆ ಕಲಂ: ತಂಮ ಕಡೆ ವಕೀಲರ ಮುಖಾಂತರವಾಗಿ ಫರಾಸೀಸರ ಸಂಗಡ ಅಪೇಕ್ಷಿಸಿ ಕೊಂಡ ಸಹಾಯಗಳು ಅವರು ಕೊಟ್ಟದ್ದೇ ಉಂಟಾದರೆ, ಬಹುಮಾನವಾದ ಇಂಗ್ರೇಜ ಕುಂಪನಿ ಅವಕಾಶಗಳಲ್ಲಿ ಮಾಡ ತಕ್ಕ ಬಗ್ಯೆ ಉಂಟಾದ ಬಗೆಗಳು ಕಾಣದೆ, ಹದ್ದು ದಾಟುವ ಬಗ್ಯೆ ಬೇಕಾದ್ದು ಯಾವತ್ತು ತಯಾರು ಆಗಿ ಇದೆ ಯಂಬದಾಗಿಯೂ.

ಯಂಟನೆ ಕಲಂ: ತಾವು ಹಲವು ಬಗೆ ಈ ಪ್ರಕಾರ ನಡತೆಯಿಂದಾ, ತಾವು ಬಹುಮಾನವಾದ ಇಂಗ್ರೇಜ ಕುಂಪನಿಯೂ, ಅವರ ಬಂಧುಗಳು ಸಹಾ ತಂಮಲ್ಲಿ ಸಮಾಧಾನವಾಗಿಯೂ ಸಖ್ಯವಾಗಿಯೂ ಇರಿಸುವ ಬಗ್ಯೆ, ಮಾಡಿ ಇರುವ ಕರಾರು ಉಪೇಕ್ಷೆ ಮಾಡಿ ಇದ್ದೀರಿ ಯಂಬದಾಗಿಯೂ, ನವಂಬರ ತಿಂಗಳು, ೮ ತಾರೀಕು, ತಮಗೆ ಬರೆಸಿ ಕಳುಹಿದ ಕಾಗದದಲ್ಲಿ ನಾವು ಜಿಯಾದು ತಿಳಿಸಿದ್ದು, ಸದರಿಹು ಬರದು ಇರುವ ಯಂಟು ಕಲಮಿನಲ್ಲಿ ಬರದು ಇರುವ ಸಂಗತಿಗಳಿಂದಲೇ ಬರದು ತಿಳಿಸುತ್ತಾ ಇದ್ದೇವೆ. ಆ ಬಗೆ ಸಂಗತಿಗಳಿಂದ ತಾನೆ ಕೆಲವು ಸಂವತ್ಸರದಿಂದಾ ಒಳಗಾಗಿ ತಂಮ ನಡತೆ ಕುಂಪನಿಗೂ ಅವರ ಬಂಧುಗಳಿಗೂ ಸಂಶಯವಾಗಿ ಬಹಳ ಆಲೋಚನೆ ಮಾಡ ತಕ್ಕದ್ದು, ಉಪೇಕ್ಷೆ ಮಾಡ ತಕ್ಕ ಬಗ್ಯೆ ಈಗ ತಯಾರು ಮಾಡಿ ಇರುವದು, ಇರಿಸ ಬೇಕಾಗಿ ಇದೆ. ಬಹುಮಾನವಾದ ಇಂಗ್ರೇಜ ಕುಂಪನಿಯು, ಅವರ ದೋಸ್ತರು ಸಹಾ, ಅನ್ಯಾಯ ಹೇಳಿ ಇರುವದು; ತಾವು ಆಗಾಗ್ಯೆ ಲಡಾಯಿಕ್ಕೆ ತಯಾರು ಮಾಡು

ವದು; ಯುದ್ಧಕ್ಕೆ ಶತ್ರು ಸಂಗಡ ಕರಾರು ಮಾಡುವದು; ಸಮಾಧಾನವಾಗಿ ಇದೆ ಯಂಬದಾಗಿ ಯೋಚನೆ ಮಾಡಿ ಇರುವ ಸಮಯದಲ್ಲಿ, ಅವರವರಿಗೆ ಯುದ್ಧ ಸಮಯದಲ್ಲಿರುವ ಗುಣದೋಷಗಳೂ ಆಲೋಚನೆಗಳೂ ಆಗುವ ಕಷ್ಟಗಳೂ ಅನುಭವಿಸಿ ಇವೆ. ಸರಿಯಾಗಿ ಮಾಡುವದಕ್ಕೆ ಇಷ್ಟು ಸಂಗತಿಗಳು ಉಂಟು ಮಾಡಿ ಕೊಟ್ಟದ್ದೇ ಉಂಟಾದರೂ, ಸೇರಿ ಇರುವ ರಾಜ್ಯಗಳಲ್ಲಿ ತಂಮ ತಂಮಲ್ಲಿ ದೋಸ್ತಿ ಆಗಿರುವವರ ಪ್ರೀತಿಯಿಂದಲೂ ನಡತೆ ಯಿಂದಲೂ ವಂದು ಸಮಾಧಾನದ ವಡಂಬಡಿಕೆ ತಂಮಿಂದಾ ಮಾಡಿಸಿ ಕೊಳ್ಳುವ ಬಗ್ಯೆ ಬೇಕಾದ ಆಗ್ರಹ ಕುಂಪನಿಗೂ ಅವರ ಬಂಧುಗಳಿಗೂ ಉಂಟು. ಇಷ್ಟು ದಿನ ಪರಿಯಂತರವೂ ಸಂಶಯವಾಗಿ ಇದ್ದ ಹೇತುಗಳು ವಿಸ್ತಾರ ಮಾಡಿ ತೀರದೆ ಇರುವ ಸಮಯದಲ್ಲಿ, ಆ ಬಗೆ ಸಂಶಯಗಳು ಬಿಟ್ಟು ಬಿಡುವದಕ್ಕೆ ತೀರದೆ ಇರುವದರಿಂದಾ, ಅದು ಯಾವತ್ತು ಇಂನು ಮುಂದೆ ನಡೆಯ ಬಾರದಂತೆ ಇರುವಂಥಾ ದಾರಿಯಿಂದಾ ನಂಮ ನಿಂಮ ಬಾಯಿಚಾರ ದೋಸ್ತಿಯು ಹೊಸ್ತಾಗಿ ಉಂಟಾಯಿತು ಯಂದು ಸ್ಥಿರವಾಗಿ ಇರಿಸುವ ಬಗ್ಯೆ ನಾವು ತಯಾರಾಗಿ ಇದ್ದೇವೆ.

ಸುಖತ್ವದಿಂದಲೂ ಸಂತೋಷದಿಂದಲೂ ಅಸ್ತಿಭಾರ ಹಾಕುವ ಬಗ್ಯೆ ರಾಜ್ಯದ ಸೌಖ್ಯ ಯಲ್ಲಾ ಜನರ ದೋಸ್ತಿ ಅನುಭವ ವರ್ಧನೆ ಮಾಡಿಸುವದಕ್ಕೆ, ನಂಮ ನಿಂಮ ಸಮಾಧಾನದಲ್ಲಿ ಅಲ್ಲದೆ, ಅಧಿಕವಾಗಿ ವಂದು ವಳ್ಳೇ ದಾರಿ ನೇಮಕ ಮಾಡಿ ತಮಗೆ ತೋರುವದಿಲ್ಲಾ ಯಂಬದಾಗಿ, ತಾವು ಬರದು ಇದ್ದೀರಷ್ಟೆ. ಈ ಆಲೋಚನೆ ಯಲ್ಲಿ ನಾವು ತಂಮ ಸಂಗಡ ಸಂಮತಿಸಿ ಇದ್ದೇವೆ. ದೋಸ್ತುದಾರರ ಸಂಗಡ ತಾವು ಮಾಡತಕ್ಕ ನಡತೆಯಿಂದಾ ತಂಮ ಬುದ್ಧಿ ಹಲವು ದೂರುಗಳಿಂದಾ ಬಿಟ್ಟು ಹೋಗದೆ ಇದ್ದರೆ, ಸುಖತ್ವದಿಂದಲೂ ಸಂತೋಷದಿಂದಲೂ ಪಾಯ ಗಟ್ಟಿ ಮಾಡುವ ಬಗ್ಯೆ ರಾಜ್ಯಗಳ ಸೌಖ್ಯ ಯಲ್ಲಾ ಜನರ ದೋಸ್ತಿ ಅನುಭವ ವರ್ಧನೆ ಮಾಡಿಸುವ ಬಗ್ಯೆ ಈಗ ಹೊಸ್ತಾಗಿ ಆದರೂ, ಅಧಿಕ ವಳ್ಳೇದಾಗಿ ಆದರೂ, ವಂದು ದಾರಿ ಮಾಡಿ ಇಡುವದಕ್ಕೆ ಇಲ್ಲವಲ್ಲಾ. ಮೇಲಾಗಿ, ದೋಸ್ತಾರ ಶತ್ರುಗಳಿಂದ ಅವರವರು ಮಾಡತಕ್ಕ ಕಾರ್ಯಾದಿಗಳು ಉಂಟು ಮಾಡಿ ಇಟ್ಟು ಇರುವದರಿಂದಾ,, ನಮಗೂ ತಮಗೂ ಹೊಸ್ತಾಗಿ ವಂದು ದಾರಿ ಮಾಡಿ ಇಡಿಸ ಬೇಕಾಗಿ ಇದೆ. ಆದ್ದರಿಂದ ನಂಮ ನಿಂಮಲ್ಲಿ ಉಂಟಾದ ಶತ್ರುತ್ವಗಳು ಯಾವತ್ತು ದೋಸ್ತಿ ಆಗಿ ತೀರುವಂಥಾದ್ದಕ್ಕೆ ಬಂಧುಗಳಾಗಿ ಇರುವ ನಾವು ಸ್ನೇಹಿತರಾಗಿ ಬಂದು, ಪರಿಗ್ರಹಿಸ ಬೇಕೆಂಬದಾಗಿ, ಇಂನೂ ನಾವು ಅಪೇಕ್ಷಿಸುತ್ತಾ ಇದ್ದೇವೆ. ತಂಮ ಬಳಿಯಲ್ಲಿ ಮೇಜರ ದಾವ್ತನ್ ಸಾಹೇಬರವರು ಬರುವದಕ್ಕೆ ತಂಮ ಸಂಮತ ಉಂಟಾದರೆ, ಆ ಸರದಾರನು, ಬಹುಮಾನವಾದ ಇಂಗ್ರೇಜ ಕುಂಪನಿಯೂ, ಅವರ ಬಂಧುಗಳೂ, ಇವರ ಬಗೆ ಈಗ ಇರುವ ಮನಸ್ತಾಪಗಳ ಉಪೇಕ್ಷೆ ಮಾಡಿ, ಹೊಸ್ತಾಗಿ ಮಡಗುವ ದಾರಿ ಮಾಡಿಸುವಂಥಾದ್ದು ಹ್ಯಾಗೆ ಯಂದರೆ, ತಮಗೆ ತಿಳಿಸಿ ಇದ್ದೇವಷ್ಟೆ. ಈ ಪ್ರಕಾರ ನಂಮ ತಂಮ ಸುಖತ್ವವಾಗಿ ಇರುವ ವಿಸ್ತಾರದಲ್ಲಿ ನಡಸುವ ಬಗ್ಯೆ ದೋಸ್ತದಾರಿಗೆ ಯಾವಾಗಲೂ ಆಗ್ರಹ ಉಂಟಾಗಿ ಇರುವದರಿಂದಾ, ಮೇಜರ ದಾವ್ತನ್ ಸಾಹೇಬರವರು ತಂಮ ಬಳಿಗೆ ಬಂದರೆ, ಯಲ್ಲವರಿಗೂ ಸ್ಥಿರವಾಗಿ ಇರುವ ಅನುಭವಗಳು ತಿಳಿಯ ಬಂದೀತು ಯಂಬದು ನಮಗೆ ನಿಶ್ಚಯವಾಗಿ ತೋರಿ ಇರುವದರಿಂದಾ, ಈ ಸರದಾರನು ತಂಮ ಬಳಿಯ ಬರುವದಕ್ಕೆ ತಾವು ಸಂಮತಿಸುವದಕ್ಕಾಗಿ, ಇಂನೊಂದು ಸರಿ ನಾವು ತಂಮ ಸಂಗಡ ಶುದ್ಧತ್ವದಿಂದಾ ಕೇಳಿ ಕೊಳ್ಳುತ್ತೇವೆ. ಈ ಕಾಗದಕ್ಕೆ ದೋಸ್ತಿಯಿಂದ ದರ ಜವಾಬು ತಾವು ಬರೆಸಿ ಕಳುಹಿಸೀರಿ ಯಂಬದಾಗಿ, ನಾವು ಆಲೋಚನೆ ಮಾಡಿ ಇದ್ದೇವೆ. ಈ ಕಾಗದ ತಂಮ ಸಂನಿಧಾನದಲ್ಲಿ ಬಂದ ಕೂಡಲೇ, ದರ ಜವಾಬು ಬರೆಯುವದಕ್ಕೆ ವಂದು ದಿನಕ್ಕೆ ಅಧಿಕ ತಾಮಸ ಮಾಡದೆ, ಬರದು ಕಳುಹಿಸುವ ಹಾಗೆ ಮಾಡಿಸ ಬೇಕು.

ಭಾರಿ ಕೆಲಸವಾಗಿ ಇರುವಂಥಾ ಕಾರ್ಯದ ತಾಮಸದಿಂದಾ ಗಾಬರಿ ಆಗಿ ಇರತಕ್ಕ ಫಲವು ಲಕ್ಷ್ಯವಾಗಿ ಬರುವದು.

ಈ ಕಾಗದವಂನು ಕರಡಿಗ್ಯಾಡಲ್ಲಿ ಜನರಾಲ್. ಇಷ್ಟಾರ್ಟ ಸಾಹೇಬರವರು, ಕಪಿತಾನ್ ಮಾಪಿನಿ ಸಾಹೇಬರವರು ಸಹಾ, ಮಹಾರಾಜರವರಿಗೆ ಕೊಟ್ಟರು. ಆ ಬಳಿಕ ದೊರೆಗಳು, ಕಪಿತಾನ್ ಮಾಪಿನಿ ಸಾಹೇಬರು ಯರಡು ಮೂರು, ಜನ ಇಂಗ್ರೇಜ ಸರದಾರರು ಸಹಾ, ಕಾಳಾಯುಕ್ತಿ ಸಂವತ್ಸರದ ಮಾಘ ಬ ೩೦ ಮಂಗಳವಾರ ದಿವಸ ಈ ಕಾಡಾಗನ ಶೀವೊ ವಳಿತವಾದ ಸಿದ್ಧೇಶ್ವರನ ಗದ್ದಿಗೆ ಬಳಿಗೆ ಹೋಗಿ ಇದ್ದರು. ಅಲ್ಲಿಂದಾ ಆ ಸಿದ್ಧೇಶ್ವರನ ಪರ್ವತ ಪಾತ್ರ, ಕುಂತು ಕಂಡು, ದುರ್ಬೀನಿನಿಂದಾ ನೋಡುವಾಗ್ಯೆ, ಮೊದಲು ನಾಲ್ಕು ಐದು ಗಳಿಗೆ ಯೇನೂ ಕಾಣಲಿಲ್ಲಾ.

ಆ ಮೇಲೆ ಟೀಪುಸುಲ್ತಾನರ ತಾಲೂಕು ಪೆರಿಯಾಪಟ್ಟಣದ ಬಳಿಯ ಮೊದಲು ಒಂದು ಬಿಳಿ ತಂಬು ಹಾಕಿದ್ದು ಕಂಡಿತು. ಮತ್ತು ದುರ್ಬೀನಿನಿಂದಾ ನೋಡುವಾಗ್ಯೆ, ಯರಡು ಮೂರು ಬಿಳಿ ತಂಬು ಹಾಕಿಸಿದರು. ಆ ಬಳಿಕ ದೊಡ್ಡದೊಂದು ಹಸರು ತಂಬು ಹಾಕಿಸಿದರು. ಆ ಮೇಲೆ ಮತ್ತೊಂದು ಕೆಂಪಿನ ತಂಬು ಹಾಕಿಸಿದರು. ಹೀಗೆ ಐನೂರು ಆರುನೂರು ತಂಬು ಪರಿಯಂತರ ಹಾಕಿಸಿದರು. ಆ ಮೇಲೆ ಟೀಪುಸುಲ್ತಾನರ ದಂಡು ಬಂದದ್ದು ಖರಿ ಯಂಬದಾಗಿ, ಮಹಾರಾಜರವರು ಇಂಗ್ರೇಜ ಸರದಾರರು ಸಹಾ ನಿಶ್ಚೈಸಿ ಕೊಂಡು, ಸಿದ್ಧಾಪುರದ ಬಳಿಯ ಇಳಿದು ಇದ್ದ ಇಂಗ್ರೇಜ ದಂಡಿಗೆ ಬಂದು, ಪೆರಿಯಾಪಟ್ಟಣದ ಬಳಿಯ ಟೀಪುಸುಲ್ತಾನರ ದಂಡು ಬಂದಂಥಾ ವರ್ತಮಾನ ವಂನು ಜನರಾಲ್ ಸಾಹೇಬರವರಿಗೆ ಹೇಳಿದಲ್ಲಿ, ಇಂಗ್ರೇಜ ದಂಡು ಯಾವತ್ತು ಖಬರದಾರಾಗಿ ಯಚ್ಚರದಲ್ಲು ಇಟ್ಟು, ಸಿದ್ಧೇಶ್ವರನ ಗದ್ದಿಗೆ ಬಳಿಯಲ್ಲು ಕರ್ನಲ್ ಮಂತರಿಜಾರು[1] ಸಾಹೇಬರು, ಮೇಜರ ಡಿಜನಿ ಸಾಹೇಬರು[2], ಯರಡು ಪಟಾಲಂ ಮಂದಿ ಸಹಾ, ತಯಾರಾಗಿ ಇತ್ತು. ಇದುಕಾರಣ "ಇಲ್ಲಿ ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಟೀಪುಸುಲ್ತಾನರ ದಂಡು ಒಳನುಗ್ಗಿ ಬರುವದಕ್ಕೆ ಇಲ್ಲಿ ಇಂಗ್ರೇಜ ಲಷ್ಕರು ಅಡ್ಡಿಯಾಗಿದೆ. ಕಿಗಟ್ಟ ನಾಡ ತಾಲೂಕಿನಲ್ಲು ಇರುವ ಬಾಳೆಲೆ ಮಾರ್ಗವಾಗಿ ಟೀಪುಸುಲ್ತಾನರು, ಇವರ ಅಪ್ಪ ನವಾಬ ಹೈದರಲ್ಲೀಖಾನ ಬಹಾದ್ದರವರು ಸಹಾ, ನಾಲ್ಕು ಐದಾವರ್ತಿ ಕೊಡಗಿನ ಶೀಮೆ ನುಗ್ಗಿ ಲಡಾಯಕ್ಕೆ ಬಂದ ಮಾರ್ಗವಾದ್ದರಿಂದಾ, ಈಗಲೂ ಟೀಪುಸುಲ್ತಾನರು ದಂಡು ತೆಗದು ಕೊಂಡು, ಆ ಬಾಳೆಲೆ ಮಾರ್ಗವಾಗಿ ಒಳನುಗ್ಗಿ, ವೀರರಾಜೇಂದ್ರಪ್ಯಾಟೆಗೆ ಬಂದಾರು" ಯಂಬದರಿಂದಾ, ಮಹಾರಾಜರವರು ಮನಸುಬಾ ಮಾಡಿ, ಅಲ್ಲಿ ಬಂದುಬಸ್ತಿನ ಬಗ್ಯೆ ಐದು ಸಾವಿರ ಸುಮಾರು ಕೊಡಗು ಜನವಂನು ಮಡಗಿಸಿ, ಆ ಮಾರ್ಗವಾಗಿ ಟೀಪುಸುಲ್ತಾನರು ಬಂದರೆ, ಚೆಂನಾಗಿ ಲಡಾಯ ಮಾಡುವಂತೆ ತಾಕೀದಿ ಮಾಡಿ ಇದ್ದರು. ಮಹಾರಾಜರವರ ಬಳಿಯಲ್ಲು ನೂರೆವತ್ತು ಕೊಡಗ ಜನಾ ಮಡಗಿ ಕೊಂಡು, ಇಂನು ಕೊಡಗ ಶೀಮೆಯೂ ದುಸ್ಮಾನರ ಶೀಮೆಯೂ ಕೂಡಿದ ಸರಹದ್ದಿನ ಉಕ್ಕಡಗಳ ಮಾರ್ಗಗಳಲ್ಲು ಉಳಿಕೆ ಕೊಡಗು ಜನಾ ಇಟ್ಟು, ಬಂದುಬಸ್ತು ಮಾಡಿಸಿ ಇದ್ದರು.

ಹೀಗೆ ಇರುವಾಗ್ಯೆ ಸಿದ್ಧೇಶ್ವರನ ಗದ್ದಿಗೆ ಹತ್ತಿ ನೋಡುವ ಉದ್ದಿಶ್ಯಯ ಫಾಲ್ಗುಣ ಶು ೧ ವು, ಬುಧವಾರ ದಿವಸ ಬೆಳಿಗ್ಯೆ, ಜನರಾಲ್ ಹಾಟ್ಲಿ ಸಾಹೇಬರು ಇಂಗ್ರೇಜ ಲಷ್ಕರಿನಿಂದಾ ಹೊರಟು ಹೋಗಿ ಇದ್ದರು. ಇದೇ ಬುಧವಾರ ಬೆಳಿಗ್ಯೆ ಟೀಪುಸುಲ್ತಾನರು ತಂಮ ಸಾರಾ ದಂಡು ತೆಗದು ಕೊಂಡು, ತಂಮ ಸರ್ವ ಶಕ್ತಿಯಿಂದಾ ಸಿದ್ಧೇಶ್ವರನ ಗದ್ದಿಗೆ ಮಾರ್ಗವಾಗಿ ಬಂದಲ್ಲಿ, ಅಲ್ಲಿ ಜನರಾಲ್ ಹಾಟ್ಲಿ ಸಾಹೇಬರು ಹಾಜರು ಇದ್ದರು.

ಆವಾಗ್ಯೆ ಕರ್ನಲ್ ಮಂತರಿಜಾರು ಸಾಹೇಬರು, ಮೇಜರ ಡಿಜನಿ ಸಾಹೇಬರು ಯರಡು ಪಟಾಲಂ ಇಂಗ್ರೇಜ ಮಂದಿಗೂ ಟೀಪುಸುಲ್ತಾನರ ಮಂದಿಗೂ ಮುಖ ಸಂಧಿಸಿ, ಬಹಳ ಜಗಳವಾದ್ದಲ್ಲಿ, ಟೀಪುಸುಲ್ತಾನರ ಮಂದಿಗೆ ಬಹಳ ಪೆಟ್ಟಾಗಿ, ತಡೆಯಲಾರದೆ, ಮುಂದೆ ಬರುವದಕ್ಕೆ ಮಾರ್ಗವಿಲ್ಲದೆ, ಟೀಪುಸುಲ್ತಾನರು ಯಡಬಲಕ್ಕೆ ಯರಡು ಕೈಯಾಗಿ, ಇಂಗ್ರೇಜ ಪಟಾಲಮಿನ ಬೆಂನಿಗೆ ಬರುವದಕ್ಕೆ, ಕಾಡಲ್ಲಿ ಕಳ್ಳ ಮಾರ್ಗವಾಗಿ ಆಟಿ ಇಟೈಲಿ ಹೇರಳ ಫೌಜ ವಿಂಗಡಿಸಿ, ಕಳುಹಿ ಕೊಟ್ಟಲ್ಲಿ, ಈ ಮೇರೆ ಟೀಪುಸುಲ್ತಾನರ ದಂಡು ಯರಡು ಕೈಯಾಗಿ ಬೆಂನಿಗೆ ಬರುವದು. ಇಂಗ್ರೇಜ ಪಟಾಲಂ ಮಂದಿಯು ಅರೆವಾಸಿ ಇತ್ತಲಾಗಿ ತಿರುಗಿ ಕೊಂಡು, ಬೆಂನಿಗೆ ಯರಡು ಕೈಯಾಗಿ ಬಂದ ದಂಡಿಗೂ, ಇದಿರಿಗೆ ಬಂದ ದಂಡಿನ ಸಂಗಡಲೂ, ಆ ದಿವಸ ಬೆಳಿಗನಿಂದಾ ಮಧ್ಯಾನ್ಹ ಪರಿಯಂತರ ಬಹಳ ಲಡಾಯ ಮಾಡುತ್ತಾ ಇದ್ದರು.

ಅಷ್ಟು ಹೊತ್ತಿಗೆ ಸುದ್ದಿ ಆಗಿ, ಸಿದ್ಧೇಶ್ವರನ ಗದ್ದಿಗೆ ಬಳಿ ಇರುವ ಪಟಾಲಮಿಗೆ ಕುಮುಕು ಮಾಡುವ ಬಗ್ಯೆ, ಜನರಾಲ್ ಇಷ್ಟ್ಯಾರಟ ಸಾಹೇಬರವರು, ಮೇಜರ ಫಾರಬಸ್[3] ಸಾಹೇಬರವರು, ಕರ್ನಲ್ ದಂಡಲಾಪ[4] ಸಾಹೇಬರವರು ಸಹಾ, ಯರಡು ಪಟಾಲಂ ಸಾಜರು[5] ಶಿಪಾಯಿಗಳ ತೆಗದು ಕೊಂಡು ಹೋಗುವಾಗ್ಯೆ, ಮಹಾರಾಜರವರು ಈ ಜನರಾಲ್ ಸಾಹೇಬರವರ ಕೂಡೆ ಆ ದಂಡಿನ ಸಂಗಡ ಹೋದರು.

ಅಷ್ಟು ಹೊತ್ತಿಗೆ ಕಳ್ಳ ಮಾರ್ಗದಲ್ಲಿ ಯರಡು ಕೈಯಾಗಿ ಬಂದು ಬಳಸಿ ಇದ್ದ ಟೀಪುಸುಲ್ತಾನರ ದಂಡು

---

1 Colonel Montreser. 2 Major Disney. 3 Major Forbes. 4 Colonel Dunlap. 5 Soldier.

ಸಿದ್ಧೇಶ್ವರನ ಗದ್ದಿಗೆ ಈಚೆಯಲ್ಲಿ ಮೋರ್ಚೆ ಕಟ್ಟಿ ನಿಂತು ಇದ್ದಲ್ಲಿ, ಜನರಾಲ್ ಇಷ್ಟ್ಯೂರ್ಟ ಸಾಹೇಬರವರು ಯರಡು ರಿಜಿಮಿಟು[1] ಸ್ವ್ಯಾಜರ ಶಿಪಾಯಿಗಳಿಗೆ ಲಡಾಯಿ ಮಾಡುವ ಬಗ್ಗೆಯೆ ಹುಕುಂ ಕೊಟ್ಟದರಿಂದಾ, ಈ ಸ್ವ್ಯಾಜರ ಶಿಪಾಯಿಗಳಿಗೂ ಟೀಪುಸುಲ್ತಾನರ ಮಂದಿಗೂ ಬಹಳ ಲಡಾಯಿಯಾಯಿತು.

ಈ ಲಡಾಯಿ ಆಗುವಾಗ್ಯೆ, ಜನರಾಲ್ ಇಷ್ಟ್ಯೂರ್ಟ ಸಾಹೇಬರವರು ಆ ರಿಜಿಮಿಟಿನಿಂದಾ ಲಡಾಯಿ ಮಾಡಿಸಿ ದಂಥಾದ್ದು ಈ ಸ್ವ್ಯಾಜರ ಶಿಪಾಯಿಗಳ ಹಿಂಮತು ಧೈರ್ಯ ಶಕ್ತಿ ಭುಜಬಲ ಪರಾಕ್ರಮದಿಂದಾ ದುಷ್ಮಾನನ ದಂಡಿಗೆ ಹೊಡದಂಥಾ ಶೌರ್ಯವನ್ನು ಈ ಮೇರೆ ಯಂಬದಾಗಿ ಹೇಳಿ, ಇದಕ್ಕೆ ವಂದು ಸಾಕ್ಷಿ ದಾಖಲ್ ತೋರಿಸುವದಕ್ಕೆ ಈ ಭೂಮಿ ಮೇಲೆ ವಂದೂ ಸಿಗುವದಿಲ್ಲಾ. ನಂಮ ಶಾಸ್ತ್ರ ಪುರಾಣದಲ್ಲಿ ಹಿಂದೆ ಅತಿರಥ ಮಹಾರಥರು ಮಾಡಿದಂಥಾ ಜಗಳಾ ಬಹಳವಾಗಿ ಹೇಳುತ್ತದೆ. ಅದರಲ್ಲೂ ಈ ಜಗಳಕ್ಕೆ ಸರಿಯಾದಂಥಾದ್ದು ಇಲ್ಲಾ. ಈ ಜಗಳ ಈ ಮೇರೆ ಯಂತಾ ಹೇಳುವದಕ್ಕೆ ನಮಗೆ ಶಕ್ಯವಲ್ಲಾ. ಆ ಮೇರೆ ಟೀಪುಸುಲ್ತಾನರ ದಂಡಿಗೆ ಹೊಡದರು.

ಈ ಪ್ರಕಾರ ಸ್ವ್ಯಾಜರು ಮಂದಿ ಲಡಾಯಿ ಮಾಡಿದಲ್ಲಿ, ಮೂರು ಮುಕ್ಕಾಲು ಗಳಿಗೆ ವಳಗೆ ಟೀಪುಸುಲ್ತಾನರ ಕಡೆ ಬೆಂಕಿನವಾಬ ಯಂಬ ದೊಡ್ಡ ಸರದಾರನು ಬಿದ್ದು ಹೋದಾ. ಮತ್ತು ಅವಲ್ದಾಯಂ ಯರಡು ಬಕ್ಷಿಯರಿಗೆ ಗುಂಡು ತಾಗಿ, ಕೆಳಗೆ ಸಿಕ್ಕಿದರು. ಮತ್ತು ಟೀಪುಸುಲ್ತಾನರ ಕಡೆ ಕೆಲವು ಸರದಾರರು ಬಿದ್ದು ಹೋದರು. ಅನಂತ ಜನ ಮೃತವಾಗಿ, ಅನಂತ ಜನಕ್ಕೆ ಜಖಮಿ ಆಗಿ, ಉಳಿಕೆ ಟೀಪುಸುಲ್ತಾನರ ಕಡೆ ಫೌಜು ಯಾವತ್ತೂ ಹೆಟ್ಟು ತಡೆಯಲಾರದೆ, ಓಡಿ ಹೋದರು. ಟೀಪುಸುಲ್ತಾನರು ಲಡಾಯಿಯಿಂದಾ ಮುಖ ತಿರಿಗಿಸಿ ಕೊಂಡು, ಬಾಕಿ ಫೌಜು ಸಮೇತ ಪುನಹಾ ತಿರಿಗಿ ಹೋಗಿ, ಅದೇ ಪೆರಿಯಾಪಟ್ಟಣದಲ್ಲಿ ಐದು ದಿವಸ ಇಳು ಕೊಂಡು ಇದ್ದು, ಫಾಲ್ಗುಣ ಶು ೬ ಯೂ, ಚಂದ್ರವಾರ ದಿವಸ, ಅಲ್ಲಿಂದಾ ದಂಡು ಸಮೇತ ಕೂಚಾಗಿ ಪಟ್ಟಣದ ಕಡೆಗೆ ಹೋದರು.

ಜನರಾಲ್ ಇಷ್ಟ್ಯೂರ್ಟ ಸಾಹೇಬ್ ಬಹಾದ್ದರವರು, ಜನರಾಲ್ ಹಾರ್ಟ್ಲಿ ಸಾಹೇಬ್ ಬಹಾದ್ದರವರು, ವಕೀಲ ಕಪಿತಾನ್ ಮಾಪಿನಿ ಸಾಹೇಬರು ಸಹಾ ಕೂಡಿ, ಮಹಾರಾಜರವರ ಸಂಗಡ ಹೇಳಿದ್ದು: “ಕುಂಪನಿ ಸರಕಾರಕ್ಕೂ ಟೀಪುಸುಲ್ತಾನರಿಗೂ ಇದ್ದಂಥಾ ಸಲ್ಲಾ ಬಿಗಡಾಯಿಸಿತು. ಲಡಾಯಿ ಮೊಕರರು ಆಯಿತು. ಆದ್ದರಿಂದಾ ತಾವು ತಂಮ ಮಂದಿಯನ್ನು ವಂದು ಕಡೆಗೆ ಕಳುಹಿಸಿ, ಟೀಪುಸುಲ್ತಾನರ ಫೌಜಿನ ಸಂಗಡ ಜಗಳಾ ಮಾಡಿಸ ಬೇಕು” ಯಂಬದಾಗಿ ಹೇಳಿದರು.

ಅದಕ್ಕೆ ಮಹಾರಾಜರವರು ಜವಾಬು ಹೇಳಿದ್ದು: ತಂಮ ದಂಡು ಸಿದ್ಧಾಪುರದ ಮೋರ್ಚೆ ವಂದನ್ನು ಕಟ್ಟಿ ಇದೆ. ಸಿದ್ಧಾಪುರದಲ್ಲಿ, ಅಂಮತ್ತಿಯಲ್ಲಿ, ವೀರರಾಜೇಂದ್ರಪ್ಪೇಟೆಯಲ್ಲಿ, ಕುಂಪನಿ ಸರಕಾರದ ಲಷ್ಕರಿನ ಸಾಮಾನು, ಸರಂಜಾಮು, ಜೀನಸು ಮುಂತಾಗಿ, ಹೇರಳ ರಸದು ಇದೆ. ಇದಲ್ಲದೆ ನಾಲ್ವತ್ತು ಸಾವಿರ ಬಟ್ಟಿ ಅಕ್ಕಿ ನಾವು ಜಮಾಯಿಸಿ ಇರುವಂಥಾದ್ದು ಮೋದಿಖಾನೆಯಲ್ಲಿ ಬಿದ್ದು ಇದೆ. ಸ್ವ್ಯಾಜರು ಮುಂತಾದ ಶಿಪಾಯಿಗಳು ಕಾಯಿಲೆ ಆಗಿ, ಐನೂರು ಜನ ಪರಿಯಂತರ ಅದೇ ಪೇಟೆಯಲ್ಲಿ ಇದ್ಧಾರೆ. ಹೆಗ್ಗಳದ ಮೋದಿಖಾನೆಯಲ್ಲಿ ಇಂಗ್ರೇಜ ಸರಕಾರದ ಹೇರಳ ರಸದು, ಸಾಮಾನು ಇದೆ. ಹೀಗೆ ಇರುವಲ್ಲಿ ಸಿದ್ಧೇಶ್ವರನ ಗದ್ದಿಗೆ ಮೋರ್ಚೆ ವಂದು ಬಂದಾಗಿ, ಬಾಕಿ ಕೊಡಗಿನ ಶೀಮೆ ಮೋರ್ಚೆಗಳು ಯಾವತ್ತು ಬಂದುಬಸ್ತು ಮಾಡದೆ ಇದ್ದರೆ, ಅದರಲ್ಲಿ ಯೇನಾದರೂ ಟೀಪುಸುಲ್ತಾನರು ಯೇಕಾಯ್ಕಿ ನುಗ್ಗಿ, ಇಂಗ್ರೇಜ ದಂಡಿಗೆ ಹೋಸಾ ಮಾಡ್ಯಾರು. ಕೊಡಗಿನ ಶೀಮೆಗೂ, ರಸದಿಗೂ, ಲೂಟಿ ಮಾಡ್ಯಾರು. ಈ ಅಪಕೀರ್ತಿ ನಂಮ್ಮೇಲೆ ಪಾಟೀಕಾದೀತು. ಆದ್ದರಿಂದಾ ನಂಮ ಶೀಮೆ ಚೌಕತ್ತು ಸರಹದ್ದಿನ ನಾಲ್ಕಾಡೆ ಮೋರ್ಚೆಕ್ಕೂ ಮಂದಿ ಇಟ್ಟು, ಬಂದುಬಸ್ತು ಮಾಡ ಬೇಕು. ನಾವು ಲಷ್ಕರಿನ ಸಂಗಡ ಇದ್ದು ಕೊಂಡು, ಕಾಮಾಟಿ ಕೆಲಸಗಳ ಮಾಡಿಸ ಬೇಕು. ಹೇಟೆ ಸಾಮಾನು ಮಾಡಿಸ ಬೇಕು. ರಸದಿನ ಸಾಮಾನು ಯತ್ತುಗಳ ಮೇಲೆ ಹೇರಿ, ತರಿಸಿ, ದಂಡಿಗೆ ಕಳುಹಿಸ ಬೇಕು. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿ ಕೊಡ ಬೇಕು. ಮೋದಿಖಾನೆಗಳ ಘನೆಗಳ ಕಟ್ಟಿಸ ಬೇಕು. ಮಲೆಯಾಳದ ಅರಸುಗಳು ತಂದು, ಘಟ್ಟದ ಕೆಳಗೆ ಕಲ್ಲು ಹೊಳೆ ಬಳಿಯ ಹಾಕಿ ಇರುವ ಇಂಗ್ರೇಜ ಸರಕಾರದ ರಸದನ್ನು ಅಲ್ಲಿಂದಾ, ತರಿಸಿ, ಹೆಗ್ಗಳದ ಘಟ್ಟದ ಮೇಲೆ

1 Regiment.

ಮ್ಯೊದ್ದಿಸ್ಥಾನೆಯಲ್ಲಿ ಮಡಗಿಸ ಬೇಕು. ಬಾಳೆಲೆ ಮಾಗಣೆದಲ್ಲಿ, ಯಡವನಾಡಲ್ಲಿ, ಕುಟ್ಟದ ಮಾಗಣೆದಲ್ಲಿ ಸಹಾ ಕೊಡಗ ಜನರಂನು ಮಡಗಿ, ಬಂದುಬಸ್ತು ಮಾಡಿಸಿ ಕೊಂಡು, ತಂಮ ಸಂಗಡ ಇರ ಬೇಕು. ಈ ಕೆಲಸಗಳು ಯಾವ ತಹೂ ಮಾಡಿಸುವಂಥಾದ್ದೇ ಪ್ರಯೋಜನವಿದೆ. ಇದರ ಮೇಲೆ ಕೊಡಗ ಮಂದಿ ತೆಗದು ಲಡಾಯಕ್ಕೆ ಕಳುಹಾ ಬೇಕು ಯಂದರೆ—ಯಾವ ಮೇರೆ ಆದೀತು? ಈ ಲಷ್ಕರಿಗೆ ಬರುವಂಥಾ ಸಾಮಾನು ಜಲ್ದಿಯಿಂದಾ ಬರ ಬೇಕು. ಈ ಬಂದು ಬಸ್ತಿನ ಬಗ್ಯೆ, ವಂದಂತರ ನಾಲ್ಕುನಾಡಿಗೆ ಹೋಗಿ ಬರುತ್ತೇವೆ ಯಂತಾ, ದೊರೆಗಳವರು ಜನರಾಲ್ ಸಾಹೇಬರ ಸಂಗಡ ಕೇಳಿ, ನಾಲ್ಕುನಾಡ ಅರಮನೆಗೆ ಬಂದು ಇರುತ್ತಿದ್ದಲಿ, ಸಿದ್ಧೇಶ್ವರನ ಗದ್ದಿಗೆ ಬಳಿಯು ಲಡಾಯಿವಾದ ಮೂರನೆ ದಿವಸದಲ್ಲಿ, ಅರಕಲಗೋಡಲ್ಲು ಇದ್ದ ಸೂರಾ ಯಂಬ ಬ್ರಾಂಹ್ಮಣನು ಅರಕಲಗೋಡು, ಕೊಣನೂರು, ಬಸವಾಪಟ್ಟಣ, ಈ ಮೂರು ಗಡಿ ಜನರ ತೆಗದು ಕೊಂಡು, ಕೊಡಗಿನ ಶೀಮೆ ಸರಹದ್ದಿನ ವಳನುಗ್ಗಿ, ನಂಜರಾಯ ಪಟ್ಟಣದ ತಾಲೂಕಿನ ತೊರೆನೂರು, ಹೆಬ್ಬಾಲೆ, ಶಿರಂಗಾಲ್ ಮುಂತಾದ ಗ್ರಾಮಗಳ ರೈತರ ಸರ್ವಸ್ವವಂನು ಲೂಟಿ ಮಾಡಿ, ಅಲ್ಲಿ ಇದ್ದ ರೈತರಂನು ಕಡುದು, ಕೈಗೆ ಸಿಕ್ಕಿದಂಥಾ ಗೌಡ ಶ್ಯಾನುಭೋಗರಂನು ಕಾಲು ಕೈ ಕಟ್ಟಿ, ಹೊಳೆಗೆ ಹಾಕಿ, ರೈತರ ಹೆಂಗಸರು ಮಕ್ಕಳ ಹಿಡುದು ಕೊಂಡು, ಆ ಗ್ರಾಮದ ಮನೆ ಮಾರಿಗೆಲ್ಲಾ ಬೆಂಕಿ ಹಾಕಿ, ಸುಟ್ಟು ಬಿಟ್ಟು ಹೋದರು.

ಅಷ್ಟರಲ್ಲಿ ಫಾಲ್ಗುಣ ಶು ೫ ದಿವಸ, ಕಪಿತಾನ್ ಮಾಹಿನಿ ಸಾಹೇಬರವರು ಮಹಾರಾಜರವರಿಗೆ ಬರಸಿ ಕಳುಹಿದ ಕಾಗದಲ್ಲಿ: "ತಂಮ ಕಡೆ ಕೊಡಗರು ಸಿದ್ಧೇಶ್ವರನ ಗದ್ದಿಗೆಯಿಂದಾ ಯರಡು ಬಡಿಯುವಾಗ, ವಂದು ಸಲಾ ಸಮಾಚಾರ ಬಂದು ಹೇಳಿದರು. ಐದು ಬಡಿಯುವಾಗ, ವಂದು ಸಲಾ ಸಮಾಚಾರ ಬಂದು ಹೇಳಿದರು. ಸಾಯಂಕಾಲಕ್ಕೆ ನಂಮ ಕಡೆ ಬೆರ್ಡ್ ಸಾಹೇಬರು[1] ಬಂದು ಹೇಳಿದ ಸಮಾಚಾರ: ಸಿದ್ಧೇಶ್ವರನ ಗದ್ದಿಗೆ ಮೇಲೆ ಹೋಗಿ, ಟೀನಿ ಕೊಳವೆ ಹಾಕಿ ನೋಡಿದಲ್ಲಿ, ವಂದು ತಂಬಾದರೂ ಕಾಣುವದಿಲ್ಲಾ. ಟೀಪುಸುಲ್ತಾನರು ಕೂಟಾಗಿ ಹೋದದ್ದೇ ಸರಿ ಯಂಬದಾಗಿ, ಕಾಣುತ್ತಾ ಇದೆ. ಯಾವ ಕಡೆ ಹೋದಾ ಯಂಬ ನಿಶ್ಚಯ ತಿಳಿಯುವದಿಲ್ಲಾ. ಕೂಟಾಗಿ ಹೋದದ್ದು ಸರಿ ಯಂಬದಾಗಿ, ಜನರಾಲ್ ಸಾಹೇಬರಿಗೂ ತಿಳಿದು ಇದೆ. ಚಂನೆನ ಕೋಟೆ ಕಡೆಯಿಂದಾ ಬಂದವರು ಕೂಟಾಗಿ ಹೋದದ್ದು ಸರಿ ಯಂಬದಾಗಿ, ಹೇಳಿದರು. ನಂಮಮನಸಿಗೂ ಕೂಟಾಗಿ ಹೋದದ್ದು ಸರಿ ಯಂತಾ ಕಾಣುತ್ತಾ ಇದೆ. ವಿಶೇಷವಾಗಿ ಇನ್ನೇನಾದರೂ ಸಮಾಚಾರ ನಾವು ಕೇಳಿದರೆ, ಆ ಕ್ಷಣಾ ತಮಗೆ ಶರುತ ಪಡಿಸುವಂತೆ ಬರಸಿ ಕಳುಹಿಸುತ್ತೇವೆ. ಇಬ್ಬರು ಜನರಾಲ್ ಸಾಹೇಬರು ಮಸಲಿಯತ್ತು ಮಾಡಿದರು. ಬೆರ್ಡ್ ಸಾಹೇಬರು ಟೀನಿ ಕೊಳವೆ ಹಾಕಿ ನೋಡಿದಲ್ಲಿ ದಂಡೆಲ್ಲಾ ಕೂಟಾಗಿ ಹೋಗಿ ಇದೆ. ದನ ಕರ ಕಾಣಾ ಬರುತ್ತಾ ಇದೆ. ಆ ಬಗ್ಯೆ ಹೋಗಿ ದವುಡು ಮಾಡಿದರೆ, ಬಹಳ ಕಿಫಾಯತಿ ಕೊಡಗ ಜನಕ್ಕೂ, ನಮಗೆ ಬೇಕಾದ ಕರಯ ಬಾಬ್ತು ಯತ್ತು, ಆಡು, ಕುರಿ ಮುಂತಾಗಿ ಸಿಕ್ಕೀತು ಯಂತಾ ಜನರಾಲ್ ಸಾಹೇಬರವರ ಮನಸಿನಲ್ಲಿ ಇದೆ. ಈ ಬಗ್ಯೆ ಕೆಲಸಾ ಮಾಡಿದಲ್ಲಿ, ಬಹಳ ಕಿಫಾಯಿತಿ ಕೂಡಿ ಬಂದೀತು ಯಂತಾ, ನಂಮಮನಸಿಗೆ ಕಾಣುತ್ತಾ ಇದೆ. ಮಹಾರಾಜರವರ ಅಪ್ಪಣೆ ಬಂದೀತು. ಈ ಕೆಲಸದಿಂದಾ ತಂಮ ಜನಕ್ಕೂ ಬಹಳ ಕಿಫಾಯಿತಿ ಆದೀತು. ನಮಗೂ ಬಹಳ ಕಿಫಾಯಿತಿ ಕೂಡಿ ಬಂದೀತು. ಈ ಬಗ್ಯೆ ತಂಮ ಅಪ್ಪಣೆ ಜಲ್ದು ಬರಸಿ ಕಳುಹಿದಲ್ಲಿ, ಆ ಕ್ಷಣಾ ನಾವು ಮಸಲತ್ತು ಮಾಡಿಯೇವು. ಈ ಹೊತ್ತು ಈ ಕ್ಷಣಾ ಸಮಾಚಾರ ತರುವ ಬಗ್ಯೆ, ಪೆರಿಯಾಪಟ್ಟಣದ ಕಡೆ ಕೆಲವರ ಸುದ್ದಿ ತರುವ ಬಗ್ಯೆ, ಬಹಳ ಜನಾ ಕಳುಹಿಸಿ ಕಾದುತ್ತೇವೆ. ನಾಳೆ ಸಾಯಂಕಾಲಕ್ಕೆ ಮನಸುಬ ಮಾಡಿ ಹೋಗದಿದ್ದರೆ, ಯತ್ತು, ದನ, ಕರವೆಲ್ಲಾ ದೂರ ಹೋಗಿ ಬಿಡುತ್ತದೆ. ಈ ಬಗ್ಯೆ ತಂಮ ಅಪ್ಪಣೆ ಜಲದು ಆದೀತು. ಇಂಗ್ರೇಜ ಸರಕಾರಕ್ಕೆ ಬಹಳ ಕಿಫಾಯಿತಿ ಕೂಡಿ ಬಂದೀತು. ತಂಮ ಜನಕ್ಕೂ ಬಹಳ ಕಿಫಾಯಿತಿ ಕೂಡಿ ಬಂದೀತು. ತಂಮ ದೊಡ್ಡ ದುಷ್ಮಾನಗೂ ಬಹಳ ಕಷ್ಟ ವಾದೀತು. ತಂಮ ಕೆಲಸ ಫತೆ ಆಗುವಂಥಾದ್ದನ್ನೇ ಮಹಾದೇವನಲ್ಲಿ ಬೇಡಿ ಕೊಳ್ಳುತ್ತಾ ಇದ್ದೇವೆ," ಯಂಬದಾಗಿ ಬರಸಿ ಇದ್ದದರಿಂದಾ, ಆ ಕಾಗದ ನೋಡಿ ಕೊಂಡು, ಮಹಾರಾಜರವರು ಕರಡಿಗೋಡೆಗೆ ಹೋದರು.

ಅಲ್ಲಿ ಇಂಗ್ರೇಜ ಲಷ್ಕರಿನಲ್ಲಿ ಚಾಕರಿ ಮಾಡಿ ಕೊಂಡು ಇದ್ದ ನಂಜರಾಯಪಟ್ಟಣದ ರೈತರು ದೊರೆಗಳವರ ಬಳಿಗೆ ಬಂದು, "ಟೀಪುಸುಲ್ತಾನರ ಕಡೆಯವರು ಬಂದು, ನಂಮ ಮನೆ, ಬದುಕು, ಬಾಳು, ಸರ್ವಸ್ವವಂನು ಲೂ

[1] Mr. Baird.

ಟಿ ಮಾಡಿ ಕೊಂಡು, ಮನೆಮಾರಂನು ಸುಟ್ಟು, ಹೆಂಗಸರು ಮಕ್ಕಳಂನು ಹಿಡಿದು ಕೊಂಡು ಹೋದರು" ಯಂಬದಾಗಿ ಫಿರ್ಯಾದಿ ಮಾಡಿದರಿಂದಾ, "ಒಳ್ಳೇದು. ಈ ದಂಡಿಗೆಲ್ಲಾ ಖಾವಂದರಾಗಿ, ಜನರಾಲ್ ಸಾಹೇಬರು ಇದ್ಧಾರೆ. ಅವರ ಬಳಿಗೆ ಹೋಗಿ, ನೀವೇ ಹೇಳಿ ಕೊಳ್ಳಿ" ಯಂಬದಾಗಿ, ಮಹಾರಾಜರು ಅಪ್ಪಣೆ ಕೊಟ್ಟದರಿಂದಾ, ಆ ರೈತರು ಹೋಗಿ ಕಪಿತಾನ್ ಬೆಡ್ಡೆ ಸಾಹೇಬರವರ ಸಂಗಡ ಹೇಳಿದಲ್ಲಿ, ಅವರು ಆ ರೈತರಂನು ಕರದು ಕೊಂಡು, ಜನರಾಲ್ ಇಷ್ಟ್ಯಾರಟ ಸಾಹೇಬರು ಹಾಟ್ಲಿ ಸಾಹೇಬರವರ ಬಳಿಗೆ ಹೋಗಿ, ಈ ರೈತರ ಮೊಹಾಕ್ಕಿಕತ್ತರ ಯಾವತ್ತೂ ಹೇಳಿದರು.

ಆ ಬಳಿಕ ಕಪಿತಾನ್ ಮಾಹಿನಿ ಸಾಹೇಬರವರು ಮಹಾರಾಜರವರ ತಂಬಿಗೆ ಬಂದು, ಈ ರೈತರ ಫಿರ್ಯಾದಿ ಯೇನು ಯಂಬದಾಗಿ ಕೇಳಿದಲ್ಲಿ, ದಣಿಗಳವರು ಮಾಹಿನಿ ಸಾಹೇಬರ ಕರದು ಕೊಂಡು, ಜನರಾಲ್ ಹಾಟ್ಲಿ ಸಾಹೇಬರವರ ತಂಬಿಗೆ ಹೋದರು. ಅಲ್ಲಿಗೆ ಜನರಾಲ್ ಇಷ್ಟ್ಯಾರಟ ಸಾಹೇಬರವರು ಬಂದರು. ಈ ಮೂವರು ಸಾಹೇಬರು ಕೂಡಿ, "ಈ ರೈತರ ಮೊಹಾಕ್ಕಿಕತ್ತರವೇನು" ಯಂಬದಾಗಿ, ಮಹಾರಾಜರವರ ಸಂಗಡ ಕೇಳಿದಲ್ಲಿ, "ಟಿಪ್ಪುಸುಲ್ತಾನರ ಕಡೆ ಜನ ಬಂದು, ಈ ಮೇರೆ ದುಃಖ್ಖಾ ಕೊಟ್ಟರು" ಯಂಬದಾಗಿ ಹೇಳಿದರು.

ಆವಾಗ್ಗಯೆ "ಸಿದ್ಧೇಶ್ವರನ ಗದ್ದಿಗೆಯಲ್ಲಿ ನಮಗೂ ಟಿಪ್ಪುಸುಲ್ತಾನಿಗೂ ಲಡಾಯವಾದಾಗ್ಗಯೆ, ನಲ್ಲಾ ಮುರ್ರಿತು. ತಾವು ಟಿಪ್ಪುಸುಲ್ತಾನರ ಜನಕ್ಕೆ ದುಃಖ್ಖ ಕೊಡಿ ಯಂದರೆ, ಕೇಳಲಿಲ್ಲಾ. ತಂಮ ಕಡೆ ಜನ ಟಿಪ್ಪುಸುಲ್ತಾನರ ಶೀಮೆಗೆ ನುಗ್ಗಿ ದುಃಖ್ಖ ಕೊಡದೆ ಇದ್ದರೆ, ಅವರು ಇಂನು ಇದೇ ಮೇರೆಗೆ ತಂಮ ಶೀಮೆಗೆ ಬಂದು, ದುಃಖ್ಖ ಕೊಟ್ಟು, ಹಾಳು ಮಾಡ್ಯಾರು. ಇಂನು ಮೇಲೆ ಸುಂಮನೆ ಇದ್ದರೆ, ತಂಮ ಮಾನ ಯೇನಾಯಿತು? ಅದಕ್ಕೆ ಬದಲಾಗಿ ಮಾಡ ಬೇಕು" ಯಂಬದಾಗಿ, ಜನರಾಲ್ ಸಾಹೇಬರವರು ಹೇಳಿದರಿಂದಾ, ಮಹಾರಾಜರವರು ಆ ಮಾತಿಗೆ ಒಪ್ಪಿ ಕೊಂಡು, ಕೊಡಗ ಜನದಲ್ಲಿ ಶೀಮೆ ಬಿಮುಕ್ತಿನ ಸರಹದ್ದಿನ ಪಹಾರೆ ಚೌಕಿಗೂ ಇಂಗ್ರೇಜ ಬಹಾದ್ದರ ಲಷ್ಕರಿನ ಚಾಕರಿಗೂ ಅರೆವಾಸಿ ಮಂದಿ ಇಟ್ಟು ಕೊಂಡು, ಉಳಿಕೆ ಅರೆವಾಸಿ ಮಂದಿಯಂನು ಯರಡು ತುಕ್ಕಡಿ ಮಾಡಿ, ಒಂದು ತುಕ್ಕಡಿಯಂನು, ಕರ್ಣಿಕ ಸುಬ್ಬಯ್ಯ ಕಾರ್ಕಾರ ಬೋಪು ಸಂಗಡ ಕೂಡಿಸಿ, ಕಾಡೆಯಾಲದ ತಾಲೂಕಿನಲ್ಲಿ ಸಾದರಿಬೆಪಾರಿ, ಮೀರ ಮಹಂಮದಲ್ಲಿ ಸಹಾ ಫೌಜ ಕಟ್ಟಿ ಕೊಂಡು ಇದ್ಧಾನಲ್ಲಾ? ಅವನಿಗೆ ತಂಬಿ ಕೊಟ್ಟು, ಅಲ್ಲಿರುವಂಥಾ ಕಿಲ್ಲೆಗಳಂನು ತೆಗದು ಕೊಂಡು, ಆ ಕಡೆ ಶೀಮೆ ಸಾಧಿಸಿ ಕೊಂಡು, ಅಲ್ಲಿ ಶಿಕ್ಕಿದಂಥಾ ರಸದು ಇಂಗ್ರೇಜ ಲಷ್ಕರಿಗೆ ಸಾಗಿಸುವದು" ಯಂಬದಾಗಿ, ಅಪ್ಪಣೆ ಕೊಟ್ಟು ಕಳುಹಿದರು.

ಅದೇ ಮೇರೆ ಮತ್ತೊಂದು ತುಕ್ಕಡಿ ಈಶ್ವರೈಯನ ತಾಬೆಗೆ ಕೊಟ್ಟು, ಹೆಗ್ಗಡದೇವನ ಕ್ವಾಟೆಗೆ ಕಳುಹಿದಲ್ಲಿ, ಅಲ್ಲಿ ಕೆಲವು ಲಡಾಯವಾಗಿ, ಈ ಕಡೆ ಮಂದಿಗೆ ಕೆಲವು ಜಾಯಾ ಆಗಿ, ಅಲ್ಲಿ ಕೆಲವು ಲೂಟಿ ಮಾಡಿ ಕೊಂಡು, ಹುನಶಿ ಕರಡಿಗ್ಗೋಡಲ್ಲು ಮುಂಬಾಯಿ ದಂಡು ಇಳಿದು ಇದ್ದಲ್ಲಿಗೆ ಬಂದರು. ಅವರಿಗೆ ಯೇನೇನು ಶಿಕ್ಕಿತು ಯಂತಾ ಕೇಳಿದ್ದಲ್ಲಿ, "ಟಿಪ್ಪುಸುಲ್ತಾನಿಗೂ ಇಂಗ್ರೇಜಿಯವರಿಗೂ ಸಿದ್ಧೇಶ್ವರನ ಗದ್ದಿಗೆ ಬಳಿಯ ಆದ ಲಡಾಯಿದ ಅವಾಜು ಕೇಳಿ, ಆ ಶೀಮೆ ರೈತರು ತಂಮ ಬದುಕು ಬಾಳು, ದನ ಕರ, ದೂರ ಸಾಗಿಸಿ ಇದ್ಧಾರೆ. ಚಿಂನ ಬೆಳ್ಳಿ ಇದ್ದುದ್ದದಂನು ನೆಲಮರೆ ಮಾಡಿ ಕೊಂಡು ಇದ್ಧಾರೆ. ನಮಗೆ ಯೇನೂ ಶಿಕ್ಕಲಿಲ್ಲಾ. ಸ್ವಲ್ಪ ಯತ್ತು, ದನ, ಕರ, ಆಡು, ಕುರಿ ಶಿಕ್ಕಿತು" ಯಂತಾ, ಆ ಈಶ್ವರೈಯ, ಆ ಜನರು ಸಹಾ ಹೇಳಿ, ತಂದು ತೋರಿಸಿದಲ್ಲಿ, ಮಹಾರಾಜರವರು ಆ ಯತ್ತು, ಆಡು, ಕುರಿ, ಇಂಗ್ರೇಜ ಸರಕಾರಕ್ಕೆ ಕೊಡಿಸಿ, ದಂಡಿಗೆ ಬೇಕಾದ ಅಕ್ಕಿ, ರಸದು, ಮುಸಕುದೆ ಮುಂತಾದದ್ದು ಕೊಡಿಸಿ ಕೊಂಡು, ಲಷ್ಕರಿನ ಸಂಗಡ ಇದ್ದರು.

ಆ ಬಳಿಕ ಬಂಗಾಳದ ಲಾರ್ಡ ಸಾಹೇಬರು ಬರೆಸಿ ಕಳುಹಿಸಿ ಇದ್ದ ಕಾಗದಕ್ಕೆ ಫಾಲ್ಗುಣ ಬ ೭ ಲು ಮಹಾರಾಜರವರು ಬರೆಸಿ ಕಳುಹಿದ ಜವಾಬಿನ ವಿವರಾ: "ತಾವು ಬರೆಸಿ ಕಳುಹಿದ ಕಾಗದವು ಮಾರ್ಚ ಮಹಿನಾ ೪ ನೇ ತಾರೀಕಿನಲ್ಲು ಬಂದು ಮುಟ್ಟಿತು. ಅದರಲ್ಲಿ ಇಂಗ್ರೇಜ ಬಹಾದ್ದರ ಸರಕಾರಕ್ಕೂ ತಮಗೂ ಅತ್ಯಂತ ಬಾಯಿಬಾರ ದ್ವಾಸ್ತಿ ಇರುವದರಿಂದಾ, ಕುಂಪನಿ ಸರಕಾರದಲ್ಲಿ ನಂಮ ಶಾಮೀಲರ ಸಂಗಡ ಯೇನಾದ್ದು ಮನಸುಬಾ ಮಾಡಿದಾಗ್ಗಯೂ, ತಮಗೆ ನಾವು ಚಂನಾಗಿ ಸುದ್ದಿ ಯತ್ತಿಸಿ ಕೊಡುತ್ತೇವೆ. ಇದರ ಮೇಲೆ ಇಂಗ್ರೇಜ ಬಹಾದ್ದರ ಸರಕಾರದಲ್ಲಿ ಯೇನಾದ್ದೂ ಮನಸುಬಾ ಮಾಡಿದಂಥಾದ್ದು ಕಪಿತಾನ್ ಮಾಹಿನಿ ಸಾಹೇಬರು ತಮಗೆ ವಿವರಾನುವಿವರವಾಗಿ ಹೇಳಿ ಮಾಲುಂ ಮಾಡಿ ಇದ್ಧಾರು ಯಂಬ ವಿವರಗಳಾಗಿ ಬರೆಸಿ ಇದ್ದಿರಿ. ಅದೇ ಮೇರೆ ಆ ಕಪಿತಾನ್ ಸಾಹೇಬರು

ನಮಗೆ ತಿಳಿಸಿ ಇದ್ದಾರೆ. ತಂಮ ಕಡೆಯಿಂದಾ ಬಂದ ಕಾಗದದ ವಿವರವಂನು ಈ ಸಾಹೇಬರು ನಮಗೆ ಚಂನಾಗಿ ತಿಳಿಸಿದರು. ಕುಂಪನಿ ಸರಕಾರದ ಕಾರ್ಯಕ್ಕೆ ತಾವು ಮೆಹನತ್ತಿನಿಂದಾ ಕುಂಮಕು ಮಾಡಿ ಇದ್ದೀರಿ ಯಂತಾ, ಬರೆಸಿ ಇದ್ದಿರಿ. ನಂಮಿಂದಾ ಯೇನಾಂದು ಕುಂಮಕು ಕುಂಪನಿ ಕಾರ್ಯದ ಮ್ಯೇಲೆ ಆಗಿ ಇದೆಯೋ, ಅದು ಯಾವತ್ತು ಆ ಕಪಿತಾನ್ ಸಾಹೇಬರ ಕಾಗದಗಳಿಂದಾ ತಂಮ ತಿಜಮತ್ತಿಗೆ ಜಾಹೀರಾಗಿ ಇದ್ದೀತು. ಆ ಸಾಹೇಬರು ಇಂಗ್ರೇಜಿ ಬಹಾದ್ದರ ಸರಕಾರದ ಕಡೆ ವಕೀಲರಾಗಿ ನಂಮ ಬಳಿಯ ಇದ್ದಾರೆ. ಇವರ ನಂಬಿಕೆ ನಂಮ ಮನಸಿನಲ್ಲಿ ಚಂನಾಗಿ ಇದೆ. ಇದು ಕಾರಣ ನಂಮ ಮನಸಿನಲ್ಲಿ ಇರುವ ಅಂತರಂಗ ಯಾವತ್ತೂ ಈ ಸಾಹೇಬರಿಗೆ ಹೇಳಿ ಇದ್ದೇವೆ. ಇದು ಕಾರಣ ನಂಮಲ್ಲಿ ವಿದ್ಯಮಾನ ಯಾವತ್ತು ಈ ಸಾಹೇಬರು ತಮಗೆ ಬರೆಸಿ ಕಳುಹಿಸಿ ಶರುತ ಪಡಿಸುವಲ್ಲಿ, ನಾವು ವಿಶೇಷ ಬರೆಸಿ ಕಳುಹಿ, ತಮಗೆ ಶರುತ ಪಡಿಸ ತಕ್ಕದ್ದು ಯೇನು ಇದೆ" ಯಂಬದಾಗಿಯೂ, ಸಿದ್ಧೇಶ್ವರನ ಗದ್ದಿಗೆಯಲ್ಲಿ ಟೀಪುಸುಲ್ತಾನರು ಬಂದು, ಇಂಗ್ರೇಜಿ ಬಹಾದ್ದರ ಲಷ್ಕರಿನ ಸಂಗಡ ಲಡಾಯಿ ಮಾಡಿ, ಮುಖ್ಯ ಭಂಗಿತವಾಗಿ ಹೋದ ಯಾವತ್ತು ವಿವರವು ಸಹಾ, ಬರದು ಕಳುಹಿ ಕೊಟ್ಟರು.

ಹೀಗೆ ಇರುತ್ತಿದ್ದಲ್ಲಿ, ಕಲಿ ಸಂದ ೪೯೦೧ ನೆ ಸಿದ್ಧಾರ್ಥಿ ಸಂವತ್ಸರದ ಚೈತ್ರ ಶು ೧ ದಿವಸ, ರಸದು ಸಾಗಿಸುವ ಬಗ್ಯೆ, ದೊರೆಗಳವರು ನಾಲ್ಕುನಾಡ ಅರಮನೆಗೆ ಬಂದು ಇದ್ದರು. ಜನರಾಲ್ ಹಾರಿಸ್ ಸಾಹೇಬ ಬಹಾದ್ದರವರು ಬಂಗಾಳದ ದೊಡ್ಡ ಫೌಜ ತೆಗದು ಕೊಂಡು, ನಿಜಾಮಲ್ಲಿ ಖಾನರ ಕೆಲವು ಫೌಜ ಸಮೇತವಾಗಿ, ಶ್ರೀರಂಗಪಟ್ಟಣಕ್ಕೆ ಬಂದರು.

ಆ ಬಳಿಕ ಮುಂಬಾಯಿ ಫೌಜಂನು ಸಾಗಿಸಿ ಕೊಂಡು ಹೋಗುವ ಬಗ್ಯೆ, ಮದುರಾಜಿನ ಕೆಲವು ದಂಡಂನು ತೆಗದು ಕೊಂಡು, ಜನರಾಲ್ ಪ್ಳಾಯಡ್[1] ಸಾಹೇಬ ಬಹಾದ್ದರವರು ಪೆರಿಯಾಪಟ್ಟಣಕ್ಕೆ ಬರುವ ವರ್ತಮಾನ ತಿಳದು, ಜನರಾಲ್ ಇಷ್ಟ್ಯಾರಟ್ ಸಾಹೇಬ ಬಹಾದ್ದರವರು, ಜನರಾಲ್ ಹಾಟ್ಲಿ ಸಾಹೇಬ ಬಹಾದ್ದರವರು ಸಹಾ, ಮುಂಬಾಯಿ ಫೌಜ ಸಮೇತ ಕರಡಿಗ್ಯಾಡಿಂದ ಕೂಚು ಮಾಡಿ, ಗುಂಡಿಪಟ್ಟಣದ ಕೆರೆ ಬಳಿಯ ಹೋಗಿ ಇಳು ಕೊಂಡರು.

ಈ ಸಮಾಚಾರ ಮಹಾರಾಜರು ಕೇಳಿ, ನಾಲ್ಕುನಾಡ ಅರಮನೆಯಿಂದಾ ಹೊರಟು ಮುಂಬಾಯಿ ಲಷ್ಕರು ಇಳಿದು ಇರುವ ಗುಂಡಿಪಟ್ಟಣದ ಬಳಿಗೆ ಹೋಗಿ, ಜನರಾಲ್ ಸಾಹೇಬರವರ ಭೇಟಿ ಆದರು. ಅಷ್ಟರಲ್ಲಿ ಜನರಾಲ್ ಪ್ಳಾಯಡ್ ಸಾಹೇಬ ಬಹಾದ್ದರವರು ಫೌಜ ಸಮೇತ ಪೆರಿಯಾಪಟ್ಟಣಕ್ಕೆ ಬಂದು ಇಳು ಕೊಂಡರು.

ಆ ಮಾರನೆ ದಿವಸ ರಾಜರು, ಜನರಾಲ್ ಹಾಟ್ಲಿ ಸಾಹೇಬ ಬಹಾದ್ದರವರು, ಕಪಿತಾನ್ ಇಷ್ಟ್ಯಾರಟ್ ಸಾಹೇಬರು, ವಕೀಲ್ ಕಪಿತಾನ್ ಮಾಹಿನಿ ಸಾಹೇಬರು ಸಹಾ, ಪೆರಿಯಾಪಟ್ಟಣಕ್ಕೆ ಹೋಗಿ, ಆ ಜನರಾಲ್ ಪ್ಳಾಯಡ್ ಸಾಹೇಬ ಬಹಾದ್ದರವರ ಮಿಲಾಕತು ಮಾಡಿದಲ್ಲಿ, ಅವರು ಸಲಾಂ ಫಿರಂಗಿಗಳ ಹಾರಿಸಿ, ಅವರ ಫೌಜ ಯಾವತ್ತಂನು ತಯಾರು ಮಾಡಿ ನಿಲ್ಲಿಸಿ, ಮಹಾರಾಜರಿಗೆ ತೋರಿಸಿ, ಬಹಳ ಸಂತ್ಯೋಷ ಮಾಡಿದರು.

ಅಷ್ಟರಲ್ಲಿ ಟೀಪುಸುಲ್ತಾನರ ಕಡೆ ಕೆಲವು ಕುದುರೆ ಸವಾರರು ಬಂದು, ಉಭಯ ದಂಡಿನ ಮಧ್ಯೆ ಮೋರ್ಚೆ ಕಟ್ಟಿದ್ದರಿಂದ, ಜನರಾಲ್ ಪ್ಳಾಯಡ್ ಸಾಹೇಬ ಬಹಾದ್ದರವರ ಫೌಜಿಗೂ ಟೀಪುಸುಲ್ತಾನರ ಕಡೆ ಕುದುರೆ ಫೌಜಿಗೂ ಸ್ವಲ್ಪ ಜಗಳವು ಆಯಿತು. ಪುನಶ್ಚ ದೊರೆಗಳು ಬರುವಾಗ್ಯೆ, ಜನರಾಲ್ ಪ್ಳಾಯಡ್ ಸಾಹೇಬ ಬಹಾದ್ದರವರು ತಂಮ ನಡುವಿನಲ್ಲಿ ಕಟ್ಟಿ ಇದ್ದ ಕತ್ತಿಯಂನು ಬಿಚ್ಚಿ "ನಂಮ ದೋಸ್ತಿ ನಿಶಾನಿ ಆಗಿ ತಂಮ ಬಳಿಯ ಮಡಗ ಬೇಕು" ಯಂಬದಾಗಿ ಹೇಳಿ, ವೀರರಾಜೇಂದ್ರ ವಡೆಯರವರ ನಡುವಿಗೆ ಕಟ್ಟಿ, ಟೀಪುಸುಲ್ತಾನರ ಕುದುರೆ ಫೌಜ ಮೋರ್ಚೆ ಕಟ್ಟಿ ಇದ್ದದರಿಂದ, ಕೆಲವು ಕುದುರೆ ಫೌಜಂನು ಕೂಡಿಸಿ, ಕಳುಹಿಸಿ ಕೊಟ್ಟಲ್ಲಿ, ದೊರೆಗಳು ಮುಂಬಾಯಿ ದಂಡಿಗೆ ಬಂದು ತಲಪಿದರು.

ಆವಾಗ್ಯೆ ಜನರಾಲ್ ಇಷ್ಟ್ಯಾರಟ್ ಸಾಹೇಬ ಬಹಾದ್ದರವರು ಬಹಳ ಸಂತ್ಯೋಷ ಪಟ್ಟು "ತಾವು ಈ ಪ್ರಕಾರ ನಮಗೆ ಹೇಳದೆ, ಸ್ವಲ್ಪ ಮಂದಿ ತೆಗದು ಕೊಂಡು ಹೋಗಿ ಇದ್ದಿರಿ. ಮಧ್ಯೆ ಮೋರ್ಚೆಕ್ಕೆ ಟೀಪುಸುಲ್ತಾನರ ಕೆಲವು ಕುದುರೆ ಫೌಜ ಬಂದು ಇತ್ತು. ತಾವು ಅವರ ಕೈಗೆ ಸಿಕ್ಕಿದಿರ್ಯೋ ಯೇನೋ ಯಂಬದಾಗಿ, ನಾವು ಬಹಳ ವ್ಯಾಕುಲದಲ್ಲಿ ಇದ್ದೆವು. ತಾವು ಕ್ಷೇಮದಿಂದಾ ಬಂದದರಿಂದಾ, ನಮಗೆ ಬಲು ಸಂತ್ಯೋಷವಾಯಿತು. ನಾಳೆ

1 General Floyd.

ದಿವಸ ಮುಂಬಾಯಿ ದಂಡು ಕೂಟಾಗುತ್ತದೆ. ಜನರಾಲ್ ಫ್ಳಾಯಡ್ ಸಾಹೇಬರವರು ಚದಿ ಫೌಜ ತೆಗೆದು ಕೊಂಡು ಬಂದು ಇದ್ದಾರೆ. ತಾವು ಕೂಡಿಸಿರುವ ರಸದಿಗೆ ಬೇಕಾದ ಯತ್ತು, ಮೋಟೆ ಸಾಮಾನು ಸಾಗಿಸುವದಕ್ಕೆ ಬೇಕಾದ ಆಳು ಸಹಾ ತೆಗೆದು ಕೊಂಡು ಬರಲಿಲ್ಲಾ. ಈ ಬಗೆ ಮೋಟೆ ಸಾಮಾನವಂನು ಪಟ್ಟಣಾ ಪರಿಯಂತರ ಸಾಗಿಸಿ ಕೊಡ ಬೇಕು» ಯಂತಾ ಹೇಳಿದರು.

ಅದಕ್ಕೆ "ಒಳ್ಳೇದು. ಈಹೋತ್ತು ರಾತ್ರೆ ಒಳಗೆ ನಂಮ ಕಡೆ ಜನ ಶಿಕ್ಕಿದಷ್ಟು ಕೂಡಿಸಿ, ಈ ಮೋಟೆ ಸಾಮಾನವಂನು ಸಾಗಿಸಿ ಕೊಟ್ಟೇವು» ಯಂತಾ ಹೇಳಿ ಒಪ್ಪಿ ಕೊಂಡು, ಆ ದಿವಸ ಮಹಾರಾಜರ ಬಳಿಯ ಇದ್ದ ಜನರ ಯಾವತ್ತು ಮೋಟೆ ಸಾಮಾನ್ ಹೋತ್ತು ತರುವ ಬಗ್ಯೆ ಕಳುಹಿಸಿ, ಸಿದ್ಧೇಶ್ವರನ ಗದ್ದಿಗೆ ಒಂದು ಗಾವುದದ ಸುಮಾರು ದೂರ ಕರಡಿಗ್ಯಾಡಮೋಳದಲ್ಲಿ ಇದ್ದ ಮೋಟೆ ಸಾಮಾನು ಯಾವತ್ತನ್ನು ಆ ದಿನ ರಾತ್ರರಾತ್ರೆಯೇ ಸಿದ್ಧೇಶ್ವರನ ಗದ್ದಿಗೆ ಬಳಿಗೆ ತರಿಸಿ ಹಾಕಿಸಿ, ಬೆಳಿಗ್ಯೆ ಮುಂಬಾಯಿ ದಂಡು ಕೂಟಾಗುವಾಗ್ಯೆ, ಮೋಟೆ ಸಾಮಾನು ಯರಡು ಸಾವಿರ ಜನದ ಮೇಲೆ ಹೋರಿಸಿ ಕೊಂಡು, ನಾವು ನಂಮ ಜನ ಸಹಾ ಲಷ್ಕರಿನ ಸಂಗಡ ಬರುತ್ತೇವೆ ಯಂತಾ, ರಾಜರು ಹೊರಟಲ್ಲಿ, ಜನರಾಲ್ ಇಷ್ಟಾರಟ ಸಾಹೇಬರು ಹೇಳಿದ್ದು: "ತಾವು ಕುಂಪನಿ ಕೆಲಸ ಉದ್ದಿಶ್ಯವಾಗಿ ಬಹಳ ಕಷ್ಟ ಮಾಡಿ ಇದ್ದೀರಿ. ಇಗಲು ತಮಗೆ ಈ ಮೇರೆ ಬಹಳ ಮೇಹನತ್ತು ಆಗುತ್ತದೆ. ಈಗ ಮೋಟೆ ಸಾಮಾನದಿಂದ ಯೇನೂ ಜರೂರು ಇಲ್ಲ. ಈ ದಂಡು ಪಟ್ಟಣಕ್ಕೆ ತಲಪಿದ ಬಳಿಕ, ಇಂನೂ ಹದಿನೈದು ದಿವಸದ ಒಳಗೆ ತಾವು ಇಂಗ್ರೇಜಿ ಲಷ್ಕರಿಗೆ ಜಮಾಯಿಸಿ ಇರುವ ರಸದು ಸಾಗಿಸಿ ಕೊಂಡು ಬರುವ ಬಗ್ಯೆ, ಆರುವತ್ತು ಯಪ್ಪತ್ತು ಸಾವಿರ ಯತ್ತನ್ನು ಸಾಗಿಸಿ ಕೊಂಡು, ಕೆಲವು ದಂಡು ತಂಮ ಶೀಮೆಗೆ ಬಂದೀತು. ಆವಾಗ್ಯೆ ಈ ಮೋಟೆ ಸಾಮಾನು ಹೋರುವ ಬಗ್ಯೆ ಬೇಕಾದ ಆಳು ಬರುತ್ತದೆ. ಆವಾಗ್ಯೆ ವಂದೇ ಸಹಿ ಈ ಮೋಟೆ ಸಾಮಾನು ರಸದು ಸಹಾ ಸಾಗಿಸಿ ಕೊಂಡು ಹೋಗುತ್ತದೆ. ಈಗ ಮೋಟೆ ಸಾಮಾನು ಹಿಂದಕ್ಕೆ ಸಾಗಿಸಿ, ಸಿದ್ಧಾಪುರದಲ್ಲಿ ಜ್ಯಾಪಾನವಾಗಿ ಮಡಗಿಸ ಬೇಕು. ತಾವು ಈಗ ಪಟ್ಟಣಕ್ಕೆ ಬಂದರೆ, ಇಂನು ಹತ್ತು ಹದಿನೈದು ದಿವಸದಲ್ಲಿ ತಂಮ ಶೀಮೆಯಿಂದ ರಸದು ಸಾಗಿಸಿ ಕೊಂಡು ಬರುವ ಬಗ್ಯೆ, ಯತ್ತು ಸಾಗಿಸಿ ಕೊಂಡು, ದಂಡು ಬರುತ್ತದೆ. ಆದ್ದರಿಂದಾ ಇಲ್ಲಿ ಖಾಸ ಕೆಲಸವಿದೆ. ತಾವು ಹಿಂತಿರುಗಿ ಹೋಗಿ, ದಂಡಿಗೆ ಬೇಕಾದ ರಸದು ಸಾಮಾನು ಜಮಾಯಿಸ ಬೇಕು» ಯಂತಾ ಹೇಳಿದ್ದರಿಂದಾ, ಮಹಾರಾಜರು ಪೆರಿಯಾಪಟ್ಟಣದ ಸಮೀಪ ಪರಿಯಂತರ ಹೋಗಿ, ಕೇಳಿ ಕೊಂಡು, ಪುನಃ ಬರುವಾಗ್ಯೆ, ದಂಡಿನ ಸಂಗಡ ರಸದು ತೆಗೆದು ಕೊಂಡು ತಿರುಗುತ್ತಾ ಇದ್ದಂಥಾ ರಾಜರ ಕಡೆ ಯರಡು ಸಾವಿರ ಯತ್ತುಗಳು, ಅದರ ತಪುದಿ ಗ್ಯೋಣಿ ಅಕ್ಕಿ ಸಹಾ, ಒಪ್ಪಿಸಿ ಕೊಟ್ಟು, ಹಿಂದಕ್ಕೆ ಬಂದರು.

ಮುಂಬಾಯಿ ದಂಡು ಪೆರಿಯಾಪಟ್ಟಣದಲ್ಲಿ ಇಳಿದು ಇದ್ದ ದಂಡಿಗೆ ಕೂಡಿ, ಉಭಯ ದಂಡು ಒಟ್ಟಾಗಿ ಕೂಟಾಗಿ, ಪಟ್ಟಣಕ್ಕೆ ಹೋಯಿತು.

ಅಲ್ಲಿಂದಾ ದೊರೆಗಳು, ಕಪಿತಾನ್ ಮಾಹಿನಿ ಸಾಹೇಬರು ಸಹಾ, ವೀರರಾಜೇಂದ್ರಪ್ಯಾಟೆಗೆ ಬರುವಾಗ್ಯೆ, ಆ ಮೋಟೆ ಸಾಮಾನು ಯಾವತ್ತು ಹಿಂದಕ್ಕೆ ಸಿದ್ಧಾಪುರದ ಬಳಿಗೆ ಸಾಗಿಸಿ, ಜ್ಯಾಪಾನವಾಗಿ ಮಡಗಿಸಿ ಗುಂಡಿಪಟ್ಟಣದಿಂದಾ ಸಿದ್ಧಾಪುರ ಪರಿಯಂತರ ದಾರಿ ಮಾರ್ಗದಲ್ಲಿ ಇಂಗ್ರೇಜಿ ಲಷ್ಕರಿನ ಸಾಮಾನು, ಸರಂಜಾಮು, ಲಾಗರಾದ ಯತ್ತುಗಳು, ಅಜಾರಿ ಜನರ ಮುಂತಾಗಿ ಬಿಟ್ಟು ಹೋದಂಥಾದಂನು ವೀರರಾಜೇಂದ್ರಪ್ಯಾಟೆಗೆ ಸಾಗಿಸಿ, ಆ ಅಜಾರಿ ಜನ ಇರುವದಕ್ಕೆ ಬೇಕಾದ ಮನೆಮಾರು ದುರುಸ್ತು ಮಾಡಿಸಿ, ಅವರಿಗೆ ಬೇಕಾದ ಸಾಮಾನು ಒದಗಿಸಿ ಕೊಟ್ಟು, ರಸದು ಸಾಮಾನು ತರಿಸಿ ಜಮಾಯಿಸುತ್ತಾ, ವೀರರಾಜೇಂದ್ರಪ್ಯಾಟೆಯಲ್ಲು ಇದ್ದರು.

ಹೀಗಿರುವಲ್ಲಿ, ಟಿಪ್ಪುಸುಲ್ತಾನರ ತಾಲೂಕಿನವರು ಬಂದು, ದುಃಖ ಕೊಟ್ಟಂಥಾ ಶಿರಂಗಾಲ, ಕೊಣನೂರು, ಹೆಬ್ಬಾಲೆ ಮುಂತಾದ ಗ್ರಾಮಗಳ ರೈತರು ಬಂದು, ನಂಮ ಕುಟುಂಬ ಮಕ್ಕಳ ಆದಿಯಾಗಿ ಸರ್ವಸ್ವವಂನು ಲೂಟಿಸಿ ಕೊಂಡು ಹೋದರು; ನಾವು ಕೆಟ್ಟೇವು ಯಂಬದಾಗಿ ಅರಿಕೆ ಮಾಡಿ ಕೊಂಡದರಿಂದಾ, ಆ ರೈತರ ಸಮಜಾಯಿಸಿ, ಅವರು ಮಾಡಿದ ಮೇರೆ ಅವರಿಗೆ ತಂಬಿ ಸಮುಂಟಾಯಿಸುವಂತೆ ಈಶ್ವರೆಂಥುವಿಗೆ ಅಪ್ಪಣೆ ಕೊಟ್ಟು, ಅವನ ಕಟೆ ಮಾಡಿ ಇದ್ದ ಒಂದು ತುಕ್ಕಡಿ ಜನರಂನು ಅರಕಲಗ್ಯಾಡು, ಕೊಣನೂರು, ಬಸವಾಪಟ್ಟಣದ ಕಡೆಗೆ ಕಳುಹಿಸಿ ಕೊಟ್ಟು, ಮಹಾರಾಜರು ಯೆಳ್ಳೆಂಟು ದಿವಸ ಪರಿಯಂತರ ರಸದು ಸಾಮಾನು ಜಮಾಯಿಸುತ್ತಾ ಇದ್ದದಲ್ಲಿ, ಮೋದಿಖಾನೆಗೆ ಬರು

ವಂಥಾ ರಸದು ನಿಧಾನವಾದ್ದರಿಂದಾ, ಮಡಿಕೇರಿಗೆ ಹೋಗಿ, ಮೋದಿಖಾನೆಗೆ ರಸದು ಹಾಕಿಸುತ್ತೇವೆ, ಯಂಬದಾಗಿ ಮಾಹಿನಿ ಸಾಹೇಬರ ಸಂಗಡ ಹೇಳಿ, ದಾರೆಗಳು ಮಡಿಕೇರಿಗೆ ಬಂದು ಇರುತ್ತಾ ಇದ್ದರು.

ಅಷ್ಟರಲ್ಲಿ ಕಾಡೆಯಾಲದ ತಾಲೂಕಿಗೆ ಕರ್ಣೀಕ ಸುಬ್ಬಯ್ಯ, ಕಾರೆಕಾರ ಬ್ಯಾಮನ ಸಂಗಡ ಕಳುಹಿಸಿ ಇದ್ದ ರಾಜರ ಕಡೆ ಮಂದಿ ಸಂಗಡ ಕುಂಬಳೆ ತಾಲೂಕಿನ ಮಾಪಿಳ್ಳೇರು ಜಗಳ ಮಾಡಿದಲ್ಲಿ, ಆ ಬಳಿಯ ಸ್ವಲ್ಪ ಶಿಕ್ಕಿದಂಥಾದ್ದನ್ನು ಜನರು ಲೂಟಿ ಮಾಡಿದರು ಯಂಬದಾಗಿ ಮಹಾರಾಜರು ಸಮಾಚಾರ ಕೇಳಿ, ಆ ಶೀಮೆಯನ್ನು ಈ ಮೇರೆ ಲೂಟಿಸಿ ಹೋಗಾನು ಮಾಡದೆ, ಕೌಲು ನಂಬಿಗೆ ಕೊಟ್ಟು, ನಮ್ಮ ಹಾಸ್ತಕಿನಲ್ಲಿ ಬಂದುಬಸ್ತು ಮಾಡಿ ಮಡಗುವದು ಯಂಬದಾಗಿ ಅಪ್ಪಣೆ ಕೊಟ್ಟದರಿಂದಾ, ಅದೇ ಮೇರೆ ಮಂಗಲೂರು ತಾಲೂಕಿನ ಬಾರಕೂರು ಬಗ್ವಾಡಿ ಪರಿಯಂತರ ಶೀಮೆಯನ್ನು ಕೌಲು ಕರಾರು ಮಾಡಿ, ಕೌಲಿಗೆ ಬಂದಂಥಾ ಶೀಮೆಯಲ್ಲಿ ಅಲ್ಲಿ ಅಲ್ಲಿ ಠಾಣ್ಯ ಇಟ್ಟು, ಬಂದೂಬಸ್ತು ಮಾಡುತ್ತಾ ಇದ್ದಲ್ಲಿ, ವೀರಖಂಬದ ಬಳಿಯಲ್ಲಿ ಮಹಾರಾಜರ ಕಡೆ ಕಾರೆಕಾರ ಬ್ಯಾಮು, ಐನೂರು ಕೊಡಗು ಜನ ಸಹಾ, ಠಾಣ್ಯ ಇದ್ದದಲ್ಲಿ, ವೀರಖಂಬದಲ್ಲು ಸ್ವಲ್ಪ ಮಂದಿ ಇಟ್ಟು, ಉಳಿಕೆ ಮಂದಿ ಯಲ್ಲಾ ಮುಂದೆ ಶೀಮೆ ಬಂದುಬಸ್ತಿಗೆ ಹೋಗಿ ಇದೆ, ಈಗ ಮಂದಿ ತೆಗದು ಕೊಂಡು ಬಂದರೆ, ಈ ಜನರ ಹಾಡಿಯ ಬಹುದು ಯಂಬದಾಗಿ, ಆ ಶೀಮೆಯವರು ಅಂತರಂಗದಲ್ಲಿ ಸಾದ್ರಿಬೆಹಾರಿಗೆ ಹೇಳಿ ಕಳುಹಿದ್ದರಿಂದಾ, ಅವನು ಕೆಲವು ಬಾರು ಅಹಾಷಾಮ್ ಜನ ಮಾಪಿಳ್ಳೇರ ಸಹಾ ಕಟ್ಟಿ ಕೊಂಡು, ವೀರಖಂಬದಲ್ಲು ಠಾಣ್ಯ ಇದ್ದಂಥಾ ಮಂದಿಗೆ ಗೇರಾಯಿಸಿದಲ್ಲಿ, "ತಾವು ಇರುವದು ಸ್ವಲ್ಪ ಜನಾ, ಇವನು ಬಹಳ ಜನ ಕಟ್ಟಿ ಕೊಂಡು ಬಂದು ಇದ್ಧಾನೆ; ಅವನಾಗಿ ನಮ್ಮ ಮೇಲೆ ಬೀಳುವದಕ್ಕಿಂತಾ, ನಾವೇ ಮುಂದಾಗಿ ಅವನ ಮೇಲೆ ಹೋಗುವಾ" ಯಂತಾ ಮನಸುಬ ಮಾಡಿ ಸಾದ್ರಿಬೇಹಾರಿ ಕಡೆ ಜಮಿಯತ್ತಿನ ಮೇಲೆ ಬಿದ್ದು, ಜಗಳಾ ಮಾಡಿದಲ್ಲಿ, ದಾರೆಗಳ ಕಡೆಯಿದು ಜಕಮಿ ಆದ್ದು, ಮುಖುತವಾದ್ದು ಸಹಾ, ಇಪ್ಪತ್ತಮೂರು ಜನಕ್ಕೆ ಅಪಾಯವಾಯಿತು. ಸಾದ್ರಿಬೆಹಾರಿ ಕಡೆಯದು ನಾನೂರು ಜನ ಪರಿಯಂತರ ಜಾಯಾ ಜಖಮಿ ಆಯಿತು. ಉಳಿಕೆ ಜನ, ಸಾದ್ರಿ ಸಹಾ, ವ್ಯಾಡಿ ಹೋಗಿದರು. ಆವಾಗ್ಯೆ ಅವನು ಹತ್ತುವಂಥಾ ಪಾಲ್ಕಿ, ಕುದುರೆ, ಪಟಬ ಸರದಾರು, ಕ್ಷತ್ರಿ ಕೃಷ್ಣರಾಜ ಯಂಬವ ಸಹಾ ಶಿಕ್ಕಿದ್ದರಿಂದಾ, ಆ ಕೃಷ್ಣರಾಜ ಯಂಬವನ ರಾಜರ ಬಳಿಗೆ ಕಳುಹಿ ಕೊಟ್ಟಲ್ಲಿ, ಅವನನ್ನು ಕಪಿತಾನ್ ಮಾಹಿನಿ ಸಾಹೇಬರ ಬಳಿಗೆ ಕಳುಹಿದರು. ಈ ಲಡಾಯಿದಲ್ಲಿ ಶಿಕ್ಕಿದಂಥಾದ್ದನ್ನು ಕೊಡಗು ಮಂದಿ ಲೂಟಿ ಮಾಡಿ ಕೊಂಡರು.

ಇದೇ ಮೇರೆ ಬಂಟವಾಳದಲ್ಲಿ ಕೆಲವು ಮಂದಿ ಠಾಣ್ಯ ಇದ್ದಲ್ಲಿ, ಆಸಫ ಮೀರ್ ಮಹಾಂಮದಲ್ಲಿ ಯಂಬವನು ಐನೂರು ಜನ ಪರಿಯಂತರ ತೆಗದು ಕೊಂಡು ಬಂದು, ಆ ಠಾಣ್ಯದ ಮಂದಿ ಮೇಲೆ ಬಿದ್ದಲ್ಲಿ, ಬಂಟವಾಳದ ಹೊಳೆ ಆಚೆಯಲ್ಲು ಸ್ವಲ್ಪ ಕೊಡಗು ಜನ ಠಾಣ್ಯ ಇದ್ದವರು ಸುದ್ದಿ ಕೇಳಿ, ಆ ಬಂಟವಾಳದಲ್ಲು ಇದ್ದವರ ಬಳಿಗೆ ಹೋಗಿ, ಕೂಡಿ ಕೊಂಡು, ಸದರಿ ಆಸಫನ ಮಂದಿ ಮೇಲೆ ಜಗಳಾ ಮಾಡಿದಲ್ಲಿ, ಈ ಕಡೆ ಜನಕ್ಕೆ ಜಖಮಿ ಆದ್ದು ಮುಖುತವಾದದ್ದು ಸಹಾ, ಮೂವತ್ತು ಜನಕ್ಕೆ ಅಪಾಯವಾಯಿತು. ಆ ಕಡೆಯದು ಐವತ್ತು ಜನ ಪರಿಯಂತರ ಜಾಯಾ ಜಖಮಿ ಆಯಿತು. ಆ ಆಸಫನು ಉಳಿಕೆ ಮಂದಿ ತೆಗದು ಕೊಂಡು, ವ್ಯಾಡಿ ಹೋಗಿದನು. ಆ ಲಡಾಯಿದಲ್ಲಿ ಶಿಕ್ಕಿದಂಥಾದ್ದನ್ನು ಕೊಡಗು ಜನರು ಲೂಟಿ ಮಾಡಿದರು. ಇದಲ್ಲದೆ, ಉದ್ಯಾವರ ಯಂಬಲ್ಲಿಯೂ ಇದೇ ಮೇರೆ ಐನೂರು ಜನ ಕೊಡಗರು ಠಾಣ್ಯ ಇದ್ದಲ್ಲಿ, ಸಾದ್ರಿಬೇಹಾರಿಯು ತನ್ನ ಕಡೆ ಕೆಲವು ಬಾರು ಕರ್ನಾಟಕ ಜನ, ಮೀರ್ ಮಹಾಂಮದಲ್ಲಿ ಕಡೆ ಐನೂರು ಕಂದಾಚಾರದ ಜನ, ಮೂನಾಂತಡಲನ ಕಡೆ ನಾಯಿಮಾರರು, ಉದ್ಯಾವರದ ಮಾಪಿಳ್ಳೇರು ಸಹಾ, ಮೂರು ಸಾವಿರ ಜನ ಪರಿಯಂತರ ಕಟ್ಟಿ ಕೊಂಡು ಬಂದು, ಆ ಕೊಡಗು ಮಂದಿ ಮೇಲೆ ಬಿದ್ದಲ್ಲಿ, ಜಗಳವಾಗಿ ಅವರ ಕಡೆ ಜನಕ್ಕೆ ಪೆಟ್ಟಾದ್ದರಿಂದಾ, ಅವರು ನಿಲ್ಲಲಾರದೆ, ವ್ಯಾಡಿ ಹೋಗಿ, ಒಂದು ಮಜೀದಿ ಹೊಕ್ಕಕೊಂಡು, ಆ ಆಶ್ರಯದ ಮೇಲೆ ಜಗಳಾ ಮಾಡಿದರಿಂದಾ, ಕೊಡಗು ಮಂದಿಯು ಮಜೀದಿಗೆ ಬೆಂಕಿ ಹಾಕಿ, ಮೇಲೆ ಬಿದ್ದು ಜಗಳಾ ಮಾಡಿದಲ್ಲಿ, ಕೊಡಗು ಜನಕ್ಕೆ ಜಕಮಿ ಆದದ್ದು ಮುಖುತವಾದದ್ದು ಸಹಾ ಐವತ್ತೊಂದು ಜನಕ್ಕೆ ಅಪಾಯ ಬಂತು. ಅವರ ಕಡೆಯದು ಯೆಳ್ನೂರು ಯಂಟುನೂರು ಪರಿಯಂತರ ಜನಕ್ಕೆ ಜಾಯಾ ಜಕಮಿ ಆಗಿ, ಉಳಿಕೆ ಮಂದಿ, ಸಾದ್ರಿಬೇಹಾರಿ ಸಹಾ, ವ್ಯಾಡಿ ಹೋಗಿದರು. ಅಲ್ಲಿ ಶಿಕ್ಕಿದಂಥಾದ್ದನ್ನು ಕೊಡಗು ಮಂದಿ ಲೂಟಿ ಮಾಡಿದರು. ಇದು ಹೊರತು ಮತ್ತೆಲ್ಲಿಯೂ ಶೀಮೆ ಲೂಟಿಸದೆ,

ಆ ಕಡೆ ಮಂಗಲೂರು ತಾಲೂಕು, ಕಾಡೆಯಾಲದ ಆಚೆಗೆ ಬಾರಕೂರು ಬಗ್ವಾಡಿ ಪರಿಯಂತರ, ಈ ಕಡೆ ಹಾಸಂಗಡಿ ಗಟ್ಟ ಪರಿಯಂತರ, ಟೀಪುವ ರಾಜ್ಯದ ಶೀಮೆಯನು ಕೌಲು ಮಾಡಿ, ಅಲ್ಲಿ ಅಲ್ಲಿ ಠಾಣ್ಯ ಇಟ್ಟು, ಬಂದು ಬಸ್ತು ಮಾಡಿ. ತಂಮ ಹಸ್ತಕಿನಲ್ಲಿ ಇಟ್ಟು ಇದ್ದರು.

ಈ ಪ್ರಕಾರ ಆದ ಲಡಾಯಿದ ಕೈಫಿಯತ್ತಾಗಿ ವಕೀಲ್ ಕಪಿತಾನ್ ಮಾಹಿನಿ ಸಾಹೇಬರಿಗೆ ಮಹಾರಾಜರವರು ಬರದು ಕಳುಹಿದಲ್ಲಿ: "ಈ ಮೇರೆ ಫತ್ತೆ ಆದಂಥಾದ್ದ ತಿಳಿದು, ಬಹಳ ಸಂತೋಷವಾಯಿತು. ಸಾದರಿಬಹಾರಿಯು ಯೋಚಿಸಿದ್ದಂಥಾದ್ದಕ್ಕೆ ತಕ್ಕ ತಂಬಿ ಹೊಂಚಾಯಿಸಿದ್ದು ಬಹಳ ಒಳ್ಳೆದಾಯಿತು" ಯಂಬದಾಗಿ ಜವಾಬು ಬರದು ಕಳುಹಿದರು.

ಆ ಬಳಿಕ ಕಾಡಗು ಮಂದಿಯು ಬೆಳ್ಳಾರೆ ಕ್ವಾಟೆಗೆ ಯರಡು ಮೂರು ದಿವಸ ಪರಿಯಂತರ ಮುತ್ತಿಗೆ ಹಾಕಿ ಲಡಾಯಿ ಮಾಡಿ, ಆ ಕ್ವಾಟೆಯನು ಹಲ್ಲಾ ಹಾಕಿ ತೆಗದು ಕಾಂಡರು. ಆವಾಗ್ಯೆ ಯರಡು ಕಡೆ ಜನಕ್ಕೂ ಅಪಾಯವಾಯಿತು. ಆ ಕ್ವಾಟೆಯಲ್ಲಿ ಶಿಕ್ಕಿದಂಥಾದ್ದನು ಕಾಡಗು ಜನರು ಲೂಟಿ ಮಾಡಿ ಕಾಂಡರು. ಮೂಡ ಕಾಡೆಯಾಲದ ಕ್ವಾಟೆಯವರು ಇದ್ದೇ ಮೇರೆ ಕಾಡಗ ಜನರ ಮೇಲೆ ಸ್ವಲ್ಪ ಜಗಳಾ ಮಾಡಿ, ಕೌಲಿಗೆ ಇಳಿದದ್ದರಿಂದಾ, ಆ ಕ್ವಾಟೆ ಜನಕ್ಕೆ ಲೂಟಿ ಮಾಡದೆ, ದುಃಖ ಕಾಡದೆ ಬಿಟ್ಟು, ಈ ವಿವರವನು ವಕೀಲ್ ಮಾಹಿನಿ ಸಾಹೇಬರವರಿಗೆ ಬರೆಸಿ ಕಳುಹಿದಲ್ಲಿ, ಅವರು ಚೈತ್ರ ಬ ೧ಲಿ ಬರೆಸಿ ಕಳುಹಿದ ಕಾಗದದಲ್ಲಿ: "ಬೆಳ್ಳಾರೆ ಕ್ವಾಟೆ, ಮೂಡ ಕಾಡೆಯಾಲದ ಕ್ವಾಟೆ ಸಮಾಚಾರ ಬರಸಿದ್ದು ಕೇಳಿದಲ್ಲಿ, ಬಲು ಚಾತುರ್ಯ, ಧೈರ್ಯ, ಬಹಾದ್ದರಿತನ ಸಹಾ, ತೋರ ಪಟ್ಟಿತು. ಬಂಟವಾಳದಲ್ಲಿ ಮೀರಹುಸಾಮದಲ್ಲಿ ತವ,[1] ಮೀರಜುಂಬದಲ್ಲಿ ಸಾದರಿಬೇಹಾರಿ ತವ ಸಹಾ, ಲಡಾಯಿವಾದ ಹೂವಾಸ್ತಿತರ ಅದೇ ದಿನ ಕಲ್ಲಿಕ್ವಾಟೆ ಕಮೀತರ್ ಸಾಹೇಬರವರಿಗೆ ಬರಸಿ ಕಳುಹಿದಲ್ಲಿ, ತಾವು ಮಾಡಿದಂಥಾದ್ದು ನಂಮ ಸರಕಾರಕ್ಕೆ ಹಿಂಮತ್ತಾಯಿತು. ಇದರಿಂದಾ ತಂಮ ಧೀರತ್ವದ ಯಾದು ಸಹಾ ಬಹು ತಾರೀಪು ಮಾಡಿ, ಜವಾಬು ಬರೆಸಿ ಕಳುಹಿಸಿ ಇದ್ಧಾರೆ. ಆದ್ದರಿಂದಾ ಈಗ ಬೆಳ್ಳಾರೆ ಕ್ವಾಟೆ, ಮೂಡ ಕಾಡೆಯಾಲದ ಕ್ವಾಟೆ ಸಮಾಚಾರವನು ಬರೆಸಿ ಕಳುಹಿಸಿ ಇದ್ಧೇವೆ. ಈ ವಿವರ ಅವರು ಕೇಳುತ್ತಲೇ, ಮತ್ತೂ ಬಹಳ ಸಂತೋಷವಾದರು," ಯಂತಾ ಬರದು ಇದ್ದರು.

ಇತ್ತಲಾಗಿ ಅರಕಲಗೋಡ ಕಡೆಗೆ ಕಳುಹಿಸಿ ಇದ್ದ ಈಶ್ವರೈಯನು ಮಂದಿ ತೆಗದು ಕಾಂಡು ಹೋಗಿ, ಬಸವಾಪಟ್ಟಣದ ಕ್ವಾಟೆಗೆ ಮುತ್ತಿದಲ್ಲಿ, ಆ ಕ್ವಾಟೆಯವರು ಕಾಡಗು ಮಂದಿ ಮೇಲೆ ಜಗಳಾ ಮಾಡಿದಲ್ಲಿ, ಆವಾಗ ಕಾಡಗು ಮಂದಿಯು ಹಲ್ಲಾ ಹಾಕಿ, ಕ್ವಾಟೆ ತೆಗದು ಕಾಂಡಲ್ಲಿ, ಈ ಕಡೆ ಜನಕ್ಕೆ ಜಖಮಿ ಆದ್ದು, ಮೌಯಿತವಾದ್ದು ಸಹಾ, ಇಪ್ಪತ್ತಯ್ದು ಜನಕ್ಕೆ ಅಪಾಯವಾಯಿತು. ಆ ಕಿಲ್ಲೆಯ[2] ಒಳಗೆ ಇದ್ದಿ ಹಯಾದೆ ಜನತ್ತೆಲ್ಲಾ ತಂಬಿ ಹೊಂಚಾಯಿಸಿ, ಅಲ್ಲಿ ಶಿಕ್ಕಿದ್ದನು ಲೂಟಿ ಮಾಡಿ ಕಾಂಡರು. ಹೆಂಡರು ಮಕ್ಕಳು ಹೋದಂಥಾ ರೈತರು ನಾಲ್ವತ್ತಮೂರು ಹೆಂಗಂನು ಹಿಡುಕಾಂಡು ಬಂದರು. ಆವಾಗ್ಯೆ ಬಸವಾಪಟ್ಟಣದ ಅರುಗೆ ಸುತ್ತಾ ಸ್ವಲ್ಪ ಶೀಮೆಯನು ಲೂಟಿ ಮಾಡಿದರು. ಅಷ್ಟರಲ್ಲಿ ಗಡಿ ಸರಹಾದ್ದಿನ ಶೀಮೆಯವರು ಈಶ್ವರೈಯನ ಬಳಿಗೆ ಬಂದು, ಕೌಲು ಮಾಡಿದ್ದರಿಂದಾ, ಕೌಲಿಗೆ ಬಂದಂಥವರಿಗೆ ಕೌಲು ನಂಬಿಗೆ ಕಾಟ್ಟು, ದಿಲ್ಭರವಸಾ[3] ಹೇಳಿ, ಬಂದು ಬಸ್ತು ಮಾಡಿ ಕಾಂಡು, ಈಶ್ವರೈಯನು ಹೀಗೆ ಇರುತ್ತಿದ್ದಲ್ಲಿ, ಚೈತ್ರ ಬ ೩೦ ಯು, ಶನಿವಾರ ದಿವಸ, ಪಟ್ಟಣದಲ್ಲಿ ಫಿರಂಗಿ ಅವಾಜು[4] ಬಂದಾಯಿತು. ಮತ್ತೆ ಯಂಟು ದಿನ ಪರಿಯಂತರ ಪಟ್ಟಣದ ಸಮಾಚಾರ ಯೇನೂ ಬರಲಿಲ್ಲವಾದ್ದರಿಂದಾ, ಈ ಪ್ರಕಾರ ಪಟ್ಟಣದಲ್ಲಿ ಫಿರಂಗಿ ಅವಾಜ ನಿಂತಿತು; ಯೇನಾಯಿತೋ ಯಂಬದಾಗಿ, ಕಾಡಗಿನ ಮಹಾರಾಜರು ಮನಸಿನಲ್ಲಿ ವಿಚಾರಿಸಿ ಕಾಂಡು ಇದ್ದಲ್ಲಿ, ಅಷ್ಟರ ಒಳಗೆ ಪಟ್ಟಣಾ ಹೋದ ಯಂಟನೆ ದಿನ ವಕೀಲ್ ಕಪಿತಾನ್ ಮಾಹಿನಿ ಸಾಹೇಬರವರು ವೈಶಾಖ, ಶು ೭ ಯು, ಶನಿವಾರ ದಿವಸ, ಬರೆಸಿ ಕಳುಹಿದ ಕಾಗದದಲ್ಲಿ: "ಇಂದಿಗೆ ೮ ನೆ ದಿನ, ಚೈತ್ರ ಬ ೩೦ ಯು, ಶನಿವಾರ ದಿವಸ, ಇಂಗ್ರೇಜ ಬಹಾದ್ದರವರು ಶ್ರೀರಂಗಪಟ್ಟಣಾ ಹಲ್ಲಾ ಮಾಡಿ ತೆಗದು ಕಾಂಡರು. ಹಲ್ಲಾ ಮಾಡುವ ವೇಳೆಯಕ್ಕೆ ಟೀಪುಸುಲ್ತಾನರು ತೀರಿ ಹೋದರು. ಅವರ ಹೆಂಗಸರು ಮಕ್ಕಳು ಯಲ್ಲಾ ನಂಮ ಕೈಗೆ ಶಿಕ್ಕಿದರು. ಈಗ ಜನರಾಲ್ ಸಾಹೇಬರು ಮುಂಬಾಯಿ ಫೌಜ

1 ತವ. Gramya for ಬಳಿಯ. 2 ಕೋಟೆಯ. 3 ಮನಾಭರವಸ. 4 ಶಬ್ದ.

ಸಹಾ, ಈ ಕಡೆಗೆ ಬರುತ್ತಾ ಇದೆ. ಆದ್ದರಿಂದಾ ಬಹಳ ಕಾರ್ಯ ಇರುತ್ತಾ ಇದೆ. ತಾವು ಶೀಘ್ರ ಬರ ಬೇಕು. ತಾವು ಬಂದ ಮೇಲೆ, ಯೆಲ್ಲಾ ತಿಳಿಯಲಾದೀತು" ಯಂಬದಾಗಿ, ಬರದ ಕಾಗದ ಆದಿತ್ಯವಾರ ದಿನ ಬಂದು ಮುಟ್ಟಿತು. ಆ ಕಾಗದ ವೋದಿಸಿ[1] ಕೇಳಿದರಿಂದಾ, ಮಹಾರಾಜರು ಬಹಳ ಸಂತೋಷ ಮಾಡಿ ಕೊಂಡು, ಇಂಗ್ರೇಜಿ ಸರಕಾರಕ್ಕೆ ಫತ್ತೆ ಆದ ಸಂತೋಷದ ಬಗ್ಯೆ ಮಡಿಕೇರಿ ಕೋಟೆಯಲ್ಲು ಇಪ್ಪತ್ತೊಂದು ಫಿರಂಗಿ ಹಾರಿಸಿದರು. ಆ ಮಾರನೆ ಸೋಮವಾರ ದಿವಸ ಮಹಾರಾಜರವರು ವೀರರಾಜೇಂದ್ರಪೇಟೆಗೆ ಹೋದಲ್ಲಿ, ಮಾಹಿನಿ ಸಾಹೇಬರು ಹೇಳಿದ ವಿವರ: ಚೈತ್ರ ಬ ೩೦ ಯು, ಶನಿವಾರ ದಿವಸ, ಇಂಗ್ರೇಜಿ ಬಹಾದ್ದರರ ಲಷ್ಕರು ಹಲ್ಲಾ ಮಾಡಿ, ಪಟ್ಟಣವಂನು ತೆಗದು ಕೊಂಡರು. ಇಂತು ಆ ಸೀಮೆ ಯೆಲ್ಲಾ ಇಂಗ್ರೇಜಿ ಸರಕಾರದ್ದಾಯಿತು. ಇಂನು ತಾವು ಲಡಾಯಿ ಮೊಖೂಫು ಮಾಡಿ, ತಂಮ ಕೈ ವಳಗೆ ಬಂದು ಇರುವ ಸೀಮೆ ಯೆಲ್ಲಾ ಕುಂಪನಿ ಸರಕಾರಕ್ಕೆ ಬಿಟ್ಟು, ತಂಮ ಸೀಮೆಗೆ ಹರಾಕು ಇಂಗ್ರೇಜಿ ಸರಕಾರದ ಇಂಜಿನೇರು ಇಮಿಟಂನ್ ಸಾಹೇಬರು[2] ಬಂದು, ಗಡಿ ಕಲ್ಲು ಹಾಕಿ, ತಮಿಲ್ಯಲಲ್ಲು ಬರ ಕೊಂಡು ಹೋದ ಗಡಿ ಬಂದ ಹಾಗೆ, ತಂಮ ಸೀಮೆ ತಾವು ಬಂದುಬಸ್ತು ಮಾಡಿ ಕೊಳ್ಳ ಬೇಕು" ಯಂತಾ ಹೇಳಿದರಿಂದಾ, "ನಾವು ಕೆಲು ಮಾಡಿ ಇರುವಂಥಾ ಸೀಮೆಯಲ್ಲಿ ಮಡಗಿ ಇರುವ ಠಾಣೆಯ ತೆಗದು ಬಿಟ್ಟರೆ, ಟಿಪುಸುಲ್ತಾನರ ಕಡೆ ಇದ್ದಂಥಾ ಕುಂಟರು ಸೀಮೆಗೆ ದುಖ್ಖ ಕೊಟ್ಟಾರಲ್ಲಾ?" ಯಂತಾ ಹೇಳಿದ್ದಕ್ಕೆ, "ಮುಂಬಾಯಿ ಲಷ್ಕರು ಬರುತ್ತದೆ. ಆ ಪರಿಯಂತರ ಈಗಿನ ಮೇರೆ ತಂಮ ಹಸ್ತಕದಲ್ಲು ಇಟ್ಟು ಇರ ಬೇಕು. ಜನರಾಲ್ ಸಾಹೇಬರು ಹೇಳಿದ ಮೇರೆ ಮಾಡ ಬಹುದು" ಯಂಬದಾಗಿ, ಮಾಹಿನಿ ಸಾಹೇಬರವರು ಹೇಳಿದ್ದರಿಂದಾ, ಆಕ್ಷಣ ಇದೇ ವಿವರವಾಗಿ ಈಶ್ವರಯ್ಯನಿಗೆ ಮಹಾರಾಜರು, ಅದೇ ಸೋಮವಾರ ದಿವಸ, ಬರದು ಕಳುಹಿದ ನಿರೂಪ ಅವರು ದುಗ್ಗದ ಸೀಮೆ ಪರಾಂತೆಯದಲ್ಲಿ ಇದ್ದಲ್ಲಿ ಬುಧವಾರ ದಿವಸ ಹೋಗಿ ಮುಟ್ಟಿತು.

ಅದಕ್ಕೆ ಈಶ್ವರಯ್ಯನು ಬರ ಕೊಂಡ ಬಿಂನವತ್ತಳೆಯಲ್ಲಿ: "ಬಸವಾಪಟ್ಟಣದ ಕೋಟೆ ಹಲ್ಲಾ ಮಾಡಿ, ನಂಮ ಮಂದಿ ತೆಗದು ಕೊಳ್ಳುವ ಪರಿಯಂತರ, ಸ್ವಲ್ಪ ಲೂಟಿ ಆದ್ದು ಆಯಿತು. ಆ ಮೇಲೆ ಯೆಲ್ಲಿಯೂ ಸೀಮೆ ಲೂಟಿ ಮಾಡದೆ, ಕೆಲು ನಂಬಿಗೆ ಕೊಟ್ಟು ಇಟ್ಟು ಇದ್ದೇನೆ. ಇಂನು ಮುಂದೂ ಲೂಟಿ ಲಬಾಡು ಮಾಡದೆ, ಅವಹಗೆ ಪ್ರಕಾರ ನಡ ಕೊಳ್ಳುತ್ತೇನೆ" ಯಂತಾ, ಬಿಂನವತ್ತಳೆ ಬರ ಕೊಂಡು ಇದ್ದಾ.

ಇದೇ ವಿವರವಾಗಿ ಪಟ್ಟಣ ಹೋದ ಹತ್ತನೆ ಸೋಮವಾರ ಬರದ ನಿರೂಪವಂನು ಮಂಗಲೂರ ತಾಲೂಕಿಗೆ ಹೋಗಿ ಇದ್ದಂಥಾ ರಾಜರ ಕಡೆ ಮಂದಿಗೆ ಕಳುಹಿದಲ್ಲಿ, ಆ ನಿರೂಪವು ಯೆರಡು ದಿವಸಕ್ಕೆ ಹೋಗಿ ಮುಟ್ಟುವಲ್ಲಿಗೆ ಮುಟ್ಟಿತು. ಮೂರು ದಿವಸಕ್ಕೆ ಮುಟ್ಟುವಲ್ಲಿಗೆ ಮುಟ್ಟಿತು. ನಾಲ್ಕು ಐದು ದಿವಸಕ್ಕೆ ಮುಟ್ಟುವಲ್ಲಿಗೆ ಮುಟ್ಟಿತು. ಕೊಡೆಯಾಲದ ಆಚೆ ಬಾಕೂರು ಬಗವಾಡಿ ಪರಿಯಂತರ ಸೀಮೆ ಸಾಧಿಸಿ, ಠಾಣೆಯ ಇದ್ದ ಜನಕ್ಕೆ ಯೇಳು ಯೆಂಟು ದಿವಸಕ್ಕೆ ಮುಟ್ಟುವಂಥಾದ್ದು ಮುಟ್ಟಿತು. ಈ ಮೇರೆ, ಇಲ್ಲಿ ಇದ್ದ ವಕೀಲ ಮಾಹಿನಿ ಸಾಹೇಬರವರು ಹೇಳಿದ ಮೇರೆ, ವೀರರಾಜೇಂದ್ರ ವಡೆಯರವರು ತಂಮ ಕಡೆ ಜನಕ್ಕೆ ನಿರೂಪ ಬರೆಸಿ ಕಳುಹಿಸಿದಂಥಾದ್ದು ಮುಟ್ಟಿದ ಮೇಲೆ, ಸೀಮೆ ಲೂಟಿ ಲಬಾಡು ಮಾಡದೆ, ಬಂದುಬಸ್ತು ಮಾಡಿ ಕೊಂಡು ಇದ್ದರು.

ಹೀಗೆ ಇರುವಾಗ್ಯೆ, ಟಿಪುಸುಲ್ತಾನರ ಸಂಗಡ ಲಡಾಯಿ ಶುರು ಆಗುವಾಗ್ಯೆ: "ಪೇಶ್ವೆಯವರು ತಂಮ ಫೌಜಂನು ಟಿಪುಸುಲ್ತಾನರ ಮೇಲೆ ಲಡಾಯಿಕ್ಕೆ ಕಳುಹುತ್ತೇವೆ. ಈ ಬಗ್ಯೆ ನಂಮ ಬಳಿಯ ಇರುವದೆಲ್ಲಾ ಕುದುರೆ ಫೌಜ್ಯೆ ಸರಿ. ಅದುಕಾರಣ ತಂಮ ಕಡೆಯಿಂದಾ ಕೆಲವು ಪೌಜ ಕಳುಹಿಸ ಬೇಕು. ಅವರ ಸಂಗಡ ಕೂಡಿಸಿ ಕಳುಹಿಸುತ್ತೇವೆ" ಯಂಬದಾಗಿ, ಮುಂಬಾಯಿ ಗವರ್ನರ್ ಸಾಹೇಬರವರಿಗೆ ಕಾಗದ ಬರಸಿ ಕಳುಹಿಸಿ ಇದ್ದದರಿಂದಾ, ಅದೇ ಪ್ರಕಾರ ಗವರ್ನರ್ ಸಾಹೇಬರವರು ಮುಂಬಾಯಿಯಿಂದಾ ಪಾದಶಾಯಿ ರೆಜಿಮಿಟ್ಟು ವಂದು,[3] ಶಿಪಾಯಿ ಪಟಾಲಂ ಯೆರಡು ಸಹಾ, ಪೇಶ್ವೆಯವರ ಬಳಿಗೆ ಕಳುಹಿಸಿದಲ್ಲಿ, ಆ ಪೇಶ್ವೆಯವರು "ಫೌಜಂನು ಇಂದು ನಾಳೆ ಕಳುಹಿಸುತ್ತೇವೆ" ಯಂಬದಾಗಿ, ಹೋದಂಥಾ ರೆಜಿಮಿಟ್ಟು, ಪಟಾಲಂ ಸಹಾ, ಅಲ್ಲಿಯೇ ನಿಲ್ಲಿಸಿ ಕೊಂಡು, ಕಡೆಗೆ: "ಈಗ ನಂಮ

1 The letter was probably written by Capt. Mahony himself in English and read and translated to the Rajah by some Moonshee. 2 Mr. Emmett. 3 One European Regiment.

ವಳಗೆ ಗಮುಹಾಥದ್ರ ಕಲಹವಾಗಿ ಇದೆ. ಇದಂನು ತಿಳಿಸದೆ, ಫೌಜಂನು ಕಳುಹುವ ಬಗ್ಗೆಯು, ಸಂದರ್ಭ ಆಗುವ ದಿಲ್ಲ. ಈಗ ನೀವು ಹೋಗಿ ಯಂತ, ಹೇಳಿದ್ದರಿಂದಾ, ಆ ರೆಜಿಮಿಟ್ಟು, ಪಟಾಲಂ ಸರದಾರರು ಸಹಾ, ಶ್ರೀರಂಗ ಪಟ್ಟಣಕ್ಕೆ ಹೋಗುವ ಬಗ್ಗೆಯು, ಮುಂಬಾಯಿಗಾಗಿ ಬಂದು, ಕಾದಾನ ಶೀಮೆ ವಳಗೆ ಬಂದು, ಕರಡಿಗ್ಗಾಡಲ್ಲು ಇಳಿದು ಇದ್ದರು.

ಅಷ್ಟರಲ್ಲಿ ಜನರಾಲ್ ಇಷ್ಟಾರಟ ಸಾಹೇಬ ಬಹಾದ್ದರವರು ಶ್ರೀರಂಗ ಪಟ್ಟಣವಂನು ಜಯಿಸಿ, ಪುನಶ್ಚ ಬಂದು, ಪೆರಿಯಪಟ್ಟಣದ ಇಲಾಖೆ ಮುಕ್ಕೂರಲ್ಲು ಇಳಿದರು. ಆವಾಗ್ಯೆ ವೀರರಾಜೇಂದ್ರ ವಡೆಯರವರು, ಕಪಿತಾನ್ ಮೂಹಿನಿ ಸಾಹೇಬರು ಸಹಾ, ಅಲ್ಲಿಗೆ ಹೋಗಿ, ಆ ಜನರಾಲ್ ಸಾಹೇಬರವರ ಮಿಲಾಖತು ಮಾಡಿದಲ್ಲಿ, ಅವರು ಮಹಾರಾಜರ ಸಂಗಡ ಹೇಳಿದ ವಿವರ: „ಇಂಗ್ರೇಜ ಕುಂಪನಿ ಸರಕಾರದ ಕೆಲಸಕ್ಕೆ ತಾವು ಬಹಳ ಮೆಹನತು ಮಾಡಿದಿರಿ. ಆ ನಿಂಮ ಅಪೇಕ್ಷೆ ಮೇರೆ ಸರಕಾರದ ಕೆಲಸವು ಫತೆ ಆಯಿತು. ಈ ಉಪಕಾರ ನಂಮ್ಮೇಲೆ ಬಹಳ ಆಯಿತು„ ಯಂಬದಾಗಿ, ಹೇಳಿದಲ್ಲಿ, "ನಂಮ ದುಷ್ಮನರು ದೂರವಾದರು, ನಂಮ ಅಪೇಕ್ಷೆ ಮೇರೆ ಅನಂತ ದೇಶ, ಕೋಶ, ಐಶ್ವರ್ಯ, ಪಟ್ಟಣದ ಕೋಟೆ ಮುಂತಾಗಿ ಇಂಗ್ರೇಜ ಬಹಾದ್ದರ ಸರಕಾರ ತಾಬೆ ಆಯಿತು. ಇದರ ತೋಪು[1] ಹಾಕು ಹಾಲಿಲ್ಲಿ ಒಂದು ಹಾಲಾದರೂ ನಂಮಿಂದಾ ಆಗದು. ನಂಮ ಶೀಮೆ ಸುತ್ತಲು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಶೀಮೆ ಆಯಿತು. ಇದರಿಂದಾ ನಂಮ ಮನಸಿಗೆ ಬಹಳ ಸಂತೋಷವಾಯಿತು„ ಯಂಬದಾಗಿ ಮಹಾರಾಜರವರು ಹೇಳಿದರು. "ಕರಡಿಗ್ಗಾಡಲ್ಲು ಇಳಿದು ಇದ್ದ ರೆಜಿಮಿಟ್ಟು, ಪಟಾಲಂ ಸಹಾ, ಬಂದು ನಂಮ ದಂಡಿಗೆ ಕೂಡಿದರೆ, ಈ ದಂಡು ಆ ದಂಡು ಸಹಾ ಒಟ್ಟಾಗಿ ಗಟ್ಟಾ ಇಳಿಯುವಾಗ್ಯೆ, ಬಹಳ ಹರಿಯಾಸ ಆದೀತು. ಆದ್ದರಿಂದಾ ಒಂದಾಂದು ಮಜಲು ನೀವು ಮುಂದಾಗಿ ಹೋಗಿ„ ಯಂತ ಜನರಾಲ್ ಸಾಹೇಬರು ಆ ರೆಜಿಮಿಟ್ಟು ಪಟಾಲಂಮಿಗೆ ಸಹಾ ಹುಕುಂ ಕೊಟ್ಟು, ಅದ್ಯೇ ಮೇರೆ ರವಾನೆ ಮಾಡಿದರು.

ಆ ಬಳಿಕ ಬಂಗಾಳದ ದಾಡದ ದಂಡಂನು ತೆಗದು ಕೊಂಡು, ಶ್ರೀರಂಗಪಟ್ಟಣಕ್ಕೆ ಬಂದು ಇದ್ದ ಜನರಾಲ್ ಹಾರಿಸ್ ಸಾಹೇಬ ಬಹಾದ್ದರವರು ಸಂನ್ ೧೭೯೯ ನೇ ಇಸವಿ, ಮೇ ಮಾಸ, ೨೩ ನೇ ತಾರೀಖಿನಲ್ಲು, ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ಶ್ರೀರಂಗಪಟ್ಟಣ ತೆಗದು ಕೊಂಡದರಿಂಲೂ, ಟೀಪುಸುಲ್ತಾನರು ಲಡಾಯಿದಲ್ಲಿ ಬಿದ್ದು ಹೋದ್ದರಿಂದಲೂ, ಈ ಖುಷಿ ಸಮಾಚಾರ ತಮಗೆ ತಿಳಿಯುವ ಬಗ್ಗೆಯ ಬರೆಸಿ ಕಳುಹಿಸಿ ಇದ್ದೇವೆ. ಮೊದಲು ಕಪಿತಾನ್ ಮೂಹಿನಿ ಸಾಹೇಬರವರ ಮುಖಾಂತರದಿಂದಾ ತಿಳಿದು ಇದ್ದೀತು. ಈ ಸಂತೋಷದ ವರ್ತಮಾನ ಜನರಾಲ್ ಇಷ್ಟಾರಟ ಸಾಹೇಬರವರು ತಮಗೆ ತಿಳಿಸಿದಿಸಾಯಿರು. ತಾವು ಕುಂಪನಿ ಸರಕಾರದ ಕೆಲಸಕ್ಕೆ ಬಹಳ ಮೆಹನತು ಮಾಡಿ ಇದ್ದೀರಿ. ಇದು ಯಾವಾಗ್ಯೂ ಮರೆಯಲಿಕ್ಕಿಲ್ಲಾ. ತಂಮ ಕೀರ್ತಿ ಈ ದುನಿಯಾ[2] ಮೇಲೆ ಬಹಳ ದೊಡ್ಡದಾಗುವ ಹಾಗೆ, ಜನರಾಲ್ ಇಷ್ಟಾರಟ ಸಾಹೇಬರವರಿಗೆ ತಿಳಿಯ ಹೇಳಿ ಇದ್ದೇವೆ. ಆ ನಂಮ ಪ್ರೀತಿಯಿಂದಾ ತಮಗೆ ಒಂದು ಒಳ್ಳೇ ವಸ್ತು ಜನರಾಲ್ ಇಷ್ಟಾರಟ ಸಾಹೇಬರವರ ಸಂಗಡ ಕಳುಹುತ್ತಾ ಇದೆ. ಅದರಿಂದಾ ತಮಗೆ ಪರಾಂಬರಿಕೆ ಆದೀತು. ಟೀಪುಸುಲ್ತಾನರ ಸವಾರಿ ಖಾಸು ಕುದುರೆ ಒಂದು, ಅಂಬಾರಿ ಒಂದು, ಪಾಲ್ಕಿ ಒಂದು ಸಹಾ, ಈ ಜನರಾಲ್ ಸಾಹೇಬರವರ ಸಂಗಡ ತಮಗೆ ಕೊಟ್ಟು ಕಳುಹಿಸಿ ಇದೆ. ಇದರ ಮೇಲೆ ತಮಗೆ ಶೀಮೆ ಭೂಮಿ ಯಾವತ್ತು ವಿಸ್ತಾರವಾಗಿ ಆಗ ತಕ್ಕಂಥಾ ಅಪೇಕ್ಷೆಯಿಂದಾ ಇದ್ದೇವೆ„ ಯಂಬದಾಗಿ ಬರೆಸಿ ಕಳುಹಿಸಿ ಇದ್ದಂಥಾ ಕಾಗದ, ಕುದುರೆ, ಪಾಲ್ಕಿ, ಅಂಬಾರಿ ಸಹಾ, ಜನರಾಲ್ ಇಷ್ಟಾರಟ್ ಸಾಹೇಬರವರು ವೀರರಾಜೇಂದ್ರ ವಡೆಯರವರಿಗೆ ಕೊಟ್ಟು, ಅವರ ಕಡೆಯಿಂದಾ ಟೀಪುಸುಲ್ತಾನರು ಹತ್ತುವಂಥಾ ಕುದುರೆ ಒಂದು, ಜನರಾಲ್ ಹಾರ್ಟಲಿ ಸಾಹೇಬರವರ ಕುದುರೆ ಒಂದು ಸಹಾ, ಮಹಾರಾಜರಿಗೆ ಕೊಟ್ಟು, ಬಹಳ ಖುಷಿ ಮಾಡಿದರು.

ಆ ಬಳಿಕ ಜನರಾಲ್ ಹಾರಿಸ ಸಾಹೇಬ ಬಹಾದ್ದರವರಿಗೆ ಮೇಶಾಖ ಬ ೬ ಲು ಬರೆಸಿ ಕಳುಹಿಸಿದ ಕಾಗದ್ದದ ವಿವರ: "ಇಂಗ್ರೇಜ ಬರಹದಲ್ಲು ತಾವು ಬರಸಿ ಕಳುಹಿದ ಕಾಗದ ಬಂದು ಮುಟ್ಟಿತು. ಮನಸಿಗೆ ಬಹಳ ಸಂತೋಷವಾಯಿತು. ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಬಹಳ ಸಹಾಯ ಉಪಕಾರ ಮಾಡಿ ಇದ್ದೀರಿ ಯಂತ, ಬಹು ತಾರೀಫು ಮಾಡಿ, ಬರಸಿ ಇದ್ದೀರಿ. ಈ ಬಗ್ಗೆಯ ನಾವ್ಯೇನೂ ಅಂಥಾ ಸಹಾಯ ಸಂಪತ್ತು ಬಹಳವಾಗಿ

[1] ಹಾಗಳಕೆ. [2] ಲೋಕದ.

ಮಾಡಿದ್ದಾಗ ಇಲ್ಲಾ. ನಂಮ ಸೀಮೆಯು ಗಿಡ ಸೀಮೆ, ಬಹು ಚಿಕ್ಕದದ್ದು. ಇಂಗ್ರೇಜಿ ಸರಕಾರ ಯಂದರೆ, ಬಹಳ ದೊಡ್ಡ ಸರಕಾರ ಇದೆ. ನಾವೇನೂ ಅಂಥಾ ಸಹಾಯ ಮಾಡಿದ್ದಾಗ, ನಂಮ ಮನಸಿಗೆ ತೋರುವದಿಲ್ಲಾ. ನಾವು ಸ್ವಲ್ಪ ಮಾಡಿದ್ದಗ್ಯೂ, ತಾವು ದೊಡ್ಡ ಸರದಾರರಾದ್ದರಿಂದಾ, ಬಹಳ ತಾರೀಫು ಮಾಡಿ ಬರಸಿ ಕಳುಹಿಸಿ ಇದ್ದೀರಿ. ಮನಸಿಗೆ ಸಂತೋಷವಾಯಿತು. ಟೀಪುಸುಲ್ತಾನರು ನಮಗೆ ಬಹಳ ದೊಡ್ಡ ದುಷ್ಮಾನರಾಗಿ ಇದ್ದರು. ಹಿಂದೂ ಜಾತಿ, ಧರ್ಮವೆಲ್ಲಾ ಕೆಡಿಸಿ, ಧರ್ಮ ನಡೆಯದಂತೆ ಮಾಡಿ ಇದ್ದರು. ಅಂಥಾವರಿಗೆ ತಾವು ನಿಗ್ರಹಿಸಿದ್ದರಿಂದಾ, ಹಿಂದೂ ಜಾತಿಗೆಲ್ಲಾ ಖುಷಿ ಆಯಿತು. ತಂಮ ಸರಕಾರಕ್ಕೆ ಬಹಳ ಪುಣ್ಯಧರ್ಮ ಬಂತು. ತಮಗೆ ಕೀರ್ತಿ ಬಂತು. ಟೀಪುಸುಲ್ತಾನರು ಇಷ್ಟು ಬೇಗ ಈ ಮೇರೆ ಆಗುವಂಥಾದ್ದು ಮನುಷ್ಯರ ಯೋಚನೆ ವಳಗೆ ಇರಲಿಲ್ಲಾ. ತಂಮ ಭುಜಬಲಪರಾಕ್ರಮದಿಂದಾ ನಿಗ್ರಹಿಸಿ, ಹಿಂದೂ ಜಾತಿ ಧರ್ಮ ಉಳಿಸಿದ ಪುಣ್ಯ ಸೂರ್ಯ ಚಂದ್ರ ಇರುವ ಪರಿಯಂತರ ತಂಮ ಕೀರ್ತಿ ಶಾಶ್ವತವಾಯಿತು. ಇದಂನು ನಾವು ಯಷ್ಟು ಯಂತ, ಕಾಗದದಲ್ಲಿ ಬರೆಯ ಬೇಕು! ಅಂಥಾ ಬಹಾದ್ದರ ಕೆಲಸ ಮಾಡಿ ಇದ್ದೀರಿ. ಮೇಲಾಗಿ ತಾವು ಮೆಹರ್ಬಾನಗಿ ಇಟ್ಟು, ಟೀಪುಸುಲ್ತಾನರ ಖಾಸಾ ಸವಾರಿ ಕುದುರೆ ವಂದು ಕಳುಹಿದ್ದು ಸರಿಯಷ್ಟೆ. ಆ ಕುದುರೆ ಬಂದು ಮುಟ್ಟಿತು. ಇದು ಬಲು ಹೆಚ್ಚಿನ ಕುದುರೆ, ಜನರಾಲ್ ಸಾಹೇಬರವರ ಮುಖಾಂತರ ಬಂದು ತಲಪಿತು. ಇದಲ್ಲದೆ ಟೀಪುಸುಲ್ತಾನರ ಖಾಸಾ ಪಾಲ್ಕಿ ವಂದು, ಅಂಬಾರಿ ವಂದು ಸಹಾ, ಬಂದು ಮುಟ್ಟಿದರಿಂದಾ, ಅದ ನೋಡಿ ನಂಮ ಮನಸಿಗೆ ಬಹಳ ಸಂತೋಷ ವಾಯಿತು. ಮೇಲಾಗಿ ಇಲ್ಲಿ ನಡದಂಥಾ ಯಾವತ್ತು ವಿವರವು ಕಪಿತಾನ್ ಮಾಹಿನಿ ಸಾಹೇಬರು ತಮಗೆ ಬರಸಿ ಕಳುಹಿಸಿ ಇರುವಲ್ಲಿ, ಹೆಚ್ಚಾಗಿ ಬರೆಯ ತಕ್ಕದ್ದು ಯೇನು ಇದೆ?" ಯಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಜನರಾಲ್ ಇಷ್ಟ್ಯೂರಟ್ ಸಾಹೇಬರವರು, ಜನರಾಲ್ ಹಾರ್ಟ್ಲಿ ಸಾಹೇಬರವರು ಸಹಾ, ನಾವು ಕಂಣೂರಿಗೆ ಸಾಗಿ ಹೋಗುತ್ತೇವೆ; ದಂಡಿನ ಅಜಾರಿ ಜನರ ಸಾಗಿಸಿ ಕೊಡ ಬೇಕೆಂಬದಾಗಿ ದೊರೆಗಳ ಸಂಗಡ ಹೇಳಿದರಿಂದಾ ಅದಕ್ಕೆ ಬೇಕಾದ ಜನ ಕೂಡಿಸಿ, ಕಂಣೂರಿಗೆ ಸಾಗಿಸಿ, ರಾಜರು ಆ ಜನರಾಲ್ ಸಾಹೇಬರವರ ಸಂಗಡ ಕಂಣೂರಿಗೆ ಹೋದಲ್ಲಿ, ಸಲಾಂ ಫಿರಂಗಿಗಳ ಹಾರಿಸಿ, ಬಹಳ ಖುಷಿ ಮಾಡಿದರು.

ಹೀಗೆ ಯೆಳೆಂಟು ದಿನ ಅಲ್ಲಿ ಇರುತ್ತಿದ್ದಲ್ಲಿ, "ನಂಮ ಹಸ್ತಕಿನಲ್ಲಿ ಬಂದುಬಸ್ತು ಮಾಡಿ ಇಟ್ಟಿರುವ ಸೀಮೆಯಂನು ಯಾರ ಹಸ್ತಕಿಗೆ ಕೊಡ ಬೇಕು" ಯಂತ, ಮಹಾರಾಜರು ಕೇಳಿದಲ್ಲಿ, "ಮಂಗಲೂರ ತಾಲೂಕಿಗೆ ಕರ್ನಲ್ ವೈಜಿಮಂನ್ ಸಾಹೇಬರು[1] ಬರುತ್ತಾರೆ. ಅವರ ತಾಬೆ ಮಾಡ ಬೇಕು" ಯಂತ, ಜನರಾಲ್ ಸಾಹೇಬರು ಹೇಳಿದರಿಂದಾ, ಅದೇ ಪ್ರಕಾರ: "ಆ ಸಾಹೇಬರು ಬಂದಲ್ಲಿ ನಾವು ಬಂದುಬಸ್ತು ಮಾಡಿ ಇರುವ ಸೀಮೆಯಂನು ಅವರ ತಾಬೆ ಮಾಡಿ ಬರುವದು" ಯಂಬದಾಗಿ, ಕರ್ಣೀಕ ಸುಬ್ಬೆಯನಿಗೆ ನಿರೂಪ ಬರಸಿ ಕಳುಹಿದರು.

ಜನರಾಲ್ ಸಾಹೇಬರು: "ನಾವು ವಿಲಾಯಿತಿಗೆ ಹೋಗುತ್ತೇವೆ. ತಾವು ಕುಂಪನಿ ಸರಕಾರದ ಕೆಲಸಕ್ಕೆ ಬಹಳ ಮೆಹನತ್ತು ಪಟ್ಟು, ಪರಾಗಿ ಪ್ರಯತ್ನ ಮಾಡಿ, ಬಹಳ ಸಹಾಯ ಸಂಪತ್ತು ಮಾಡಿ ಇದ್ದೀರಿ. ನಂಮ ಕಡೆಯಿಂದಾ ಯೇನು ಆಗ ಬೇಕು. ಆ ವಿವರ ಹೇಳಿದರೆ, ಮಾಡಿ ಕೊಟ್ಟೇವು. ಈ ಬಗ್ಗೆ ಅಂದ್ಯೇಶ ವಿಲ್ಲದೆ ಹೇಳ ಬೇಕು" ಯಂಬದಾಗಿ ಬಹಳ ಬಗೆಯಿಂದಾ ಕೇಳಿದಲ್ಲಿ, "ನಾವು ದ್ಯಾನತಿಯಿಂದಾ ಕುಂಪನಿ ಸರಕಾರದ ಕೆಲಸದಲ್ಲಿ ಸಹಾಯ ಸಂಪತ್ತು ಮಾಡಿದ್ದಕ್ಕೆ ದ್ಯಾನತಿ ನಿಶಾನಿ ಆಗಿ, ಸೂರ್ಯ ಚಂದ್ರ ಇರುವ ಪರಿಯಂತರ ಸ್ಥಿರವಾಗಿ ಇರುವ ಮೇರೆಗೆ, ಇಂಗ್ರೇಜಿ ಬಹಾದ್ದರ ಸರಕಾರದಿಂದಾ, ಆ ಸರಕಾರದ ನಿಶಾನಿ, ಲಾರ್ಡ ಸಾಹೇಬ್ ಬಹಾದ್ದರವರ ನಿಶಾನಿ ಸಹಾ, ಹಾಕಿದಂಥಾ ಕತ್ತಿ ವಂದು, ತಂಮ ಛಾಪಟೀರ ವಂದು, ಈ ಯರಡು ಪಡವೆ ಬೇಕೆಂಬ ಅಪೇಕ್ಷೆ ನಂಮ ಮನಸಿನಲ್ಲಿ ಬಹಳ ಇದೆ" ಯಂಬದಾಗಿ, ದೊರೆಗಳು ಹೇಳಿದಲ್ಲಿ, "ಇದಂನು ನಾವು ಕಳುಹಿಸಿ ಕೊಡುತ್ತೇವೆ" ಯಂಬದಾಗಿ ವಹಿಸಿ ಕೊಂಡು, ಜನರಾಲ್ ಇಷ್ಟ್ಯೂರಟ ಸಾಹೇಬರವರು ಕಂಣಾನೂರಿಂದಾ ಜಾಜ ಹತ್ತಿ, ಮದರಾಜಿಗೆ, ಲಾರ್ಡ ಮಾರಿಂಗ್ಟನ್ ಸಾಹೇಬ ಬಹಾದ್ದರವರ ಬಳಿಗೆ, ಹೋದರು. ವೀರರಾಜೇಂದ್ರ ವಡೆಯರವರು ತಂಮ ರಾಜ್ಯಕ್ಕೆ ಬಂದು, ತಂಮ ಸಂಸ್ಥಾನದಲ್ಲಿ ಕ್ಷೇಮದಿಂದಾ ಇರುತ್ತಿದ್ದರು.

ಆ ಮೇಲೆ ಕೆಲವು ದಿನ ಕಳೆದ ಬಳಿಕ, ಸಂನ್ ೧೭೯೯ ನೆ ಹಿಜಿರಿ, ಜೀಕಾದ ತಿಂಗಳು, ಪಂಚ್ಛಾತನೆ ತಾರೀಕಿನಲ್ಲು,

[1] Colonel Wiseman.

ಬಂಗಾಳದ ಮಹಾರಾಜಶ್ರೀ ಗವರನರ, ಲಾರ್ಡ ಮಾರನಿಂಗಟನ್ ಸಾಹೇಬ್ ಬಹಾದ್ದರವರು ಮಹಾರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ತಾವು ನಂಮ ಸರಕಾರಕ್ಕೆ ಒಳ್ಳೇದು ಆಗ ಬೇಕು ಯಂತ, ಶ್ರೇಯಸ್ಸು ಹಾರೈಸುವಂಥಾದ್ದು, ಸರಕಾರದ ಕೆಲಸ ನಡೆಯುವ ಬಗ್ಗೆ ಪ್ರಯತ್ನ ಪಟ್ಟು ಮಾಡುವಂಥಾದ್ದು ಸಹಾ, ಮಲೆವಾರಿ ಕಮಿಶನ್ ಸಾಹೇಬರವರ ಕಾಗದದಿಂದಾ ಆಗಾಗ್ಯೆ ನಮಗೆ ತಿಳಿಯ ಬರುತ್ತಾ ಇದೆ. ತಂಮ ಒಳ್ಳೇತನ ಯಾವತ್ತು ನಂಮ ಹೃದಯದಲ್ಲು ಚಿತ್ರ ಬರದು ಇದೆ. ಆದ್ದರಿಂದಾ ಒಳ್ಳೇದಾಗಿ ತಮಗೆ ಸಮಾಚಾರ ಕೊಡುತ್ತೇವೆ. ಮೊದಲು ಲಡಾಯಿದಲ್ಲು ತಾವು ಪ್ರಾಣಪ್ರಯತ್ನ ಮಾಡಿ, ಒಳ್ಳೇ ಮನಸಿನಿಂದಾ ಸಹಾಯವಾಗಿ ಮಾಡಿದಂಥಾದ್ದು ಸಹಾ ನಮಗೆ ಚಂನಾಗಿ ತಿಳಿದು ಇದೆ. ಈಗಲೂ ಅದೇ ಮೇರೆ ಪ್ರಾಣಪ್ರಯತ್ನ ಮಾಡ್ತೀರಿ ಯಂತ, ನಾವು ಅಪೇಕ್ಷೆ ಮಾಡಿ ಇದ್ದೇವೆ. ಇದರಿಂದಾ ಮೊದಲೇ ಈ ವಿವರ ದೋಸ್ತಿ ಕಾಗದದ ಒಳಗೆ, ದೋಸ್ತಿಯಿಂದಾ ಈ ಕೆಲಸ ಮಾಡ ಬೇಕಾಗುತ್ತಾ ಇದೆ ಯಂಬದಾಗಿ, ಬರದು ಇತ್ತು. ತಾವು ಮಾಡಿದಂಥಾದ್ದು ನಂಮ ಮನಸಿನಲ್ಲಿ ಅಪೇಕ್ಷೆ ಇದ್ದದ್ದಕ್ಕೂ ಹೆಚ್ಚಾಗಿ ತಿಳಿಯ ಬಂತು. ಬಹಳ ನಿರ್ಮಲ ಮನಸಿನಿಂದಾ ಪ್ರಾಣಪ್ರಯತ್ನ ಪಟ್ಟು, ಮಾಡ ಬೇಕೆಂಬ ದೃಷ್ಟಿ ಇಟ್ಟು ಇರುವಂಥಾದ್ದು ಮಾಲುಂ ಆಯಿತು. ಬಹಳ ಬಹುಮಾನವಾದ ಮಾರ್ಗಹಿಡಿದು, ಯೇನಾಂದ್ರೂ ಸರಕಾರದ ಕೆಲಸ ಮಾಡುವಲ್ಲಿ, ಸಮಯ ಬಿದ್ದ ಹಾಗೆ, ಹಿಂಮತ್ತಿನಿಂದಾ, ಧೀರತ್ವದಿಂದಾ, ಬುದ್ಧಿ ಚಾತುರ್ಯದಿಂದಾ, ಸರಕಾರದ ಕೆಲಸದ ಮೇಲೆ ಬಂದ ಕೆಲಸಕ್ಕೆ ನಂಮ ಮನಸಿನಲ್ಲಿ ಇದ್ದದ್ದಕ್ಕಿಂತಾ ಹೆಚ್ಚಾಗಿ ಮಾಡಿದಿರಿ. ತಂಮ ಬುದ್ಧಿಯೂ ನಡತೆಯೂ ದೋಸ್ತಿಯಿಂದಾ ನಡವಂಥಾದ್ದು[1] ಸಹಾ ನಮಗೆ ಬಹಳ ಪಸಂದು ಇದೆ. ಇಂನು ಸರಕಾರದ ಕೆಲಸಕ್ಕೆ ತಾವು ಇದೇ ಮೇರೆ ಪ್ರಯತ್ನ ಮಾಡ್ತೀರಿ ಯಂಬದು ನಂಮ ಮನಸಿನಲ್ಲಿ ನಿಶ್ಚಯವಿದೆ. ಇದರ ಮೇಲೆ ನಾವು ಬರೆಯುವಂಥಾದ್ದು ಹೆಚ್ಚು ಇದೆ. ತಂಮ ಒಳ್ಳೇ ನಡತೆ ನಂಮಮನಸಿಗೆ ಒಡಂಬಟ್ಟು, ಸಂತೋಷವಾಗಿ ಇರುವದಂನು ಜಾಹೀರು ಆಗುವ ಬಗ್ಗೆ ವರುಷಂಪ್ರತಿಯಲ್ಲು ಕುಂಪನಿ ಸರಕಾರಕ್ಕೆ ತಾವು ಕೊಡುವಂಥಾ ಖಂಡಣೀ ಹಣ ಸರಕಾರದಿಂದಾ ತಮಗೆ ಮಾಫು ಮಾಡಿ ಬರದು ಇದ್ದೇವೆ. ಇಂನು ಮುಂದೆ ತಾವು ಯೇನಾದರೂ ಒಂದು ಒಡವೆ, ದೋಸ್ತಿ ನಿಶಾನಿ ಉದ್ದಿಶ್ಯ, ವರುಷಂಪ್ರತಿಯಲ್ಲು ಸರಕಾರಕ್ಕೆ ಕೊಡುತ್ತಾ ಇರ ಬೇಕು. ಕಪಿತಾನ್ ಮಾಪಿನಿ ಸಾಹೇಬ ಬಹಾದ್ದರವರು, ಸಾಹೇಬ ಮುಷಫಕ್ ಬಿಸಿಯಾರ್ ಮೆಹರಬಾನ್ ಅಮೀನುಲ್ಮುಲ್ಕ್ ಜನಾಟನ್ ಡಾಂಕಿನ್ ಸಾಹೇಬ ಬಹಾದ್ದರ, ಗಜನ್ ಪರಜನ್ ಮುಂಬಾಯಿ ದೊಡ್ಡ ಸಾಹೇಬರು ಸಹಾ, ಯಾವದೊಂದು ಇದರ ವಿವರ ಇದೆಯೋ, ಅದಂನು ಹುಕುಂ ಮೇರೆ ಜಾಹೀರು ಮಾಡಿದಲ್ಲಿ ತಿಳಿಯ ಬಂದೀತು. ಇಂಗ್ರೇಜ ಸರಕಾರದ ಆಶ್ರಯಹಿಡಿದು, ಒಳ್ಳೇದು ಹಾರೈಸುವಂಥವರಿಗೆ ಒಳ್ಳೇದು ಮಾಡುವ ಬಗ್ಗೆ, ಸರಕಾರದಿಂದಾ ನಾವು ಕಾಯಂ ಆಗಿ ಇರುವದು ಯಾವತ್ತು ಜನರಿಗೂ ತಿಳಿದು ಇದೆ. ಇದರಿಂದಾ ತಮಗೆ ಲಾಜಿಂ ಅದೆ. ಆ ಖಂಡಣೀ ಮಾಫು ಮಾಡಿದಂಥಾದ್ದು ಇಂಗ್ರೇಜ ಬಹಾದ್ದರ ಕುಂಪನಿ ಮೆಹರಬಾನಗಿ, ಸಂತೋಷ, ಮನಸಿನಲ್ಲಿ ಪ್ರೀತಿ, ನಿಂಮ ತಾರೀಫು, ಒಳ್ಳೇ ನಡತೆ ಒಡಂಬಟ್ಟು ಇದೆ ಯಂತ, ತಿಳಿಯ ಬೇಕು." ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಬದಲು ದರ ಜವಾಬು ಜ್ಯೇಷ್ಟ ಶು ೩ ಲು ಮಹಾರಾಜರವರು ಬರದ ಕಾಗದದ ವಿವರ: "ತಾವು ಬರೆಸಿ ಕಳುಹಿದ ಕಾಗದದಲ್ಲಿ ಇಂಗ್ರೇಜ ಕುಂಪನಿ ಸರಕಾರಕ್ಕೆ ಬಹಳ ಸಹಾಯ ಸಂಪತ್ತು ಉಪಕಾರ ಮಾಡಿ ಇದ್ದೀರಿ ಯಂತ, ಬರೆಸಿ ಇದ್ದೀರಿ. ಈ ಬಗ್ಗೆ ನಂಮ ಸೇವೆಯು ಬಹಳ ಚಿಕ್ಕದು. ಅದರ ಮೇಲೆ ಗಿಡ ಶೀಮೆ. ಇದು ಕಾರಣ ಇಂಗ್ರೇಜ ದೊಡ್ಡ ಸರಕಾರಕ್ಕೆ ಬೇಕಾದ ಉಪಕಾರ ಮಾಡಿ, ಶಾಬಾಸು ತೆಗದು ಕೊಳ್ಳುವಂಥಾದ್ದಕ್ಕೆ ನಮಗೆ ಅಷ್ಟು ತ್ರಾಣವಿಲ್ಲಾ. ಆದಾಗ್ಯೂ ಇಂಗ್ರೇಜ ಸರಕಾರದ ಆಶ್ರಯದಲ್ಲಿ ಇರುವಂಥವರ, ಇಂಗ್ರೇಜ ಸರಕಾರಕ್ಕೆ ದೋಸ್ತುದಾರರಾಗಿ ಇರುವ ನಂಮಂಥವರ ಸಹಾ ಸರ್ವರಂನು ರಕ್ಷಣೀಯ ಮಾಡುವದಕ್ಕೆ, ಹಿಂದುಸ್ಥಾನದಲ್ಲಿ ಯಾವತ್ತಕ್ಕೂ ತಾವು ಬಹಳ ದೊಡ್ಡ ಸಾಹೇಬರು ಇದ್ದೀರಿ. ನಾವು ವಿಚಾರಿಸಿ ನೋಡಿದರೆ, ಇಂಗ್ರೇಜ ಬಹಾದ್ದರ ಸರಕಾರಕ್ಕೆ ಕುಂಮಕು ಮದತ್ತು ನಾವು ಬಹಳವಾಗಿ ಮಾಡಿದ್ದಾಗಿ ಕಾಣುವದಿಲ್ಲಾ. ಇದಲ್ಲದೆ ಟೀಪು ಸುಲ್ತಾನರು ನಮಗೆ ಪರಮ ಹಗೆ ಆಗಿ ಇದ್ದರು. ಹಿಂದೂ ಜಾತಿ ಧರ್ಮವಂನೆಲ್ಲಾ ಕೆಡಿಸಿ, ಧರ್ಮ ನಡೆಯದಂತೆ

1 ನಡೆಯುವಂಥಾದ್ದು.

ಮಾಡಿ ಇದ್ದರು. ಅವರಂನು ಇಂಗ್ರೇಜ ಬಹಾದ್ದರ ಸರಕಾರದಿಂದಾ ನಿಗ್ರಹಿಸಿದ್ದರಿಂದಾ, ನಂಮ ಮನಸಿನಲ್ಲಿ ಇದ್ದಂಥಾದ್ದು ಲಕ್ಷಿಸಿತು. ಹಿಂದೂ ಜಾತಿಗೆ ಯಾವತ್ತಕ್ಕೂ ಬಹಳ ಸಂತೋಷವಾಯಿತು. ಇಂಗ್ರೇಜ ಬಹಾದ್ದರ ಸರಕಾರಕ್ಕೆ ಬಹಳ ಪುಂಣ್ಯಧರ್ಮಕೀರ್ತಿ ಬಂತು. ಟೀಪುಸುಲ್ತಾನರು ಇಷ್ಟು ಬೇಗ ಈ ಮೇರೆ ಆದಾರು ಯಂಬದು ಮನುಷ್ಯರ ಯೋಚನೆ ವಳಗೆ ಇತ್ತಿಲ್ಲಾ[1]. ಅವರಂನು ತಂಮ ಭುಜಬಲಪರಾಕ್ರಮದಿಂದಾ ನಿಗ್ರಹಿಸಿದ ಕಾರಣ, ಹಿಂದೂ ಜಾತಿ ಧರ್ಮ ಉಳಿಸಿದ ಪುಂಣ್ಯಕೀರ್ತಿ ಸಹಾ, ಸೂರ್ಯ ಚಂದ್ರ ಇರುವ ಪರಿಯಂತರ, ಶಾಶ್ವತವಾಗಿ ಇದ್ದೀತು. ತಂಮ ಜಮಾಮರ್ದಿ[2] ಹಿಂಮತ್ತಿನ ತಾರೀಫು ಮಾಡಿ ಬರೆಯುವದಕ್ಕೂ, ಹೇಳುವದಕ್ಕೂ, ನಮಗೆ ಶಕ್ಯವಲ್ಲಾ. ಮೇಲಾಗಿ ವರುಷ ವರುಷಕ್ಕೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಕೊಟ್ಟು ಬರುವಂಥಾ ನಿಗದಿ ಹಣವಂನು ಇಂಗ್ರೇಜ ಸರಕಾರಕ್ಕೆ ಇಂನು ಕೊಡ ಕೆಲಸವಿಲ್ಲಾ. ಇಂಗ್ರೇಜ ಸರಕಾರದಿಂದಾ ತಮಗೆ ಮಾಫು ಕೊಡಿಸಿ ಇದೆ ಯಂಬದಾಗಿ, ಮೆಹೆರಬಾನಿಗಿ ಕಲಮಿನಿಂದಾ ಬರೆಸಿದ್ದು ಸರಿಯಷ್ಟೆ. ಬಹಳ ಸರಫರಾಜಿ ಆಬರು ಉಂಟಾಯಿತು. ಮೇಲಾಗಿ, ಇಂಗ್ರೇಜ ಬಹಾದ್ದರ ಸರಕಾರದ ಲಷ್ಕರು ಶ್ರೀರಂಗಪಟ್ಟಣಕ್ಕೆ ಹೋಗುವ ಬಗ್ಯೆ, ನಂಮ ಶೀಮೆಗೆ ಬಂದು ಇದ್ದಲ್ಲಿ, ಟೀಪುಸುಲ್ತಾನರು ಬಂದು, ಶಿದ್ಧೇಶ್ವರನ ಗದ್ದಿಗೆಯಲ್ಲಿ ಇಂಗ್ರೇಜ ಫೌಜಿನ ಸಂಗಡ ಲಡಾಯಿ ಮಾಡಿ, ಟೀಪುಸುಲ್ತಾನರು ಮುರಿದು, ಪೆರಿಯಾಪಟ್ಟಣಕ್ಕೆ ಹೋಗಿ ಇಳುಕೊಂಡು, ನಂಮ ಶೀಮೆ ವಳಿತವಾದ ಕಾರೆನೂರು, ಹೊಟಬಾಲೆ, ಶಿರಂಗಾಲ ಮುಂತಾದ ಗ್ರಾಮಗಳಿಗೆ ತಂಮ ಕಡೆ ಜನಾ ಕಳುಹಿಸಿ, ಆ ಗ್ರಾಮದ ರೈತರ ಮನೆಮಾರಿಗೆಲ್ಲಾ ಬೆಂಕಿ ಹಾಕಿ, ಲೂಟಿ ಮಾಡಿ, ಕುಟುಂಬ ಮಕ್ಕಳಂನು ಹಿಡಿದು ಕೊಂಡು ಹೋದದರಿಂದಾ, ಇಂನಾದರೆ, ಸಲ್ಲಾ ಮುರೀತು; ಟೀಪುಸುಲ್ತಾನರು ತಂಮ ಶೀಮೆಗೆ ದುಃಖ ಕೊಟ್ಟ ಮೇರೆಗೆ, ತಾನು ಅವರ ಶೀಮೆಗೆ ದುಃಖಾ ಕೊಡಿ ಯಂತ, ಜನರಾಲ್ ಇಷ್ಟಾರಟ ಸಾಹೇಬರು, ಹಾರ್ಟಲಿ ಸಾಹೇಬರು ಸಹಾ, ಹೇಳಿದರು. ಅದೇ ಮೇರೆ ಮೂರು ಸಾವಿರ ಕಾಡಗ ಜನ, ಉಳಿಕೆ ಜನದಿಂದಾ ಸಹಾ ಐದು ಸಾವಿರ ಜನವಂನು, ಗಟ್ಟದ ಕೆಳಗೆ ತುಳುವನಾಡಿಗೆ ಕಳುಹಿದಲ್ಲಿ, ಈ ಜನ ಹೋಗಿ, ಶೀಮೆಗೆ ಕೌಲು ಕರಾರು ಕೊಟ್ಟು, ಸಾಧಿಸುತ್ತಿದ್ದಲ್ಲಿ, ಟೀಪುಸುಲ್ತಾನರ ಕಡೆ ಸಾದ್ರಿಬೇಹಾಗಿ ಮೀರಮಹಾಂಮದಲ್ಲಿ ಮುಂತಾದವರು ಮಂದಿ ತೆಗದು ಕೊಂಡು ಬಂದು, ನಂಮ ಜನದ ಮೇಲೆ ಲಡಾಯಿ ಮಾಡಿದಲ್ಲಿ, ಅವಂದಿರಿಗೆ ಕಕ ತಂಬಿ ಪೆಂಟಾಯಿಸಿ, ಮಂಗಲೂರ ತಾಲೂಕಿನ ಕೆಲವು ಶೀಮೆಯಂನು ಬಂದುಬಸ್ತು ಮಾಡಿ, ನಂಮ ಹಾಸ್ತಕಿನಲ್ಲು ಇಟ್ಟು ಇದ್ಧ್ಯೆವೆ. ಇದಲ್ಲದೆ ಈ ಕಡೆ ಮಹಾರಾಜನ ದುರ್ಗದ ಶೀಮೆಯಿಂದಾ ಹಿಡಿದು, ಹೆಗ್ಗಡ ದೇವನ ಕೋಟೆ ಪರಿಯಂತರ ಕೆಲವು ಶೀಮೆಯಂನು ತೆಗದು ಕೊಂಡು, ಕೌಲು ಕರಾರು ಮಾಡಿ, ನಂಮ ಹಾಸ್ತಕಿನಲ್ಲು ಇಟ್ಟು ಇದ್ಧ್ಯೆವೆ. ಇಷ್ಟು ಶೀಮೆಯಂನು ಈಗ ನಾವು ಬಂದುಬಸ್ತು ಮಾಡಿ ಇಟ್ಟು ಇರುವಂಥಾದ್ದು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಖೈರಖಾಯಿ ಕೆಲಸವೇ ಹೊರತು, ಮತ್ತೊಂದಲ್ಲಾ. ಈ ವಿವರದ ವಿದ್ಯಮಾನ ಯಾವತ್ತೂ ವಕೀಲ್ ಕಪಿತಾನ್ ಮಾಹಿನಿ ಸಾಹೇಬರ ಕಡೆಯಿಂದಾ ತಮಗೆ ಶರುತವಾಗಿ ಇದ್ದೀತು" ಯಂಬ, ಇತ್ಯಾದಿ ವಿವರಗಳಾಗಿ ಬರೆಸಿ ಕಳುಹಿದರು.

ಆ ಬಳಿಕ ಕರ್ನೆಲ್ ವೈಜಮನ್ ಸಾಹೇಬರು, ಜನರಾಲ್ ಸಾಹೇಬರ ಹುಕುಂ ಪ್ರಕಾರ, ಫೌಜ ತೆಗದು ಕೊಂಡು, ಮಂಗಲೂರ ತಾಲೂಕಿಗೆ ಬಂದದರಿಂದಾ, ಮಂಗಲೂರ ತಾಲೂಕಿನಲ್ಲು ಬಾರಕೂರ, ಬಗ್ವಾಡಿ ಪರಿಯಂತರ ಶೀಮೆಯಂನು ಮಹಾರಾಜರವರು ಬಂದುಬಸ್ತು ಮಾಡಿಸಿ, ತಂಮ ಕಬೆಯಲ್ಲಿ ಮಡಗಿಸಿ ಇದ್ದಂಥಾದ್ದಂನು ರಾಜರ ಅಪ್ಪಣೆ ಪ್ರಕಾರ ತರಗ್ಯಕ ಸುಬ್ಬಯನು ಆ ವೈಜಮನ್ ಸಾಹೇಬರ ವಶಕ್ಕೆ ಬಿಟ್ಟು ಕೊಟ್ಟು, ಆ ಶೀಮೆಯಲ್ಲಿ ಠಾಣ್ಯ ಇದ್ದಂಥಾ ಮಂದಿಯಂನು ತೆಗದು ಕೊಂಡು ಬಂದನು.

ಇತ್ತಲಾಗಿ, ದುರ್ಗದ ಶೀಮೆಯಿಂದಾ ಹಿಡಿದು ಹೆಗ್ಗಡ ದೇವನ ಕೋಟೆ ಪರಿಯಂತರ, ಬಂದುಬಸ್ತು ಮಾಡಿ ಇಟ್ಟು ಇದ್ದಂಥಾ ಗಡಿವಾಡದ ಶೀಮೆಗೆ ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಕೆ ಮಾಡಿದ್ದಂಥಾ ಆ ಶೀಮೆ ಬ್ರಾಹ್ಮಣರು ಇಂಗ್ರೇಜ ಸರಕಾರದ ನಿಶಾನಿಗಳ ತೆಗದು ಕೊಂಡು ಬಂದು, "ಈ ಶೀಮೆಯಲ್ಲಿ ನೀವು ಇರುವದಕ್ಕೆ ಕೆಲಸವೇನು? ಇದು ಯಾವತ್ತು ಇಂಗ್ರೇಜ ಸರಕಾರದ ಶೀಮೆ ಆಯಿತು. ನೀವು ಹೋಗಿರಿ" ಯಂಬದಾಗಿ, ಮಹಾ

---

[1] ಇದ್ದಿಲ್ಲಾ. [2] ಬಲ.

ರಾಜರವರ ಮುಂದಿಗೆ ಧಂದರೆ ಮಾತುಗಳ ಆಡಿದ್ದರಿಂದಾ, ಈ ವಿವರಗಳನ್ನು ಈಶ್ವರೈಯನು ದೊರೆಗಳಿಗೆ ಬಿನ್ನವಿಸಿ ಬರ ಕೊಡಲಲ್ಲಿ, "ಇಂಗ್ರೇಜಿ ಸರಕಾರದ ನಿಶಾನಿ ಕಂಡ ಬಳಿಕ, ಅವರ ಸಂಗಡ ನೀನು ಮಾತಾಡ ಕೆಲಸವಿಲ್ಲಾ. ನಿಂನ ಕಡೆ ಠಾಣೆಯದ ಮಂದಿಯನ್ನು ತೆಗದು ಕೊಂಡು ಬಂದು, ನಂಮ ಸಂಸ್ಥಾನದ ಯೇಳುಸಾವಿರಶೀಮೆ ಗಡಿ ಬರದ ಹಾಗೆ, ಹರಾತು ಮೇರೆ ಠಾಣೆಯ ಇಟ್ಟು ಕೊಂಡು ಇರುವದು" ಯಂಬದಾಗಿ, ನಿರೂಪ ಬರಸಿ ಕಳುಹಿದರಿಂದಾ, ಅದೇ ಪ್ರಕಾರ ಈಶ್ವರೈಯನು ತಂನ ಕಡೆ ಮಂದಿಯನ್ನು ಕರಕೊಂಡು ಬಂದು, ಮೊದಲಾರಭ್ಯಯದಿಂದಾ ಕೊಡಗಿನ ಸಂಸ್ಥಾನಕ್ಕೆ ಶೇರಿ ಬಂದಂಥಾ ಯೇಳುಸಾವಿರಶೀಮೆ ಗಡಿ ಸರಹದ್ದು ಬಂದುಬಸ್ತು ಮಾಡಿ ಕೊಂಡು ಇರುತಿದ್ದನು.

ಆ ಬಳಿಕ ಮಹಾರಾಜರು ವಕೀಲ ಮಾವಿನಿ ಸಾಹೇಬರವರಿಗೆ ಹೇಳಿದ ವಿವರ: "ಈ ಲಡಾಯಿದ ಸಮಯದಲ್ಲಿ ನಂಮಿಂದಾ ಆದಷ್ಟು ಕುಂಪನಿ ಸರಕಾರಕ್ಕೆ ಪರಿಯತನ ಮಾಡಿ, ಕುಂಪನಿ ಸರಕಾರದ ಜನರಾಲ್ ಸಾಹೇಬರು, ನೀವು ಸಹಾ, ಹೇಳಿದ ಮೇರೆಗೆ ಟೀಪುಸುಲ್ತಾನರ ಶೀಮೆಯಲ್ಲಿ ನಾವು ಕೆಲವು ಲಡಾಯಿ ಮಾಡಿ ಪರಿಯತನ ಬಟ್ಟು, ಆದಷ್ಟು ಕೆಲವು ಶೀಮೆ ನಂಮ ಹಾಸ್ತಕನಲ್ಲಿ ಮಡಗಿ ಇರುವದನ್ನು ನೀವು ತಿಳಿದು ಇದ್ಧೀರಿ. ಹೀಗೆ ಇರುವಲ್ಲಿ, ಕಾಡೆಯೂರಿದ ತಾಲೂಕಿನ ಶೀಮೆಗೆ ಕರ್ನಲ್ ಮೋಜಮನ್ ಸಾಹೇಬರು ಬರುತ್ತಾರೆ. ಅವರ ಕಾಬೆಗೆ ಆ ಶೀಮೆ ಬಿಡ ಬೇಕು" ಯಂತಾ, ಜನರಾಲ್ ಇಷ್ಟಯಾರಟ ಸಾಹೇಬರು ಹೇಳಿದರಿಂದಾ, ನಂಮ ಮನಸಿಗೂ ಖುಷಿ ಆಯಿತು. ಅದೇ ಮೇರೆ ನಂಮ ಜನರು ಅವರ ಕಾಬೆ ಮಾಡಿ ಬಂದರು. ನಾವು ಮಾಡಿದ ಮೆಹನತ್ತು ಸಫಲವಾಯಿತು. ಈ ಕಡೆ ದುಗ್ಗ ಮುಂತಾದ ಶೀಮೆಯನ್ನು ಇದೇ ಮೇರೆ ಬಂದುಬಸ್ತು ಮಾಡಿ ಇಟ್ಟು ಇದ್ಧೇವಷ್ಟೆ: ಈ ಶೀಮೆ ಬಗ್ಗೆ ಸರಕಾರದ ವಟಬ ಶಿಪಾಯಿ ಬಂದು ಕೇಳಿದಾಗ್ಯೂ, ನಾವು ಬಿಟ್ಟು ಕೊಡುತ್ತಾ ಇದ್ದೇವು. ಇದ ಬಿಟ್ಟು ಟೀಪುಸುಲ್ತಾನರ ದಿವಸದಲ್ಲಿ ಅಧಿಕಾರಿಕೆ ಮಾಡಿದಂಥಾ ಹಾರುವರು ಇಂಗ್ರೇಜಿ ಸರಕಾರದ ನಿಶಾನಿ ತಂದು, ನಂಮ ಕಡೆ ಠಾಣೆಯ ಇದ್ದದ ಜನಕ್ಕೆ ಅಂಧರೆ ಮಾತುಗಳ ಆಡಿದ್ದರಿಂದಾ, ಈ ವಿವರ ನಾವು ತಿಳಿದು, ಆ ಶೀಮೆ ಠಾಣೆಯ ತೆಗಸಿ, ನಂಮ ಶೀಮೆ ಸರಹದ್ದಿನಲ್ಲಿ ಮಡಗಿಸಿ ಇದ್ಧೇವೆ. ಈ ಹಾರುವರ ಜಾತಿಗೂ ನಮಗೂ ಮೊದಲಾರಭ್ಯಯದಿಂದಾ ಹಗೆತನ ಇದೆ. ಪೂರ್ಣೈಯ ಮುಂತಾದ ಬ್ರಾಹ್ಮಣರು ಹೈದರ ನವಾಬರ ದಿವಸದಲ್ಲಿ, ಟೀಪುಸುಲ್ತಾನರ ದಿವಸದಲ್ಲಿ ಸಹಾ, ನಾನಾ ಪ್ರಕಾರ ಹೇಳಿ, ನಮಗೆ ನಂಮ ರಾಜ್ಯಕ್ಕೆ ಸಹಾ, ಬಹಳ ದುಃಖಾ ಕೊಟ್ಟು ಬಂದು ಇದ್ಧಾರೆ. ಆದ್ದರಿಂದಾ ಬ್ರಾಹ್ಮಣರ ಜಾತಿ ಕಂಡರೆ, ನಮಗೆ ಆಗುವದಿಲ್ಲಾ. ಈಗಲಾದರೂ ತಂಮ ಚಾಲು ಬಿಡದೆ, ಮತ್ತೂ ಈ ತೆರೆ ಸರಕಾರದ ನಿಶಾನಿ ತಂದು, ನಂಮ ಜನದ ಮೇಲೆ ಟೀಕ ಪಟ್ಟ ಮಾತನಾಡಿದರು. ಹೀಗೆ ಬರುತ್ತದೆ ಯಂತಾ, ಮೊದಲೇ ತಿಳಿದು ಇದ್ದರೆ, ಆ ಶೀಮೆಯಲ್ಲಿ ಇದ್ದ ನಂಮ ಜನರ ಕರಸಿ ಕೊಳ್ಳುತ್ತಿದ್ದೆವು. ಕಾಡೆಯೂರಿದ ತಾಲೂಕಿಗೆ ಬಂದ ಮೇರೆ ಸರದಾರರು ಬಂದಾರು ಯಂತಾ, ನಾವು ತಿಳಿದು, ಇಷ್ಟು ದಿನ ನಾವು ಬಂದುಬಸ್ತು ಮಾಡಿ ಇದ್ದೆವು. ಈ ವಿವರ ನೀವು ತಿಳಿದು ಇರ ಬೇಕು" ಯಂತಾ ಹೇಳಿದಲ್ಲಿ, ಮಾವಿನಿ ಸಾಹೇಬರವರು: "ಇದಕ್ಕೆ ಚಿಂತೆ ಯೇನು ಇದೆ? ಈ ಮೇರೆ ನಾವು ತಿಳಿದು ಇದ್ದರೆ, ಇದರ ಬಂದುಬಸ್ತು ನಾವು ಮಾಡುತ್ತಾ ಇದ್ದೆವು. ತಾವು ಮೆಹನತ್ತು ಮಾಡಿದ್ದನ್ನು ಇಂಗ್ರೇಜಿ ಸರದಾರರು ಯಾವತ್ತು ಬಲ್ಲರು" ಯಂಬದಾಗಿ, ದೊರೆಗಳವರಿಗೆ ಬಹಳ ಹೇಳಿ ಸಮಧಾಯಿಸಿದರು.

ಹೀಗೆ ಇರುತ್ತಾ ಇದ್ದಲ್ಲಿ, ರಬಿಯುಲ್ ಅವಲ್, ತಾರೀಕು ೬, ಸಂನ್ ೧೨೧೪ನೆ ಹಿಜುರಿಸಾಲ್ಲು, ಬಂಗಾಳದ ಗವರನರ್ ಜನರಾಲ್ ಲಾಡ್ ಮಾರನಿಂಗ್ಟನ್ ಸಾಹೇಬ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ: "ತಂಮ ಶೀಮೆಗೆ ಹಾಗಸ ಸರಹದ್ದನ್ನು ಮೊಕರರು ಮಾಡ ಬೇಕು ಯಂತಾ, ಖಾಹಿಸಿ ಇದ್ದಾಧ್ಧೀರಿ ಯಂಬದಾಗಿ, ಮೈಸೂರ ಶೀಮೆ ಅಧಿಕಾರಿಕೆ ಮಾಡುವವರ ಕಾಗದದಿಂದಾ ಅದರ ವಿವರ ತಿಳಿಯ ಬಂತು. ಈಗ ಮೈಸೂರ ಶೀಮೆ ಬಂದುಬಸ್ತು ಮೊಕರರು ಆಗಿ ಇರುವ ಕೆಫಿಯತು ತಾವು ತಿಳಿಯಲಿಲ್ಲವಾಗಿ ಇದ್ದೀತು. ನಾವು ಮೊದಲಿನ ಅಸಲ ವಿವರ ವಿಚಾರಿಸಿ, ಜಮಾಮರ್ದಿಯಿಂದಲೂ ನಂಮ ಸತ್ಯದಿಂದಲೂ ಆ ಶೀಮೆಯ ತದ್ರೀಂ ಖಾವಂದರ ಕಬಜಿನ ವಳಗೆ ಇದ್ದದ ಶೀಮೆಯನ್ನು ಅವರ ಹವಾಲೆಗೆ ಮಾಡಿದೆವು. ಮುಂದೆ ಆ ನೆರೆಯಲ್ಲಾ ಸಮೀಪದ ಸರಕಾರಗಳಿಗೆ ಸುಖ

[1] The insertion ಹಾಗಲ್ would make the sense clearer.

ಖಾತರ್ ಜಮೆ ಹಾಸಲ್ ಆದೀತು. ಅದೇ ತಾಕೀದೆ ಮೇರೆಗೆ ಶುರು ಮಾಡಿ ಇದ್ದೇವೆ. ಮೈಸೂರು ಅರಸಿನ ಸೀಮೆಯೂ ಕುಂಪನಿ ಸರಕಾರದ ಸೀಮೆಯೂ ನಿಶ್ಚಯವಾಗಿ ಒಂದು ಹುಕುಮತ್ತಿನ ಒಳಗೆ ಇದೆ. ಇದರ ಒಳಗೆ ತಾವು ಹೊಸ ಸರಹದ್ದು ಅಪೇಕ್ಷಿಸುವಂಥಾದ್ದು ವಿಹಿತವಲ್ಲ. ಇಂಗ್ರೇಜಿ ಸರಕಾರದ ಸೀಮೆ, ಮೈಸೂರು ಅರಸಿನ ಸೀಮೆ ಜಾಗದಲ್ಲಿ ಇದ್ದು, ನಿಮ್ಮ ಸೀಮೆಗೆ ಸಮೀಪವಾಗಿ ಇದ್ದರೆ, ತಮ್ಮ ಮನಸಿನ ಅಂದೇಶ ಖಾವನೆ ಬೇಳಾಸಲ್ ಆಗುತ್ತಿತ್ತು. ಈಗಲು ಅದೇ ಮೇರೆ ಯಂತಾ, ತಿಳಿದು ಕೊಳ್ಳ ಬೇಕು. ಈಗ ತಾವು ತಕರಾರು ಮಾಡಿ ಇದ್ದೀರಿ. ಇಂಗ್ರೇಜಿ ಕುಂಪನಿ ಸರಕಾರದ ಸೀಮೆ ಆ ಜಾಗದಲ್ಲಿ ಆಗಿ ಇದ್ದರೆ, ಈ ಮೇರೆ ಏನಾದರೂ ಯೋಚನೆ ಜರೂರು ಆಗುವದಕ್ಕೆ ಇತ್ತಿಲ್ಲ.[1] ಈಗ ಅದೇ ಮೇರೆ ಜರೂರು ಇಲ್ಲವಾಗಿ ಇದೆ. ತಾವು ಕುಂಪನಿ ಸರಕಾರದ ಬಹಾದ್ದರರ ದ್ಯಾನತಿ ಮನಸು ಪೂರ್ತಿಯಿಂದಾ ನಡಸುತ್ತೀರಿ. ಇದರಿಂದಾ ಅದು ಜರೂರು ಇಲ್ಲವಾಗಿ ಇದೆ. ಮತ್ಯಾದಾದರೂ ತಮ್ಮ ಸಲುವಳಿಗೆ ತಕರಾರು ಹರಕತ್ತು ಮಾಡಿದರೆ, ಯಾವತ್ತೂ ಕುಂಪನಿ ಬಹಾದ್ದರರವರು ತಮ್ಮ ಕಡೆ ಕೂಡಿಯಾರು. ಇಂಗ್ರೇಜಿ ಬಹಾದ್ದರರ ಸರಕಾರದ ಕಡೆಯಿಂದಾ ಒಬ್ಬ ಸಾಹೇಬರು ಹಮೇಷ ಮೈಸೂರ ಸೀಮೆಯಲ್ಲಿ ಕಾಯಂ ಇರುತ್ತಾರೆ. ಅದುಕಾರಣಾ ತಮಗೆ ಮೈಸೂರ ಅರಸಿಗಾಗಲಿ, ಅವರ ಕಡೆ ಅಧಿಕಾರಿ ಮಾಡುವವರಿಗಾಗಲಿ, ಏನಾದರೂ ಕೆಲಸ ಬಿದ್ದರೆ, ಆ ಸಾಹೇಬರ ಕಡೆಯಿಂದಾ ಜವಾಬು ಸವಾಲು ಮಾಡುತ್ತಾ ಇರ ಬೇಕು" ಯಂಬದಾಗಿ, ಬರದು ಇದ್ದರು.

ಇದಕ್ಕೆ ಜವಾಬು ಸನ್ ೧೨೫೫ನೆ, ಜಮಾದಿಲ್ ಅವಲ್, ೧ನೆ ತಾರೀಕು, ಸಿದ್ಧಾರ್ಥಿ ಸಂವತ್ಸರದಲ್ಲು, ವೀರರಾಜೇಂದ್ರ ಒಡೆಯರವರು ಬರೆಸಿ ಕಳುಹಿದ ಕಾಗದದಲ್ಲಿ: "ತಮ್ಮ ಇನಾಯತನಾಮಾ ಬಹಳ ಒಳ್ಳೇ ಹಾಗತಿನಲ್ಲಿ ಬಂದು ಮುಟ್ಟಿತು. ನಮಗೆ ಬಹಳ ಬಹುಮಾನ ಆದರು ಉಂಟಾಯಿತು. ಅದರ ಹಕೀಕತು ಮೈಸೂರ ಸೀಮೆ ಅಧಿಕಾರಿ ಮಾಡುವವರ ಕಾಗದದಿಂದಾ, ತಾವು ಹೊಸ ಸರಹದ್ದು ಮಾಡ ಬೇಕೆಂಬದಾಗಿ, ಖಾಹಿಸಿ ಇದ್ದೀರಿ ಯಂತಾ, ತಿಳಿಯ ಬಂತು. ಆ ಸೀಮೆ ಬಂದುಬಸ್ತು ಮಾಡಿ ಇರುವದು ತಮಗೆ ತಿಳಿಯಲಿಲ್ಲವಾಗಿ ಇದ್ದೀತು. ಜಮಾಮದ್ದಿಯಿಂದಲೂ ನಮ್ಮ ಸತ್ಯದಿಂದಲೂ ವಾಜಬಿ ವಿಚಾರದಿಂದಲೂ ನಮ್ಮ ಸರಕಾರದ ದಸ್ತೂರಿಯಿಂದಾ ಆ ಸೀಮೆಯ ಕದೀಂ ಖಾವಂದರ ಹವಾಲೆ ಮಾಡಿ ಇದ್ದೇವೆ. ಮೈಸೂರ ಅರಸಿನ ಸೀಮೆಯೂ, ಕುಂಪನಿ ಸರಕಾರದ ಸೀಮೆಯೂ, ಒಂದು ಹುಕುಂ ನಡಸುತ್ತಾ ಇದೆ. ಹೀಗೆ ಇರುವಲ್ಲಿ, ಹೊಸ ಸರಹದ್ದಿನ ಮೇಲೆ ಮನಸು ನಡಸುವದು ಅಸಲ್ ಮಾತಲ್ಲ. ಮೈಸೂರ ಅರಸಿನ ಸೀಮೆ ಜಾಗದಲ್ಲಿ ಇಂಗ್ರೇಜಿ ಬಹಾದ್ದರರ ಕುಂಪನಿ ಸರಕಾರದ ಸೀಮೆ ಆಗಿ ಇದ್ದರೆ, ತಮ್ಮ ಯೋಚನೆ ಬೇಳಾಸಲ್ ಆಗುತ್ತಿತ್ತಷ್ಟೆ. ಈಗಲೂ ಆ ಮೇರೆ ಯಂತಾ, ತಿಳುಕೊಳ್ಳ ಬೇಕು, ಯಂಬದಾಗಿ ಬರಸಿದ ಬಗ್ಯೆ, ಮೈಸೂರ ಸೀಮೆ ಅಲ್ಲಿ ಕದೀಂ ಖಾವಂದರಿಗೆ ಕೊಟ್ಟಂಥಾದ್ದು ನಾವು ತಿಳಿದು ಇತ್ತಿಲ್ಲ. ಟೀಪುಸುಲ್ತಾನರು ತೀರಿ ಹೋದ ಮೇಲೆ, ಇಂಗ್ರೇಜಿ ಸರಕಾರದ ಕಮೀಶನ್ ಸರದಾರರು ಆ ಸೀಮೆ ಬಂದುಬಸ್ತಿನ ಬಗ್ಯೆ ನಿಂತು, ಟೀಪುಸುಲ್ತಾನರ ದಿವಾನದಲ್ಲಿ ಅಧಿಕಾರಿ ಮಾಡಿದಂಥವರು ನಿಮಕುಹರಾಮತನದಿಂದಾ ಹೋಗಾಸು ತಿಂದು, ರೈತರಿಗೂ ದುಃಖ ಕೊಟ್ಟು, ಟೀಪುಸುಲ್ತಾನರ ಒಡವೆ ತಿಂದಂಥವರು ಯಂಬದು ಇಂಗ್ರೇಜಿ ಸರಕಾರಕ್ಕೂ ಜಾಹೀರು ಇದೆ. ಅವರಿಗೆ ದೂರ ಮಾಡಿ, ಬದಲು ಅಮಲುದಾರರ ನಿಮಕುಹಲಾಲಾಗಿ ಇರುವಂಥವರ ನ್ಯಾಡಿ, ನಿಲ್ಲಿಸಿಯಾರು ಯಂಬದಾಗಿ ನಾವು ತಿಳಿದು ಇದ್ದೆವು. ತಮ್ಮ ದೊಡ್ಡ ಸರಕಾರಕ್ಕೂ ಟೀಪುಸುಲ್ತಾನರಿಗೂ ಲಡಾಯಿ ಆಗುವ ಸಮಯದಲ್ಲಿ, ನಾವು ಲಡಾಯಿ ಮಾಡಿ, ಕೆಲವು ಸೀಮೆಯನು ಕಟ್ಟಿ ಕೊಂಡು ಇದ್ದೆವು. ಅವರ ಸೀಮೆ ತಮ್ಮ ಸರಕಾರದ ಕಟ್ಟಿನ ಒಳಗೆ ಬಂದೀತು. ಅಲ್ಲಬತ ಆ ಸೀಮೆ ಮೇಲೆ ಕುಂಪನಿ ಸರಕಾರದಿಂದಾ ಅಮಲುದಾರರು ಮೊಕರರು ಆದಾರು; ಆವಾಗ್ಯೆ ನಾವು ಕಟ್ಟಿ ಕೊಂಡು ಇರುವಂಥಾ ಸೀಮೆಯನು ನಮ್ಮ ಹವಾಲೆಗೆ ಬಿಟ್ಟು, ಅದರ ಹಾಗೆ ಮೊಕರರು ಮಾಡಿ, ನಮ್ಮಿಂದಾ ತೆಗದು ಕೊಂಡಾರು. ನಾವುನೂ ರೈತರಿಗೆ ಆರಾಮಿನಿಂದಾ ನಡಸಿ, ಸೀಮೆ ಆಬಾದು ಮಾಡಿ, ವರುಷ ವರುಷಕ್ಕೂ ಹೆಚ್ಚಾಗಿ ವಸೂಲು ಮಾಡಿ, ನಮಗೆ ಮೊಕರರು ಮಾಡಿ ಇರುವದಕ್ಕಿಂತಲೂ ಹೆಚ್ಚಾಗಿ ಸರಕಾರಕ್ಕೆ ಸಂದಾಯಿತ ಮಾಡಿ, ಸರಕಾರದ ಖಿದ್ಮತ್ತು ಮಾಡ ಬೇಕು, ಯಂಬದಾಗಿ ನಮ್ಮ ಮನಸಿನಲ್ಲು ಅಪೇಕ್ಷೆ ಇತ್ತು. ಈಗ ಮೈಸೂರ ಸೀಮೆಯನು ಜಮಾಮ

[1] ಇದ್ದಿಲ್ಲ more correct.

ದ್ದೀಯಿಂದಲೂ ಸತ್ಯದಿಂದಲೂ ತಂಮ ಸರಕಾರದ ದಸ್ತೂರಿಯಿಂದಾ ಅಲ್ಲಿ ಕದೀಂ ಖಾವಂದರಿಗೆ ಕೊಟ್ಟು ಇದ್ಧೀರಿ ಯಂತಾ, ನಾವು ಕೇಳಿದೆವು. ಅದರಿಂದಾ ನಂಮ ಅಪೇಕ್ಷೆ ಬಿಟ್ಟೆವು. ಆ ಅರಸಿನಿಂದಾ ಮೊದಲಾಗ್ತೆಯ ಈ ವರೆಗೆ ಯೇನಾದರೂ ಸರಕಾರದ ಕೆಲಸ ಆಗಲಿಲ್ಲಾ. ವಂದು ಮಗು, ತಾಯಿ ತಂದೆ ಇಲ್ಲದೆ, ಹೈದರಲ್ಲೀಖಾನರ ದಿವಸದಲ್ಲೂ, ಅದರ ಈಚೆಗೆ ಅವರ ಮಗ ಟೀಪುಸುಲ್ತಾನರ ದಿವಸದಲ್ಲೂ, ಕೈದಿನಲ್ಲಿ ಶೇರಿ ಇತ್ತು. ಅಂಥವರಿಗೆ ಆರೈಕೆ ಮಾಡಿ, ಅವರಿಗೆ ರುಣ ಇರುವಂಥಾದ್ದು ಯಂತಾ ತಿಳಿದು, ಅವರ ಶೀಮೆ ಅವರಿಗೆ ಕೊಡಿಸಿದಿರಿ. ಈ ದೋಸ್ತಕಾರರು ಪ್ರಾಣಪ್ರಯತ್ನದಿಂದಾ ಕುಂಪನಿ ಸರಕಾರದ ಮತ್ಕಲ್ಯಾವಾದಿ ಕಿದಮತ್ತು ಮಾಡುವಂಥವರಿದ್ಧೇವೆ.[1] ನಮಗೆ ಸಲುವಂಥಾದ್ದು ನಮಗೆ ಶಿಕ್ಕಿದರೆ, ವಳ್ಳೇದು ಇದೆ. ಅದು ಯೇನು ಯಂದರೆ: ಪೆರಿಯಾಪಟ್ಟಣದ ಶೀಮೆ ಕೊಡಗಿನ ಶೀಮೆ ಸರಹದ್ದಿನ ವಳಗೆ ದಾಖಲು ಇದೆ. ಈ ಮಾತಿಗೆ ಸಾಕ್ಷಿ ಆಗಿ, ಸರಹದ್ದಿನ ಗುರ್ತಿನ ಕಲ್ಲು ತಾಲೂಕಿನ ಗ್ರಾಮಗಳ ಸುತ್ತಾ ನೆಡಿಸಿ ಇದೆ. ಈ ಬಗ್ಯೆ ಪೆರಿಯಾಪಟ್ಟಣದ ಸಮೀಪ ಉದ್ದೂರು ಕೊಡಗರಹಳ್ಳಿ ಯಂಬ ಗ್ರಾಮವಿದೆ. ಅಲ್ಲಿ ನಿಲ್ಲಿಸಿ ಇರುವ ಕಲ್ಲು ಈವರಿಗೂ ಕಾಣುತ್ತಾ ಇದೆ. ನಂಮ ನಗಗಾವತ್ತಿನ ಅರಸುಗಳು ಪೆರಿಯಾಪಟ್ಟಣದ ವಳಗೆ ಇರುತ್ತಾ ಇದ್ದರು. ಅವರಿಗೆ ಮೈಸೂರ ಅರಸುಗಳು ದಗಾ ಮಾಡಿ ಹೊಡದು, ಆ ಶೀಮೆ ಆಕ್ರಮಿಸಿ ಕೊಂಡರು. ಈ ವಿವರ ಅಲ್ಲಿ ಇರುವಂಥಾ ಯಾವತ್ತೂ ಜನರು ಬಲ್ಲರು. ಇದು ಕಾಣಾ ಆ ಆರತ್ತೆಯ ನವಾಬ ಹೈದರಲ್ಲೀಖಾನರ ದಿವಸ ಪರಿಯಂತರ, ಮೈಸೂರ ಅರಸುಗಳಿಗೂ ನಂಮ ಹಿರಿಯವರಿಗೂ ಲಡಾಯಿವಾಗುತ್ತಲೆ ಇತ್ತು. ಆ ಮೇಲೆ ಹೈದರಲ್ಲೀಖಾನರು ಬಹಳ ಪ್ರಬಲಿಸಿದರು. ಪೆರಿಯಾಪಟ್ಟಣದ ಶೀಮೆಯು ಅವರ ಕಬ್ಜಿನ ವಳಗೆ ಶೇರಿ ಇತ್ತು. ಈಗ ತಂಮ ಸರಕಾರದ ದೊಡ್ಡ ಹಿಂಮತ್ತಿನಿಂದಲೂ, ಅಸಲ್ ಮಾತು ವಿಚಾರಿಸುವದರಿಂದಲೂ, ಮೈಸೂರ ಶೀಮೆಯಂನು ಅದಕ್ಕೆ ಕದೀಂ ಖಾವಂದರಾದವರಿಗೆ ವರುಷಂಪ್ರತಿಯಲ್ಲು ಹಣಾ ಕೊಡುವ ಹಾಗೆ, ಮೊಹರು ಮಾಡಿ ಕೊಟ್ಟು ಇದ್ಧೀರಿ. ಅಥಾಪಿ ಅದೇ ಮೇರೆ ಪೆರಿಯಾಪಟ್ಟಣದ ಶೀಮೆಯಂನು ದೋಸ್ತಕಾರರಿಗೆ ಸರಫರಾಜ ಮಾಡಿ, ಆಬರು ಉಂಟು ಮಾಡುವ ದೃಷ್ಟಿ ಇಟ್ಟು, ನಮಗೆ ಕೊಟ್ಟರೆ, ಆ ಶೀಮೆ ಆಬಾದು ಮಾಡಿ, ರೈತರಿಗೆ ಖುಷಿ ಮಾಡಿ, ವ್ಯವಸಾಯ ಹೆಚ್ಚಾಗಿ ಮಾಡಿಸಿ, ಹಣ ಮೊಹರು ಮಾಡಿ ಇರುವದಕ್ಕಿಂತಲೂ ವರುಷ ವರುಷಕ್ಕೂ ಹೆಚ್ಚಾಗಿ ಸಂದಾಯ ಮಾಡಿ, ತಂಮ ಸರಕಾರದ ಮೆಹರ್ಬಾನಗಿ ಉಂಟು ಮಾಡಿ ಕೊಂಡೇವು; ಶಿವ ಸಾಕ್ಷಿಯು. ಇದೇ ಅಪೇಕ್ಷೆ ನಂಮನಸಿನಲ್ಲು ಇದ್ದದ್ದಂನು ತಿಳಿಸಿ ಇದ್ಧೇವೆ. ಮೊದಲು ಯುಟಾಮು ಸಾಹೇಬರು, ಸರಕಾರದ ವಕೀಲ್ ಕಪಿತಾನ್ ಮಾಪಿನಿ ಸಾಹೇಬರು ಸಹಾ, ಇಲ್ಲಿ ಇದ್ದಲ್ಲಿ ಇದೇ ಅಪೇಕ್ಷೆಯಂನು ಅವರಿಗೂ ತಿಳಿಸಿ ಇದ್ಧೇವೆ. ನಂಮ ಇರಾದೆ ಸರಕಾರದ ಕಿದ್ಮತ್ತು[2] ಮಾಡ ಬೇಕು ಯಂಬದ್ದೇ ಹೊರತು, ಮತ್ತೊಂದಲ್ಲಾ. ಶೀಮೆ ಯೇನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ. ನಂಮ ಕಬ್ಜಿನ ವಳಗೆ ಇಂನೊಂದು ಶೀಮೆ ಶರ ಬೇಕೆಂಬದೂ ಇಲ್ಲಾ. ಹಣಕಾಸು ಜಮಾಯಿಸ ಬೇಕೆಂಬ ಅಪೇಕ್ಷೆಯೂ ಇಲ್ಲಾ. ಇದಕ್ಕೆ ಮುಂದೆ ಬರೆಯುವ ಮತಲಬು ಸಾಕ್ಷಿ ಇದೆ. ಮೊದಲು ಸರ ಜನರಾಲ್ ರಾಬರ್ಟ್ ಆಬಿರಕ್ರಂಬಿ ಸಾಹೇಬ್ ಬಹಾದ್ದರವರು ಲಷ್ಕರಿನ ಸಂಗಡ ಟೀಪುಸುಲ್ತಾನರ ಕಡೆಗೆ ಬರುವ ಸಮಯದಲ್ಲಿ, ಈ ದೋಸ್ತಾರರಿಗೆ ತಲಚ್ಚೇರಿಗೆ ಕರೆಸಿ, ಇಂಗ್ರೇಜ ಸರಕಾರದ ಜಯಪ್ರದ ಮಾಡುವ ಲಷ್ಕರಿಗೆ ತಂಮ ಶೀಮೆಗಾಗಿ ಮಾರ್ಗ ಕೊಟ್ಟು, ಕುಂಮಕ್ಕು ಮಾಡಿ ಯಂತಾ, ಹುಕುಂ ಕೊಟ್ಟರು. ಆ ಮಾತಿಗೆ ನಾವು ಕಬೂಲು ಮಾಡಿ, ಉಭಯ ಕಡೆಯಿಂದಲೂ ಕರಾರುನಾಮಾ ಬರದ್ದಾಯಿತು. ಆ ಮೇಲೆ ಜನರಾಲ್ ಸಾಹೇಬರು ಲಷ್ಕರು ತೆಗದು ಕೊಂಡು ಬಂದರು. ಇಂಗ್ರೇಜ ಸರಕಾರದ ಕಾರ್ಯ ಯಾವ ಮೇರೆ ಮಾಡ ಬೇಕೋ, ಆ ಮೇರೆ ಈ ದೋಸ್ತಕಾರರಿಂದಾ ಆಗಲಿಲ್ಲಾ. ಆದಾಗ್ಯೂ ಆ ಸಾಹೇಬರು ಬಹಳ ಮೆಹರ್ಬಾನಗಿ ಮಾಡಿ, ನಂಮಂನು ತಂಮ ಸರಕಾರದ ಖೈರಖಾರರು ಯಂತಾ ತಿಳಿದು, ಪ್ರೀತಿಯಿಂದಾ ತಂಮನಸಿನಲ್ಲಿ ಯೇನು ಅಪೇಕ್ಷೆ ಇದೆಯೋ, ಅದಂನು ಜಾಹೀರು ಮಾಡಿ! ನಾವು ನಂಮ ಸರಕಾರದಲ್ಲಿ ಅರಿಕೆ ಮಾಡಿ, ತಂಮ ಅಪೇಕ್ಷೆ ಹಾಸಲ್ ಮಾಡಿಯೇವು ಯಂತಾ, ಹೇಳಿದರು. ಅದಕ್ಕೆ ನಾವು ಜವಾಬು ಹೇಳಿದ್ದು: ನಂಮ ಅಪೇಕ್ಷೆ ಯೇನು ಯಂದರೆ: ನಂಮಿಂದಾ ಆಗುವಷ್ಟು ಸರಕಾರದ ಕೆಲಸದ ವಳಗೆ ಹಾಜರು ಇದ್ದೇವು. ಇಂಗ್ರೇಜ ಬಹಾದ್ದರ ಸರಕಾರದ ಸರದಾರರು ದೋಸ್ತಿಯಿಂದಾ ನಮಗೆ ಅಂಣ ತಂಮಂದಿರ ಹಾಗೆ ಇರ ಬೇಕು.

[1] ಮಾಡುವಂತವರಾಗಿದ್ದೇವೆ would be more correct. [2] ಚಾಕರಿ.

ಶ್ರೀಮೆ ಭೂಮಿ ಇಂಗ್ರೇಜ ಸರಕಾರದ ಹುಕುಮತ್ತಿನ ವೊಳಗೆ ಬರ ಬೇಕು. ಸರಕಾರದ ದುಷ್ಮಾನರು ಮುಖ್ತಂಗಿತ ವಾಗಿ ಹೋಗ ಬೇಕು. ಇದ್ದೀಗ ನಂಮ ಅಪೇಕ್ಷೆ ಯಂತಾ, ಜವಾಬು ಹೇಳಿದೆವು. ಆವಾಗ ಜನರಾಲ್ ಸಾಹೇಬರು ಲಷ್ಕರು ತೆಗದು ಕೊಂಡು, ಪೆರಿಯಾಪಟ್ಟಣಕ್ಕೆ ಹೋಗಿ, ಕೆಲವು ಕಾಲದಿಂದಾ ತಿರುಗಿದರು. ಆ ಬಳಿಕ ವಂದು ವರುಷದ ಮೇಲೆ ಮತ್ತೂ ದಂಡು ಸಮೇತ ಈ ಕಡೆಗೆ ಬಂದರು. ಆವಾಗ್ಯೆ ನಂಮಿಂದಾ ಆದಷ್ಟು ಸಹಾಯ ಮಾಡಿದೆವು. ಆವಾಗಲೂ ಬಹಳ ಮೆಹೆರ್ಬಾನಗಿ ಮಾಡಿ, ತಂಮ ಅಪೇಕ್ಷೆ ಯೇನು? ಹೇಳಿ! ಯಂತಾ ಕೇಳಿದರು. ಸದರಿ ಮೇಲೆ ಬರದ ಜವಾಬಂನೆ ಹೇಳಿದೆವು. ಈಗ ಜನರಾಲ್ ಇಷ್ಟ್ಯಾರಟ ಸಾಹೇಬರವರು, ಹಾಟ್ಲಿ ಸಾಹೇಬರವರು ಮುಂಬಾಯಿ ಲಷ್ಕರು ಸಮೇತ ಬಂದು, ಕುಂಪನಿ ಸರಕಾರದ ಕಿದ್ಮತ್ತು ಮಾಡುವ ಬಗ್ಯೆ, ತಂಮ ಇನಾಯತ ನಾಮಾ ಕೊಟ್ಟಲ್ಲಿ, ನಂಮಿಂದಾ ಆಗುವಷ್ಟು ಸರಕಾರದ ಕಿದ್ಮತ್ತು ಮಾಡಿ ಇದ್ಧೇವೆ. ಆ ಇಬ್ಬರು ಸಾಹೇಬರು ಪಟ್ಟಣಕ್ಕೆ ಹೋಗುವಾಗ್ಯೆ, ಬಹಳ ಪ್ರೀತಿಯಿಂದಾ ಮೆಹೆರ್ಬಾನಗಿ ಮಾಡಿ, ತಂಮ ಮನಸಿನಲ್ಲಿ ಯೇನು ಅಪೇಕ್ಷೆ ಇದೆಯೋ, ಅದಂನು ಹೇಳಿದರೆ, ನಾವು ನಂಮ ಸರಕಾರಕ್ಕೆ ಅರಿಕೆ ಮಾಡಿ, ತಂಮ ಅಪೇಕ್ಷೆ ಮೇರೆ ಇರುವ ಕೆಲಸ ಆಗು ಮಾಡಿಸಿ ಕೊಟ್ಟೇವು, ಯಂಬದಾಗಿ ಹೇಳಿದರು. ಆ ಮೇಲೆ ಜಯಪರದಾ ಮಾಡಿ ಕೊಂಡು ಬಂದ ಮೇಲೂ ಅದೇ ಮೇರೆ ಕೇಳಿದರು. ನಮಗೆ ಯೇನಾದರೂ, ಹಣ ಕಾಸಿನ ಮೇಲೆ ಅಪೇಕ್ಷೆ ಇಲ್ಲಾ. ನಂಮ ದೊಡ್ಡ ದುಷ್ಮಾನರು ನಾಶವಾಗಿ ಹೋದರು. ಈಗ ತಂಮ ದೊಡ್ಡ ಸರಕಾರದಿಂದಾ ವಂದು ನಿಶಾನಿ ಇನಾಯತ ಆದರೆ, ನಮಗೆ ಬಹುಮಾನ ಉಂಟಾದೀತು. ನಂಮಿಂದಾ ಆಗ ತಕ್ಕ ಸರಕಾರದ ಕಿದ್ಮತ್ತು ತೆಗದು ಕೊಳ್ಳ ಬೇಕು ಯಂತಾ, ಹೇಳಿದೆವು. ತಂಮ ಇನಾಯತನಾಮಾ ಬಹಳ ಆಬರುಯಿಂದಾ ಸರಪರಾಜ ಆಗಿ ಇತ್ತು. ಅದರ ಜವಾಬು ಇಂಗ್ರೇಜ ಸರಕಾರದ ಕಿದ್ಮತ್ತು ಮಾಡ ಬೇಕೆಂಬದ್ದೇ ಹೊರತು, ಮತ್ತೊಂದು ನಾವು ಬರೆಯಲಿಲ್ಲಾ. ಹಣ ಕಾಸು, ಶ್ರೀಮೆ ಬೇಕೆಂಬ ಮನಸು ಇಡಲಿಲ್ಲಾ. ಅಥಾಪಿ ಹಣ ಕಾಸು, ಶ್ರೀಮೆ ಭೂಮಿ, ಆಗ ಬೇಕೆಂಬ ಅಪೇಕ್ಷೆ ಇದ್ದರೆ, ಮೊದಲು ಸರ ಜನರಾಲ್ ರಾಬಟ್ಸ ಅಬರಕ್ರಂಬಿ ಸಾಹೇಬ ಬಹಾದ್ದರವರ ಸಂಗಡ ಹೇಳುತ್ತಿದ್ದೆವು. ಈಗ ತಂಮ ಹುಕುಂ ಪ್ರಕಾರ ಜನರಾಲ್ ಇಷ್ಟ್ಯಾರಟ ಸಾಹೇಬರವರು ಬಂದು ಇದ್ದರು. ಅವರಿಗೆ ಜಾಹೀರು ಮಾಡುತ್ತಾ ಇದ್ದೆವು. ತಾವು ಯಾವತ್ತೂ ಹಿಂದುಸ್ಥಾನದ ಶ್ರೀಮೆಗೆ ಕಾಪಾಡುವಂಥಾ ದೊಡ್ಡ ಸಾಹೇಬರು ಇದ್ಧೀರಿ. ಅಥಾಪಿ ಅಂಥಾದ್ದೇನಾದರೂ ಅಪೇಕ್ಷೆ ಇದ್ದರೆ, ತಮಗೆ ಶ್ರುತ ಪಡಿಸುತ್ತಾ ಇದ್ದೆವು. ನಾವು ನಂಮ ಪುತ್ರ ಪೌತ್ರ ಪಾರಂಪರ್ಯವಾಗಿ ದೊಡ್ಡ ಸರಕಾರದ ದಯ ಸಂಪಾದಿಸಿ ಕೊಳ್ಳ ಬೇಕು ಯಂತಾ, ಇದ್ದೀಗ ನಂಮ ಅಪೇಕ್ಷೆ ಹೊರತು, ಅಂಥಾದ್ದೇನಾದರೂ ಹಣ ಕಾಸು, ಶ್ರೀಮೆ ಭೂಮಿ ಮೇಲೆ ಅಪೇಕ್ಷೆ ಮನಸಿನಲ್ಲಿ ಮಡಗಲಿಲ್ಲಾ. ಈ ಜಾಹೀರು ಮಾಡಿರುವಂಥಾದ್ದು ಅಲ್ಬತ್ ತಮಗೆ ನಿಶ್ಚಯ ಆದೀತು. ಮೇಲಾಗಿ, ಪೂರ್ಣೆಯ ಯಂಬವನು ಬಾಂಮಣನಿದ್ಧಾನೆ[1]. ನಂಮ ಜಾತಿಗೂ ಅವನ ಜಾತಿಗೂ ಕೂಡಿ ಬರುವದಿಲ್ಲಾ. ನವಾಬ ಹೈದರಲ್ಲೀಖಾನ್ ಬಹಾದ್ದರವರು ಅವರ ಮಗ ಟೀಪುಸುಲ್ತಾನರ ದಿವಸದಲ್ಲಿ ಸಹಾ, ನಂಮ ಮೇಲೆ ಕಷುದರ್ಯಾಪವ್ರ ಹೇಳಿ, ನಮಗೂ ನಂಮ ರಾಜ್ಯಕ್ಕೂ ಬಹಳ ಖರಾಬು ಮಾಡಿಸಿದ್ಧಾನೆ. ಈಗಲೂ ಅವನೇ ಮೈಸೂರ ಶ್ರೀಮೆ ಹುಕುಮತ್ತಿನ ವೊಳಗೆ ಮೊಕರರು ಆಗಿ ಇದ್ಧಾನೆ. ಇದು ಕಾರಣಾ ಮತ್ತೂ ಕಷುದರಗಳ ಹೇಳಿ, ನಮಗೆ ಸರಕಾರದಿಂದಾ ಯೇನು ಮಾತಿನ ಹಾನಿ ಉಂಟು ಮಾಡುತ್ತಾನೋ, ಯಂಬ ಅಂದ್ಯೇಶ ನಂಮ ಮನಸಿನಲ್ಲಿ ಇದೆ. ಮಹಾದೇವ ಬಲ್ಲಾ. ಆದಾಗ್ಯೂ ಯಾವಾಗ ಈ ಯರಡು ಕಡೆ ಮಾತು ವಾಜಬಿಯಿಂದಾ ತಾವು ವಿಚಾರಿಸಿದರೆ, ನಂಮ ಮೇಲೆ ಚಾಡಿ ಹೇಳಿದವನ ಮೇಲೆ ಯತರಾಜಿ ಹಾಸಲಾದೀತು, ನಂಮ್ಮೇಲೆ ಮತ್ತೂ ಮೆಹೆರ್ಬಾನಗಿ ಉಂಟಾದೀತು ಯಂಬದು ನಿಶ್ಚಯವದೆ, ಯಂಬ ವಿವರವಾಗಿ ಬರೆಸಿ ಕಳುಹಿದರು.

ಆ ಬಳಿಕ ಭಾದ್ರಪದ ಮಾಸದಲ್ಲು ವಕೀಲ ಕಪಿತಾನ್ ಮಾಪಿನಿ ಸಾಹೇಬರವರು ಬರಸಿ ಕಳುಹಿದ ಕಾಗದದಲ್ಲಿ "ತಂಮ ಶ್ರೀಮೆಯಲ್ಲಿ ಲಷ್ಕರಿನ ಸಮಯದಲ್ಲಿ ಚರಾಯಿ ಬಗ್ಯೆ ಕೂಡಿಸಿ ಇರುವ ಕುಂಪನಿ ಸರಕಾರದ ಯತ್ತುಗಳಲ್ಲಿ ಮಾಖೂತವಾದ್ದು ಹೋಗಲಾಗಿ, ಬಾಕಿ ಯತ್ತುಗಳಂನು ಬಂಟವಾಳಕ್ಕೆ ಸಾಗಿಸುವ ಬಗ್ಯೆ, ವಟ್ಟಟ್ಯಾಪಿವಾಲಾ, ಬೇಗಾರಿ ಜನರ ಸಹಾ, ಕಳುಹಿಸಿ ಇದ್ಧೇವೆ. ಇವರ ತಾಬೆ ಮಾಡಿ ಕಳುಹಾ ಬೇಕು, ಯಂತಾ ಜನರಾಲ್

1 ಬ್ರಾಹ್ಮಣ

ಸಾಹೇಬರು ಹೇಳಿದ್ದಾರೆ” ಯಂತಾ ಬರದು ಕಳುಹಿದರಿಂದಾ, ಆ ಜನರು ಬಂದದರಿಂದಾ, ಆ ಬಗೆ ಯತ್ತುಗಳ ಯಾವತ್ತಂನು ಅವರ ತಾಬೆ ಮಾಡಿ ಬಂಟವಾಳಕ್ಕೆ ಕಳುಹಿಸಿ ಕಾಟ್ಟರು.

ಆ ಬಳಿಕ ಬಂಗಾಳದ ಗವರ್ನರ್ ಜನರಾಲ್ ಲಾರ್ಡ್ ಮಾರನಿಂಗ್ಟಂನ್ ಸಾಹೇಬ ಬಹಾದ್ದರಂವರು ರಬ್ಯುಲ್ ಅವಲ್ ೨೭ ನೇ ತಾರೀಖಿನಲ್ಲು ಬರಸಿ ಕಳುಹಿದ ಕಾಗದದಲ್ಲಿ: “ಈಗ ತಂಮ ದರಬಾರದಲ್ಲು ಇರುವ ಸಾಹೇಬರು ಅಲ್ಲಿ ಇರುವದಕ್ಕೆ ಜರೂರು ಇಲ್ಲಾ. ಇದಕಾರಣ ತಂಮ ಅಪ್ಪಣೆ ತೆಗದು ಕಾಂಡು, ಕುಂಪನಿ ಸರಕಾರದ ಸರಹಾದ್ದಿಗೆ ಬರುವ ಹಾಗೆ, ಕಪಿತಾನ್ ಮಾಹಿನಿ ಸಾಹೇಬರಿಗೆ ಇಷಾರೆ[1] ಮಾಡಿ ಇದ್ದೇವೆ. ಕರ್ನಲ್ ಕುಲೂಸ್[2] ಸಾಹೇಬ ಬಹಾದ್ದರಂವರು, ಮೈಸೂರ ದರ್ಬಾರಿನ ಜಾನ್ಶಿನ್ ಈಗ ಮದುರಾಜಿನ ವಳಗೆ ಇದ್ದಾರೆ. ನಂಮ ಹುಕುಂ ಮೇರೆ ಸದ್ಯ ಶ್ರೀರಂಗಪಟ್ಟಣಾಕ್ಕೆ ಬರುತಾರೆ. ತಮಗೆ ಮೊದಲಾರಭ್ಯ ಶ್ರೀರಂಗಪಟ್ಟಣದ ಷಹಾರು ನ್ನೋಡ ಬೇಕೆಂಬು ಅಪೇಕ್ಷೆ ಇದೆ ಯಂತಾ, ಕೇಳಿದೆವು. ಇದರಿಂದಾ ದೋಸ್ತಿಯಿಂದಾ ಬರೆಯುತ್ತೇವೆ. ಕಪಿತಾನ್ ಮಾಹಿನಿ ಸಾಹೇಬರು ತಿರುಗಿದ ಮೇಲೆ, ಶ್ರೀರಂಗಪಟ್ಟಣದ ಷಹಾರು ನ್ನೋಡುವ ಬಗ್ಯೆ ತಮಗೆ ಖುಷಿ ಇದ್ದರೆ, ಜವಾಬು ಸವಾಲು ತಂಮ ಸರಕಾರದ್ದು ತೀರಿಸುವ ಬಗ್ಯೆ, ತಾವು ಶ್ರೀರಂಗಪಟ್ಟಣಾಕ್ಕೆ ರವಾನೆ ಆಗ ಬೇಕು. ಈ ಮಾತು ತೀರಿಸುವ ಹಾಗೆ, ನಾವು ಆ ಕರ್ನಲ್ ಸಾಹೇಬರಿಗೆ ಹುಕುಂ ಕಾಟ್ಟು ಇದ್ದೇವೆ. ಹೊಟಟಾಗಿ ಕೇಳಿ ಯೇನಾದರೂ ಮನಸಿಗೆ ಅಂದೇಶ ಯಿದ್ದರೆ, ಅದಂನು ತೆಗದು ಬಿಡ ಬೇಕು. ಯಾವದಾಂದೂ ಕೆಲಸ ತೀರಿಸ ಬೇಕಾದರೂ, ಆ ಕರ್ನಲ್ ಸಾಹೇಬರ ಕಂಡು, ಮೊಕಾ ತೀರಿಸ ಬೇಕು” ಯಂಬದಾಗಿ, ಬರಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬು ಜಮಾದಿಸಾನಿ ೨ ನೇ ತಾರೀಖಿನಲ್ಲು ಬರಸಿ ಕಳುಹಿದ ಕಾಗದದಲ್ಲಿ: “ತಂಮ ಇನಾಯತನಾಮಾ ಬಂದದರಿಂದಾ ಬಹಳ ಸಂತ್ಯೋಷವಾಯಿತು. ಅದರಲ್ಲಿ ಈಗ ಸರಕಾರದ ವಕೀಲರು ತಂಮ ಹತ್ತರ ಇರುವದಕ್ಕೆ ಜರೂರು ಇಲ್ಲಾ. ಇದಕಾರಣ ತಂಮ ಹುಕುಂ ತೆಗದು ಕಾಂಡು, ಕುಂಪನಿ ಸರಕಾರದ ಶೀಮೆಗೆ ಬರುವ ಹಾಗೆ ಕಪಿತಾನ್ ಮಾಹಿನಿ ಸಾಹೇಬರಿಗೆ ಬರಸಿ ಕಳುಹಿಸಿ ಇದ್ದೇವೆ, ಯಂಬದಾಗಿ ಬರಸಿ ಇದ್ದಿರಿ. ನಮಗೂ ಟೀಪು ಸುಲ್ತಾನರಿಗೂ ಸರಹದ್ದಿನ ತಕರಾರು ಬಂದು ಇದ್ದದರಿಂದಾ, ಮಲ್ವಾನ್ ಕಮಿಶನ್ ಸಾಹೇಬರು ಆ ತಕರಾರು ತೀರಿಸುವದಕ್ಕೆ ಕಪಿತಾನ್ ಮಾಹಿನಿ ಸಾಹೇಬರಂನು ಕಳುಹಿಸಿ ಇದ್ದರು. ಈಗ ವಂದು ಅರೆ ವರುಷವಾಯಿತು. ಆ ಸಾಹೇಬರು ನಂಮ ಶೀಮೆ ಕೆಫಿಯತ್ತು ಯಾವತ್ತು ದರಿಯಾಪ್ತು ಮಾಡಿ, ಸರಹದ್ದಿನ ಹಕೀಕತ್ತು ನಂಮ ಸಂಗಡ ಕೇಳಿದರು. ನಂಮ ದಿವಸದಲ್ಲಿ ಆದ ಕೆಫಿಯತ್ತು ವಿದ್ಯಮಾನ ಯಾವತ್ತು ಅವರಿಗೆ ತಿಳಿಸಿದೆವು. ಹರಾಕು ವಿದ್ಯಮಾನ ಬರದ್ದು ನಂಮ ಬಳಿಯ ಇದ್ದದ್ದಂನು ಅವರ ಮುಂದೆ ನ್ನೋದಿ ಹೇಳಿ ತಿಳಿಸಿದ್ದೇವೆ. ನೂರ ಅರವತ್ತು ವರುಷದ ವಳಗಣ ಕೆಫಿಯತ್ತು ಇದರಲ್ಲಿ ಸರಕಾರದ ಕೆಲಸಕ್ಕೆ ಬರುವಂಥಾದ್ದ ನ್ನೋಡಿ, ಬರ ಕಾಂಡು, ರವಾನೆ ಆದರು. ಮತ್ತೆ ಆರು ತಿಂಗಳ ಮೇಲೆ ಯುಟಾಮ ಸಾಹೇಬರು ಈ ಕಪಿತಾನ್ ಮಾಹಿನಿ ಸಾಹೇಬರಿಗೂ[3] ಮಲ್ವಾನಿ ಕಮಿಶನ್ ಸಾಹೇಬರು ಕಳುಹಿದರು. ಆ ಇಬ್ಬರು ಸಾಹೇಬರು ಬಂದು, ನಮಗೂ ಟೀಪುಸುಲ್ತಾನರಿಗೂ ತಕರಾರು ಬಿದ್ದು ಇದ್ದದ್ದಂನು ದರಿಯಾಪ್ತು ಮಾಡಿ, ಕೆಲವು ನಂಮ ಶೀಮೆಯಂನು ತಿರಿಗಿ ನ್ನೋಡಿ, ಮೂರು ತಿಂಗಳು ಇಲ್ಲಿ ಇದ್ದು, ಇಲ್ಲಿ ಹಾಲುಹಕೀಕತ್ತು[4] ನ್ನೋಡಿಯೂ ಕೇಳಿಯೂ ಇದ್ದಾರೆ. ಅಷ್ಟರಲ್ಲಿ ಇಂಗ್ರೇಜಿ ಕುಂಪನಿ ಸರಕಾರಕ್ಕೂ ಟೀಪುಸುಲ್ತಾನರ ಸರಕಾರಕ್ಕೂ ಸಲ್ಲಾ ಮುರುದ ವಿವರದ ಇನಾಯತನಾಮಾ ನಂಮ ಹೆಸರಿಗೆ ಬಂದು ತಲಪಿತು. ಆ ಬಳಿಕ ಕರಾರುನಾಮಾ ಬರದು ಕಾಟ್ಟೆವು. ಆ ಕರಾರುನಾಮೆ ಆ ಇಬ್ಬರು ಸಾಹೇಬರು ತೆಗದು ಕಾಂಡು ಹೋದರು. ಆ ಮೇಲೆ ವಂದು ತಿಂಗಳು ದಿವಸದಲ್ಲಿ ತಂಮ ಯರಡನೆ ಇನಾಯತನಾಮಾ ತಂದು ಕಾಟ್ಟರು. ಅದರಲ್ಲಿ ‘ಕಪಿತಾನ್ ಮಾಹಿನಿ ಸಾಹೇಬರಿಗೆ ಸರಕಾರದ ವಕೀಲತನ ಮೊಕರರಾಗಿ ರವಾನೆ ಮಾಡಿ ಇದ್ದೇವೆ. ತಂಮ ಬಳಿಯಲ್ಲಿ ಇದ್ದಾರು. ಸರಕಾರದ ಕೆಲಸಕ್ಕೆ ಆ ವಕೀಲರು ಯಾವ ಮೇರೆ ಹೇಳುತಾರ್ಯೊ, ಅದಂನು ತಾವು ವಡಂಬಡ ಬೇಕು,’ ಯಂಬದಾಗಿ ಬರಸಿ ಇದ್ದಿರಿ. ತಂಮ ಹುಕುಂ ಪ್ರಕಾರ ಕಪಿತಾನ್ ಮಾಹಿನಿ ಸಾಹೇಬರು ಇಲ್ಲಿ ಇದ್ದು, ನಂಮ ಸಂಗಡ ಸರಕಾರದ ಕೆಲಸ ತೆಗದು ಕಾಂಡರು. ನಾವು ಮಾಡಿದಂಥಾ ಸರಕಾರದ ಕೆಲಸ ನಂಮಿಂದಾ ತೀರುವಂಥಾದಲ್ಲಾ. ಅದೆಲ್ಲಾ ಆ ಕಪಿತಾನ್ ಸಾಹೇಬರ ಜಾಗ್ರತನದಿಂದಲೂ ಹುಂಷಾರಿನಿಂದಲೂ ಆಗಿ ಇದೆ. ಬಹಳ ಬಗೆಯಿಂದಾ ನಮಗೆ

1 ಸಂಜ್ಞೆ. 2 Colonel Close. 3 ತಂಮ. 4 ಸಂಗತಿ ಸಮಾಚಾರ.

ತಬ್ಬೀಯತ್ತು ಮಾಡಿದರು. ನಂಮಿಂದಾ ಒಂದು ಹಾಳು ಕೆಲಸ ಆಗುವದಿದ್ದರೆ, ಅವರ ಬುದ್ಧಿ ಹೀಂನದಿಂದಾ ಹಾತ್ತು ಹಾಳು ಕೆಲಸ ಮಾಡಿದೆವು. ಅದರಿಂದಾ ಸರಕಾರದ ಮೆಹೆರಬಾನಗಿ ಇನಾಯತ ಉಂಟಾಯಿತು. ಇದುಕಾರಣ ಆ ಕಪಿತಾನ್ ಸಾಹೇಬರಿಗೂ ನಮಗೂ ಮನಸು ಒಂದಾಗಿ, ದೋಸ್ತಿ ಆಯಿತು. ಈಗ ಅವರು ತಂಮ ಹುಕುಂ ಪ್ರಕಾರ ಹೋರಟು ರವಾನೆ ಆಗುತ್ತಾ ಇದ್ದಾರೆ. ಆದ್ದರಿಂದಾ ನಂಮ ಮನಸಿಗೆ ಬಹಳ ದಿಲ್ಗೀರು ಆಗುತ್ತಾ ಇದೆ. ಇದಲ್ಲದೆ ಕರ್ನಲ್ ಕುಲೂನ್ ಸಾಹೇಬರವರು ಮೈಸೂರ ಸೀಮೆ ವಕ್ಕಿಲಾತನ ಮೋಕರರು ಆಗಿ ಬರುತ್ತಾ ಇದ್ದಾರೆ ಯಂಬದಾಗಿಯೂ, ಅವರು ತಲಪಿದ ಮೇಲೆ, ಅವರ ಮಿಲಾಕತ್ತು ಮಾಡಿ ಕೊಂಡು, ಶ್ರೀರಂಗಪಟ್ಟಣದ ಫವಜು ನೋಡ ಬೇಕೆಂಬದಾಗಿ, ತಮಗೆ ಅಪೇಕ್ಷೆ ಇದೆ ಯಂತಾ, ಕೇಳಿದೆವು ಯಂಬದಾಗಿಯೂ, ತಂಮ ಕೆಲಸದ ಬಂದುಬಸ್ತು ಯೇನು ಇದ್ದಾಗ್ಯೂ, ಆದೀತು ಯಂಬದಾಗಿಯೂ ಸಹಾ, ಸರಫರಾಜಿ ಕಲಂಮಿನಿಂದಾ ಬರದು ಇದ್ದೀರಿ. ಈ ಬಗ್ಯೆ ನಂಮ ಕೆಲಸ ಬಂದುಬಸ್ತು ಮಾಡಿ ಕೊಳ್ಳುವದಕ್ಕೆ ಪಟ್ಟಣಕ್ಕೆ ಹೋಗ ಬೇಕೆಂತಾ, ನಂಮ ಮನಸಿನಲ್ಲು ಇರಲಿಲ್ಲಾ. ಮಹರಾಜಿನ ಲಷ್ಕರು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಇರುವಾಗ್ಯೆ, ಕಪಿತಾನ್ ಮಾಹಿನಿ ಸಾಹೇಬರ ಸಂಗಡ ಆ ದಂಡಿಗೆ ಹೋಗಿ, ಯಾವತ್ತೂ ಲಷ್ಕರಿನ ಸರದಾರರ ಮಿಲಾಕತ್ತು ಮಾಡ ಬೇಕೆಂತಲೂ, ಆ ಕಪಿತಾನ್ ಸಾಹೇಬರು ಯಲ್ಲಾ ಸರದಾರರಿಗೂ ತಿಳಿಸ್ಯಾರು, ಆ ಯಲ್ಲಾ ಸರದಾರರ ಸಂಗಡಲೂ ದೋಸ್ತಿ ಉಂಟಾದೀತು ಯಂಬದಾಗಿ, ನಂಮ ನಸಿನಲ್ಲಿ ಅಪೇಕ್ಷಿಸಿ ಇದ್ದೆವು. ಈಗ ತಂಮ ಹುಕುಂ ಪ್ರಕಾರ ಕಪಿತಾನ್ ಮಾಹಿನಿ ಸಾಹೇಬರು ಹೋರಟು ಹೋಗುತ್ತಾ ಇದ್ದಾರೆ. ಮಹರಾಜಿನ ಲಷ್ಕರು ಪಟ್ಟಣದಲ್ಲು ಇಲ್ಲಾ. ಪಟ್ಟಣಕ್ಕೆ ಹೋಗಿ ಬಂದುಬಸ್ತು ಮಾಡಿ ಕೊಳ್ಳುವ ಬಗ್ಯೆ, ನಮಗೆ ಅಂಥಾ ಜರೂರು ಕೆಲಸವು ಕಾಣುವದಿಲ್ಲಾ. ಇದಲ್ಲದೆ ತಂಮ ಸೀಮೆಗೆ ಹಾನಿ ಸರಹಾದ್ದು ಮಾಡಿದ್ದೀರಿ ಯಂಬದಾಗಿ ಕೇಳಿದ್ದರಿಂದಾ, ಈ ಮಾತಿಗೆ ನಂಮ ಮನಸಿನಲ್ಲಿ ಸ್ವಲ್ಪ ಅಂದೇಶವಾಯಿತು ಯಂತಲೂ, ಮುಂದೆ ಯೇನಾದು ಕೆಲಸವಿದ್ದಾಗ್ಯೂ, ಆ ಕರ್ನಲ್ ಸಾಹೇಬರ ಮುಖಾಂತರ ತೀರಿಸಿ ಕೊಳ್ಳುವದೆಂಬದಾಗಿಯೂ, ಬರಸಿರುವದು ಸರಿಯಷ್ಟೆ. ಈ ವಿವರ ಕೇಳಿದಾಕ್ಷಣ ಬಹಳ ಫಿಕ್ರು ಹಾಸಲಾಯಿತು. ನಂಮ ಮನಸಿನಲ್ಲಿ ಹಮೇಷ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕೆಲಸದ ಒಳಗೆ ಹಾಜರು ಇದ್ದು, ಮೆಹೆರಬಾನಗಿ ಉಂಟು ಮಾಡಿ ಕೊಳ್ಳ ಬೇಕು ಯಂತಾ, ಅಪೇಕ್ಷೆ ಇತ್ತು. ಸರಕಾರದ ಸರದಾರರು ದೋಸ್ತಿಯಿಂದಾ ನಮಗೆ ಅಣ್ಣ ತಂಮಂದಿರ ಹಾಗೆ ಇರ ಬೇಕು. ನಾವು ನಂಮ ಪುತ್ರಪೌತ್ರ ಪಾರಂಪರ್ಯವಾಗಿ ಕುಂಪನಿ ಸರಕಾರದ ಆಶ್ರಯದಲ್ಲಿ ಇದ್ದು, ಆಬರು ಬಹುಮಾನ ಉಂಟು ಮಾಡಿ ಕೊಳ್ಳ ಬೇಕೆಂಬ ಯೋಚನೆ ಹೊರತು, ಸೀಮೆ ಭೂಮಿ, ಹಣ ಕಾಸು ಸಂಪಾದಿಸ ಬೇಕೆಂಬದು ಇತ್ತಿಲ್ಲಾ. ಈ ಭೂಮಿ ಮೇಲೆ ಇರುವ ಪರಿಯಂತರ ಸರಕಾರದ ದೋಸ್ತಿ ಒಳಗೆ ಇರ ಬೇಕು ಯಂಬದಾಗಿ, ಮಹಾದೇವನಿಗೆ ಹಮೇಷ ಬೇಡಿ ಕೊಳ್ಳುತ್ತಾ ಇದ್ದೇವೆ. ಈ ಮೇರೆ ಇಷ್ಟು ಸತ್ಯದಿಂದಾ ಸರಕಾರಕ್ಕೆ ಶ್ರೇಯಸ್ಸು ಹಾರೈಸಿ ನಡಯುತ್ತೇವೆ. ಇದರ ಮೇಲು ಯೇನಾದರೂ ಬಂದರೆ, ಅದೃಷ್ಟವೇ ಸರಿ, ಮಾಡತಕ್ಕದ್ದೇನದೆ? ಅಂಥಾ ಕೆಲಸ ನಂಮಿಂದಾ ಬರಲಿಕ್ಕಿಲ್ಲಾ. ನಂಮ ಸೀಮೆ ಸರಹಾದ್ದನು ಇಂಜನೇರು ಇಮಿಟ ಸಾಹೇಬರು, ಕುಂಪನಿ ಹುಕುಂ ಮೇರೆ ಬಂದು, ಸರಹದ್ದು ಯಾವತ್ತು ನೋಡಿ, ಸರಹಾದ್ದಿನಲ್ಲು ಗುರ್ತು ಕಲ್ಲು ನೆಟ್ಟು, ಅದನು ತಮಶೀಲಲ್ಲು ಬರಕೊಂಡು, ಹೋಗಿ ಇದ್ದಾರೆ ಆ ಸರಹಾದ್ದಿನ ಹಾಗೆ ನಂಮ ಜನರಿಗೆ ಒಂದ್ಯೆ ಹೆಜ್ಜೆ ನಡಗುವದಕ್ಕೆ ಬಿಡುವದಿಲ್ಲಾ. ಇನ್ನು ಮುಂದೂ ಅಂಥಾ ಕೆಲಸ ನಂಮಿಂದಾ ಬರಲಿಕ್ಕಿಲ್ಲಾ. ನಂಮ ಸರಹಾದ್ದಿನ ಸಮೀಪದ ತಾಲೂಕಿನಲ್ಲಿ ಅಮಲು ಮಾಡುವಂಥಾ ಕೆಲವರು ನವಾಬ ಹೈದರಲ್ಲಿ ಖಾನರ ದಿವಸದಲ್ಲಿಯೂ, ಟೀಪುಸುಲ್ತಾನರ ದಿವಸದಲ್ಲಿಯೂ, ನಾನಾಪ್ರಕಾರ ಕ್ಷುದ್ರೋಪದ್ರಗಳ ಹೇಳಿ, ತಂಟೆ ತಕರಾರು ಮಾಡುತ್ತಾ ಇದ್ದರು. ಈಗಲೂ ಆ ಜನರು ಪಟ್ಟಣದ ಕಮೀಶನ್ ಸಾಹೇಬರ ಮುಂದೆ ಇಲ್ಲ ಸಲ್ಲದ್ದ ಸಹುತ್ತಿದ್ದಾರು. ಯಾವ ತರದಲ್ಲಿ ಆದರೂ ಈ ದೋಸ್ತಾರರ ಮೇಲೆ ಸರಕಾರದ ಮೆಹೆರಬಾನಗಿ ಕಡಮೆ ಮಾಡ ಬೇಕು ಯಂತಾ, ಅವರ ಮನಸಿನಲ್ಲಿ ಯೋಚನೆ ಮಾಡಿ ಕೊಂಡು ಇದ್ದಾರೆ. ನಾವು ನಂಮ ಸತ್ಯದಿಂದಾ ಸರಕಾರ ನಂಬಿ ದೋಸ್ತಿ ಇಟ್ಟು ಇರುವಂಥಾದ್ದು ಆ ಕಮೀಶನ್ ಸಾಹೇಬರು ತಿಳಿದಂಥಾವರಲ್ಲಾ. ಆ ತಂಟೆ ಮಾಡುವ ಜನರು ಹೇಳಿದ್ದರಿಂದಾ, ತಮಗೆ ಜಾಹೀರು ಮಾಡಿ ಇದ್ದಾರು. ಈ ದೋಸ್ತುದಾರರ ಮೇಲೆ ಮೆಹೆರಬಾನಗಿ ಕಡಮೆ ಆಗುವದಕ್ಕೆ ಕಾರಣ ಇದ್ಯೇ ಸರಿ. ಇದು ಹೊರತು ನಂಮಿಂದಾ ಯೇನಾದರೂ ತಕ್ಷೀರು ಆಗಲಿಲ್ಲಾ. ಅದಾಯ ತುರು ಆ

ದಾರಷ್ಟಯದಿಂದಾ ತೀರುವ ಪರಿಯಂತರ, ನಾವು ಪರಾಗಾಪರಯುತನದಿಂದಾ ಸರಕಾರಕ್ಕೆ ಸಹಾಯ ಮಾಡಿ ಇರುವಂಥಾದ್ದು ಸರ ಜನರಾಲ್ ರಾಬರ್ಟ್ ಅಬರ್ಕರಂಬಿ ಸಾಹೇಬರವರೂ, ಅವರ ಸಂಗಡ ಇದ್ದ ಸರದಾರರೂ ಮುಂತಾಗಿ ತಿಳಿದು ಇದ್ದಾರೆ. ಈಗಿನ ದಿವಸದಲ್ಲಿ ಲಡಾಯಿ ಪ್ರಾರಂಭ ಆಗುವಾಗ್ಯೆ, ಜನರಾಲ್ ಇಷ್ಟಾರಟ್ ಸಾಹೇಬರವರು, ಜನರಾಲ್ ಹಾಟ್ಲಿ ಸಾಹೇಬರವರು ಸಹಾ, ಮುಂಬಾಯಿ ಲಷ್ಕರಿನ ಸಂಗಡ ಬಂದು, ನಮ್ಮಿಂದಾ ಅಲ್ಪ ಸ್ವಲ್ಪ ಕುಂಪನಿ ಸರಕಾರದ ಕೆಲಸ ತೆಗದು ಕೊಂಡು ಇದ್ದಾರೆ. ನಮ್ಮ ಹಾಕೀಕತ್ತು ಆ ಸಾಹೇಬರಿಗೂ ಜಾಹೀರು ಇದೆ. ಇದಲ್ಲದೆ ಮೆಸ್ತರ್ ಯುಟಾಮು ಸಾಹೇಬರು, ಸರಕಾರದ ವಕೀಲ್ ಕಪಿತಾನ್ ಮಾಹಿನಿ ಸಾಹೇಬರು ಸಹಾ, ಇಲ್ಲಿಗೆ ಬಂದು ಇದ್ದರು. ಅವರು ಅಲ್ಪ ಸ್ವಲ್ಪ ಸರಕಾರದ ಕೆಲಸ ನಮ್ಮಿಂದಾ ತೆಗದು ಕೊಂಡು ಇದ್ದಾರೆ. ಅವರಿಗೂ ನಮ್ಮ ಹಾಲು ಹಾಕೀಕತ್ತು ತಿಳಿದು ಇದೆ. ಈ ಸಾಹೇಬರಲ್ಲಿ ಯಾರಾದರೂ ಮಟಬರ ಸಂಗಡ ದರಿಯಾಪ್ತು ಮಾಡಿಸಿದರೆ, ನಾವು ಪರಾಗಾಪರಯುತನ ಬಿಟ್ಟು, ಸರಕಾರಕ್ಕೆ ಸಹಾಯ ಮಾಡಿದಂಥಾದ್ದು ತಮಗೆ ಜಾಹೀರಾದೀತು. ಯಾವ ಮೇರೆ ಅರಿಕೆ ಮಾಡಿ ಸುತಕ್ಕಿರ್ರಾ, ಆ ಮೇರೆ ಈ ದ್ಯಾಸಕ್ಕುಹಾರರು ಸರಫರಾಜಿ ಆದ್ದೇವು. ಆ ತೀಕ್ಷಿಯು ತಮ್ಮದು ಇದೆ," ಯಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಆಶ್ವೀಜ ಶು ೧೪ ಲು ಮಲೆವಾರಿ ಕಮೀಶನ್ ಇಸ್ಪೆನ್ಸರ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ಹಿಂದುಸ್ಥಾನದಲ್ಲು ಇರುವ ಇಂಗ್ರೇಜ ವಂಶದವರಿಗೆ ಸಹಾಯವಾಗಿ ತಾವು ನಡದದ್ದಕ್ಕೆ, ತಮಗೆ ಸಂತೋಷ ಆಗುವ ಮೇರೆಗೆ, ಪರತಯುಪಕಾರವಾಗಿ ಸಂವತ್ಸರಕ್ಕೆ ತಾವು ಬಹುಮಾನವಾದ ಕುಂಪನಿಗೆ ಕೊಡುವಂಥಾ ಹಾಗಾ ಬಿಡಿಸಿ ಕೊಟ್ಟು, ತಮ್ಮ ಸನ್ನೇಹ ಇರುವದಕ್ಕೆ ಅಡೆಯಾಳವಾಗಿ[1] ಸಂವತ್ಸರದಲ್ಲಿ ಕೆಲವು ತೆಗದು ಕೊಳ್ಳುವದು ಯಂಬದಾಗಿ, ಬಹುಮಾನ ಪಟ್ಟ ಗವರನರ ಕವುನ್ಸಲ್[2] ಸಾಹೇಬರವರು ಬರೆಸಿ ಕಳುಹಿಸಿ ಇರುವದು ಪರಿಯಷ್ಟೆ. ತಮ್ಮ ಬಳಿಯ ಇದ್ದ ಕಪಿತಾನ್ ಮಾಹಿನಿ ಸಾಹೇಬರು ಆ ಸ್ಥಾನ ಬಿಟ್ಟು ಬರುವದಕ್ಕೆ ಮುಂಚೆ ತಮಗೆ ಸಮ್ಮತವಾದ ಮೇರೆಗೆ ಸಂವತ್ಸರದಲ್ಲಿ ಕೊಡುವದು ನಿಶ್ಚಯ ಮಾಡುವದಕ್ಕೆ ಮಾಹಿನಿ ಸಾಹೇಬರು ತಮ್ಮಂನ ಕಂಡು, ಮಾತಾಡಿ, ನಿಶ್ಚಯ ಮಾಡಿ ಕೊಂಡಾರು," ಯಂಬದಾಗಿ, ಬರೆಸಿ ಕಳುಹಿಸಿ ಇದ್ದದರಿಂದಾ, ಈ ಬಗ್ಯೆ ಕಪಿತಾನ್ ಮಾಹಿನಿ ಸಾಹೇಬರು ಬರದು ಕೊಟ್ಟ ಕರಾರುನಾಮೆ ವಿವರ: "ರೈಟ ಅನಬಲ್ ಗವರನರ ಜನರಾಲ್[3] ಸಾಹೇಬರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ವಡೆಯರವರಿಗೆ ಯಪ್ರೆಲು ತಿಂಗಳು, ತಾರೀಕು ೩೦, ವರುಷ ೧೭೯೦ ಲು, ವಂದು ಕಾಗದ ಬರದು ಇದ್ದರು. ಅದರಲ್ಲಿ ವರುಷ ವರುಷಕ್ಕೂ ದೊರೆಗಳವರು ಅನಬಲ್ ಕುಂಪನಿಗೆ ಕೊಡುತಕ್ಕದ್ದ ಖಂಡಣಿ ಹಾಗಾ ಮಾಫು ಕೊಡ ಬೇಕು. ಈ ಉದ್ದಿಶ್ಯ ದೊರೆಗಳವರು ಸುಮ್ಮನೆ ಸರಕಾರಕ್ಕೆ ವರುಷ ವರುಷಕ್ಕೆ ವಂದು ನಿಶಾನಿ ಕೊಡ ಬೇಕು ಯಂತಾ, ಬರದು ಇದ್ದರು. ಇದರಿಂದಾ ನಾವು ಮಲೆಯಾಳ ರಾಜ್ಯದಲ್ಲಿ ಇರುವ ಇಸ್ಪೆನ್ಸರ ಸಾಹೇಬರವರು, ಮುಂಬಾಯಿ ಸರಕಾರದ ಅಪ್ಪಣೆಯಿಂದಲೂ, ರೈಟ್ ಅನಬಲ್ ಲಾರ್ಡ ಮಾರನಿಂಗ್ಟನ್ ಸಾಹೇಬರವರ ಅಪ್ಪಣೆಯಿಂದಲೂ, ನಾವು ಬರದು ಕೊಟ್ಟದ್ದು ವಂದು ನಿಶಾನಿ ಕೊಡ ಬೇಕು ಯಂತಾ, ಮೇಲೆ ಬರದು ಇದೆ ಯಷ್ಟೆ. ಅದಕ್ಕೆ ವಂದು ಆನೆ ಹಾಲೇರಿ ವೀರರಾಜೇಂದ್ರ ವಡೆಯರವರು ಮೆಹರಬಾನಗಿ ಮಾಡಿ, ದ್ಯಾಸ್ತಿಯಿಂದಾ ಕುಂಪನಿ ಸರಕಾರಕ್ಕೆ ಕೊಡ ಬೇಕೆಂಬದಾಗಿ, ನಮ್ಮ ಕೈಯಿಂದಾ ಬರದ ಕಾಗದ ಸರಕಾರದ ಮೊಹರ ಮಾಡಿ, ವೀರರಾಜೇಂದ್ರ ಪೇಟೆಯಲ್ಲಿ ಅಕ್ಟೋಬರ ತಿಂಗಳು, ತಾರೀಕು ೧೭, ವರುಷ ೧೭೯೮ ಲು, ಬರದು ಕೊಟ್ಟದ್ದು. ಇದೇ ಕರಾರು ಪ್ರಕಾರ ವರುಷಂಪ್ರತಿಯಲ್ಲು ವಂದಾಂದು ಆನೆಯನ್ನು ಇಂಗ್ರೇಜ ಕುಂಪನಿ ಸರಕಾರಕ್ಕೆ ನಮ್ಮ ಅರಮನೆಯಿಂದಾ ಕೊಟ್ಟು ಬರುತಕ್ಕೆವೆ ಯಂಬದಾಗಿ, ವೀರರಾಜೇಂದ್ರ ವಡೆಯರವರು ಇಂಗ್ರೇಜ ಸರಕಾರಕ್ಕೆ ಕರಾರುನಾಮೆ ಬರೆಸಿ, ತಮ್ಮ ದಸ್ತಕತ್ತು ಮೊಹರ ಮಾಡಿ, ಸದರಿ ಮಾಹಿನಿ ಸಾಹೇಬರವರ ಕೈಯ ಕೊಟ್ಟರು.

ಆ ಬಳಿಕ ಮಾಹಿನಿ ಸಾಹೇಬರು ಬರದು ಕೊಟ್ಟ ಭಾಷಾಪತ್ರಿಕೆ ವಿವರ: "ಕೊಡಗಿನ ಸಂಸ್ಥಾನದ ಹಾಲೇರಿ ವೀರರಾಜೇಂದ್ರ ವಡೆಯರವರಿಗೆ ವಕೀಲ್ ಕಪಿತಾನ್ ಮಾಹಿನಿ ಸಾಹೇಬರು ಬರ ಕೊಟ್ಟ ಭಾಷಾಪತ್ರಿಕೆ:" ಲಡಾಯಿ ಶುರು ಆಗುವಾಗ್ಯೆ, ಲಡಾಯಿದ ಕೈಫಿಯತ್ತು ತಮಾಮು ಬರೆಯುವ ಬಗ್ಯೆ, ನಾವು ವಕೀಲರಾಗಿ ದೊರೆಗಳ ಬಳಿಯ

---

1 ಗುರುತಾಗಿ. 2 Governor in Council. 3 The Right Honorable, the Governor General.

ಇದ್ದೇವು. ಈಗ ಗವರ್ನರ್ ಜನರಾಲ್ ಸಾಹೇಬರ ಅಪ್ಪಣೆ ಪ್ರಕಾರ, ನಾವು ದೊರೆಗಳ ಅಪ್ಪಣೆ ತೆಗದು ಕೊಂಡು, ಕೊಡಗಿನ ರಾಜ್ಯದಿಂದಾ ಹೋಗುವಾಗ್ಯೆ, ಗವರ್ನರ್ ಸಾಹೇಬರ ಹುಕುಂ ಮೇರೆ ಬರ ಕೊಟ್ಟದ್ದು.

ವಂದನೆ ಕಲಂ. ನಾವು ಈ ಲಡಾಯಿದ ಸಮಯದಲ್ಲಿ ದೊರೆಗಳ ಬಳಿಗೆ ಬಂದೆವಲ್ಲಾ. ಅಂದಿನಾರಭ್ಯ ನಾವು ದೊರೆಗಳ ಮನಸು ನೋಡಿದೆವು. ಕುಂಪನಿ ಲಷ್ಕರಿನ ಕೆಲಸ ಯೆಷ್ಟು ಮೆಹನತ್ತಿನದು ಬಂದಾಗ್ಯೂ, ತಾವು, ತಂಮ ಶೀಮೆ ಜನರ ಕೈಯಿಂದಾ ಸಹಾ, ದೊರೆಗಳು ಬಹಳ ಮೋಹ ಇಟ್ಟು ಕುಂಪನಿ ಕೆಲಸ ಬಹಳ ಮಾಡಿದರು.

ಯರಡನೆ ಕಲಂ. ದೊರೆಗಳು ಮೋದಿಖಾನೆಯಲ್ಲಿ ಅಕ್ಕಿ ಮುಂತಾಗಿ ಜಮಾಯಿಸಿ, ಮುಂಬಾಯಿ ಲಷ್ಕರಿನ ಕೆಲಸ ಯಾವತ್ತೂ ಬಂದುಬಸ್ತು ಮಾಡಿ ಕೊಟ್ಟು, ಇನ್ನು ನೀವು ಶ್ರೀರಂಗಪಟ್ಟಣಕ್ಕೆ ಲಡಾಯಿಕ್ಕೆ ಹೋಗಿ ಯೆಂತಾ ಹೇಳಿ ಕಳುಹಿಸಿದರು. ದೊರೆಗಳವರು ಈ ಪ್ರಕಾರ ಅಕ್ಕಿ ಮುಂತಾಗಿ ಬೇಕಾದ ಸಾಮಾನು ಜಮಾಯಿಸಿ ಕೊಟ್ಟು, ಬಂದು ಬಸ್ತು ಮಾಡದಿದ್ದರೆ, ಇಷ್ಟು ಸಾಮಾನು ನಂಮ ಲಷ್ಕರಿಗೆ ಸಿಕ್ಕುತ್ತಾ ಇತ್ತಿಲ್ಲಾ.[1] ದೊರೆಗಳವರು ಇಷ್ಟು ಮೆಹರ್ಬಾನಾ ಮಾಡಿ ನಡಸದಿದ್ದರೆ, ಈ ಲಷ್ಕರು ಯೇನು ಆಗುತ್ತಿತ್ತೋ, ತಿಳಿಯಲಿಲ್ಲಾ.

ಮೂರನೆ ಕಲಂ. ದೊರೆಗಳವರು ತಂಮ ಕಡೆ ಬಹಳ ಸಾವಿರ ಜನರಂನು ಲಷ್ಕರಿನ ಕೆಲಸಕ್ಕೆ ಕೊಟ್ಟರು. ಆ ಜನರು, ಬೇಗಾರಿ ಜನದ ಪ್ರಕಾರ, ದಂಡಿನ ಚಾಕರಿ ಮಾಡಿದರು. ಆದಾಗ್ಯೂ ಅವಂದಿರ ಮಜೂರಿ ವಂದು ಕಾಸಾದರೂ ತೆಗದು ಕೊಳ್ಳಲಿಲ್ಲಾ. ಮೋಟೆ ಸಾಮಾನು ಪಟ್ಟಣಕ್ಕೆ ಸಾಗ ಬೇಕಲ್ಲಾ ಯೆಂದು, ಸ್ವಲ್ಪ ಮಾತ್ರ ದೊರೆಗಳಿಗೆ ಹೇಳಿದರಿಂದಾ, ಆಕ್ಷಣ ಯರಡು ಸಾವಿರ ಜನವಂನು ಮೋಟೆ ಸಾಮಾನು ಹೊರುವ ಬಗ್ಯೆ ತಯಾರು ಮಾಡಿದರು. ಆ ಬಳಿಕ ಮೋಟೆ ಸಾಮಾನದಿಂದಾ ಈಗ ಜರೂರು ಇಲ್ಲಾ ಯೆಂತಾ ಹೇಳಿದೆವು.

ನಾಲ್ಕನೆ ಕಲಂ. ಮೇಲ್ ಬರದ ದಂಡಿನ ಕೆಲಸಕ್ಕೆ ಕುಂಪನಿ ಸರಕಾರಕ್ಕೆ ದೊರೆಗಳವರು ಮೂರು ಸಾವಿರ ಯತ್ತಂನು, ಕೆಲಸಕ್ಕೆ ಆಗುವಂಥಾದ್ದನ್ನೆ ತಯಾರು ಮಾಡಿ ಕೊಟ್ಟರು. ಶ್ರೀರಂಗಪಟ್ಟಣಕ್ಕೆ ಬಂದ ದೊಡ್ಡ ಲಷ್ಕರಿಗೆ ಕೆಲಸ ಬಿದ್ದರೆ ಆದೀತೆಂಬದಾಗಿ, ನಾಲ್ವತ್ತು ಸಾವಿರ ಖಟ್ಟಿ ಅಕ್ಕಿಯಂನು ಹೇರಿಸಿ, ವೀರರಾಜೇಂದ್ರಪ್ಪೇಟೆಯಲ್ಲಿ ದೊರೆಗಳ ಅಪ್ಪಣೆ ಪ್ರಕಾರ ನಂಮ ವಶಕ್ಕೆ ಸಂತು. ಮತ್ತು ಆನೆ ಐದು, ಕುರಿ ಮೂರು ಸಾವಿರ, ಸರಕಾರಕ್ಕೆ ಸಂತು.

ಐದನೆ ಕಲಂ. ಮೇಲ್ ಬರದ ಪ್ರಕಾರ ದೊರೆಗಳವರು ಕುಂಪನಿ ಸರಕಾರಕ್ಕೆ ದಂಡಿನ ಕೆಲಸ ಉದ್ದಿಶ್ಯ ಕೊಟ್ಟಂಥಾದ್ದು, ಮಾಡಿದ ಮೆಹನತ್ತಿಗೆ ಸಹಾ, ವಂದು ಕಾಸು ತೆಗದು ಕೊಳ್ಳಲಿಲ್ಲಾ.

ಆರನೆ ಕಲಂ. ದೊರೆಗಳವರು ಮುಂಬಾಯಿ ಲಷ್ಕರಿಗೆ ಬೇಕಾದ ಮದತ್ತು ಮಾಡಿ, ಬಹಳ ಕೆಲಸ ಬಂದುಬಸ್ತು ಮಾಡಿ ಕೊಟ್ಟದರಿಂದಾ, ದಂಡಿನಲ್ಲಿ ಇದ್ದ ಯಾವತ್ತೂ ಸರದಾರರು ಮುಂತಾಗಿ ದೊರೆಗಳವರ ಮೇಲೆ ಬಹಳ ಖುಷಿ ಆದರು. ಈ ಮೇರೆ ನಾವು ವೀರರಾಜೇಂದ್ರಪ್ಪೇಟೆಯಲ್ಲು ಬರ ಕೊಟ್ಟ ಕಾಗದಕ್ಕೆ ಅಸಬ್ಬೆಲ್ ಕುಂಪನಿ ಸರಕಾರದ ಮೊಹರಃ ಹಾಕಿ, ನಂಮ ಕೈ ಸಃ ಬರದು ಕೊಟ್ಟು ಇದ್ಧೇವೆ. ಅಕ್ಟೋಬರ ತಿಂಗಳು, ತಾರೀಕು ೧೨, ವರುಷ ೧೭೯೯ಲು ಈ ಮೇರೆ ಕೊಡಗಿನ ದೊರೆಗಳವರ ಬಳಿಯ ಇದ್ದ ವಕೀಲ ದೀನಸ್ ಮಾಹಿನಿ ಸಾಹೇಬರು[2] ಬರದು ಕೊಟ್ಟು, ಬಂಗಾಳದ ಗವರ್ನರ್ ಜನರಾಲ್ ಲಾರ್ಡ್ ಮಾರ್ನಿಂಗ್ಟನ್ ಸಾಹೇಬ್ ಬಹಾದ್ದರವರ ಹುಕುಂ ಪ್ರಕಾರ ಮಾಹಿನಿ ಸಾಹೇಬರು ಕಲಿ ಸಂದ ೪೯೦೧ ನೆ ಸಿದ್ಧಾರ್ಥಿ ಸಂವತ್ಸರದ ಕಾರ್ತಿಕ ಮಾಸದಲ್ಲು, ಕೊಡಗಿನ ಮಹಾರಾಜರವರ ಸಂಗಡ ರುಕ್ಸತ್ತು ತೆಗದು ಕೊಂಡು, ತಲಚೇರಿಗೆ ಹೋದರು.

ಆ ಬಳಿಕ ಕೆಲವು ದಿವಸದ ಮೇಲೆ, ಇದೇ ಸಿದ್ಧಾರ್ಥಿ ಸಂವತ್ಸರದಲ್ಲಿ, ಕೋಟೆ ಪೇಟೆ ಅರಸುಗಳ ಕಡೆ ಕಾರ್ಬಾರ ಕೆಂದರಿಕಾಂಗು ಯೆಂಬವನು ತುಂಟನಾಗಿ, ಕಾಡು ಸೇರಿ ಕೊಂಡು, ಬಹಳ ಜನರ ಪ್ರಾಣಹಿಂಸೆ ಮಾಡುತ್ತಾ ಇದ್ದದರಿಂದಾ, ಇಂಗ್ರೇಜಿ ಬಹಾದ್ದರ ಸರಕಾರದ ಶಿಪಾಯಿಗಳು ಹುಡುಕಿದಾಗ್ಯೂ, ಕೈಗೆ ಸಿಕ್ಕದೆ, ಅದೇ ಮೇರೆ ಕಾಡಲ್ಲಿ ತಿರುಗಿ ಕೊಂಡು ಇದ್ದಲ್ಲಿ, ಈ ವರ್ತಮಾನ ವೀರರಾಜೇಂದ್ರ ವಡೆಯರವರು ಕೇಳಿ, ಕೆಂದರಿಕಾಂಗು ಈ ಮೇರೆ ತುಂಟನಾಗಿ ತಿರುಗುತ್ತಾನೆ. ಅವನು ನಂಮ ಶೀಮೆ ಸರಹದ್ದಿನ ವಳಗೆ ಬಂದದ್ದುಂಟಾದರೆ, ಹಿಡಿದು ಕಳುಹಿಸಿ ಕೊಡುವದು ಯೆಂಬದಾಗಿ, ಗಡಿ ಸರಹದ್ದಿನ ಪಹಾರೆಯವರಿಗೆ ಹುಕುಂ ಕೊಟ್ಟದರಿಂದಾ, ಅದೇ ಮೇರೆ ಆ ಪಹಾರೆಯವರು ಹುಡು

1 ಇದ್ದಿಲ್ಲಾ. 2 Deans(?) Mahoney.

ಕುಶಲ ಇದ್ದಲ್ಲಿ, ಒಂದು ದಿವಸ ಆ ಕುಂಟನು ಸರ ಹಾದ್ದಿನ ಒಳಗೆ ಬಂದಲ್ಲಿ, ಅವನಂನು ಹಿಡಿದು, ರಾಜರ ಬಳಿಗೆ ಕಳುಹಿದ್ದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ, ಪಹರಾದಲ್ಲು[1] ಮಡಗಿಸಿ, ಈ ವಿವರವಂನು ಕಪಿತಾನ್ ಮಾಪಿಸಿ ಸಾಹೇಬರಿಗೆ ರಾಜರು ಕಾಗದ ಬರೆಸಿ ಕಳುಹಿದಲ್ಲಿ, ಅವರು ಮಲೆವಾರಿ ಕಮಿಶನ್ ಇಸ್ಪೆನ್ಸರ ಸಾಹೇಬರವರಿಗೆ ಈ ವಿವರ ಯಾವತ್ತೂ ಜಾಹೀರ ಮಾಡಿದಲ್ಲಿ: "ಆ ಕುಂಟನಂನು ಸಾಗಿಸಿ ಕೊಂಡು ಬರುವ ಬಗ್ಗೆ, ಉಲ್ಕಿನಸನ್ ಸಾಹೇಬರ[2] ಕಡೆ ಶಿಪಾಯಿಗಳು ಬಂದಾರು. ಅವರ ಕೂಟೆಗೆ ಆ ಕುಂಟನ ಕೊಡ ಬೇಕು" ಯೆಂತ, ಆ ಕಮಿಶನ್ ಸಾಹೇಬರು ಮಹಾರಾಜರಿಗೆ ಬರೆಸಿ ಕಳುಹಿಸಿ ಇದ್ದರು. ಅದೇ ಮೇರೆ ಅವನಂನು ಸಾಗಿಸಿ ಕೊಂಡು ಹೋಗುವ ಬಗ್ಗೆ ಆ ಶಿಪಾಯಿಗಳು ಬಂದದರಿಂದಾ, ಕೋದಿ ಕೊಂಗನಂನು ಆ ಶಿಪಾಯಿಗಳ ವಶಕ್ಕೆ ಕೊಟ್ಟು ಕಳುಹಿದಲ್ಲಿ, "ಈ ಕುಳ ತಲಪಿತು" ಯೆಂಬದಾಗಿ, ಪುಷ್ಯ ಶು. ೧೦ ಲು ಆ ಉಲ್ಕಿನಸನ್ ಸಾಹೇಬರು ಬರದು ಕಳುಹಿಸಿ ಕೊಟ್ಟರು.

ಮಲೆವಾರಿ ಕಮಿಶನರಲ್ಲಿ ಪ್ರಧಾನರಾದ ಇಸ್ಪೆನ್ಸರ ಸಾಹೇಬರವರು ಬರದು ಕೊಟ್ಟ ರಶೀತಿ ವಿವರ: "ಕೊಡಗಿನ ಸಂಸ್ಥಾನದ ಹಾಲೇರಿ ವೀರರಾಜೇಂದ್ರ ಒಡೆಯರವರಿಗೆ ಮಲೆಯಾಳದ ರಾಜ್ಯದ ಹಲವು ಕೆಲಸ ನಡಸುವದಕ್ಕಾಗಿಯೂ, ಸುಪರವ್ಯೆಜರ[3] ಸ್ಥಾನ ಪರಿಪಾಲನೆ ಮಾಡುವದಕ್ಕಾಗಿಯೂ, ಬಂದಿರುವಂಥಾ ಕಮಿಶನರ ಒಳಗೆ ಪ್ರಧಾನರಾದ ಇಸ್ಪೆನ್ಸರ ಸಾಹೇಬರವರು ಬರದು ಕೊಟ್ಟ ರಶೀತಿ. ಅದಾಗಿ, ಇಂಗ್ರೇಜಿ ಸರಕಾರದ ಲಷಕರು ತೆಗದು ಕೊಂಡು, ಜನರಾಲ್ ಇಷ್ಟೂವರ್ಟ ಸಾಹೇಬರವರು ಟೀಪುಸುಲ್ತಾನರ ಸಂಗಡ ಲಡಾಯಿಕ್ಕೆ ಹೋಗುವಾಗ್ಯೆ, ತಾವು ಜಮಾಯಿಸಿ ಕೊಟ್ಟ ಅಕ್ಕಿಯಲ್ಲಿ ಕಪಿತಾನ್ ಮಾಪಿಸಿ ಸಾಹೇಬರ ಮುಖಾಂತರ ಕುಂಪನಿ ಸರಕಾರಕ್ಕೆ ಸಂದ ಅಕ್ಕಿ ಪಕ್ಕಾ ಶೇರು ಅರುವತ್ತಕ್ಕೆ ಖಂಡಿ ಒಂದರಲ್ಲು, ಖಂಡಿ ೪೦೭ ಶೇರು ೨೦ ಕೆ, ಮಾಪಿಸಿ ಸಾಹೇಬರು ಬರ ಕೊಟ್ಟ ರಶೀತಿ ನಾಲ್ಕು; ಇದಲ್ಲದೆ ಮಾಪಿಸಿ ಸಾಹೇಬರ ಕಡೆ ಹೆಂಡ್ರಿ[4] ಮುಖಾಂತರ ಕುಂಪನಿ ಸರಕಾರಕ್ಕೆ ಸಂದ ಅಕ್ಕಿ ಮೇಲ್ ಬರದ ಖಂಡಿಯಲ್ಲು, ಖಂಡಿ ನಾಲ್ವತ್ತೆರಡು ಸಾವಿರದ ಯೆಂಟುನೂರ ತೊಂಬತ್ತು ಖಂಡಿಯೂ ಶೇರು ಐದಕ್ಕೆ ಹೆಂಡ್ರಿ ಬರ ಕೊಟ್ಟ ರಶೀತಿ ಒಂದು; ಉಭಯಂ ರಶೀತಿ ಐದಂನು ಕಳುಹಿಸಿ ಕೊಟ್ಟದರಿಂದಾ, ಆ ರಶೀತಿಯಂನು ಕುಂಪನಿ ಸರಕಾರದಲ್ಲು ನಾವು ಮಡಗಿ ಕೊಂಡು, ಅದರ ಬದಲಿಗೆ ಕುಂಪನಿ ಸರಕಾರದ ಮೊಹರ ಮಾಡಿ ಬರ ಕೊಟ್ಟ ರಶೀತಿ ಒಂದಕ್ಕೆ ಮೇಲ್ ಬರದ ನಾಲ್ವತ್ತಮೂರು ಸಾವಿರದ ಇಂನೂರ ತೊಂಬತ್ತಯ್ದು ಖಂಡಿಯೂ ಶೇರು ಇಪ್ಪತ್ತು ಸಂದು ಯೆಂಬದಾಗಿ, ರೌದ್ರಿ ಸಂವತ್ಸರದ ಜ್ಯೇಷ್ಠ ಶು ೪ ಯೂ, ಚಂದ್ರವಾರ, ಬರೆಸಿ ಕಳುಹಿಸಿ ಕೊಟ್ಟರು.

ಇದಲ್ಲದೆ ಪಿಂಗಳ[5] ಸಂವತ್ಸರದಲ್ಲಿ ಕೊಡಗಿನ ಸಂಸ್ಥಾನದಿಂದಾ ಸಿದ್ಧಲಿಂಗ ದೇವರು ಯೆಂಬವರು ಬಾಂದವಾಡಿಗೆ ಹೋಗಿ ಇದ್ದಲ್ಲಿ, ಸೋದೆ ಸಂಸ್ಥಾನದ ಸವಾಯಿ ಬಸವಲಿಂಗ ರಾಜರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರ ಕ್ಷೇಮ ಕುಶಲವಂನು ಕೇಳಿದರಿಂದಾ, ಯಾವತ್ತೂ ಸುಖಸಂತೋಷಾತಿಕ್ಷೇಮಸಮಾಚಾರವಂನು ಸವಿಸ್ತಾರವಾಗಿ ಹೇಳಿದಲ್ಲಿ, ಬಹಳ ಸಂತೋಷ ಪಟ್ಟುಗೊಂಡು, ಕೊಡಗಿನ ರಾಜರವರಿಗೂ ನಮಗೂ ಬಂಧುತ್ವ ಉಂಟು ಮಾಡಿ ಕೊಡ ಬೇಕು, ಯೆಂಬದಾಗಿ ಹೇಳಿ ಕೊಂಡಲ್ಲಿ, ಆ ವಿವರಕ್ಕೆ ಆ ಸಿದ್ಧಲಿಂಗ ದೇವರು ಕೊಡಗಿನ ಮಹಾರಾಜರ ಹೆಸರಿಗೆ ಒಂದು ಕಾಗದವಂನು ಬರೆಸಿ ಕಳುಹಿಸಿ ಇದ್ದರು. ಅದರಲ್ಲಿ ಸೋದೆ ದೊರೆಗಳವರು ಹೇಳಿದಂಥಾ ವಿದ್ಯಮಾನ ಯಾವತ್ತೂ ಬರದರೆ, ಮಧ್ಯೆ ಟೀಪುಸುಲ್ತಾನರ ಸೀಮೆ ಆದ್ದರಿಂದಾ, ಕಾಗದ ದುಷ್ಮಾನರ ಕೈಗೆ ಸಿಕ್ಕೀತು ಯೆಂಬದರಿಂದಾ, ಸಂಸ್ಕೃತವಾಗಿ ಸಂಕ್ಷೇಪದಲ್ಲಿ ಅವರು ಬರದು ಇದ್ದಂಥಾ ವಿವರ: "ನಾವು ಅಲ್ಲಿಗೆ ಹೋದಲ್ಲಿ ಅವರು ನಮಗೆ ಹೇಳಿ ಕೊಂಡ ಪ್ರಸಂಗ: ನಂಮಂನು ಅಲ್ಲಿಗೆ ಬರುವ ಹಾಗೆ ಯತ್ನ ಮಾಡುವದು. ಮಾನಪಾನ ನಡಸುವದು. ಬಂಧುತ್ವ ಅಗತ್ಯ ಸಂಪಾದಿಸುವದು. ತಂಮ ಮಿತ್ರರೊಡನೆ ನಮಗೆ ಮಿತ್ರತ್ವ ಸಂಪಾದಿಸಿ ಕೊಡುವದು. ಈ ನಾಲ್ಕು ಮಾತು ಹೇಳಿ ಇದ್ದಾರೆ" ಯೆಂಬದಾಗಿ ಬರದು, ಉಳಿಕೆ ಮಾತು ಯಾವತ್ತೂ ಬಾಯಿ ಮಾತಿನಲ್ಲು ಹೇಳಿ, ತಂಮ ಕಡೆ ಕಂಟ್ಲೆ ಬಸವಲಿಂಗಯ್ಯ ಸಹಾ ಯೆರಡು ಜನ ಮರಿಗಳ ಕಳುಹಿಸಿ ಇದ್ದರು. ಸೋದೆ ಅರಸುಗಳವರು ಬರದ ಕಾಗದದಲ್ಲಿ: "ಸಿದ್ಧಲಿಂಗ ದೇವರು ಬಂದು ಇದ್ದರು. ಅವರು ಹೇಳಿದ ಅಭಿಪ್ರಾಯ ಯಾವತ್ತೂ ಕೇಳಿ ನಂಮ ಮನಸಿಗೆ ಬಹಳ ಸಂತೋಷವಾಯಿತು. ನಂಮ ಮನಸಿನಲ್ಲಿ ಇರುವ ವಿವರ ಯಾವತ್ತೂ ಅವರಿಗೆ ಹೇಳಿ ಕೊಂಡು, ಇದ್ದೇವೆ. ಅವರ ಕಡೆಯಿಂದಾ ಸವಿಸ್ತಾರವಾಗಿ ತಮಗೆ

1 ಪಹರೆಯಲ್ಲಿ. 2 Mr. Wilkinson. 3 Supervisor(?). 4 Henry. 5 ೧೭೯೭.

ತಿಳಿಯ ಬಂದೀತು. ನಾವು ತಂಮ ಬಂಧುಗಳಾಗುವಂಥಾ ದೃಷ್ಟಿ ಮಡಗಿ, ಆರೈಕೆ ಮಾಡುವ ಕ್ರಮ ತಮಗೆ ಕೂಡಿ ಇದೆ" ಯಂತಾ, ಬರದು ಕಳುಹಿಸಿ ಇದ್ದರು.

ಇವರ ತಂಗಿಯವರಾದ ಚಿಂನಂಮಾಜಿಯವರು ಕಾಡಗಿನ ಮಹಾರಾಜರಿಗೆ ಬರದ ಕಾಗದದಲ್ಲಿ: "ತಮಗೆ ಕುಮಾರತಿ ಉಂಟು ಯಂತಾ, ಕೇಳಿ ಇದ್ದೇನೆ. ಆ ಕುಮಾರತಿಯರಂನು ನಂಮ ಅಂಣಾಜಿಯವರಾದ ಬಸವಲಿಂಗ ರಾಜರವರಿಗೆ ವಿವಾಹ ಮಾಡಿ ಕೊಟ್ಟು, ಬಂಧುತ್ವ ಬಳಸುವಂಥಾ ಪ್ರೀತಿ ಮಡಗಿ, ನಾವು ಅಲ್ಲಿಗೆ ಬರುವಂತೆ ಅನುಕೂಲಾ ಮಾಡಿ, ತಂಮ ಮಿತ್ರರ ಸಂಗಡ ಮಿತ್ರತ್ವವಂನೂ ಸಂಪಾದಿಸಿ ಕೊಟ್ಟು, ಇವರಂನ ಆರೈಕೆ ಮಾಡ ಬೇಕು" ಯಂಬದಾಗಿ, ಬರದು ಕಳುಹಿಸಿ ಇದ್ದರು.

ಈ ಕಾಗದದ ಅಭಿಪ್ರಾಯಗಳು, ಆ ಸಿದ್ಧಲಿಂಗ ದೇವರ ಕಡೆ ಹರಿಗಳು ಹೇಳಿದ ಬಾಯಿಮಾತು ಸಹಾ ರಾಜರವರು ಕೇಳಿ, ಇದಕ್ಕೆ ಬದಲಾಗಿ ಸ್ವಾದೆ ದೊರೆಗಳವರಿಗೆ ಬರಸಿ ಕಳುಹಿದ ಕಾಗದಲ್ಲಿ: "ನೀವು ಬರೆಸಿ ಕಳುಹಿದ ಕಾಗದದ ವಿವರಾ, ಸಿದ್ಧಲಿಂಗ ದೇವರು ಬರದಂಥಾ ಅಭಿಪ್ರಾಯ ಮುಂತಾಗಿ ತಿಳಿಯ ಬಂತು. ಈ ಬಗ್ಯೆ ಈಗ ಹೋಗಿ ಬರುವಂಥಾ ಮಾರ್ಗದಲ್ಲು ದುಷ್ಟಮಾನನಾದ ಟೀಪುಸುಲ್ತಾನರ ಸೀಮೆ ಆಗಿ ಇದೆ. ಇದಲ್ಲದೆ ತಾವು ಪರಾಯ ತಾಲೂಕು ಪುಡುಕೇಶನ[1] ಆಶ್ರಯದಲ್ಲಿ ಇದ್ದೀರಿ. ನಾವು ಇಂಗರೇಜಿ ಬಹಾದ್ದರ ಕುಂಪನಿ ಸರಕಾರದ ದೋಸ್ತರಾಗಿ, ನಂಮ ಸುಖದುಃಖ ಆ ಸರಕಾರಕ್ಕೆ ಕೂಡಿ ಇರುವ ಕಾರ್ಣ, ನೀವು ಬರದ ನಿಂಮ ಮನಸಿನ ಅಭಿಪ್ರಾಯವಂನು ಆ ದೊಡ್ಡ ಸರಕಾರಕ್ಕೆ ನಾವು ತಿಳಿಸಿಯೇವು. ತಾವು ಜಾಹೀರು ಮಾಡುವದು. ಕಂಕಣ ಪ್ರಾಪ್ತಿ ಇದ್ದರೆ, ಮಹಾದೇವನ ಅಪ್ಪಣೆಯಿಂದಾ ಆದೀತು" ಯಂಬದಾಗಿ, ಆವಾಗ್ಯೆ ಜವಾಬು ಬರೆಸಿ ಕಳುಹಿಸಿ ಕೊಟ್ಟರು

ಆ ಬಳಿಕ ಕಾಳಾಯುಕ್ತಿ ಸಂವತ್ಸರದಲ್ಲಿ, ಟೀಪುಸುಲ್ತಾನರ ಮೇಲೆ ಲಡಾಯಿಕ್ಕೆ ಹೋಗುವ ಬಗ್ಯೆ, ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ಲಷ್ಕರು ಈ ಕಾಡಗಿನ ಸೀಮೆಗೆ ಬಂದು ಇದ್ದಲ್ಲಿ, ಸ್ವಾದೆ ರಾಜರು ಬರೆಸಿ ಕಳುಹಿದ ಕಾಗದದ ವಿವರಾ: "ನಂಮ ಮನಸ್ಸಿನ ಅಭಿಪ್ರಾಯ ಮೊದಲೇ ಬರೆಸಿ ತಿಳಿ ಹಡಿಸಿದ್ದೇವೆ. ತಾವು ನಾವು ಪರಾಕಾಷ್ಠೆಯಿಂದಾ ಸ್ವಕೀಯರಾಗಿ ಇರುವಂಥಾ ವಿಷಯದಲ್ಲಿ, ವಿಶೇಷವಾಗಿ ಬರೆಸಿ ತಿಳೇ ಹಡಿಸ ತಕ್ಕದ್ದು ಯೇನು ಇದೆ? ನಂಮ ಸಂಸ್ಥಾನದ ಹಿರಿಯವರ ಮೇಲೆ ದೃಷ್ಟಿ ಮಡಗಿ, ನಂಮ ಕೈಹಿಡಿದು, ಕೀರ್ತಿ ತಂದು ಕೊಳ್ಳ ಬೇಕು. ನಂಮ ಹಾಲು ಹಕೀಕತಂನು ಜನರಾಲ್ ಸಾಹೇಬರವರಿಗೂ ಮುಂಬಾಯಿ ಗವರನರ್ ಸಾಹೇಬರಿಗೂ ಕಾಗದ ಬರೆಸಿ ಕಳುಹಿಸಿ ಇದ್ದೇವೆ. ಇದಂನು ಅವರಿಗೆ ತಲಪಿಸ ಬೇಕು" ಯಂಬ ವಿವರವಾಗಿ ಸಹಾ ಬರೆಸಿ ಕಳುಹಿಸಿ ಇದ್ದರು. ಈ ಕಾಗದವು, ಲಷ್ಕರಿನ ಸಂಗಡ ಮಹಾರಾಜರು ಕರಡಿಗೋಡ ಮೊಕ್ಕಾದಲ್ಲು ಇದ್ದಾಗ್ಯೆ, ಬಂದು ತಲಪಿತು.

ಆವಾಗ್ಯೆ ಆ ದಂಡಿಗೆ ಖಾವಂದರಾಗಿ ಇದ್ದ ಜನರಾಲ್ ಇಷ್ಟಾರಟ ಸಾಹೇಬರಿಗೆ, ಜನರಾಲ್ ಹಾರ್ಟಲಿ ಸಾಹೇಬರಿಗೆ ಸಹಾ, ಸ್ವಾದೆ ರಾಜರು ಬರದ ಕಾಗದ ಮುಂಬಾಯಿ ಗವರನರ್ ಸಾಹೇಬರಿಗೆ ಬರದ ಕಾಗದ ಸಹಾ ಕೊಟ್ಟು, ತಮಗೆ ಬರದ ಅಭಿಪ್ರಾಯವಂನು ಜನರಾಲ್ ಸಾಹೇಬರಿಗೆ ತಿಳಿಸಿದಲ್ಲಿ, ಅವರು ಹೇಳಿದ್ದು:

"ಈ ವಿವಾಹದ ಶುಭಕಾರ್ಯ ಆಗುವಂಥಾದ್ದು ಇದೆ. ಇದರ ಮೇಲೆ ಅವರಿಗೂ ತಮಗೂ ಪರಾಕಾಷ್ಠೆಯ ದೋಸ್ತಿ ಸಾಗುವದು ಉಂಟು. ಆದ್ದರಿಂದಾ ಶ್ರೀರಂಗಪಟ್ಟಣದ ಕಿಲ್ಲೆ ತೆಗದು ಕೊಂಡ ಮೇಲೆ, ಈ ಶುಭಕಾರ್ಯ ಆಗ ಬೇಕು. ಇದು ಬಹಳ ಸಂತೋಷವಿದೆ" ಯಂಬದಾಗಿ ಹೇಳಿದರು.

ಆಗ ಕಾಡಗಿನ ರಾಜರು ಸ್ವಾದೆ ದೊರೆಗಳಿಗೆ ಬರದ ಕಾಗದದ ವಿವರಾ: "ನೀವು ಬರದ ಕಾಗದದ ವಿವರ ತಿಳಿಯ ಬಂತು. ಇಂಗ್ರೇಜಿ ಸರಕಾರಕ್ಕೆ ನೀವು ಬರದ ಕಾಗದವಂನು ಜನರಾಲ್ ಸಾಹೇಬರಿಗೆ ಕೊಟ್ಟು, ನಿಂಮ ಮನಸ್ಸಿನ ಅಭಿಪ್ರಾಯ ಯಾವತ್ತೂ ತಿಳಿಯ ಹಡಿಸಿದಲ್ಲಿ, ಅವರು ಬಹಳ ಸಂತೋಷವಾಗಿ ಇದ್ದಾರೆ. ದುಷ್ಟಮಾನನು ದೂರವಾಗಿ ಹೋದ ಬಳಿಕ, ನಿಂಮ ಮನಸಿನ ಅಪೇಕ್ಷೆ ಇದ್ದ ಮೇರೆ, ನಾವು ಸಂತೋಷವಾಗಿ ಇದ್ದೇವೆ. ಶಿವನ ದಯದಿಂದಾ ಆದೀತು," ಯಂಬದಾಗಿ ಬರೆಸಿ ಉಡುಗರೆ ಮುಂತಾಗಿ ಕೊಟ್ಟು ಕಳುಹಿಸಿ ಕೊಟ್ಟರು.

1 Portuguese.

ಆ ಬಳಿಕ: "ಟೀಪುಸುಲ್ತಾನನಂನು ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದಿಂದಾ ನಿಗ್ರಹಿಸಿ, ಯಾವತ್ತೂ ಭೂಮಿಯು ಕುಂಪನಿ ಬಹಾದ್ದರ ಸರಕಾರದ ತಾಬೆ ಆಗಿ, ಯೇಕ ರಾಜ್ಯವಾದ್ದರಿಂದಾ, ನಂಮಂನು ಅಲ್ಲಿಗೆ ಬರ ಮಾಡಿ ಕೊಂಡು, ವಿವಾಹ ಪ್ರಯತ್ನ ಮಾಡಿ ಕೊಡ ಬೇಕು" ಯಂಬದಾಗಿ, ಸ್ವಾದೆ ಅರಸುಗಳ ಹೆಸರ ಕಾಗದ ಒಂದು, ಇವರ ತಂಗಿಯವರಾದ ಚಿಂನಮ್ಮಾಜಿಯವರ ಹೆಸರ ಕಾಗದ ಒಂದು, ವಿವಾಹಪ್ರಯತ್ನ ಆಗುವಂಥಾದ್ದಕ್ಕೆ ದಸ್ತೂರಿ ಮೇರೆ ವೀಳ್ಯಪ್ರಸ್ತಕ್ಕೆ ಬೇಕಾದ ಸಾಮಾನು, ಕಿಲ್ಲತ್ತು ಮುಂತಾಗಿ ಕಳುಹಿಸಿ ಕೊಟ್ಟು, ರಾಜನೀತಿ ಪ್ರಕಾರ ವೀಳ್ಯ ಪ್ರಸ್ತವಂನು ಮಾಡಿದರಿಂದಾ, ಕಲಿ ಸಂದ ೪೮೯೭ ನೆ ದುರ್ಮುಖಿ ಸಂವತ್ಸರದ ಚೈತ್ರ ಶು ೨ ಲು ಬಂಗಾಳದ ಲಾರ್ಡ ಮಾರನಿಂಗ್ಟನ್ ಸಾಹೇಬರವರಿಗೆ ವೀರರಾಜೇಂದ್ರ ವಡೆಯರವರು ಬರೆಸಿ ಕಳುಹಿದ ಕಾಗದದಲ್ಲಿ: "ನಾವು ಸರದಾರರಿಗೆ ಸರದಾರರಾಗಿ ಇದ್ಧೀರಿ. ಸಣ್ಣವರಿಗೆ ದೊಡ್ಡವರಿಗೆ ಯಾವತ್ತರಿಗೂ ಪರಾಮರಿಕೆ ಮಾಡುವ ಬಗ್ಯೆ, ತಂಮಂನು ಮಹಾದೇವನು ಪೈದಾ ಮಾಡಿ ಇದ್ಧಾನೆ. ಆದ್ದರಿಂದಾ ಹಾಲು ಹಾಕಿಕತ್ತು ಶರುತಾಳಿಸುತ್ತಾ ಇದ್ಧ್ಯೆವೆ. ಮೊದಲು ಇಂಗ್ರೇಜಿ ಲಷ್ಕರಿನ ಸರದಾರರು ಶ್ರೀರಂಗಪಟ್ಟಣದ ಕಿಲ್ಲೆ ಹಿಡಿದು ಕೊಳ್ಳುವ ಬಗ್ಯೆ ಬಂದು ಸಿದ್ಧಾಪುರದ ಮೊಕಾಮಿನಲ್ಲಿ ಕೂಡಿ ಇದ್ದರು. ಆ ಸಮಯದಲ್ಲಿ ಸ್ವಾದೆ ಶ್ರೀಮ ಅರಸುಗಳು ನಂಮ ಮಗಳಂನು ಅವರಿಗೆ ವಿವಾಹ ಮಾಡಿ ಕೊಡ ಬೇಕೆಂಬ ಅಭಿಪ್ರಾಯವಾಗಿ, ಕಾಗದಗಳ ಲಾರ್ಡ ಸಾಹೇಬರವರ ಖಿದ್ಮತ್ತಿಗೂ ಮುಂಬಾಯಿ ಗವರ್ನರ್ ಸಾಹೇಬರವರಿಗೂ, ಜನರಾಲ್ ಇಷ್ಟುವಾರಟ್ ಸಾಹೇಬರವರಿಗೂ, ಮಲೆವಾರಿ ಕಮಿಶನ್ ಸಾಹೇಬರವರಿಗೂ, ಈ ದ್ಯಾಸ್ತುದಾರರ ಹೆಸರಿಗೆ ಸಹಾ ಬರೆಸಿ ಕಳುಹಿಸಿದ್ದರು. ಸ್ನೇಹ ಮಾರ್ಗದಿಂದಾ ಜನರಾಲ್ ಇಷ್ಟುವಾರಟ ಸಾಹೇಬ ಬಹಾದ್ದರವರು ಈ ಮಾತಾಗಿ, ಈ ವಿವಾಹದ ಶುಭಕಾರ್ಯ ಆಗುವಂಥಾದ್ದು ಇದೆ. ಇದರ ಮೇಲೆ ತಮಗೂ ಅವರಿಗೂ ಪರಾಕಾರತ್ಯೆಯಿಂದಾ ದ್ಯಾಸ್ತಿ ಸಾಗಾವತ್ತು ಉಂಟು. ಆದ್ದರಿಂದಾ ಶ್ರೀರಂಗಪಟ್ಟಣದ ಕಿಲ್ಲೆ ಹಿಡಿದು ಕೊಂಡ ಮೇಲೆ, ಕುಂಪನಿ ಸರಕಾರದ ಯಲ್ಲಾ ದ್ಯಾಸ್ತರಿಗೂ ಸುಖ ಉಂಟಾಗುತ್ತದೆ. ಆ ಮೇಲೆ ಈ ವಿವಾಹದ ಶುಭ ಕಾರ್ಯ ನಿಶ್ಚಯ ಮಾಡ ಬೇಕೆಂಬದಾಗಿ, ಫರ್ಮಾಯಿಸ್ತರು. ನಾವು ಕಬೂಲಾಗಿ ಕಿಲ್ಲತ್ತು ಉಡುಗೆರೆ ವಸ್ತು ಸಹಾ, ವೀಳ್ಯಪ್ರಸ್ತವು ಚಂನಾಗಿ ದಸ್ತೂರಿ ಪ್ರಕಾರ, ಮಾಡಿ ಇದ್ಧ್ಯೆವೆ. ಈ ಕೆಫಿಯತ್ತು ಸಾಹೇಬರ ಸಂನಿಧಾನಕ್ಕೂ ಜಾಹೀರು ಮಾಡ ಬೇಕು ಯಂಬದಾಗಿ, ವಕೀಲ್ ಕಪಿತಾನ್ ಮಾಹಿನಿ ಸಾಹೇಬರ ಸಂಗಡ ಹೇಳಿ ಇದ್ದೆವು. ಆ ಸಾಹೇಬರ ಮುಖಾಂತ್ರದಿಂದಾ ಅಲ್ಬತ್ ತಂಮ ಸಂನಿಧಾನಕ್ಕೆ ಜಾಹೀರು ಆಗಿ ಇದ್ದೀತು. ಈ ವಳ್ಳೇ ಕಾಲದಲ್ಲಿ ನಾವು ಸರಫರಾಜಿ ಮಾಡಿ, ಶ್ರೀರಂಗಪಟ್ಟಣದ ಅರಸಿಗೆ ವಿವಾಹ ಮಾಡಿಸಿದ್ದು, ಆ ಖುಷಿ ವರ್ತಮಾನ ಈ ಯಾವತ್ತು ದುನಿಯಾದ ಜನರು ಕೇಳಿ ಇದ್ಧಾರೆ. ಆ ಶುಭವರ್ತಮಾನ ಈ ದ್ಯಾಸ್ತರರ ಕಿವಿಗೂ ಕೇಳ ಬಂತು. ಇದರಿಂದಾ ನಂಮ ಮನಸಿನ ಅಂತರಂಗದಲ್ಲಿ ಇದ್ದ ಮಾತು ಹೀಗೆ ಬಂತು. ಈ ದಾಸ್ತರರು ಮೊದಲಿಂದಾ ಬಹುಮಾನವಾದ ಇಂಗ್ರೇಜಿ ಕುಂಪನಿ ಸರಕಾರದ ದ್ಯಾಸ್ತಿ ಮಡಗಿ ಇದ್ಧ್ಯೆವೆ. ನಂಮ ಸುಖ ದುಃಖ ಯೇನು ಇದ್ದಾಗ್ಯೂ, ತಂಮ ಹೊರತು ಇರದು. ಸ್ವಾದೆ ಅರಸುಗಳಿಗೆ ನಿಶ್ಚಯ ಮಾಡಿ ಇರುವ ಈ ದ್ಯಾಸ್ತರರ ಮಗುವಿಗೆ ಮಹಾದೇವನ ಕಟಾಕ್ಷದಿಂದಾ ದಿನದಿನಕ್ಕೆ ಪ್ರಾಯ ಹೆಚ್ಚಿ ಬರುತ್ತಾ ಇದೆ. ಇದಲ್ಲದೆ ವೀಳ್ಯಪ್ರಸ್ತ ಆದ ಮೇಲೆ, ಆ ಮದುವೆ ಮಾಡುವಂಥಾದ್ದು ಜರೂರು ಇದೆ. ಅದರ ವಳಗೆ ಅಪಸ್ತ[1] ಆದವರ ಕಡೆಯಿಂದಾ ಯೇನಾದರೂ ಕೆಮಸ ವಿಘ್ನ ಬಂದರೆ, ಆ ಮೇಲೆ ಈ ಭೂಮಿ ಮೇಲೆ ಇರುವ ಪರಿಯಂತರ ಮತ್ತೊಬ್ಬರಿಗೂ ಕೊಡುವದಕ್ಕೆ ಆಗದು. ಅದು ನಂಮ ಜಾತಿ ವಳಗೆ ಬಹಳ ಹೀನಾಯವದೆ. ಇದಲ್ಲದೆ ಸ್ವಾದೆ ಅರಸುಗಳು ಪರಾಯಿ ಮುಡತಕ್ಕೇರಿನ ತಾಲೂಕು ಗ್ರಾಮ ವಳಗೆ ಇರುತಾರೆ. ಪರಾಯಿ ತಾಲೂಕಿಗೆ ಕಾಗದ ಪತ್ರ ಬರೆಸಿ ಕಳುಹಿಸುವಂಥಾದ್ದು ದ್ಯಾಸ್ತರರ ದಸ್ತೂರಿ ಇಲ್ಲಾ. ಅದು ಕಾರಣ ತಂಮ ಬಹುಮಾನವಾದ ಸಂನಿಧಿಗೆ ಜಾಹೀರು ಮಾಡುತ್ತಾ ಇದ್ಧ್ಯೆವೆ. ಆ ಸ್ವಾದೆ ಅರಸುಗಳಿಗೆ ಮೂರು ತಿಂಗಳಿಗೆ ವಾಯಿದೆ ಮಾಡಿ, ಈ ಕಡೆಗೆ ಕಳುಹಿಸಿ ಕೊಡುವ ಹಾಗೆ, ಗ್ರಾಮ ಮುಡತಕ್ಕೇರಿ ಭಾವಂದ ಗವರನರವರ ಹೆಸರಿಗೆ ಒಂದು ತಾಕೀತಿ ಆದರೆ, ಆ ಅರಸುಗಳು ಇಲ್ಲಿಗೆ ಬಂದು ತಲಪ್ಯಾರು. ದ್ಯಾಸ್ತುದಾರರು ತಂಮ ದವಲತ್ತಿನ ಬರಕತ್ತಿನಿಂದಾ ಅವರ ಮದುವೆ ಪ್ರಸ್ತ ಆಗು ಮಾಡಿ, ನಂಮ ಮಗಳಂನು ಸ್ವಾದೆ ಅರಸುಗಳ ಸಂಗಡ ಕೂಡಿ, ಮೂರು ತಿಂಗಳಿನ ಗಡುವಿನ ವಳಗೆ

[1] ಅಪ್ರಸ್ತದವರ.

ಹಸನಾಗಿ ಗ್ಯಾವೆಗೆ ರವಾನೆ ಮಾಡ ಬಹುದು. ತಂಮ ಕಿದ್ಮತ್ತಿಗೆ ಈ ಧರ್ಮಕ್ಕೆ ಉಂಟಾದೀತು. ಇದಲ್ಲದೆ ವಿವಾಹ ಆದ ಮೇಲೆ, ಆ ಮಕ್ಕಳ ಕಟ್ಟಿನ ಬಗ್ಯೆ ವಿಚಾರಿಸಿ ಕೊಳ್ಳುವಂಥಾದ್ದು ಜರೂರು ಇದೆ. ಈ ಬಗ್ಯೆ ಈ ದ್ಯಾನತಾರರು ನಾವು ಒಂದು ಲಕ್ಷ ರೂಪಾಯಿ ಮುಂಬಾಯಿ ಸರಕಾರದಲ್ಲಿ ಉಂಟು. ಅದರ ಬಡ್ಡಿ ವರುಷ ವರುಷಕ್ಕೂ ಆರು ಸಾವಿರ ರೂಪಾಯಿ ನಮಗೆ ಸಲ್ಲುವಂಥಾದ್ದು ಉಂಟು. ಮೆಹರಬಾನಿ ದಯದೃಷ್ಟಿ ಯಿಂದ, ಆರೈಕೆ ಮಾಡಿ ನಡಸುವ ಬಗ್ಯೆ, ಆ ಬಡ್ಡಿ ಬಗೆ ಆರು ಸಾವಿರ ರೂಪಾಯಿ ಆ ಮಕ್ಕಳಿಗೆ ತಲುಪಿಸು ವಂತೆ ಮಾಡಿಸ ಬೇಕು. ಯಾವ ಬಗ್ಯೆ ಯೆಂದರೆ: ಮುಂಬಾಯಿಗೂ, ಗ್ಯಾವೆಗೂ ಸಮೀಪವಿದೆ; ಇದರಿಂದ ತಂಮ ಬಹುಮಾನವಾದ ಸರಕಾರಕ್ಕೆ ಕೀರ್ತಿ, ನಮಗೆ ಖುಷಿ ಹೋಗಲಾದೀತು. ಈ ವಿವಾಹ ಆದ್ದರಿಂದ ಸದಾಕಾಲ ಸೂರ್ ಯನ ಪ್ರಕಾಶದ್ಯಾಹಾದಿ ತಂಮ ದವಲತ್ತು ಅಭಿವೃದ್ಧಿ ಆಗ ಬೇಕೆಂಬದಾಗಿ, ಉಭಯ ಕಡೆಯವರು ಮಹಾ ದೇವನಿಗೆ ಬೇಡಿ ಕೊಂಡೇವು. ಇದರ ಮುಂದೆ ತಂಮ ಹುಕುಂ ಆದ ಹಾಗೆ," ಯೆಂಬದಾಗಿ ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ ಬಂಗಾಳದ ಲಾರ್ಡ ಸಾಹೇಬರವರು ಬರೆಸಿ ಕಳುಹಿದ ಕಾಗದದ ವಿವರ: "ಸಂತೋಷದ ಕಾಗದದಲ್ಲಿ ತಂಮ ಕುಮಾರತಿಯಂನು ಸವಾದೆ ಅರಸುಗಳಿಗೆ ವಿವಾಹ ಮಾಡಿ ಕೊಡುವ ಬಗ್ಯೆ ನಿಶ್ಚಯಿಸಿ, ನಿಶ್ಚಯಪ್ರಸ್ತ ಮಾಡಿ, ಜಲ್ದಿ ವಿವಾಹ ಮಾಡ ಬೇಕೆಂಬ ಅಪೇಕ್ಷೆ ಇಟ್ಟು, ಸವಾದೆ ಅರಸುಗಳಂನು ಮದುವೆ ಆಗುವ ಬಗ್ಯೆ ತಂಮ ಬಳಿಗೆ ರವಾನೆ ಮಾಡುವ ಹಾಗೆ, ಗ್ಯಾವೆ ಹುದ್ದೆಕ್ಕೇತ ಗವರನರ್ ಸಾಹೇಬರ ಹೆಸರಿಗೆ ನಂಮ ಸರಕಾರದ ಕಾಗದ ಆಗ ಬೇಕೆಂತಲೂ, ಇದಲ್ಲದೆ ಮುಂಬಾಯಿಯಲ್ಲಿ ಇರುವ ತಂಮ ಲಕ್ಷ ರೂಪಾಯಿಗೆ ಬಡ್ಡಿ ಆರು ಸಾವಿರ ರೂಪಾಯಿ ವರುಷಂಪ್ರತಿಯಲ್ಲಿ ತಂಮ ಅಳಿಯನಿಗೂ ಮಗುವಿಗೂ ಕಟ್ಟಿನ ಬಗ್ಯೆ ತಲುಪುತ್ತಾ ಇರ ಬೇಕು ಯೆಂಬ ದಾಗಿ, ಮತ್ತು ಕೆಲವು ಅಪೇಕ್ಷೆಯಿಂದ ದ್ಯಾನತಿ ಮೊಹಬತ್ತಿನಿಂದ ಬರದು ಇದ್ದ ಕಾಗದ ಬಂದು ತಲುಪಿ, ಬರದ ವಿವರ ಖುಷಿಯಿಂದ ತಿಳಿಯ ಬಂತು. ಸ್ನೇಹವಾಗಿದ್ದರಿಂದ ತಂಮ ದ್ಯಾನತಿ ನಾವು ಮಡಗುತ್ತೇವೆ. ತಂಮ ಕಾರ್ಯ ನಡಸುವ ಬಗ್ಯೆ ಯಾವಾಗಲೂ ನಂಮ ಮನಸಿನಲ್ಲಿ ಖುಷಿ ಇದೆ. ಈಗ ಮನಸಿಗೆ ಬಹಳ ಸಂತೋಷದಿಂದ ತಂಮ ಇರಾದೆ ಪ್ರಕಾರ ಆ ಮಗುವಂನು ವಿವಾಹ ಮಾಡಿ ಕೊಡುವ ಬಗ್ಯೆ ಸವಾದೆ ಅರಸುಗಳವರ ಆ ಕಡೆ ರವಾನೆ ಮಾಡುವ ಹಾಗೆ, ಗ್ಯಾವೆ ಹುದ್ದೆಕ್ಕೇತವಾಲಾ ಖುದರ್ ಸಮುವಲ್ ಮತ್ತಿಬತ್ ಗವರನರ್ ಸಾಹೇಬರಿಗೆ ಬರೆಸಿ ಇದ್ ದ್ದೇವೆ. ಮತ್ತು ಬಡ್ಡಿ ಹಣವಿನ ಬಗ್ಯೆ ಮುಂಬಾಯಿ ಗವರನರ್ ಅಮೀನುಲ್ ಮುಲ್ಕ ಮುಂಮ್ತಾಜದ್ದ ಫಲಾ ಜನಾಬ ಡಾಂಕಿನ್ ಸಾಹೇಬ ಗಜನ್ ಪರಜನ್ ಬಹಾದ್ದರವರಿಗೆ ಬರದು ಇದ್ದೇವೆ. ತಂಮ ಕಡೆ ಯಾರಾ ದರೂ ವಟ್ಟಬನಿಗೆ ತಂಮ ಹೆಸರಿನ ಹವಾಲತ್ತಿನ ಕಾಗದ ಸಹಾ ಮುಂಬಾಯಿಗೆ ಕಳುಹಿಸಿ, ಮೊಕರರು ಮಾಡಿ, ಆ ಬಡ್ಡಿ ಬಗೆ ಹಣ ವರುಷಂಪ್ರತಿಯಲ್ಲಿ ಅವರಿಗೆ ಕೊಡಿಸ ಬೇಕು. ವಿವಾಹಪ್ರಸ್ತ ಆದ ಮೇಲೆ, ಆ ಪತಿ ಮಾನ ತಿಳಿಸಿದರೆ, ನಂಮ ಮನಸಿಗೆ ಬಹಳ ಖುಷಿ ಆದೀತು." ಯೆಂಬದಾಗಿ, ಬರೆಸಿ ಇದ್ದರು.

ಆ ಬಳಿಕ: "ಸವಾದೆ ರಾಜರಂನು ವಿವಾಹ ಪ್ರಸ್ತಕ್ಕೆ ಕಳುಹಿಸಿ ಕೊಡ ಬೇಕು. ಅವರು ಬಹಳ ತಂಮ ಸರಕಾರದ ಆಶ್ರಯದಲ್ಲಿ ರಕ್ಷಣೆಯು ಆಗುತ್ತಾರೆ. ಆದ್ದರಿಂದ ಸಂತೋಷದ ವರ್ತಮಾನ ತಮಗೆ ತಿಳಿಸಿ ಇದ್ದೇವೆ." ಯೆಂಬ ವಿವರವಾಗಿ, ಗ್ಯಾವೆ ಗವರನರ್ ಸಾಹೇಬರಿಗೆ ಕಾಗದ ಒಂದು, ಇಂಗ್ರೇಜ ಸರದಾರರು ಕರ್ನಲ್ ಸರ್ ವಿಲಿಯಂ ಕ್ಲಾರ್ಕ ಸಾಹೇಬರಿಗೆ[1] ಕಾಗದ ಒಂದು ಸಹಾ, ವೀರರಾಜೇಂದ್ರ ಒಡೆಯರವರು ಬರದು, ಸವಾದೆ ದೊರೆಗಳಂನು ಕರೆ ತರುವ ಬಗ್ಗೆ, ರಾಜನೀತಿ ಪ್ರಕಾರ, ಬಹು ಮಾನವಾಗಿ ತಂಮ ಕಡೆ ಮನುಷ್ಯರ ಗ್ಯಾವೆಗೆ ಕಳುಹಿಸಿ ಕೊಟ್ಟಲ್ಲಿ, ಸದರಿ ಸಾಹೇಬರು ಬಹಳ ಸಂತೋಷವಾಗಿ ಮಹಾರಾಜರವರ ಕಡೆ ಜನಕ್ಕೆ ಮರಿಯಾದೆ ಆಗಿ ಖುಷಿ ಮಾಡಿ, ಸವಾದೆ ರಾಜರ ವರಂನು ಬಹಳ ಖುಷಿಯಿಂದ, ಬಹುಮಾನ ಮಾಡಿದ್ದರಿಂದ, ಕೊಡಗಿನ ಸಂಸ್ಥಾನಕ್ಕೆ ರವಾನೆ ಮಾಡಿ, ಕೊಡಗಿನ ರಾಜರಿಗೆ ಬದಲು ಜವಾಬಂನು ಬರೆಸಿ ಕಳುಹಿಸಿ ಕೊಟ್ಟರು.

ಸವಾದೆ ಬಸವಲಿಂಗ ರಾಜರು ಬರುವಾಗ್ಯೆ, ಕೊಡಗಿನ ದೊರೆಗಳು ಇಂಗ್ರೇಜ ಸರಕಾರಕ್ಕೆ ಬರದು ಇದ್ದ ಮೇರೆ, ಕುಂಪನಿ ಸರಕಾರದ ಹುಕುಂ ಪ್ರಕಾರ, ಆಯಾ ತಾಲೂಕಿನ ಸೀಮೆ ಮಾರ್ಗದಲ್ಲಿ ಅಮಲ್ದಾರರು ಪಡಿ ಬಿಡಾರ ಮುಂತಾಗಿ ಮಾಡಿಸಿ, ಬೇಕಾದ ಸಾಮಾನು ಕೊಟ್ಟು ಕಳುಹಿಸಿದರು. ಈ ಸವಾದೆ ಅರಸುಗಳು ಕಲಿಸಂದ [illegible]ನೆ ದುರ್ಮುಖಿ ಸಂ

1 Colonel Sir William Clarke.

ವತ್ಸರದ ಪುಷ್ಯ, ಶು ೫ ಲು, ನಾಲ್ಕುನಾಡ ಅರಮನೆಗೆ ಬಂದಲ್ಲಿ, ವೀರರಾಜೇಂದ್ರ ಒಡೆಯರವರು ಬಹಳ ಖುಷಿಯಿಂದಾ ಅವರ ಮಿಲಾಕತ್ತು ಆಗಿ, ಬೇರೆ ಬಿಡಾರಗಳ ಶೃಂಗಾರ ಮಾಡಿಸಿ, ಅಲ್ಲಿ ಇಳಿಸಿ, ಇದೇ ಪುಷ್ಯ, ಶು ೧೫ ದಿವಸಕ್ಕೆ ವಿವಾಹ ಲಗ್ನವಂನು ನಿಶ್ಚೈಸಿ, ಸಕಲ ಸ್ಯಾಹಿತ್ಯವಂನು ಕೂಡಿಸಿ, ಬರುವಂಥಾ ಸರದಾರರಿಗೆ, ಮೇಲಾದ ಜನಕ್ಕೆ ಸಹಾ, ಪ್ರತ್ಯೇಕ ಬಿಡಾರಗಳಂನು ಮಾಡ್ಸಿಸಿ, ಈ ವಿವಾಹಪ್ರಸ್ತದ ಬಗ್ಯೆ ಸರದಾರರ ಕಳುಹಾ ಬೇಕೆಂಬದಾಗಿ, ಜನರಾಲ್ ವಸಲಿ ಸಾಹೇಬರಿಗೂ;[1] ಮಲೆವಾರಿ ಕಮಿಶನ್ ಸಾಹೇಬರಿಗೂ, ಬರದು ಕಳುಹಿದಲ್ಲಿ, ಅದ್ದೇ ಮೇರೆ ಶ್ರೀರಂಗಪಟ್ಟಣದಿಂದಾ ಕಪಿತಾನ್ ತಾಮಿಸ್ ಮಾರಿಟ್[2] ಸಾಹೇಬರ, ಮಲೆವಾರಿಯಿಂದಾ ಕಪಿತಾನ್ ದಾವುದು ಫಾಲಸ್ ಸಾಹೇಬರ,[3] ಕಪಿತಾನ್ ಹಾಸಬರಾಂನ್ ಸಾಹೇಬರ[4] ಸಹಾ, ಈ ಮೂರು ಜನ ಸರದಾರರಂನು ಕಳುಹಿದರು.

ಅವರು ಬಂದಲ್ಲಿ, ಮಾನ ಮರಿಯಾದೆಯಿಂದಾ ಮಿಲಾಕತ್ತು ಆಗಿ, ಸಲಾಂ ಫಿರಂಗಿಗಳ ಹಾರಿಸಿ, ಅವರಂನು ಬಿಡಾರದಲ್ಲು ಇಳಿಸಿ, ಉಪಚಾರಗಳ ಮಾಡುತ್ತಾ, ಬಂದಂಥಾ ಸಾಹೇಬ ಜನಕ್ಕೂ ಸಂತೈಸಿ, ವಿವಾಹಕ್ಕೆ ಇಂಗ್ರೇಜಿ ಸರದಾರರಂನು ಬರ ಮಾಡಿ, ಸಮಸ್ತರಂನು ಕರಸಿ, ಸಭೆ ಸೇರಿಸಿ, ರಾಜನೀತಿ ಪ್ರಕಾರ ಕಲ್ಯಾಣ ಆಗುವಾಗಯೆ, ವೀರರಾಜೇಂದ್ರ ಒಡೆಯರವರು: "ತಂಮ ಕುಮಾರಿ ಆದ ರಾಜಂಮಾಜಿಯವರಂನು ನಿಮಗೆ ವಿವಾಹ ಮಾಡಿ ಕೊಡ್ತೇವೆ. ಇವರ ಗರ್ಭದಲ್ಲಿ ಜನಿಸಿದಂಥಾ ಕುಮಾರರಿಗೆ ನಿಂಮ ದವಲತ್ತಿಗೆ ಬಾಧ್ಯರ ಮಾಡಿ ಕೊಡಬೇಕು" ಯಂತಾ, ಸವಾದೆ ಸಂಸ್ಥಾನದ ಬಸವಲಿಂಗ ರಾಜರಿಗೆ ಹೇಳಿದಲ್ಲಿ, ಅವರು ಒಡಂಬಟ್ಟು: "ಈ ನಂಮ ರಾಣಿ ಆಗುವಂಥಾ ತಂಮ ಕುಮಾರ್ತಿಯರ ಗರ್ಭದಲ್ಲಿ ಮಹಾದೇವನ ಕಟಾಕ್ಷದಿಂದಾ ಕುಮಾರರು ಜನಿಸಿದರೆ, ನಂಮ ದವಲತ್ತಿಗೆ ಬಾಧ್ಯರಾದಾರು" ಯಂಬದಾಗಿ ಹೇಳಿದ್ದರಿಂದಾ, ಕೊಡಗಿನ ಮಹಾರಾಜರು ಮಹಾ ಸಂತೋಷ, ವಿಭವ, ಉತ್ಸಾಹದಿಂದಾ ಸಮಸ್ತ ಜನರ ಮುಂತಿಟ್ಟು, ಇಂಗ್ರೇಜಿ ಸರಕಾರದ ಸರದಾರ ಸಾಹೇಬರ ಶಾಬುದಿಯಿಂದಾ ವೀರರಾಜೇಂದ್ರ ಒಡೆಯರವರು ತಂಮ ಕುಮಾರಿ ರಾಜಂಮಾಜಿಯವರಂನು ಕಲಿಸಂದ ೪೯೧೮ನೆ ದುಮ್ಮುಖಿ ಸಂವತ್ಸರದ ಪುಷ್ಯ, ಶು ೧೫ ಯು, ಚಂದ್ರವಾರ, ಶುಭಮುಹೂರ್ತದಲ್ಲಿ ರಾತ್ರೆ ಘಳಿಗೆ ಹತ್ತಾಂಬತ್ತಕ್ಕೆ ಪಂಚಘಟಿ ಲಗ್ನದಲ್ಲಿ ಬಹಳ ವೈಭವದಿಂದಾ ಬಸವಲಿಂಗ ರಾಜರವರಿಗೆ ಧಾರೆಯನೆರದು ವಿವಾಹ ಮಾಡಿ ಕೊಟ್ಟರು.

ಈ ಕಲ್ಯಾಣ ಮಹೋತ್ಸವ ಹಂಬತ್ತು ದಿವಸ ಪರಿಯಂತರ ಬಹಳ ಸಂಭ್ರಮದಿಂದಾ ಶಾಸ್ತ್ರ ಪ್ರಕಾರ ಮಾಡಿ, ಮಹಾ ಸಂತೋಷದಲ್ಲಿ ಇರುತ್ತಾ ಇರಲಾಗಿ, ಈ ಮಹೋತ್ಸವವಾದ ಸಂಬಂಧ ಬಂಗಾಳದ ಗವರನರ್ ಜನರಾಲ್ ಲಾರ್ಡ್ ಮಾರನಿಂಗ್ಟಂನ್ ಸಾಹೇಬ್ ಬಹಾದ್ದರವರಿಗೆ ದುಮ್ಮುಖಿ ಸಂವತ್ಸರ ಮಾಘ, ಶು ೧೪ ಲು, ಕೊಡಗಿನ ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ, ತಂಮ ಹುಕುಂ ಪ್ರಕಾರ ಸವಾದೆ ಅರಸುಗಳು ಇಲ್ಲಿಗೆ ಬಂದ ಮೇಲೆ, ಪುಷ್ಯ, ಶು ೧೫ ದಿವಸ ಅವರಿಗೆ, ನಂಮ ಮಗಳಂನು ಮದುವೆ ಪ್ರಸ್ತ ಶುರು ಮಾಡಿ, ತಂಮ ಆಶೆಯಿಂದಾ ನಾವು ಶೀಮೆ ಭೂಮಿ, ಬಾಕಿನ ಭಂಡಾರದಿಂದಾ ಸುಖದಲ್ಲಿ ಇರುವ ಕಾರಣ, ಈ ಮದುವೆ ಪ್ರಸ್ತವಂನು ಮೊದಲಿನ ಅರಸುಗಳು ಮಾಡುವದಕ್ಕಿಂತಲೂ ಅತಿಶಯವಾಗಿ ಶ್ರೀರಂಗಪಟ್ಟಣದಲ್ಲು ಇರುವ ಕಪಿತಾನ್ ಮೋರ್ರೇಟ್ ಸಾಹೇಬರು, ಕಂಣೂರಲ್ಲು ಇರುವ ಕಪಿತಾನ್ ದಾವೂದು ಫಾಲಸ್ ಸಾಹೇಬರು, ಕಪಿತಾನ್ ಅಸಬುರಂನ್ ಸಾಹೇಬರು, ನಾವು ಸಹಾ ಕೂಡಿ ಬಹಳ ಖುಷಿಯಿಂದಾ ಈ ಪುಷ್ಯ, ಬ ೯ ದಿವಸ ಈ ಮದುವೆ ಪ್ರಸ್ತ ಆಖೈರು ಮಾಡಿ ಕೊಟ್ಟು ಇದ್ದೇವೆ. ಈ ಮಗುವಿಗೂ, ಅವರ ಹೆಂಗಳಿಗೂ ಮಾನ ಬಹುಮಾನದಿಂದಾ ಕಾಪಾಡುವಂಥಾದ್ದು, ತಂಮ ದವಲತ್ತಿನ ಹವಾಲೆ ಕೂಡಿ ಇದೆ. ಕೊಡಗಿನ ಶೀಮೆಯಿಂದಾ ಗ್ಯಾವೆ ಶೀಮೆಗೆ ಯಷ್ಟು ದೂರ ಇದ್ದೀತು ಯಂಬದು, ತಂಮ ಮನಸಿಗೆ ತಿಳಿದು ಇದ್ದೀತು. ಇದಲ್ಲದೆ ಸವಾದೆ ಅರಸುಗಳು ಇರುವಂಥಾದ್ದು ಪರಾಯ ಹುದ್ದೆ ಕ್ಷೇತ್ರ ಶೀಮೆ; ಯರಡನೆ: ಗ್ಯಾವೆಗೂ ಇಲ್ಲಿಗೂ ಬಹಳ ದೂರ. ಮೂರನೆದು: ಸವಾದೆ ಅರಸುಗಳು ಸಕಲ ವಿಷಯದಲ್ಲು ಲೋಚಾರಿ ಇದ್ದಾರೆ. ಈ ಮೂರು ವಿವರವಂನು ನಾವು ಮೊದಲೆ ತಿಳಿದು ಇದ್ದೆವು. ಆದಾಗ್ಯೂ ಇದಂನು ನಾವು ಮನಸಿನಲ್ಲಿ ತರಲಿಲ್ಲಾ. ಯಾತರಿಂದಾ ಅಂದರೆ: ಗ್ಯಾವೆ ಶೀಮೆ ಸರದಾರರು ಯಾವತ್ತೂ ಮನ್ನೆಯಾವದಿಂದಾ, ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ಹುಕುಂ ಪ್ರಕಾರ ನಡದು ಕೊಳ್ಳುತ್ತಾರೆ. ಆದ್ದರಿಂದಾ ಗ್ಯಾವೆ ರಾಜ್ಯಕ್ಕೂ ಇಂಗ್ರೇಜಿ ಕುಂಪನಿ ಸರಕಾರದ ರಾಜ್ಯಕ್ಕೂ ಭೇದವಿಲ್ಲದೆ, ಯೇಕೀಕರವಾಗಿ ಇದೆ. ಇದರಿಂದಾ ತಂಮ ಹುಕುಂ

1 General Wellesley. 2 Captain Thomas Marriott. 3 Captain David Foulis. 4 Captain Ashbourne.

ಪರಕಾರ ಈ ವಿವಾಹವನ್ನು ಮಾಡಿ ಕೊಟ್ಟು ಇದ್ದೇವೆ. ಈ ಸವಾದೆ ಅರಸುಗಳ ಗುಜರಾನದ ಕಷ್ಟ ತಮಗೆ ತಿಳಿದು ಇರುವಲ್ಲಿ, ನಾವು ತಿಳಿಯ ಪಡಿಸ ಬೇಕೆಂಬದು ಯೇನು ಇದೆ. ಈ ವರಿಗೆ ನಂಮ ಮೇಲೆ ತಖುಪಾದ್ ಖುಷ್ಟಿ ಇಟ್ಟು ನಡಸಿದಂಥಾದ್ದು ಯಾವತ್ತು ಅವರ ಮೇಲೆ ಮಡಗಿ, ಅವರಿಗೂ ತಂಮ ಸರಕಾರದ ಕಿರಿ ಮಕ್ಕಳ ಹಾಗೆ ಕಂಡು, ಜಗತಯದಲ್ಲಿ ಮಾನ್ಯತಿವ್ ಋದ್ಧಿ ಪಡಿಸುವಂಥಾ ತವಾಕವನ್ನು ಈ ಲಿಟಾರಿ ಆಗಿ ಇರುವಂಥಾ ಇವರ ಮುಖದ ಮೇಲೆ ಪರಕಟಿಸಿ, ಪರಿಪಾಲನೆ ಮಾಡ ಬೇಕು: ಈ ಮದುವೆ ಸಂಮಂಧ ಕಿಲ್‌ಲತ್ತನ್ನು ಕಳುಹಿಸಿ ಇದ್ದೇವೆ. ಇದನ್ನು ಮೆಹರ್ಬಾನಗಿಯಿಂದಾ ಕಬೂಲು ಮಾಡ ಬೇಕು" ಯಂಬದಾಗಿ, ಬರಸಿ ಕಳುಹಿಸಿದರು.

ಆ ಬಳಿಕ ಸವಾದೆ ದೊರೆಗಳವರು ಮೂರು ತಿಂಗಳು ಇದ್ದು, ಈಗ ಗ್ರಾಮಕೆ ಹೋಗಿ, ಮಳೆಗಾಲ ದಾಟಿದ ಮೇಲೆ ಬರುತ್ತೇವೆ, ಯಂಬದಾಗಿ ಮಹಾರಾಜರವರ ಸಂಗಡ ಹೇಳಿ ಕೊಂಡು, ಕಲಿಶಕ ೪೯೦೪ ನೆ ದುಂದುಭಿ ಸಂವತ್ಸರದ ವೈಶಾಖ ಶು ೭ ಯು, ಗುರುವಾರ ದಿವಸ, ಪಯಣವಾಗಿ ಗ್ರಾಮ ತಾಲೂಕಿನ ಬಾಂದವಾಡಿಗೆ ಹೋದರು.

ಆ ಬಳಿಕ ವೈಶಾಖದಲ್ಲು ಬಂಗಾಳದ ಲಾರ್ಡ್ ಮಾರಕ್ವಿಸ್ ವಲ್ಜಲಿ[1] ಸಾಹೇಬ ಬಹಾದ್ದರವರಿಗೆ ಮಹಾರಾಜರು ಬರಸಿ ಕಳುಹಿದ ಕಾಗದದಲ್ಲಿ: "ಸವಾದೆ ದೊರೆಗಳು ಮಳೆಗಾಲ ಕಳದು ಕೊಂಡು ಬರುತ್ತೇವೆಂಬದಾಗಿ, ಹೇಳಿ ಕೊಂಡು ಹೋಗಿ ಇದ್ದಾರೆ. ನಂಮ ಅಪೇಕ್ಷೆ ಯೇನು ಯಂದರೆ: ಈ ಮಕ್ಕಳು ಇಲ್ಲಿಗೆ ಬರುತ್ತಾ ಹೋಗುತ್ತಾ ಇದ್ದರೆ, ಅವರ ಮನಸಿಗೂ ಖುಷಿ ಆಗಿ ಇರುತ್ತಾ ಇದೆ. ಅವರನ್ನು ನಂಮ ಕಣ್ಣಿಂದಾ ನೋಡಿದರೆ, ನಮಗೂ ಖುಷಿ ಆಗುತ್ತಾ ಇದೆ. ಈ ದುನಿಯಾ ಮೇಲೆ ಇದು ಬಹಳ ದೊಡ್ಡದು ಇದೆ. ಆದ್ದರಿಂದಾ ವರುಷಕ್ಕೆ ಯಂಟು ತಿಂಗಳು ಮಳೆಗಾಲ ಮೊಕರರು ಇದೆ. ಆ ಬಳಿಕ ನಾಲ್ಕು ತಿಂಗಳು ಬೇಸಿಗೆ ದಿವಸದಲ್ಲಿ ಸವಾದೆ ಅರಸುಗಳಿಗೂ, ನಂಮ ಕುಮಾರಿತಿಗೂ ಸಹಾ ಆಖ್ತಿರುಯಿಂದಾ, ಯೇನಾದರೂ ಸಂಶಯದಿಂದಾ ತಾಮಸ ಮಾಡದೆ, ಇಲ್ಲಿಗೆ ಕಳುಹಿಸುತ್ತಾ ಇರುವ ಹಾಗೆ, ತಂಮ ಹುಜೂರಿಂದಾ ಗ್ರಾಮ ಮುದಕ್ಕೇರಿ ಗವರನರ್ ಸಾಹೇಬರ ಹೆಸರಿಗೆ ವಂದು ಕಾಕೀತಿ ಇನಾಯತ ಮಾಡಿಸ ಬೇಕು. ಆ ಮಕ್ಕಳು ಇಲ್ಲಿಗೆ ಬಂದ ಮೇಲೆ ನಾವು ನೋಡಿ, ಸಂತೋಷ ಮಾಡಿ ಕೊಂಡು, ಬೇಸಿಗೆ ನಾಲ್ಕು ತಿಂಗಳು ಇರಿಸಿ ಕೊಂಡು, ಮಳೆಗಾಲ ಶುರು ಆಗುವ ಸಮಯದಲ್ಲಿ ಮನಹಾ ಗ್ರಾಮಕೆ ಕಳುಹಿಸಿ ಕೊಟ್ಟೇವು. ಈ ಬಗ್ಯೆ ಗ್ರಾಮದಿಂದಾ ಇಲ್ಲಿಗೆ ಬರುವ ದರಿಯಾ ಮಾರ್ಗದಲ್ಲಿ ಆಗಲಿ, ಕರೆ ಮಾರ್ಗದಲ್ಲಿ ಆಗಲಿ, ವರುಷ ವರುಷಕ್ಕೂ ವಂದಂತರ ಸವಾದೆ ಅರಸುಗಳು ಗ್ರಾಮ ಶೀಮೆಯಿಂದಾ ಕೊಡಗಿನ ಶೀಮೆಗೆ ಬರುವಾಗ್ಯೆ, ಹೋಗುವಾಗ್ಯೆ, ಇಳಿದು ಇಳಿದಲ್ಲಿ, ಮಜೂರಿ ಆಳುಗಳು, ಅವರಿಗೆ ಬೇಕಾದ ಜೀನಸು ಸಹಾ, ಹಾಜರು ಮೇರೆ ಉಂಟಾದ ಮಜೂರಿ ಜೀನಸಿನ ಕ್ರಯ ಸಹಾ ತೆಗದು ಕೊಂಡು, ಅವರಿಗೆ ಕೊಡಿಸ ಬೇಕೆಂಬದಾಗಿಯೂ, ಈ ಮಕ್ಕಳ ನಿಗಾಹಾನಿ ಕುಮಕಿನ ಬಗ್ಯೆ, ಅವರ ಮನೆಗೆ ತಲಪುವ ಪರಿಯಂತರ ಅವರ ಸಂಗಡ ಇರುವ ಬಗ್ಯೆ, ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಆರು ಜನ ಶಿಪಾಯಿಗಳು, ಹಬ್ಬ ನಾಯಕನ ಸಹಾ, ತಾಲೂಲು ತಾಲೂಕಿನಲ್ಲಿ ಬದಲಿ ಆಗಿ, ಮಕ್ಕಳ ಸಂಗಡ ಕೂಡಿಸಿ ಕಾಡುವ ಹಾಗೆ ಸಹಾ, ಗ್ರಾಮದಿಂದಾ ಇಲ್ಲಿಗೆ ಬರುವ ದರಿಯಾ ಮಾರ್ಗ ಕರೆ ಮಾರ್ಗದಲ್ಲಿ ಸಹಾ, ಇಂಗ್ರೇಜ ಸರಕಾರದ ಇಲಾಖೆ ಶೀಮೆ ಅಮಲುದಾರ ಕಛೇರಿನವರಿಗೆ ಸಹಾ ವಂದು ಕಾಕೀತಿ ಇನಾಯತ ಮಾಡಿಸ ಬೇಕು. ಈ ಯರಡು ಕಾಕೀತಿ ಸದರಿ ಬರದ ಮೇರೆ ಮೆಹರ್ಬಾನಗಿ ಮಾಡಿಸ ಬೇಕು. ನಾವು ಆ ಮಕ್ಕಳು ಸಹಾ, ಈ ದುನಿಯಾ ಮೇಲೆ ಇರುವ ಪರಿಯಂತರ ಈ ಬಂದುಬಸ್ತು ನಡದು, ಆ ಮಕ್ಕಳು ವರುಷಂಪ್ರತಿ ವಂದಂತರ ಗ್ರಾಮದಿಂದಾ ಇಲ್ಲಿಗೆ ಬರುವದು ಕಾಯಂ ಇರ ಬೇಕು. ಈ ಉಪಕಾರ ಯಂದೆಂದಿಗೂ ಮರೆಯಲಿಕ್ಕೆ ಇಲ್ಲಾ" ಯಂಬದಾಗಿ, ಬರಸಿ ಕಳುಹಿದರು.

ಆ ಬಳಿಕ ದುಂದುಭಿ ಸಂವತ್ಸರದ ಶ್ರಾವಣ ಶು ೬ ಲು ಬಂಗಾಳದ ಗವರನರ್ ಜನರಾಲ್ ಲಾರ್ಡ್ ಮಾರಕ್ವಿಸ್ ವಲ್ಲಜಲಿ ಸಾಹೇಬರವರು ಬರಸಿ ಕಳುಹಿದ ಕಾಗದದಲ್ಲಿ: "ದ್ಯಾಸ್ಕಿಯಿಂದಾ ಕಳುಹಿದ ಕಾಗದ ಯರಡು, ಅದರಲ್ಲಿ ವಂದು ಕಾಗದದಲ್ಲಿ ತಂಮ ಕುಮಾರತಿಯರನ್ನು ಪುಷ್ಯ, ಶು ೧೫ ದಿವಸ ಮದುವೆ ಪರಾರಂಭವಾಗಿ, ಈ ಬ ೯ ವರೆಗೆ ಹರುಷವು ಬಹಳ ಚೆನ್ನಾಗಿ ಆಯಿತು. ಈ ಮಧ್ಯೆ ನಂಮ ಸರಕಾರದ ಕಡೆಯಿಂದಾ ಮದುವೆ ಹರುಷದಲ್ಲು ಮೆಹರ್ಬಾನಗಿ ಮಾಡಿಸಿದ್ದು ತಂಮ ಮನಸಿನಲ್ಲು ಇಟ್ಟು ಶರ್ಯೆಯನ್ನು ಹೋಗುಸುತ್ತೇವೆ" ಯಂಬ

---

1 Marquis Wellesley.

ದಾಗಿಯೂ, ಯರಡನೆ ಕಾಗದದಲ್ಲಿ: ಸೋದೆ ರಾಜರಂನು ಅವರ ಮನೆಗೆ ಕಳುಹಿಸುವ ಬಗ್ಗೆಯೂ, ಪುನಶ್ಚ ಅವರು ಕೊಡಗಿನ ಶೀಮೆಗೆ ಬರುವ ಬಗ್ಗೆಯೂ, ನಂಮ ಅಪ್ಪಣೆ ಕಾಗದಕ್ಕೆ ಅಪೇಕ್ಷಿಸಿ ಇದ್ಧೀರಿ. ಇದೇ ಕಾಗದದಲ್ಲಿ ಉಳಿಕೆ ವಿವರ ದೋಸ್ತಿಯಿಂದಾ ಬರದು ಇದ್ಧೀರಿ. ಅದು ತಲಪಿತು. ಅದರ ವಿವರ ಯಾವತ್ತು ಸಂತೋಷದಿಂದಾ ತಿಳಿಯ ಬಂತು. ಆ ಮದುವೆ ಆದ ವಳ್ಳೇ ಶುಭ ಸುದ್ದಿ ಕೇಳಿದಲ್ಲಿ, ಬಹಳ ಸಂತೋಷವಾಯಿತು. ಮಹಾದೇವನು ಈ ಸಂತೋಷವಂನು ತಮಗೆ ಶಾಶ್ವತವಾಗಿ ದಯಪಿಡಲಿ. ತಾವು ನಿಶ್ಚಯವಾಗಿ ತಿಳಿಯ ಬೇಕು, ಯೇನು ಯಂದರೆ, ನಾವು ಸದಾ ತಮಗೆ ಸುಖ ಕ್ಷೇಮ ಆರೋಗ್ಯವು ಆಗ ಬೇಕೆಂಬದು ಹಾರೈಸುತ್ತಾ ಇದ್ಧೇವೆ. ಮೊದಲಿಂದಲೂ ಇಂಗ್ರೇಜ ಬಹಾದ್ದರ ಸರಕಾರಕ್ಕೆ ವಳ್ಳೇದು ಮಾಡಿಸಿದಂಥಾದ್ದು ಈ ಕಾಗದದಲ್ಲು ಬರದು ಇತ್ತು. ಈ ಮಾತು ಯಾವತ್ತು ತಾವು ಮಾಡಿದ್ದು ನಿಜವೇ ಸರಿ; ನಾವು ನಿಶ್ಚಯವಾಗಿ ತಿಳಿದು ಇದ್ಧೇವೆ. ಈ ಮಾತಿಗೆ ನಾವು ಬಹಳ ರಜಾಮಂದಿಯಿಂದಾ ಖುಷಿ ಇದ್ಧೇವೆ. ನಾವು ಬಹಳ ಸಂತೋಷದಿಂದಾ ಈ ಮಾತು ತಿಳಿದು ಇದ್ಧೇವೆ; ಅದು ಯೇನಂದರೆ: ಟೀಪುಸುಲ್ತಾನರ ಸಂಗಡ ಲಡಾಯಿ ಶುರು ಆಗುವ ಮೊದಲಾರಭ್ಯದಿಂದಾ, ತಾವು ನಂಮ ಸರಕಾರಕ್ಕೆ ದವಲತ್ತು ಆಗ ಬೇಕೆಂತಲೂ, ವಳ್ಳೇದು ಆಗ ಬೇಕೆಂತಲೂ, ನಂಮ ಸರಕಾರಕ್ಕೆ ದೋಸ್ತಿಯಿಂದಾ ಯೇನಾಂದು ಮಾಡಿದ್ಧೀರೋ, ಅದರಿಂದಾ ನಂಮ ಸರಕಾರಕ್ಕೆ ಲಾಭ ಬಂತು; ತಮಗೆ ಕೀರ್ತಿ ಆಯಿತು. ತಂಮ ಕುಮಾರತಿಯವರ ಮದುವೆಯಂನು ಬಹಳ ಸಂತೋಷದಿಂದಾ ಮಾಡಿದ್ದು, ಅದರ ವಿವರ ಯಾವತ್ತು ನಾವು ಕೇಳಿ, ಬಹಳ ಸಂತೋಷವಾಯಿತು. ಮೈಸೂರ ಅರಸುಗಳ ದರ್ಬಾರದಲ್ಲಿ ಹುಕುಮತ್ತು ನಡಸುವಂಥಾ ಸರದಾರಗೆ ಈ ಶುಭ ಮದುವೆ ಆದ ಉಡುಗರೆಯಂನು ನಂಮ ಕಡೆಯಿಂದಾ ಕಳುಹಿಸಿ ಕೊಡಿ ಯಂತಾ, ಅಪ್ಪಣೆ ಕೊಟ್ಟು ಇದ್ಧೇವೆ. ಸೋದೆ ರಾಜರಿಗೆ ವಳ್ಳೇದು ಆಗುವದು, ಅವರ ತಾರೀಫು ನಂಮ ಹೃದಯದಲ್ಲು ಚಿತ್ರ ಬರದ ಹಾಗೆ ಇದೆ. ಯಾವ ಕಾಲದಲ್ಲು ದಯ ಮತ್ತು ದಯಗಳು ಆಗುವಂಥಾದ್ದು ಇದೆಯೋ, ಅದಂನು ತಂಮ ಸ್ನೇಹಾನುಬಂಧದ ಮೇಲಿಗೆ ದಾಖಿಷ್ಟ ಇಟ್ಟು, ಅವರ ಮೇಲೆ ಮಾಡುವದಕ್ಕೆ, ನಮಗೆ ಬಹಳ ಖುಷಿ ಇದೆ. ಅದು ಆದೀತು. ಯರಡನೆ ಕಾಗದದಲ್ಲು ಸೋದೆ ರಾಜರೂ ತಂಮ ಕುಮಾರತಿಯರೂ ಸಹಾ ವರುಷಂಪ್ರತಿಯಲ್ಲು ಗೋವೆ ಶೀಮೆಯಿಂದಾ ಕೊಡಗಿನ ಶೀಮೆಗೆ ಬರುವದಕ್ಕೆ ಗೋವೆ ಸರದಾರರಿಗೆ ಮತ್ತು ಇಂಗ್ರೇಜ ಸರದಾರರಿಗೆ ಅಪ್ಪಣೆ ಆದರೆ, ನಮಗೆ ಬಹಳ ಖುಷಿ ಇತ್ತು ಯಂತಾ, ಬರಸಿ ಇದ್ಧೀರಿ. ಈ ಮಾತಿಗೆ ನಮಗೂ ಬಹಳ ಖುಷಿ ಇದೆ. ಈ ಮಾತಿನ ಉದ್ದಿಶ್ಯ ಜಲ್ದಿಯಿಂದಾ ಗೋವೆ ಸರದಾರರಿಗೆ ಬರದೇವು. ಇದಲ್ಲದೆ ರಾಜರು ಆತಂಕವಿಲ್ಲದೆ ಸುಖದಿಂದಾ ಬಂದು ತಲಪುವ ಬಗ್ಗೆಯೆ, ಮಾರ್ಗದಲ್ಲು ಸರಂಜಾಮು ಯಾವತ್ತು ತಯಾರಾಗಿ ಇರುವ ಪ್ರಕಾರ, ಕನಡ ಶೀಮೆಯಲ್ಲಿ ಇರುವ ಇಂಗ್ರೇಜ ಸರದಾರರಿಗೆ ಅಪ್ಪಣೆ ಕೊಟ್ಟೇವು. ವರುಷಂಪ್ರತಿಯಲ್ಲು ಸೋದೆ ರಾಜರು ಕೊಡಗಿನ ಶೀಮೆಗೆ ರವಾನೆ ಆಗುವ ಹೊತ್ತಿನಲ್ಲಿ, ವಂದು ಪಹಾರೆ ಶಿಪಾಯಿ ಆಗಿ ಕಳುಹಿಸುವ ಬಗ್ಗೆಯೆ, ಮೈಸೂರ ಶೀಮೆ ಶಿಪಾಯಿ ಇರುವ ಸರದಾರರಿಗೆ ಹಿಶಾರಿ ಮಾಡಿಯೇವು. ಇಂಗ್ರೇಜ ಸರಕಾರದ ದುಷ್ಮಾನರು ದೂರವಾಗಿ ಹೋದರು. ಯಾವತ್ತು ಶೀಮೆಯಲ್ಲಿ ಇಂಗ್ರೇಜ ಸರಕಾರದ ಹುಕುಮತ್ತು ದವಲತ್ತು ಬಹಳ ಬಹುಮಾನದಿಂದಾ ಕಾಯಂ ಆಯಿತು. ಸರಕಾರಕ್ಕೆ ದವಲತ್ತು ಹಾರೈಸುವಂಥಾ ಯಲ್ಲಾ ದೋಸ್ತದಾರರು ನಂಮ ಕರಕರೆ ಹೊತ್ತಿನಲ್ಲು ನಂಮ ಸಂಗಡ ಬಹಳ ಜಮಾಮದೀ, ಬಹಳ ಸ್ನೇಹದಿಂದಾ ಕೂಡಿದಂಥಾವರ ಮೇಲೆ ನಾವು ಬಹಳ ದೋಸ್ತಿ ಮೆಹರಬಾನಿ ಮಡಗುತ್ತೇವೆ. ತಾವು ನಮಗೆ ಬಹಳ ಅತ್ಯಂತ ದೊಡ್ಡ ದೋಸ್ತರು. ಇದರಿಂದಾ ವಂದು ಕತ್ತಿಯಂನು ಮೈಸೂರ ತಾಲೂಕಿನ ಶೀಮೆಯಲ್ಲು ಇರುವ ಜಾನಶಿನ್ ಸಾಹೇಬರ ಮಾರಿಫತ್ತಿನಿಂದಾ ರವಾನೆ ಮಾಡಿಯೇವು. ಅದಂನು ಬಹಳ ದೋಸ್ತಿಯಿಂದಾ ಸಂನ್ಮತವಿಟ್ಟು, ತಂಮ ನಡುವಿನಲ್ಲಿ ಕಟ್ಟ ಬೇಕು" ಯಂಬದಾಗಿ ಬರಸಿ ಕಳುಹಿಸಿ ಇದ್ದರು.

ಅದಕ್ಕೆ ಜವಾಬಾಗಿ ವೀರರಾಜೇಂದ್ರ ವಡೆಯರವರು ಬರಸಿ ಕಳುಹಿದ ಕಾಗದದಲ್ಲಿ: "ನಾವು ಬರಸಿ ಕಳುಹಿದ ದೋಸ್ತಿ ಕಾಗದ ಯರಡರ ದರ ಜವಾಬು ಸೋದೆ ದೊರೆಗಳವರ ಕಾರ್ಯದ ದುರಸ್ತಿನ ಬಗ್ಗೆಯೂ, ವರುಷಂಪ್ರತಿಯಲ್ಲು ವಂದು ಸಲಾ ಸೋದೆ ಶೀಮೆಯಿಂದಾ ಕೊಡಗಿನ ಶೀಮೆಗೆ ಬರ ತಕ್ಕ ಬಂದೋಬಸ್ತಿನ ಬಗ್ಗೆಯೂ, ಬಹುಮಾನದಿಂದಾ ಬರದು ಇತ್ತು; ವಳ್ಳೇ ಹೊತ್ತಿನಲ್ಲಿ ಬಂದು ಮುಟ್ಟಿತು. ಅದರ ವಿವರಾ ನೋಡಿ, ಯಾವದಾಂದು ಅಭಿಪ್ರಾಯ ನಂಮಮನಸಿನಲ್ಲಿ ಇತ್ತಾ, ಅದೇ ಲಭಿಸಿತು. ಸೋದೆ ದೊರೆಗಳ ಪಸಂದು ಮಾಡುವಂಥಾ, ಅವರ ನಡತೆ, ಅವರ ವಳ್ಳೇ

ಕನ ಯಾವತ್ತು ನಂಮ ಹೃದಯದಲ್ಲಿ ಚಿತ್ರ ಬರದ ಹಾಗೆ ಇದೆ. ಯಾವದೊಂದು ಕಾಲದಲ್ಲು ಅವರ ಆರೈಕೆ ಮಾಡುವಂಥಾ ದಯೆಗಳು ಯಾವ ಪ್ರಕಾರ ಬೇಕಾಗಿ, ಆ ಪ್ರಕಾರ ಮಾಡಿಸಲಾದೀತು ಯಂತಾ ಬಹಳ ಮೆಹರಬಾನಗಿಯಿಂದಾ ಬರಸಿ ಇದ್ದಿರಿ. ಈ ಅಪೇಕ್ಷೆವಂತರಿಗೆ ಸರ್ವ ಪ್ರಕಾರದಲ್ಲು ಆರೈಕೆ ಮಾಡುವಂಥಾ ಭಾರ ತಂಮ ದೌಲತ್ತಿನ ಪದರಿಗೆ ಕೂಡಿ ಇದೆ. ಈ ಜಗತ್ತಿನ ವಳಗೆ ನಂಮ ಹಾಗೆ ಹಾರೈಸುವಂಥವರ ಫಿರಿಯಾದಿ ಕೇಳಿಸುವಂಥವರು ತಂಮ ಹಾಗಲ್ಲ ಮತ್ತೆಯಾರು ಇದ್ದಾರೆ? ನಂಮ ಉಮ್ಮೇದು ತಂಮಿಂದಲ್ಲೆ ಆದೀತು, ಇದರ ವಿವರ ಹೀಗೆ ಇದೆ. ಈ ಸಂಬಂಧ ಆಗುವದಕ್ಕೆ ಮೊದಲು ಸ್ವಾದೆ ರಾಜರು ನಂಮ ಕುಮಾರಿಯನ್ನು ಕೇಳಿದರು. ಅದಕ್ಕೆ ನಂಮಂತ ಆರೈಕೆ ಮಾಡುವ ಭಾರ ಇಂಗ್ರೇಜ ಕುಂಪನಿ ಸರಕಾರದ ಪದರಿಗೆ ಕೂಡಿ ಇದೆ. ಹೀಗೆ ಇರುವಲ್ಲಿ ಬಂಗಾಳದ ದೊಡ್ಡ ಲಾರ್ಡ ಸಾಹೇಬರವರ ಹುಕುಂ ಆದ ಹಾಗಲ್ಲ, ಈ ಕೆಲಸ ಆಗಲಿಕ್ಕಿಲ್ಲಾ, ಯಂಬದಾಗಿ ಜವಾಬು ಹೇಳಿದೆವು. ಇದರ ಮೇಲೆ ಈ ವಿವರ ನಂಮ ಕಾಗದದಿಂದಲೂ ಸ್ವಾದೆ ದೊರೆಗಳವರ ಕಾಗದದಿಂದಲೂ ಕಿದ್ಮತ್ತಿಗೆ ಜಾಹೇರಾಗಿ ಇದ್ದೀತು. ದೊಡ್ಡ ದುಷ್ಮನ ಟೀಪುಸುಲ್ತಾನರು ಕ್ಕಿರಿ ಹೋಗ್ಯದ ಮೇಲೆ, ಅವರ ಶೀಮೆ ಯಾವತ್ತು ಇಂಗ್ರೇಜ ಕುಂಪನಿ ಸರಕಾರದ ಹುಕುಮಿನ ವಳಗೆ ಬಂದು ಕಾಯಂ ಆಯಿತು. ಮಹಾದೇವರು ಪೈದಾ ಮಾಡಿರುವಂಥಾ ಯಾವತ್ತೂ ಜನರಿಗೂ ಕಷ್ಟೇಮ ಲಾಭ ಹಾಸಲಾಯಿತು. ಈ ಶ್ರೇಯಸ್ಸನ್ನು ಜಯ ಹಾರೈಸುವಂಥಾ ದ್ಯೋಸ್ತಕುದಾರರಿಗೆ ಮನಸಿನಲ್ಲಿ ಇರಾದೆ ಇದ್ದ ಮೇರೆಗೆ ಖಾತರ್ಜಮಾ ಆಯಿತು. ಈ ಮಗುವಿನ ಮದುವೆ ಪ್ರಸ್ತ ಶುರು ಆಗುವದಕ್ಕೆ ಮೊದಲೆ, ಈ ವಿವರ ಕಿದ್ಮತ್ತಿಗೆ ಜಾಹೇರು ಮಾಡಿ ಇದ್ದೆವು. ಈ ದ್ಯೋಸ್ತಕಾರರ ಮನಸಿನಲ್ಲು ಇದ್ದ ಮೇರೆ ಸರ್ವ ಪ್ರಕಾರದಲ್ಲು ಆರೈಕೆ ಮಾಡಿ, ಸ್ವಾದೆ ದೊರೆಗಳನ್ನು ಆಟರುಹುರಮತ್ತಿನಿಂದಾ ಇತ್ತಲಾಗಿ ಕೊಡಗೆ ರವಾನೆ ಮಾಡಿಸಿ, ವಿವಾಹಪ್ರಸ್ತ ಶುರು ಮಾಡುವ ಹಾಗೆ, ಹುಕುಂ ಬಂದು ಇತ್ತು. ತಂಮ ಹುಕುಂ ಪ್ರಕಾರ ಗ್ಯ್ರಾವೆ ಶೀಮೆ ದೂರ ಯಂಬ ದ್ಖುಷ್ಟಿ ಇಸದೆ, ಇಂಗ್ರೇಜ ಬಹಾದ್ದರ ಕುಂಪನಿ ಆಶ್ರಯ ಪರವರಶಿಯಿಂದಾ ದೂರವಾಗಲಿ, ಸಮೀಪವಾಗಲಿ, ಯಾವತ್ತು ಶೀಮೆಯು ಕುಂಪನಿ ಇಂಗ್ರೇಜ ಬಹಾದ್ದರವರ ಹುಕುಮಿನ ವಳಗೆ ಇದೆ. ಆ ಕುಂಪನಿ ನಮಗೆ ಆಶ್ರಯ ಸುಖ ಕಾಡುವಂತಾ ಜಾಗಾ ಯಂತಾ ತಿಳಿದು, ಖುಶಮನದಿಂದಾ ಆ ವಿವಾಹಪ್ರಸ್ತವ ಬಹಳ ಚಂದಾಗಿ ಮಾಡಿ, ಸ್ವಾದೆ ರಾಜರನ್ನು ಅವರ ಶೀಮೆ ಕಡೆಗೆ ರವಾನೆ ಮಾಡಿ ಇದ್ದೇವೆ. ಈಗ ತಂಮ ಮೆಹರ್ಬಾನಗಿಯಿಂದಾ ಸ್ವಾದೆ ದೊರೆಗಳವರು ವರುಷ ವರುಷಕ್ಕೂ ವಂದಾವರ್ತಿ ಕೊಡಗೆ ಬಂದು ಹೋಗುವಲ್ಲಿ, ಮಾರ್ಗದಲ್ಲು ಸಿಗಾಪಾನಿ ಬೇಕಾದ ಸಹಾಯ ಮುಂತಾಗಿ ಮೊಕರರು ಮಾಡಿ, ಈ ದ್ಯೋಸ್ತಕಾರರಿಗೆ ಕರಕರೆ ಯೋಚನೆ ಸಹಾ ಹೋಚಟ್ಟು ಮಾಡಿ ಇದ್ದೀರಿ. ಆ ಪರವರಶಿಯ ತಾಕೀತು ಯಾವ ಜಂಹವ್ಯಿಂದಾ ಮಾಡ ಬೇಕು, ನೂರು ಪಾಲಲ್ಲಿ ವಂದು ಪಾಲಾದರೂ ಆಗಲಿಕ್ಕಿಲ್ಲಾ. ಹೀಗೆ ಇರುವಲ್ಲಿ ನಮಗೂ ನಂಮ ಹೊಂದಿದವರಿಗೂ ಸರ್ವ ಬಗೆಯಲ್ಲು ಕಾಪಾಡುವಂಥಾ ಭಾರ ತಂಮ ದೌಲತ್ತಿನ ಪದರಿಗೆ ಕೂಡಿ ಇದೆ. ಹೀಗೆ ಇರುವದರಿಂದಾ ನಂಮ ಮಕ್ಕಳಿಗಾಗಲಿ, ಸ್ವಾದೆ ರಾಜರಿಗಾಗಲಿ, ಅವರ ಪಟಬರನ್ನು ಆರೈಕೆ ಮಾಡುವ ಭಾರ ನಂಮ್ಮೇಲೆ ಇಲ್ಲಾ. ಆ ಭಾರ ತಂಮ ಸರಕಾರದ ಪದರಿಗೆ ಕೂಡಿ ಇದೆ. ಇದಲ್ಲದೆ ಕುರುಬಿನ ಸರದಾರು ಜನರಾಲ್ ಹೆಳ್ಯಾಯಡ್ ಸಾಹೇಬ್ ಬಹಾದ್ದರವರು ಕುರುಬಿನ ಫೌಜಿನ ಸಂಗಡ ಪಿರಿಯಾಪಟ್ಟಣಕ್ಕೆ ಬಂದು ಇದ್ದರು. ಅವರನ್ನು ಕಂಡು, ಅವರ ಸಂಗಡ ವಂದು ಕತ್ತಿ ಕೇಳಿದೆವು. ಅವರು ಸಂತೋಷವಾಗಿ ಅವರ[1] ನಡುವಿನಿಂದಾ ಕತ್ತಿ ಬಿಚ್ಚಿ, ಈ ದ್ಯೋಸ್ತಕುದಾರರ ನಡುವಿಗೆ ಅವರ ಕೈಯಿಂದ ಕಟ್ಟಿದರು. ಇದಲ್ಲದೆ ಶ್ರೀರಂಗಪಟ್ಟಣದ ದೊಡ್ಡ ಜಯವಾದ ಬಳಿಕ, ಜನರಾಲ್ ಹಾರಿಸ್ ಸಾಹೇಬ್ ಬಹಾದ್ದರರು ಜನರಾಲ್ ಇಷ್ಟೂರಟ ಸಾಹೇಬರ ಮಾರ್ಫತ್ತಿನಿಂದಾ ಇನಾಮುಗಳ ಕಳುಹಿದರು. ಆ ಜನರಾಲ್ ಸಾಹೇಬರು ಆ ಇನಾಮನ್ನು ಮತ್ತೂ ಅವರ ಕಡೆಯಿಂದಾ ಸಹಾ ಕೊಟ್ಟರು. ಆ ಬಳಿಕ, ನಿಂಮ ಮನಸಿನಲ್ಲಿ ಯೇನು ಅಂತರಂಗ ಇದೆ ಯಂತಾ ಕೇಳಿದರು. ಅದಕ್ಕೆ ಜವಾಬು: "ನಂಮ ಮನಸಿನಲ್ಲು ಇದ್ದಂಥಾ ಅಪೇಕ್ಷೆ ಯಲ್ಲಾ ಟೀಪುಸುಲ್ತಾನರು ಸತ್ತ ಬಳಿಕ ಹಾಸಲಾಯಿತು. ಮತ್ತೆ ವಂದು ಅಭಿಲಾಷೆ ಬಾಕಿ ಇದೆ. ಅದು ಯೇನಂದರೆ: ಬಂಗಾಳದ ಲಾರ್ಡ ಸಾಹೇಬ್ ಬಹಾದ್ದರವರು ಬಹಳ ಜಯವಂತರು, ಅದೃಷ್ಟವಂತರು, ಜಗತ್ತಿನ ವಳಗೆ ಅವರು ಬಹಳ ಬಹಾದ್ದರರು ಇದ್ದಾರೆ. ನಂಬಿದಂಥಾವರ ಆರೈಕೆ ಮಾಡುವಂಥವರಿದ್ದಾರೆ. ಅದುಕಾರಣ ಅವರ ಬಳಿಯಿಂದಾ ಖಾಸಾ ಕತ್ತಿ ವಂದು

1 ತಂಮ.

ತೆಗೆದು ಕೊಂಡು, ನಮಗೆ ತಂಮ ಕೈಯಿಂದಾ ಇನಾಯತ ಮಾಡ ಬೇಕು. ಆ ಪದವಿಯಂನು ನಂಮ ಪ್ರಾಣ ಸಂರಕ್ಷಣೆಯ ಮಾಡುವಂಥಾ ತಾಯಿತ ಹಾಗೆ ತಿಳಿದು, ನಂಮ ನಡುವಿನಲ್ಲಿ ಕಟ್ಟಿಯೇವು" ಯಂತಾ, ಹೇಳಿದೆವು. ಆ ಕತ್ತಿಯಂನು ಮೈಸೂರ ಶೀಮೆ ಸರದಾರರು ವೆಬ್ ಸಾಹೇಬರ[1] ಮಾರ್ಫತ್ತಿನಿಂದಾ ಕಳುಹುತ್ತೇವೆ. ಅದು ಬಹಳ ಬಹುಮಾನದ್ದು ಯಂತಾ, ನಂಮ ಅಂತರಂಗ ಶುದ್ಧವಾಗಿ ತಿಳಿದೆವು. ಆ ಕತ್ತಿಯು ನಂಮ ಪುತ್ರಪೌತ್ರ ಪಾರಂಪರ್ಯವಾಗಿ ಬಹಳ ಬಹುಮಾನದಿಂದಾ ನಡುವಿನಲ್ಲು ಇದ್ದೀತು. ಇದಲ್ಲದೆ ನಂಮ ಕುಮಾರತಿಯವರ ವಿವಾಹ ಪ್ರಸ್ತ ಆದದಕ್ಕೆ ಬಹಳ ಬಹುಮಾನದಿಂದಾ ಕಿಲ್ಲತ್ತು ಜ್ವಾಡಿ ವಂದಂನು ಮೈಸೂರು ದರಬಾರದ ಜಾನಶಿನ್ ಸಾಹೇಬರ ಮಾರಿಫತ್ತಿನಿಂದಾ ಕಳುಹಿದಂಥಾದ್ದು ಬಂದು ತಲಪಿತು. ಅದು ನಂಮ ಸರ್ವಾಂಗಕ್ಕೂ ಅಳವಟ್ಟದರಿಂದಾ, ಬಹಳ ಆಬರು ಆಯಿತು. ಜಾಹೇರಾಗ ಬೇಕೆಂಬದಾಗಿ" ಸಂನ್ ೧೨೧೭ ನೆ ಹಿಜರಿ, ಜಮಾದಿ ಸಾನಿ, ೧೭ ನೆ ತಾರೀಖಿನಲ್ಲು ಬರಸಿ ಕಳುಹಿದರು.

ಆ ಬಳಿಕ ಕೆಲವು ದಿವಸ ಕಳೆದ ಮೇಲೆ, ಬಂಗಾಳದ ಮಹಾರಾಜಶ್ರೀ ಲಾರ್ಡ್ ಮಾರ್ಕ್ವಿಸ್ ವಲ್ಲೆಜಲಿ ಸಾಹೇಬ ಬಹಾದ್ದರವರು, ಜಮಾದಿಲ್ ಅವಲ್, ತಾರೀಖು ೨೪ನೆ, ಸಂನ್ ೧೨೧೭ ನೆ ಹಿಜರಿಯಲ್ಲು ಬರೆಸಿ ಕಳುಹಿದ ಕಾಗದದಲ್ಲಿ: "ಇಂಗರೇಜ ಬಹಾದ್ದರ ಸರಕಾರಕ್ಕೂ, ಫರಾಶೀಸರ ಸರಕಾರಕ್ಕೂ ಉಳಿಕೆ ಸರಕಾರಕ್ಕೂ, ತಂಮೊಳಗೆ ಲಡಾಯಿ ಇದ್ದಂಥಾದ್ದು ಸಲ್ಲಾ ಆಗುವದಕ್ಕೆ ಕರಾರುನಾಮೆ ದ್ಯಾನತ್ತಿಯಿಂದಾ ಸಾಬೂತು ಆಗುವ ಬಗ್ಗೆಯ, ಜವಾಬು ಸವಾಲಿನ ಮಾಗಿ ಹುಟ್ಟಿದಂಥಾ ಇದರ ವಿವರ ತಮಗೆ ಮೊದಲೇ ತಿಳಿಯ ಪಟ್ಟು ಇದ್ದೀತು. ಈಗ ಬಹಳ ದ್ಯಾನತ್ತಿ ಖುಷಿಯಿಂದಾ, ತಮಗೆ ತಿಳಿಯ ಬೇಕೆಂಬದಾಗಿ, ಬರೆಯುತ್ತಾ ಇದ್ದೇವೆ. ಈ ಸಂತೋಷಗಳ ದಿವಸದ ಮಧ್ಯ ಉಭಯ ಸರಕಾರಕ್ಕೂ ಇದ್ದಂಥಾ ವಿರುದ್ಧಕ್ಕೆ ವಿಲಾಯತ್ತಿಯಲ್ಲಿ ಸಲ್ಲಾನಾಮಾ ಮೊಹರು ಆದಂಥಾದ್ದು ಸಂತೋಷದ ವರ್ತಮಾನ ಕೇಳಿ, ಚಿಕ್ಕವರು ದೊಡ್ಡವರು ಯಾವತ್ತು ಜನರ ಮಡಲು ಸಂತೋಷದ ಮುತ್ತಿನಿಂದಾ ತುಂಬಿ ಹೋಯಿತು. ಉಭಯ ಸರಕಾರಕ್ಕೂ ಬಹಳ ದಿವಸದಿಂದಾ ಲಡಾಯಿ ಕಜಿಯಾ ಯಂಬ ಕಿಡಿ ಬಿದ್ದು, ಉರಿಯುತ್ತಿದ್ದಂಥಾದ್ದು ಶಿವನ ಕಟಾಕ್ಷದಿಂದಾ ನಂದಿ ಹೋಯಿತು. ಈ ಖ್ಯಾತಿ ಲಡಾಯಿ ಆಖೈರು ಆಗುವ ಹೊತ್ತಿಗೆ ಲಡಾಯಿದ ಮೈದಾನದಲ್ಲಿ ಧೈರ್ಯದಿಂದಾ, ಭುಜಬಲ ಪರಾಕ್ರಮದಿಂದಾ, ಪರ್ಣಾಹೇಜಾ ಮಾಡುವಂಥಾ ಇಂಗರೇಜ ಬಹಾದ್ದರ ಸರಕಾರದ ಕೀರ್ತಿ ಆಕಾಶ ಪರಿಯಂತರ ತಲಪಿತ್ತು. ಆ ಸಲ್ಲಾ ಆದ ಲಾಭ ಮಹಾದೇವ ಹುಟ್ಟಿಸಿ ಇರುವ ಸರ್ವ ಜನರಿಗೂ ಅದೃಷ್ಟ ಕೂಡಿ ಬಂತು. ಈ ಮಾತಿನ ಸಂತೋಷ ತಮಗೂ ನಂಮ ಸರಕಾರಕ್ಕೆ ಕೂಡಿ ಕ್ಷೇಮ ಲಾಭ ಹಾರೈಸುವಂಥಾ ಯಾವತ್ತರಿಗೂ ಆದೀತು. ದ್ಯಾನತ್ತಿಯಿಂದಾ ಇದ್ದೇ ಹೇರೆ ಇಂನೊಂದು ವಿವರ ಬರೆಯುತ್ತೇವೆ. ಈ ಶೀಮೆಯಿಂದಾ ಇಂಗರೇಜ ಫೌಜ ಮಿಸರಿನ[2] ಶೀಮೆಗೆ ಹೋಗಿ, ಮುಸಲಮಾನರ ಫೌಜಿಗೆ ಕುಮಕು ಮಾಡಿ, ಮಿಸರಿನ ಶೀಮೆಯಂನು ಫರಾಶೀಸರ ಕೈಯಿಂದಾ ಬಿಡಿಸಿದ ತರ್ಹಾ, ಅಲ್ಲಾ ಹಾಜರತ್ ಕದರೆ ಕುದರತ್ತು ಕುರಸದರಾಯತ್ ದಾರಾದಿರಾಯತ್ ಸುಲ್ತಾನೆ ರೂಂಕಿಅದಲ್ಲಾ ಹೋಮಾಲಕುಹೂ, ಇವರು ಅಫ್ವಾಂದರ್ವ್ಯಾಹಾದಿ ಬಂದದ ಹೂವು ಹೋಳೆಯುವಂಥಾ ವಜರ ಕೆತ್ತಿದಂಥಾದ್ದು ಹಾವ ನೂತನವಾಗಿ ಮಾಡಿಸಿ, ಅವರು ಮಡಗುತ್ತಾರೆ. ಅಂಥಾದ್ದು ನಂಮ ಉದ್ದಿಶ್ಯ ಮೆಹರಬಾನಗಿಯಿಂದಾ ದಯವಿಟ್ಟು ಕಳುಹಿಸಿ ಇದ್ದಾರೆ. ಆ ಪಾದಶಹರವರ ಸರಕಾರ ಯಾವತ್ತು ಮುಸಲಮಾನರದು ಇದೆ. ನಂಮ ಇಂಗರೇಜ ಸರಕಾರಕ್ಕೂ ಅವರಿಗೂ ಭೇದವಿಲ್ಲದೆ ಯೇಕೀಭಾವವಾಗಿ ದ್ಯಾನತ್ತಿ ಆದದರಿಂದಾ, ಬಹಳ ಸಂತೋಷ ಬಹುಮಾನ ನಮಗೆ ಉಂಟಾಯಿತು. ಈ ಬಹಳ ಖುಷಿ ತಂಮನಸಿಗೂ ಹಾಸಲಾದೀತೆಂಬದಾಗಿ," ಬರಸಿ ಕಳುಹಿಸಿ ಇದ್ದರು.

ಅದಕ್ಕೆ ಪರ ಜವಾಬಾಗಿ, ರಜಬ ೧೨ನೆ ಸಂನ್ ೧೨೧೭ನೆ ಹಿಜರಿಯಲ್ಲು, ಮಹಾರಾಜರವರು ಬರೆಸಿ ಕಳುಹಿದ ಕಾಗದಲ್ಲಿ: "ಬಹುಮಾನವಾದ ಮಹಿಕತ್ತಿನ ಕಾಗದ ಪ್ರೀತಿ ಹರ್ಷ ತುಂಬಿದಂಥಾದ್ದು, ಈ ಜಗತ್ತಿನ ಜನರು ಆರೈಕೆ ಆಗುವಂಥಾದ್ದಕ್ಕೆ ಆಧಾರವಾಗಿ ಇರುವಂಥಾದ್ದು, ಸನ್ನೇಹಿತರಾದಂಥವರ ಅದೃಷ್ಟ ಹೆಚ್ಚು ಮಾಡುವಂಥಾದ್ದು, ಶೂರರಾದಂಥಾವರಿಗೆ ಭುಜಬಲ ಪರಾಕ್ರಮ ಕೊಡುವಂಥಾದ್ದು, ಪರ್ಣಾಹೇಜಾ ಮಾಡುವಂಥವರ ಜೀವ ರಕ್ಷಣೆಯ ಮಾಡುವಂಥಾದ್ದು, ನಿತ್ಯವಂತರಿಗೆ ಮಾನ ಹೆಚ್ಚು ಮಾಡುವಂಥಾದ್ದು, ಇಂತಹ

1 Webb. 2 Egypt.

ಕಾಗದದ ಮೊದಲ ಕಲಮಿನಲ್ಲಿ ಇಂಗ್ರೇಜಿ ಸರಕಾರಕ್ಕೂ ಫರಾಸೀಸರ ಸರಕಾರಕ್ಕೂ ದೋಸ್ತಿಯಿಂದಾ ಖುಷಿಯಿಂದಾ ಸಲ್ಲಾ ಕರಾರುನಾಮೆ ಮೊಕರರು ಆದಂಥಾ ವಿವರ ಬರದು ಇತ್ತು. ತದ್ಯೇ ಕಲಮಿನಲ್ಲಿ ಮಿಸರಿನ ಶೀಮೆಯನು ಫರಾಸೀಸರ ಕೈಯಿಂದಾ ಬಿಡಿಸಿದಂಥಾದಕ್ಕೆ, ಅಲ್ಲಾ ಹಜರತ್ ಸುಲ್ತಾನ್ ರೂಂತಲದಲ್ಲಾ ಹಾಗಾಮುಲ್ಕುಹಾಗ ಇವರು ವಂದು ಹಾಗವನು ಅರ್ಧ ಚಂದ್ರನ್ಯಾಹಾದಿ ಚಿಂನದಲ್ಲು ಮಾಡಿಸಿ, ಅದಕ್ಕೆ ವಜ್ರ ಕೆತ್ತಿಸಿ ಹಾಳೆಯುವಂಥಾದ್ದು ವಂದು ನಷ ತಯಾರು ಮಾಡಿಸಿ, ತಂಮ ಬಳಿಯ ಮಡಗಿದ್ದರು. ಅದ್ಯೇ ಮೇರೆ ಮತ್ತೊಂದು ತಯಾರು ಮಾಡಿಸಿ, ತಾವು ಸಮಸ್ತ ಜನರಿಗೆ ದೊಡ್ಡ ಸರದಾರರಾದ್ದರಿಂದಾ, ತಮಗೆ ಮೆಹರಬಾನಿಗಿಯಿಂದಾ ಇನಾಯತ ಆಗಿ ಇದೆ. ಈ ಮಾತಿನಿಂದಾ ನಂಮಂಥಾ ಅಪೇಕ್ಷೆವಂತರಿಗೆ ಬಹಳ ಖುಷಿ ಆಗ ಬೇಕು ಯಂತಾ, ಬರೆಸಿದಂಥಾ ತಂಮ ಕಾಗದವು, ಸೂರ್ಯ ಉದಿಸಿ ಬರುವ ನ್ಯಾಹಾದಿ ತಲೆ ಯತ್ತಿ ಬಂದು, ನಂಮಂಥವರಿಗೆ ಇದ್ದ ಕತ್ತರೆ ಚಿಂತೆ ಯಂಬ, ಮಹಾ ಅಂಧಕಾರವಾಗ ಇದ್ದಂಥಾ ಕತ್ತಲೆಯನು ತೆಗದು, ಬೆಳಕು ಮಾಡಿತು. ಹ್ಯಾಗೆ ಯಂದರೆ: ಆ ಇನಾಯತ ನಾಮಾ ಬಹಳ ಶುಭಸಂತೋಷದ ಹೊತ್ತಿನಲ್ಲಿ ಬಂದ ಕಾರಣ, ಹೂವಿನ ಮಗ್ಗು ಅರಳಿದ್ಯಾಹಾದಿ ನಂಮಮನಸು ಉಬ್ಬಿ, ಬಹುಮಾನದ ಮುತ್ತಿನಿಂದಾ ನಂಮ ಮಡಲು ತುಂಬಿ ಹೋಯಿತು. ದೋಸ್ತಿದಾರರ ಮಾನ ಕೀರ್ತಿ ಯಂಬಂಥಾದ್ದು ಆಕಾಶದಷ್ಟು ದೂರ ತಲಪಿತು. ಬಹಳ ದಿವಸದಿಂದಾ ಉತ್ತಯಸ್ತರಿಗೂ ಅದಾಯು ಯಂಬ ಉರಿ ಉರಿಯುತ್ತಿದ್ದಂಥಾದ್ದು ಶಿವನ ಅಪ್ಪಣೆಯಿಂದಾ ನಾಂದಿ ಹೋಯಿತು. ಸರ್ವ್ವ ಜನರಿಗೂ ಸುಖ ಉಂಟಾಯಿತು. ಈ ಖುಷಿ ಸಂತೋಷದ ವಿವರ ನಂಮ ಮನಸು ಬಲ್ಲದು. ಅದನು ಬರೆವದಕ್ಕೂ ಹೇಳುವದಕ್ಕೂ ತೀರ ಶಕ್ಯದ್ದಲ್ಲಾ. ಆದ್ದರಿಂದಾ ಬರೆಯುವಂಥಾದ್ದು ಕಡಮೆ ಮಾಡಿದೆವು. ಶಿವ ಮಹಾದೇವನು ಈ ಭೂಮಿ ಮೇಲೆ ಯಾವತ್ತೂ ಜನರ ಹುಟ್ಟಿಸಿ, ಸುಖ ಕಾಡುತ್ತಿದ್ಧಾನೆ. ತಾವು ಯಾವತ್ತಕ್ಕೂ ದೊಡ್ಡ ಸರದಾರರು ಇದ್ಧೀರಿ. ತಂಮ ಹುಕುಂ ಈ ಯಾವತ್ತೂ ಭೂಮಿ ಮೇಲೆ ನಡಿಯ ಬೇಕು; ಸ್ವಲ್ಪ ಬಾಕಿ ನಿಲ್ಲಿಸ ಬಾರದು. ಇಂನೂ ದಿನೆ ದಿನೆ ಹಾಗಾಸ್ತಾಗಿ ಶೀಮೆ ಜಪಿಸಿ ಕಟ್ಟ ಬೇಕು. ಅದರ ಸಂತೋಷದ ಮುತ್ತಿನಿಂದಾ ತಂಮ ದೌಲತ್ತಿನ ಪದರಂನು ಮಹಾದೇವನು ತುಂಬಿಸ ಬೇಕು. ಇಂನು ಇಂಗ್ರೇಜಿ ಬಹಾದ್ದರ ಸರದಾರರ ಧೀರತ್ವ ಯಂಬ ಕತ್ತಿಗೆ, ಕೀರ್ತಿ ಯಂಬ ಜಾಂಡೆಗೆ ಈ ಭೂಮಿ ಚತುಸ್ಸಾಗರದ ಮಧ್ಯದಲ್ಲಿ ಸೂರ್ಯನ್ಯಾಹಾದಿ ಯೇಳಿಸಿ, ತಂಮ ಸರಕಾರಕ್ಕೆ ದುಷ್ಮಾನರಾದಂಥವರ ನಿಗ್ರಹಿಸಿ, ಅವರ ಶಿರವಂನು ಸರಕಾರದ ಜಾಂಡೆಗೆ ನಿವಾಳಿಸಿ ಹಾಕ ಬೇಕು. ಈ ಮೇರೆ ದಯವಿಡ ಬೇಕೆಂತಾ, ನಾವು ನಂನು ಯರಡು ಕೈ ಯತ್ತಿ, ಬೇಡಿ ಕೊಳ್ಳುತ್ತೇವೆ. ನಾವು ಯಾವ ಮೇರೆ ಬೇಡಿ ಕೊಳ್ಳುತ್ತೇವ್ಯೋ, ನಂಮಮನಸಿನಲ್ಲಿ ಯಾವ ಮೇರೆ ಅಪೇಕ್ಷೆ ಇದೆಯ್ಯೋ, ಆ ಪ್ರಕಾರ ಮಹಾದೇವ ಈ ವರಿಗೆ ಇಂಗ್ರೇಜಿ ಸರಕಾರಕ್ಕೆ ಜಯ ಕೊಟ್ಟಿದ್ಧಾನೆ. ಇಂನು ಮುಂದು ಇಂಗ್ರೇಜಿ ಸರಕಾರದಲ್ಲಿ ಸರದಾರರು ಯಷ್ಟು ಇದ್ಧಾರ್ಯೋ, ಅವರಿಗೆಲ್ಲಾ ಮಹಾದೇವನು ಕಟಾಕ್ಷ ಯಿಟ್ಟು, ದುಷ್ಮಾನರ ಜಯಿಸಿ, ಜಯವಂತರಾಗುವಂತೆ ಮಾಡ ಬೇಕು" ಯಂಬದಾಗಿ, ಬರಸಿ ಕಳುಹಿ, ಸಂತೋಷದಿಂದಾ ಇರುತ್ತಿದ್ದಲ್ಲಿ; ಕೆಲವು ದಿವಸದ ಮೇಲೆ ಕ್ಯಾತೆ ಅರಸುಗಳ ಕಡೆ ಕಾರಕಾರ ಕುಂನ್ಯನಂಬ್ಯಾರು ಯಂಬವನು ತುಂಟನಾಗಿ, ಕೆಲವು ಜನರ ಹರಾಹೊಂಸೆ ಮಾಡಿ, ಕಾಡು ಶೇರಿ ಕೊಂಡು ಇದ್ದದರಿಂದಾ, ಕುಂಪನಿ ಸರಕಾರದ ಕಡೆ ಶಿಪಾಯಿಗಳು ಹುಡುಕಿದಾಗ್ಯೂ, ಶಿಕ್ಕದೆ, ಅದ್ಯೇ ಮೇರೆ ಕಾಡಲ್ಲಿ ತಿರಿಗಿ ಕೊಂಡು ಇರುತ್ತಿದ್ದದರಿಂದಾ, ಈ ಸಮಾಚಾರ ವೀರರಾಜೇಂದ್ರ ವಡೆಯರವರು ಕೇಳಿ, ತಂಮ ಶೀಮೆ ಸರಹದ್ದಿನ ಹಹಾರೆಯವರಿಗೆ: "ಕುಂನ್ಯನಂಬ್ಯಾರು ಯಂಬವನು ಕುಂಪನಿ ಸರಕಾರಕ್ಕೆ ತುಂಟನಾಗಿ, ಕಾಡು ಶೇರಿ ಕೊಂಡು ಇದ್ಧಾನೆ. ಅವನು ನಂಮ ಅರಮನೆ ಶೀಮೆ ಸರಹದ್ದಿನ ವಳಗೆ ಬಂದದ್ದೇ ಉಂಟಾದರೆ, ಹಿಡಿದು ಕಳುಹಿಸುವದು" ಯಂಬದಾಗಿ, ಅಪ್ಪಣೆ ಕೊಟ್ಟು ಇದ್ದಲ್ಲಿ, ಆ ಹಹಾರೆಯವರು ಅದ್ಯೇ ಮೇರೆ ತಲಾಸು ಮಾಡುತ್ತಾ ಇದ್ದಲ್ಲಿ, ವಂದು ದಿವಸ ಆ ಕುಂನ್ಯನಂಬ್ಯಾರನು ಕಾಡಿನ ಶೀಮೆ ಸರಹದ್ದಿನ ಕಾಡ ವಳಗೆ ಬಂದದರಿಂದಾ, ಆ ಹಹಾರೆಯವರು ಅವನಂನು ಹಿಡಿದು, ದೊರೆಗಳ ಬಳಿಗೆ ಕಳುಹಿದರಿಂದಾ, ರಾಜರವರು ಅವನ ಕಾಲಿಗೆ ಬೇಡಿ ಹಾಕಿಸಿ, ಬಂದಿಖಾನೆಯಲ್ಲು ಮಡಗಿಸಿ, "ಕುಂನ್ಯನಂಬ್ಯಾರು ಯಂಬವನು ಶಿಕ್ಕಿದರಿಂದಾ ಬಂದಿಖಾನೆಯಲ್ಲು ಮಡಗಿಸಿದ್ಧೇವೆ. ಅವನಂನು ಸಾಗಿಸಿ ಕೊಂಡು ಹ್ಯಾಗುವ ಬಗ್ಯೆ, ಶಿಪಾಯಿಗಳ ಕಳುಹ ಬೇಕೆಂಬದಾಗಿ", ಕರ್ನಲ್ ಬ್ಯಾಲ್ ಸಾಹೇಬರಿಗೆ[1] ಬರಸಿ ಕಳುಹಿದಲ್ಲಿ, ಆ ಕರ್ನಲ್

[1] Col. Bole.

ಸಾಹೇಬರು ಬರಸಿ ಕಳುಹಿದ ಕಾಗದದಲ್ಲಿ: "ಆ ಕುಂಞ್ಯನಂಬ್ಯಾರನ ಸಾಗಿಸಿ ಕೊಂಡು ಬರುವ ಬಗ್ಯೆ, ನಂಮ ಕಡೆ ಶಿಪಾಯಿಗಳ ಕಳುಹಿಸಿ ಇದ್ದೇವೆ. ಇವರ ತಾಬೆ ಮಾಡಿ ಕಳುಹ ಬೇಕು" ಯಂತ, ಬರದು ಇದ್ದದರಿಂದಾ, ಅದೇ ಮೇರೆ ಆ ಕುಂಞ್ಯ ನಂಬ್ಯಾರನಂನು ಅವರ ಕಡೆ ಶಿಪಾಯಿಗಳ ವಶಕ್ಕೆ ಕೊಟ್ಟು ಕಳುಹಿಸಿದರು.

ಆ ಕೆಲವು ದಿವಸದ ಮೇಲೆ, ಆ ಕುಂಞ್ಯ ನಂಬ್ಯಾರನ ಸಂಗಡ ಇರುತ್ತಿದ್ದ ಕಾರೆಕಾರ ಕೇಳು ನಂಬ್ಯಾರು ಯಂಬವನು ಕೊಡಗಿನ ಸರಹದ್ದಿನ ಒಳಗೆ ಬಂದಲ್ಲಿ, ಸರಹದ್ದಿನ ಉಕ್ಕಡದ ಪಹರೆದವರು ಅವನಂನು ಹಿಡಿದು, ಮಹಾರಾಜರವರ ಬಳಿಗೆ ಕಳುಹಿದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ, ಪಾರಾದಲ್ಲು ಮಡಗಿಸಿ, ಈ ವಿವರ ಕರ್ನಲ್ ಬ್ಯಾಲ್ ಸಾಹೇಬರಿಗೆ ಬರಸಿ ಕಳುಹಿದಲ್ಲಿ, "ಆ ಕೇಳು ನಂಬ್ಯಾರನಂನು ಸಾಗಿಸಿ ಕೊಂಡು, ಬರುವ ಬಗ್ಯೆ, ಶಿಪಾಯಿಗಳ ಕಳುಹಿಸಿ ಇದ್ದೇವೆ. ಅವನಂನು ಈ ಶಿಪಾಯಿಗಳ ತಾಬೆಗೆ ಕೊಟ್ಟು ಕಳುಹಿಸ ಬೇಕು" ಯಂತ, ಆ ಕರ್ನಲ್ ಸಾಹೇಬರು ಬರಸಿ ಕಳುಹಿದರಿಂದಾ, ರಾಜರು ಆ ಕೇಳು ನಂಬ್ಯಾರನಂನು ಆ ಶಿಪಾಯಿಗಳ ಸಂಗಡ ಕೂಡಿಸಿ ಕೊಟ್ಟು, ಆ ಕರ್ನಲ್ ಬ್ಯಾಲ್ ಸಾಹೇಬರ ಬಳಿಗೆ ಕಳುಹಿಸಿ ಕೊಟ್ಟರು.

ಆ ಬಳಿಕ, ಕಲಿ ಸಂದ ೪೯೦೪ನೆ ರುಧಿರೋದ್ಗಾರಿ ಸಂವತ್ಸರದಲ್ಲು, ಕೋಟೆ ಅರಸುಗಳ ತಂಮ ಕ್ಯಾಮನ ಮಗ ರಾಮವರ್ಮ ಯಂಬವನು ಕೊಡಗಿನ ಸೀಮೆಗೆ ಬಂದು, ತನ ವೇಷ ಬದಲು ಮಾಡಿ ಕೊಂಡು, ತಿರುಗುತ್ತಾ ಇದ್ದದರಿಂದಾ, ಇವನಂನು ಪತ್ತೆ ಹತ್ತಿಸಿ, ಹಿಡ ತರಿಸಿ, ಪಹರೆದಲ್ಲು ಮಡಗಿಸಿ, ಈ ವಿವರ ರಿಕಾಟು ಸಾಹೇಬರವರಿಗೆ[1] ಬರದು ಕಳುಹಿದಲ್ಲಿ, "ಅವನಂನು ಇಲ್ಲಿಗೆ ಕರೆಸಿ ಕೊಳ್ಳುವ ಬಗ್ಯೆ, ಈಗ ಮಳೆಯೊಳದಲ್ಲು ತರಾತಕಿನಿಂದಾ ಮಾರ್ಗ ಇಕ್ಕಟ್ಟಾಗಿ ಇದೆ. ಆದ್ದರಿಂದಾ ಶ್ರೀರಂಗಪಟ್ಟಣದಿಂದಾ ಕರ್ನಲ್ ಕ್ಲೋಸ್[2] ಸಾಹೇಬರು ಜನರ ಕಳುಹಿಸ್ಯಾರು. ಅವರ ಸಂಗಡ ಕೂಡಿ, ಅಲ್ಲಿಗೆ ಕಳುಹಿ ಕೊಡ ಬೇಕು" ಯಂಬದಾಗಿ, ಜವಾಬು ಬರದು ಕಳುಹಿದರಿಂದಾ, ಅದೇ ಮೇರೆ ಆ ಕ್ಲೋಸ್ ಸಾಹೇಬರ ಕಡೆಯಿಂದಾ ಒಬ್ಬ ಸರದಾರ, ವಂದು ಕುಂಪನಿ ಶಿಪಾಯಿಗಳು ಸಹಾ, ಪೆರಿಯಾಪಟ್ಟಣಕ್ಕೆ ಬಂದದರಿಂದಾ, ಸದರಿ ರಾಮವರ್ಮನಂನು, ವಾಲೆಕಾರರ ಪಹರೆ ಕೂಡಿಸಿ, ಪೆರಿಯಾಪಟ್ಟಣಕ್ಕೆ ಸಾಗಿಸಿ, ಆ ಜನರ ತಾಬೆ ಮಾಡಿ ಕಳುಹಿಸಿ ಕೊಟ್ಟರು.

ಆ ಬಳಿಕ ಕಲಿ ಸಂದ ೪೯೦೫ನೆ ರಕ್ತಾಕ್ಷಿ ಸಂವತ್ಸರದ ಜ್ಯೇಷ್ಠ ಶು ೧೦ ಲು, ಪಕೀಲ್ ಕಪಿತಾನ್ ಮಾಹಿನಿ ಸಾಹೇಬರು, ಬಂಗಾಳದ ಲಾರ್ಡು ಮಾರ್ಕವೀಸ ವೆಲ್ಲೆಜಲಿ ಸಾಹೇಬ ಬಹಾದ್ದರವರ ಹುಕುಂ ಪ್ರಕಾರ, ಮಡಿಕೇರಿಗೆ ಬಂದಲ್ಲಿ, ವೀರರಾಜೇಂದ್ರ ವಡೆಯರವರು ಇದರುಗೊಂಡು, ಬಹಳ ಮಾನಮರಿಯಾದೆ ಮಾಡಿ, ಕರದು ಕೊಂಡು ಬಂದರು. ಆ ಮಾಹಿನಿ ಸಾಹೇಬರು ಮಹಾರಾಜರ ಮುಲಾಕತ್ತು ಆದ ಬಳಿಕ, ಬಂಗಾಳದ ಲಾರ್ಡು ಮಾರ್ಕವೀಸ್ ವೆಲ್ಲೆಜಲಿ ಸಾಹೇಬ ಬಹಾದ್ದರವರು ಸಂನ್ ೧೮೦೪ನೆ ಇಸವಿ, ಮೇ ಮಾಸ ೨೪ನೆ ತಾರೀಕಿನಲ್ಲು, ವೀರರಾಜೇಂದ್ರ ವಡೆಯರವರಿಗೆ ಬರದು ಇದ್ದ ಕಾಗದವಂನು ಕೊಟ್ಟರು.

ಆ ಕಾಗದದಲ್ಲಿ ತಾವು ನೇಕನಿಯತ್ತಿನಿಂದಾ, ಬಹಳ ದಿವಸದಾರಭ್ಯ ಹಮೇಷ ದೋಸ್ತಿಯಿಂದಾ ನಂಮ ಸರಕಾರಕ್ಕೆ ಖೈರಖಾಯಿ ಮಾಡಿರುವಂಥಾದ್ದು ನಾವು ದರಿಯಾಪ್ತು ಮಾಡಿ, ಅದರ ಪಡಂಬಡಿಕೆ ಸಂತೋಷದ ಮಹಬತೆ ದೋಸ್ತಿ ಕಲಮಿನಿಂದಾ ಬಹಳ ಸಲಾ ಬರದು ಇದ್ದೇವೆ. ಇದಲ್ಲದೆ, ತಾವು ತಂಮ ಸೀಮೆ ಹೆಚ್ಚು ಮಾಡ ಬೇಕು ಯಂಬ ಅಪೇಕ್ಷೆ ಮಡಗಿ ಇರುವಂಥಾದ್ದು ನಮಗೆ ತಿಳುವಳಿಕೆ ಇಲ್ಲದೆ ಇರಲಿಲ್ಲಾ. ಆದಾಗ್ಯೂ ತಾವು ಅಪೇಕ್ಷೆ ಮಾಡುವದಕ್ಕೆ ಮೊದಲು ಕೆಲವು ಕೆಲಸಗಳ ದರಿಯಾಪ್ತು ಮಾಡಿ, ಬಂದುಬಸ್ತು ಮಾಡಿದಲ್ಲಿ, ಆ ಕೆಲಸದಿಂದಾ ಒಳ್ಳೆತಾಗಿ ಬಂದುಬಸ್ತು ಆಗುತ್ತದೆ ಯಂತ, ವಿಹಿತವಾಗಿ ನಾವು ತಿಳಿದು ಇದ್ದೆವು. ಇದು ಮೊಕರರು ಮಾಡುವ ಬಗ್ಯೆ ತಾಮಸವಾಯಿತು. ಈಗ ತಂಮ ಖಾಸಾ ದೋಸ್ತಿ ಖೈರಖಾಯಿ ಸಂಮಾನತಿನಲ್ಲಿ ಟೆಕರ ಬರದ ಹಾಗೆ ಇರುವದರ ಮೇಲೆ ದೃಷ್ಟಿ ಮಾಡಿ, ತಂಮ ದೋಸ್ತಿಯಿಂದಾ ನಂಮನಸಿನ ಸಂತೋಷ ಪಡಂಬಡಿಕೆ ಮಹಬತೆ ಯಲ್ಲಾ ಜನರಿಗೂ ತಿಳಿಯುವ ಹಾಗೆ ಮಾಡುತ್ತಾ ಇದ್ದೇವೆ. ಈ ಬಗ್ಯೆ ಕಹಾಮತ್ತು ವಾ ಅವಾಲಿ ಮಹಬತ್ತ ಉಬ್ಬೆಪಾತ್ರ ಮಾಲಿ ಮಂಜಿಲತ್ತ ಕಪಿತಾನ್ ಮಾಹಿನಿ ಸಾಹೇಬರು ಮೊದಲು ವಕಾಲತ್ತಿನ ಹುದ್ದೆ ಮೇಲೆ ತಂಮ ಬಳೀ ಇದ್ದರು. ಅವರಿಗೆ ಹಿಷಾರೆ ಮಾಡಿ ಇದ್ದೇವೆ. ಹೆಚ್ಚಿಸುವ ಸೀಮೆ ಖಾಸ ಆ ಕದ್ದೇಯು

1 Mr. Richards. 2 Colonel Close.

ಆಗು ಮಾಡುವ ಬಗ್ಯೆ ನೇಮಕವಾಗಿ, ತಂಮ ಮುಂದೆ ಬಂದು, ಹಾಜರು ಆಗುತ್ತಾ ಇದ್ದಾರೆ. ಆ ನಕ್ಷೆಯ ವಿವರ ಈ ಕಪಿತಾನ್ ಸಾಹೇಬರವರ ಮುಖವಚನದಿಂದಲೂ, ಈ ದ್ಯಾಸ್ತಿ ಕಾಗದದಿಂದಲೂ, ವಿವರವಾಗಿ ತಮಗೆ ತಿಳಿ ಬಂದೀತು. ಮೇಲಾಗಿ, ವಂದು ತಮಶ್ರೀಯರು ಮೆಹರಬಾನಗಿ ಮಾರ್ಗದಿಂದಾ ತಂಮ ಉದ್ದಿಶ್ಯ ಕೆಲವು ದಿವಸದಲ್ಲಿ ತಿಳಿಸಾ ಬೇಕು ಯಂತಾ, ನಂಮ ಅಪೇಕ್ಷೆ ಇದೆ. ಕಪಿತಾನ್ ಸಾಹೇಬರು ತಮಗೆ ತಿಳುಪಿಸ್ಯಾರು. ಅದಂನು ನಂಮ ಮೆಹರಬಾನಾ ದ್ಯಾಸ್ತಿ ನಿಶಾನಿ ಯಂತಾ ತಿಳಿದು, ಕಬೂಲು ಮಾಡಿ, ನಂಮ ಮನಸಿಗೆ ಸಂತೋಷ ಹೆಚ್ಚು ಮಾಡುವಂಥಾದ್ದು ತಮಗೆ ಯುಕ್ತವದೆ" ಯಂಬದಾಗಿ, ಬರೆಸಿ ಇದ್ದರು.

ಆ ಬಳಿಕ ಮಾಹಿನಿ ಸಾಹೇಬರವರು ಹೇಳಿದ ವಿವರಾ: "ತಾವು ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕೆಲಸಕ್ಕೆ ಸಹಾಯವಾಗಿ ದ್ಯಾಸ್ತಿಯಿಂದಾ ನಡದು ಬಂದಂಥಾದ್ದಕ್ಕೆ, ಸರ್ವರು ತಿಳಿಯುವ ಬಗ್ಯೆ, ದ್ಯಾಸ್ತಿ ನಿಶಾನಿ ಉದ್ದಿಶ್ಯ ತಮಗೆ ಕೆಲು ಶೀಮೆ ಹೆಚ್ಚು ಮಾಡುವಂತೆ, ನಂಮ ಸರಕಾರದ ಹುಕುಂ ಪ್ರಕಾರ ಬಂದು ಇದ್ದೇವೆ. ಈ ಬಗ್ಯೆ ಮಂಗಲೂರ ತಾಲೂಕಿನ ಕಲ್ಲೆಕಟರ ಜಾನ್ ರೆವಿನ್ಶಾ ಸಾಹೇಬರವರ[1] ಬಳಿಗೆ ತಂಮ ಕಡೆಯಿಂದಾ ವಬ್ಬ ವಕೀಲಗೆ ಕಳುಹಿಸಿ, ತಮಗೆ ಇಂಗ್ರೇಜ ಸರಕಾರದಿಂದಾ ಬಿಟ್ಟು ಕೊಡುವಂಥಾ ಶೀಮೆ ಲೆಖ್ಖ ಹಾತಕವಂನು ಬರೆಸಿ, ಆ ಶೀಮೆಯಂನು ತಂಮ ಸಂಸ್ಥಾನಕ್ಕೆ ಶೇರಿಸಿ ಕೊಳ್ಳ ಬೇಕು" ಯಂಬದಾಗಿ ಹೇಳಿದ್ದರಿಂದಾ, ಮಹಾರಾಜರು ಹಾಲಸನಾಮೆ ಬರದ ವಿವರಾ: "ಬಂಗಾಳದ ಅಶರಫುಲ್ ಅಶರಾಫ್ ಮಾರಕ್ವಿಸ್ ವಲ್ಲೆಜಲಿ ಸಾಹೇಬ್ ಬಹಾದ್ದರವರು ಕಾಡೆಯಾಲ ತಾಲೂಕಿನ ಕೆಲವು ಶೀಮೆಯಂನು ತಂಮ ಮೆಹರಬಾನಗಿಯಿಂದಾ ನಂಮ ಸರಕಾರಕ್ಕೆ ಕೊಟ್ಟು ಇದ್ದಾರೆ. ಅದರ ಬಂದುಬಸ್ತಿನ ಬಗ್ಯೆ ಕಪಿತಾನ್ ಮಾಹಿನಿ ಸಾಹೇಬರು ಆ ಲಾಡ್ ಸಾಹೇಬರ ಕಡೆಯಿಂದಾ ವಕೀಲರಾಗಿ ಬಂದು ಇದ್ದಾರೆ. ಆ ಕಪಿತಾನ್ ಸಾಹೇಬರ ಹೊಷಾರೆ ಪ್ರಕಾರ, ನಂಮ ಕದ್ಯಂ ಇತಬಾರಿ ಕರ್ಣಿಕ ಸುಬ್ಬಯ್ಯಯನಂನು ಈ ಕೆಲಸದ ಬಗ್ಯೆ ಮೊಕರರು ಮಾಡಿ, ಕಪಿತಾನ್ ಸಾಹೇಬರ ಮುಖಾಂತರ ಕಾಡೆಯಾಲದ ಶೀಮೆ ತಾಲೂಕುದಾರ ಸಾಹೇಬರ ಬಳಿಗೆ ಕಳುಹಿಸಿ ಇದ್ದೇವೆ. ಆ ಮಹಾರಾಜಶ್ರೀ ಬಂಗಾಳದ ಲಾಡ್ ಸಾಹೇಬರವರ ಹುಕುಂ ಪ್ರಕಾರ ಯಷ್ಟು ಶೀಮೆ ನಮಗೆ ಕೊಡುವದು ಇದೆಯೋ, ಈ ಶೀಮೆಯಂನು ಈ ಕರ್ಣಿಕ ಸುಬ್ಬಯ್ಯಯನ ಹವಾಲೆ ಮಾಡ ಬೇಕು" ಯಂಬದಾಗಿ, ಹಾಲಸನಾಮಾ ಬರದು, ಕರ್ಣಿಕ ಸುಬ್ಬಯ್ಯಯನ ಕೈಲಿ ಕೊಟ್ಟು, ಮಂಗಲೂರು ಕಲ್ಲೆಕಟರ ಜಾನ್ ರೆವಿನ್ಶಾ ಸಾಹೇಬರವರ ಬಳಿಗೆ ಕಳುಹಿದಲ್ಲಿ, ಅವರು ಬಂಗಾಳದ ಲಾಡ್ ಸಾಹೇಬರವರ ಹುಕುಂ ಪ್ರಕಾರ, ದೊರೆಗಳಿಗೆ ಕೊಡುವ ಶೀಮೆ ಲೆಖ್ಖ ಹಾತಕವಂನು ಕರ್ಣಿಕ ಸುಬ್ಬಯ್ಯಯಗೆ ಬರೆಸಿ ಕೊಟ್ಟು, ಆ ಶೀಮೆ ಮುಖ್ಯಸ್ಥರು, ಗೌಡಗಳು, ರೈತರು ಮುಂತಾದ ಸಮಸ್ತ ಜನರಿಗೆ ರೆವಿನ್ಶಾ ಸಾಹೇಬರು ಬರೆಸಿ ಕಳುಹಿದ ಇಸ್ತಿಹಾರುನಾಮೆಯಲ್ಲಿ: "ಕುಂಪನಿ ಸರಸರದ ಫೌಜ ಶ್ರೀರಂಗಪಟ್ಟಣಾ ತೆಗದು ಕೊಳ್ಳುವ ಬಗ್ಯೆ ಬಂದ ವೇಳ್ಯದಲ್ಲು, ಮಹಾರಾಜಶ್ರೀ ಕೊಡಗಿನ ದೊರೆಗಳು, ವೀರರಾಜೇಂದ್ರ ವಡೆಯರವರು, ಸರಕಾರದ ಫೌಜಿಗೆ ರಸದು ವಗೈರೆ ಸೀಮಾನು ಹೊಂಚಾಯಿಸಿ, ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ, ಈ ಬಗ್ಯೆ ಬಂಗಾಳದ ಹಾಜರತ ಗವರ್ನರ್ ಜನರಾಲ್ ಮಾರಕ್ವಿಸ್ ವಲ್ಲೆಜಲಿ ಸಾಹೇಬ್ ಬಹಾದ್ದರವರು ಮೆಹರಬಾನಾ ಆಗಿ ಇರುವಂಥಾದ್ದಂನು ಸರ್ವರು ತಿಳಿಯುವ ಬಗ್ಯೆ, ಕುಂಪನಿ ಸರಕಾರದ ಇಲಾಖೆ ಶೀಮೆಯಿಂದಾ ಕೆಲವು ಶೀಮೆಯಂನು, ಸದರಿ ದೊರೆಗಳ ಪುತ್ರ ಪೌತ್ರ ಪಾರಂಪರ್ಯವಾಗಿ ನಡದು ಬರುವಂತೆ, ವಿಂಗಡಿಸಿ ಕೊಡಿಸುವದಂನು ನಿಶ್ಚಯಿಸಿದ ಮೇರೆಗೆ, ಮದುರಾಜಿನ ಗವರ್ನರ್ ಸಾಹೇಬ್ ಬಹಾದ್ದರವರು ಕುಮಾರಧಾರೆ ನದಿಗೆ ದಕ್ಷಿಣಾ ದಿಕ್ಕಿನಲ್ಲು ಇರುವಂಥಾ ಕೆಲವು ಮಾಗಣೆಗಳ ಬೇರೀಜ ವಿಂಗಡಿಸಿ, ಕೊಡಗಿನ ತಾಲೂಕಿಗೆ ಶೇರಿಸಿ ಕೊಡುವಂತೆ ಹುಕುಂ ಬರದು ಕಳುಹಿಸಿದ ಮೇರೆಗೆ, ಕಚ್ಚೇರಿ ತಾಲೂಕಿನಿಂದಾ ವಿಂಗಡಿಸಿ ಇರುವ ಮಾಗಣೆಗಳ ವಿವರಾ—ಬೆಳ್ಳಾರೆ ಮಾಗಣೆ ವಂದಕ್ಕೆ ದರ್ಯಾಬಸ್ತು ಗ್ರಾಮ ಮುವತ್ತೇಳು; ಸಿಮೊಗರು ಮಾಗಣೆ ವಂದಕ್ಕೆ ಗ್ರಾಮ ವಂದು; ಅಡೂರು ಮಾಗಣೆ ವಂದಕ್ಕೆ ದರ್ಯಾಬಸ್ತು ಗ್ರಾಮ ಐದು; ಪುತ್ತೂರು ಮಾಗಣೆ ಪೈಕಿ ಪಡುವನೂರ ಗ್ರಾಮದಲ್ಲು ಶೇರಿದ ಕಾಕೆಮಜಲು ದೇರಕಾಂಡೆ ವಗೈ ಶಿವಾಯಿ, ಮೇಲಾದ ದರ್ಯಾಬಸ್ತು ಮಾಗಣೆ ವಂದಕ್ಕೆ ಗ್ರಾಮ ಮೂವತ್ತೈದು; ಕಡ್ಯದ ಮಾಗಣೆ ಪೈಕಿ ಯಡಮಂಗಲ ಗ್ರಾಮ ವಂದು, ಬಳಪದ ಗ್ರಾಮ ವಂದು, ಉತ್ತಯಂ ಗ್ರಾಮ ಯರಡು; ಅಮರಸಪಾದಿ

1 Collector Mr. John Ravenshaw.

ಪೇಟೆ ಕೆನೆ ಗ್ರಾಮ ವಂದು, ಡಾಳುವಾಡಿ ಗ್ರಾಮ ವಂದು, ಕಲ್ಲುಪಟ ಗ್ರಾಮ ವಂದು, ಕಾನಟಾಡಿ ಗ್ರಾಮ ವಂದು, ಆಲಂಪೆ ಗ್ರಾಮದಲ್ಲು ಕೆವಳ ತಿಮ್ಮಯ್ಯನ ವರ್ಗ ಹೊರತು, ಮೇಲಾದ ಗ್ರಾಮದರ್ಖಾಸ್ತು ವಂದು, ಅಂತು ಗ್ರಾಮ ಐದು; ಬಂಡಾಡಿ ಮಾಗ್ಣೆ ಪೇಟೆ ಪುಳ್ಳುಕುಕ್ಕು ಗ್ರಾಮ ವಂದು; ಶಿಶಿಲದ ಮಾಗ್ಣೆ ಅರಿಗುಡಿ ಗ್ರಾಮ ವಂದು; ಪಂಜಯದ ಮಾಗ್ಣೆ ಪೇಟೆ ಗ್ರಾಮ ಹತ್ತಕ್ಕೆ, ಹಾಂಬೆತಾಡಿ ಗ್ರಾಮ ವಂದು, ಕತ್ತನಿ ಬೆಗದಲು ಗ್ರಾಮ ವಂದು, ಮೂಡನೂರು ಗ್ರಾಮ ವಂದು, ಯನೆಕಲ್ಲು ಗ್ರಾಮ ವಂದು, ಕಲ್ಲುಮುಡಕ ಗ್ರಾಮ ವಂದು, ಪಡುವನೂರು ಗ್ರಾಮ ವಂದು, ಯಣಮೂರು ಗ್ರಾಮ ವಂದು, ಕೊಳಕುಂಜಿ ಗ್ರಾಮ ವಂದು, ಐವತ್ತೊಕ್ಕಲು ಗ್ರಾಮ ವಂದು, ಕೆಂಚ್ಯಾಡಿ ಗ್ರಾಮ ವಂದು, ಅಂತು ಗ್ರಾಮ ಹತ್ತು; ಹವಿರಾಳವಟ್ಟದ ಮಾಗ್ಣೆ ಗ್ರಾಮ ಆರಕ್ಕೆ ವಿವರ: ಕುಂಬಡಜೆ ಗ್ರಾಮ ವಂದು, ಪೆರಡಾಲು ಗ್ರಾಮ ವಂದು, ಬೆಳ್ಳೂರು ಗ್ರಾಮ ವಂದು, ಪಡರೆ ಗ್ರಾಮ ವಂದು, ಉಪರಂಗಳ ಗ್ರಾಮ ವಂದು, ಬೆಳ್ಳದ ಗ್ರಾಮ ವಂದು, ಅಂತು ಗ್ರಾಮ ಆರು; ಬಾರೆಬೆಲಿಯೂರ ಪೇಟೆ ಗ್ರಾಮ ಆರಕ್ಕೆ ವಿವರ: ಬೆಲಿಯೂರು ಗ್ರಾಮ ವಂದು, ಉರಮಲೆ ಗ್ರಾಮ ವಂದು, ಕಾಡವಾಡಿ ಗ್ರಾಮ ವಂದು, ಪೆರ್ನೆ ಗ್ರಾಮ ವಂದು, ಬೆಳ್ಳಿಪಾಡಿ ಗ್ರಾಮ ವಂದು, ನೆಕ್ಕಲಾಡಿ ಗ್ರಾಮ ವಂದು, ಅಂತು ಗ್ರಾಮ ಆರು; ಸುಬ್ರಹ್ಮಣ್ಯದ ಪೇಟೆ ಗ್ರಾಮಗಳು, ಕಾಳತ್ತಿಕ್ಕೆ ಗ್ರಾಮ ವಂದು, ಮಜರೆಗಳು ವಂಭತ್ತಕ್ಕೆ: ಅದಿಕಾರ ವಂದು, ಪಂಜಯ ದೇವರ ಹಳ್ಳಿ ವಂದು, ಆಲಡಕ ಮರಕೂರು ವಂದು, ಮೂಡನೂರು ವಂದು, ಸುಬ್ರಹ್ಮಣ್ಯ ದೇವರ ಹಳ್ಳಿ ವಂದು, ಕಾಯಂಬಾಡಿ ವಂದು, ಬಳ್ಳಿಲ ವಂದು, ಕಾಳತ್ತಿಕ್ಕೆ ವಂದು, ಪುಚ್ಚಪಾಡಿ ವಂದು; ಅಂತು ಗ್ರಾಮಗಳು ನೂರ ಹತ್ತು, ಮಜರೆ ವಂಭತ್ತಕ್ಕೆ ಸಹಾ ಬೇರೀಜ ಕಂಠೀರಾಯಿ ಗ ೨೨,೪೨೧—೪—೧—೩, ಸುಂಕ ಕಾರಕ ಸಹಾ ಕಂಠೀರಾಯಿ ಗ ೧,೭೪೦—೭—೩—೦—೩. ಬ್ರಹ್ಮಾದಾಯ ಉತ್ತಾರ ಕಂಠೀರಾಯಿ ಗ ೭೧೭—೭—೧—೧. ಅಂತು ಕಂಠೀರಾಯಿ ಗ ೨೪,೮೭೮—೮—೨—೦—೩. ವಸೂಲು ಆಗುವಂಥಾ ಈ ಬೇರೀಜಿನ ಶೀಮೆಯನ್ನು ಕಾಡಗಿನ ತಾಲೂಕಿಗೆ ದಾಖಲು ಮಾಡಿಸಿ, ನೀವು ಸಮಸ್ತ ಜನರು ಕಾಡಗಿನ ಸಂಸ್ಥಾನದ ಸ್ವಾಧೀನವಾಗಿ ನಡದು ಕೊಂಡು ಇರುವಂತೆ, ಹುಕುಂ ಕೊಟ್ಟು ಇದ್ದ್ಯಕಾದದರಿಂದಾ ಆ ಮೇರೆಗೆ ಸನ್ ೧೨೧೪ ಫಸಲಿಗೆ, ರಕ್ತಾಕ್ಷಿ ಸಂವತ್ಸರದ ಜಲಾಯಿ ತಾರೀಕು ೧೩ ರ ಆರಭ್ಯಯ ನಿಂಮ ನಿಂಮ ಕಡೆಯಿಂದಾ ಸರಕಾರಕ್ಕೆ ಸಲ ತಕ್ಕಂಥಾ ಹಣ ಮಾಹೆಯವನು ಕಾಡಗಿನ ತಾಲೂಕಿಗೆ ಕೊಟ್ಟು ಕೊಂಡು, ಈ ವರೆಗೆ ಕುಂಪನಿ ಸರಕಾರದಲ್ಲು ಯಾವ ಪ್ರಕಾರ ನಡದು ಕೊಂಡು ಇದ್ದೀರ್ಯೊ, ಆ ಮೇರೆ ಯಾವದೊಂದು ಕೆಲಸದ ಬಗ್ಯೆ ಆದಾಗ್ಯೂ, ಅವರ ಸ್ವಾಧೀನವಾಗಿ ನಡದು ಕೊಂಡು ಬಾಹುದು. ಹಾಲುಗುದಸ್ತಾ ಸನ್ ೧೨೧೩ ನೆ ಫಸಲಿ, ರುಧಿರೋದ್ಗಾರಿ ಸಂವತ್ಸರಕ್ಕೆ ನಿಂಮ ನಿಂಮ ಕಡೆಯಿಂದಾ ಸರಕಾರಕ್ಕೆ ಸಲ ತಕ್ಕ ಹಣ ಕಾಸು ಯೇನಾದು ಇದ್ದಾಗ್ಯೂ, ಕುಂಪನಿ ಸರಕಾರದಲ್ಲು ವಸೂಲಾಗಿ ಇದೆ ಯಂದು, ರಾಜಶ್ರೀ ಕಾಡಗಿನ ಧಾರೆಗಳಿಗೆ ತಿಳಿಸಿ ಇದ್ದಿತಾದದರಿಂದಾ, ಆ ಮೇರೆಗೆ ಹಾಲುಗುದಸ್ತಾ ಬಾಕಿ ಹಣ ಯೇನು ಇದ್ದಾಗ್ಯೂ, ನಿಂಮ ಕಡೆಯಿಂದಾ ವಸೂಲು ಮಾಡ ತಕ್ಕ ನಿಲ್ಲ, ಮಾಗ್ಣೆ ಶ್ಯಾನುಭಾಗ ವ[1] ಚರದಾಯ ಸಾಯರ ಶ್ಯಾನುಭಾಗ ವಗೈರೆ ನಿಂಮ ನಿಂಮ ಮಾಗ್ಣೆ ಸುಂಕದ ಲೆಖ್ಖು ಸಹಾ ಯೇನಾದು ಇದ್ದಾಗ್ಯೂ, ಕಾಡಗಿನ ಸಂಸ್ಥಾನದಿಂದಾ ಬಂದಿರುವ ಕರ್ಣೀಕರ ಬಳಿಯು ಬರೆಸಿ ಕೊಟ್ಟು, ಅವರು ಹೇಳಿದ ರೀತಿ ನಡ ಕೊಂಡು ಇರುವದು" ಯಂಬದಾಗಿ ರಕ್ತಾಕ್ಷಿ ಸಂವತ್ಸರದ ಶ್ರಾವಣ, ಶು ೮ ಸೋಮವಾರ, ಬರದ್ದು.

ಈ ಮೇರೆಗೆ ಇನ್ತಿಹಾನಾಮೆಯನ್ನು ಆ ಕಲ್ಲೆಕ್ಟರ ಸಾಹೇಬರು ಬರೆಸಿ, ಕರ್ಣೀಕ ಸುಬ್ಬಯ್ಯಗೆ ಕೊಟ್ಟು, ಆ ತಾಲೂಕಿನಲ್ಲು ಇರುತ್ತಿದ್ದ ತಹಶಿಲುದಾರ ಮುಂತಾದವರಿಗೆ ಚಾಕ್ರಿ ಸಹಾ ಬರೆಸಿ, ಆ ಶೀಮೆಯನ್ನು ಕಾಡಗಿನ ಸಂಸ್ಥಾನಕ್ಕೆ ಶೇರಿಸಿ, ಕುಂಪನಿ ಸರಕಾರದಿಂದಾ ಬಿಟ್ಟು ಕೊಟ್ಟು, ರಕ್ತಾಕ್ಷಿ ಸಂವತ್ಸರದ ಶ್ರಾವಣ ಶು ೯ ಲು ಕಲ್ಕ್ಟರ ರೇವಿನ್ಸಾ ಸಾಹೇಬರವರು ರಾಜರವರಿಗೆ ಬರೆಸಿ ಕಳುಹಿದ ಕಾಗದದಲ್ಲಿ: "ಮಂಗಲೂರ ತಾಲೂಕಿನಿಂದಾ, ಇಂಗ್ರೇಜ ಸರಕಾರದ ಹುಕುಂ ಪ್ರಕಾರ, ತಂಮ ಸಂಸ್ಥಾನಕ್ಕೆ ಶೇರಿಸಿ ಕೊಡುವ ಶೀಮೆ ಲೆಕ್ಕ ಹಾಕ ಯಾವತ್ತು ಕರ್ಣೀಕ ಸುಬ್ಬಯ್ಯಗೆ ಬರೆಸಿ ಕೊಟ್ಟು, ಆ ಪ್ರಕಾರ ಮಾಗ್ಣೆಗಳು ತಂಮ ಸ್ವಾಧೀನವಾಗಿ ನಡೆಯ ತಕ್ಕ ಬಗ್ಯೆ, ಕಚ್ಯೇರಿ ಇಲಾಖೆಯಿಂದಾ ಹಿಂಗದಿಸಿ ಇರುವ ಮಾಗ್ಣೆ ಗ್ರಾಮಗಳ ರೈತ ವಗೈರೆ ಸಮಸ್ತ ಜನರಿಗೂ, ತಂಮ ಸಂಸ್ಥಾನದ

[1] ಮತ್ತು.

ಸ್ವಾಧೀನವಾಗಿ ನಡ ಕೊಂಡು ಇರುವಂತೆ, ಇಸ್ತಿಹಾರ್ನಾಮೆ; ಈ ಬಗ್ಯೆ ರೈತ ಜನರಂನು ತಂಮ ಕಡೆ ಕರ್ಣಾಟಕ ಸುಬ್ಬಯ್ಯನ ತಾಬೆ ಮಾಡಿ ಕೊಡುವಂತೆ, ತಹಸೀಲುದಾರಗೆ ತಾಕೀತು ವಂದು; ಬೇರೀಜ ವಿಂಗಡಿಸಿ ಇರುವ ಬಗೆ, ಗ್ರಾಮವಾರು ವಿವರ ಪ್ರಕಾರ ಬೇರೀಜ ಪಟ್ಟಿ ವಂದು ಸಹಾ, ಬರಸಿ ಕಳುಹಿಸಿ ಇದ್ಧೇವೆ," ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಆ ಬಳಿಕ ಮಹಾರಾಜರವರು ಬರೆಸಿದ ಇಸ್ತಿಹಾರ್ನಾಮೆ ವಿವರ: "ನಂಮ ಅರಮನೆ ಶೀಮೆಗೆ ಕೊಡೆಯಾಲದ ತಾಲೂಕಿನ ಶೀಮೆಯಿಂದಾ ಶೇರಿದ ಸುಬ್ರಹ್ಮಣ್ಯದ ಮಳಿಕವಾದ, ಕಡಬದ ಮಳಿಕವಾದ, ಬೆಳ್ಳಾರೆ, ಅಮರ, ಕಾಸಪಾಡಿ ಮಳಿಕವಾದ, ಬಂಡಾಡಿ ಮಾಗಣೆ ಪಂಜಯ, ಸುಮೊಗರು, ಬಾರಿ, ಬೇಲೂರು, ಮುತಕೂರು, ಅಡೂರು, ಸಾವಿರಾಳ ಪಟ್ಟ ಮುಂತಾದ ಶೀಮೆ ಮೊಕಸ್ತರು,[1] ಗೌಡಗಳು, ಪ್ರಜೆಗಳು ಮುಂತಾದವರಿಗೆ ಅಪ್ಪಣೆ ಕೊಡಿಸಿದ ನಿರೂಪದ ಕ್ರಮವೆಂತೆಂದರೆ: ಇಂಗ್ರೇಜ ಕುಂಪನಿ ಸರಕಾರದ ದ್ಯಾಸ್ತಿ ಮೆಹೆರಬಾನಿಗೆ ನಿಶಾನಿ ಆಗಿ, ಬಂಗಾಳದ ನವಾಬ ಮೊಲಿ ಉಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಮಾರ್ಕ್ವಿಸ್ ವಲ್ಲೆಜಲಿ ಸಾಹೇಬ್ ಬಹಾದ್ದರವರ ಹುಕುಂ ಪ್ರಕಾರ, ಮ್ಯಲೆ ಸದರಿ ಬರದು ಇರುವ ಶೀಮೆಯಂನು ಕೊಡೆಯಾಲದ ಇಲಾಖೆ ಶೀಮೆಯಿಂದಾ ವಿಂಗಡಿಸಿ ಬಂಗಾಳದ ದೊಡ್ಡ ಸಾಹೇಬ್ ಬಹಾದ್ದರವರ ಕಡೆ ವಕೀಲರಾಗಿ ಬಂದು ಇರುವ ರಾಜಶ್ರೀ ಕಪಿತಾನ್ ದಿನಿಸ್ ಮಾಹಿನಿ ಸಾಹೇಬರ ಮಾರ್ಫತಿನಿಂದಾ ನಂಮ ಶೀಮೆಗೆ ಶೇರಿಸಿ, ಸರಹದ್ದು ಬಂದುಬಸ್ತು ಮಾಡಿಸಿ ಕೊಡಿಸಿ ಇರುವದರಿಂದಾ, ಈ ವಿವರ ತಿಳಿದು, ಇಂಗ್ರೇಜ ಕುಂಪನಿ ಸರಕಾರದಿಂದಾ ನಿಂಮ ಸುಖದುಃಖವಂನು ವಿಚಾರಿಸಿ, ನಿಂಮಿಂದಾ ಆ ಸರ್ಕಾರಕ್ಕೆ ಕಾಲಂಪ್ರತಿಯಲ್ಲು ವಾಜಬಿ ಸಲ ತಕ್ಕ ಕಂದಾಯ ಕಾಣಿಕೆ ವಸೂಲು ಮಾಡಿ ಕೊಂಡು, ನಿಂಮಂನು ಯಾವ ಮೇರೆ ಕಾಪಾಡುತಾ ಇದ್ದರ್‍ಯೋ, ಅದೇ ಮೇರೆ ನಿಂಮಿಂದಾ ನಂಮ ಅರಮನೆಗೆ ಕಾಲಂಪ್ರತಿಯಲ್ಲು ಬರುವಂಥಾ ಕಂದಾಯ ಕಾಣಿಕೆಯಂನು ಶಿಷ್ಟಾಚಾರ ಪ್ರಕಾರಕ್ಕೆ ವಸೂಲು ಮಾಡಿಸಿ ಕೊಂಡು, ನಿಂಮ ಸುಖದುಃಖವಂನು ಸಹಯ ಸ್ಥಿತಿ ಆಗಿ ವಿಚಾರಿಸಿ ಪರಿಪಾಲನೆ ಮಾಡುವ ಬಗ್ಯೆ, ನಮಗೆ ಬಹಳ ಸಂತ್ಯೋಷ ಇರುವದರಿಂದಾ, ನೀವು ಸಮಸ್ತರು ನಂಮ ಅರಮನೆ ಉಪ್ಪಿಗೆ ಸರಿಯಾಗಿ ಭಕ್ತಿಯಿಂದಾ ನಡದು ಕೊಂಡು, ನಂಮ ಅರಮನೆಗೆ ಕಾಲಂಪ್ರತಿಯಲ್ಲು ನಿಂಮಿಂದಾ ಬರುವಂಥಾದಂನು ಇಂಗ್ರೇಜ ಸರಕಾರದಿಂದಾ ನಿಗದಿ ಆದ ಶಿಷ್ಟಾಚಾರ ಪ್ರಕಾರಕ್ಕೆ ವಾಜಬಿ ಆಗಿ ಕೊಟ್ಟು ಕೊಂಡು, ಪ್ರಜೆಗಳಿಗೆ ಸಲುವಂಥಾದ್ದಂನು ಪ್ರಜೆಗಳು ಅನುಭವಿಸಿ ಕೊಂಡು, ಸುಖರೂಪಿನಲ್ಲಿ ಅವರ ಪುತ್ರ ಪೌತ್ರ ಪಾರಂಪರ್ಯವಾಗಿ ಸಂತ್ಯೋಷದಿಂದಾ ಬದುಕ ಬೇಕೆಂಬದಾಗಿ, ನಮಗೆ ಬಹಳ ಖುಷಿ ಇದೆ. ಆದ್ದರಿಂದಾ ಈ ವಿವರವಂನು ನಿಮಗೆ ನಿರೂಪದಲ್ಲು ಬರೆಸಿ, ಕರ್ಣಾಟಕ ಸುಬ್ಬಯ್ಯನಿಗೂ ಮೊಕ್ತಾ ಅಪ್ಪಣೆ ಕೊಟ್ಟು ಕಳುಹಿಸಿ ಇದೆ. ಯಲ್ಲಾ ವಿವರವು ಅವನ ಮುಖವಚನದಿಂದಾ ತಿಳಿದು, ನಿಮಗೆ ಸಂತ್ಯೋಷವಾದೀತು. ಟಿಕ್ಕವರು ದೊಡ್ಡವರು, ಆಳು ಅದನಾ[2] ಮುಂತಾದ ಸಮಸ್ತ ರೈತರು ಹಿಂಮತ್ಪಾಲಾಲಗಿ[3] ಸ್ವಾಮಿಕಾರ್ಯಧುರಂಧರರಾಗಿ ನಡ ಕೊಳ್ಳ ಬೇಕು. ಮೇಲಾದ ನಂಮ ಅರಮನೆ ಶೀಮೆ ರೈತರು ಯಾವತ್ತು ವಂದು ತಾಯಿ ಮಕ್ಕಳ್ಯಾಪಾದಿ ಅನ್ಯೋನ್ಯದಲ್ಲಿ ಬಾಯೋಟಾರ ದ್ಯಾಸ್ತಿಯಿಂದಾ ಪಾಕು ವಾಜಬಿ ಲೇವಾದೇವಿ ಸಹಯ ಸ್ಥಿತಿ ಇದ್ದ ಮೇರೆ, ಕೊಡು ಕೊಳ್ಳುವಲ್ಲಿ ವಿಹಿತ ಇದ್ದ ಪ್ರಕಾರಕ್ಕೆ, ಕೂಡಿ ನಡ ಕೊಳ್ಳ ಬೇಕು. ಇದೇ ಮೇರೆ ಲೇವಾದೇವಿಯಲ್ಲಿ ಇಂಗ್ರೇಜ ಸರಕಾರದ ಶೀಮೆ ರೈತರೂ ನೀವೂ ಭೇದವಿಲ್ಲದೆ ಯೆಕರಾಜ್ಯವಾಗಿ ಅನ್ಯೋನ್ಯದಿಂದಾ ಹೆಂಣು ಮದುವೆ ಮಾಡಿ ಕೊಡುವಲ್ಲಿ, ಮದುವೆ ಮಾಡಿ ಕೊಂಡು ತರುವಲ್ಲಿ, ವ್ಯಾಪಾರ ಕೊಡುವಲ್ಲಿ ತರುವಲ್ಲಿ, ಲೇವಾದೇವಿ ಯಥಾಸ್ಥಿತಿ ಆಗಿ, ನಡದು ಕೊಳ್ಳ ಬೇಕು. ಈ ಮಾಗಣೆದಲ್ಲಿ ಅಪ್ಪಣೆ ಪ್ರಕಾರ ನಡದವರಿಗೆ ಆರೈಕೆ ಮಾಡಿ, ರಕ್ಷಣೆಯ ಮಾಡುವಂಥಾದ್ದಕ್ಕೆ ನಾವು ಬಹಳ ರಜಾಮಂದಿಯಿಂದಾ ಖುಷಿ ಆಗಿ ಇದ್ಧೇವೆ. ಮೇಲೆ ಬರದು ಇರುವ ಮಾರ್ಗ ಬಿಟ್ಟು, ತಂಮ ತಂಮ ಯಕ್ತಯಾರಿಕೆಯಿಂದಾ, ಮನಸು ಬಂದಂತೆ, ಹಿಂಮತ್ಪರಾಮಶನ ಕೈಯಿಂದಾ ಮಾಡುವದು, ಬಾಯಿಂದಾ ಹೇಳುವದು, ಹಿಂಮತ್ಪರಾಮರ ದಾಸ್ತಿ ಮುಲಾಜು[4] ಮಡಗುವದು, ಅರಮನೆಗೆ ಸಲುವಂಥಾ ವಡವೆ ಕೊಡದೆ, ತಕರಾರು ಮಾಡುವದು, ಕೊಡುವಂಥವರಿಗೆ ಕೊಡದ ಹಾಗೆ ಅಡ್ಡಿ ಮಾಡುವದು, ಅರಮನೆ ಶೀಮೆ ರೈತರಿಗಾಗಲಿ, ಇಂಗ್ರೇಜ ಕುಂಪನಿ ಸರಕಾರದ ಶೀಮೆ ರೈತರಲ್ಲಿ ಆಗಲಿ, ಕೊಡುವಂಥಾ ವಡವೆ ಕೊಡದೆ, ಕೊಡದಂಥಾ ವಡವೆ

1 ಮುಚ್ಚಯರ್ಥರು. 2 ತಿಗವರಿ ಬದವ. 3 ಉಪ್ಪಿಗೆ ಬೇರೆ ಬಗೆಯದೆ. 4 ದಾಕ್ಷಿಣ್ಯ.

ಕೊಡಬೇಕು ಯೆಂತಾ ಕರಾರು ಮಾಡುವದು, ಲೇವಾದೇವಿಯಲ್ಲಿ ಸುಳ್ಳು ಸಟೆ, ದಗಲ್‌ಬಾಜಿ, ವಿಶ್ವಾಸಘಾತಕ, ಕಳ್ಳತನ ಮಾಡಿ, ಸರಹದ್ದಿನಲ್ಲಿ ಈ ಕಡೆ ಆಗಲಿ, ಆ ಕಡೆ ಆಗಲಿ, ಜುಲುಮೆ ಜಾಸ್ತಿ ತಂಟೆ ತಕರಾರು ಬಾಧಿ ಕಷ್ಟದರ ಹೇಳಿ, ನ್ಯಾಯ ಮಾಡುವದು, ಇಂಥಾ ಅನ್ಯಾಯದ ಮಾರ್ಗವಿಡಿದು ಹೋಗುವಂಥಾ ದುಷ್ಟ ಜನರ ಮೇಲೆ ನಂಮ ದಯ ಎಳ್ಳಿಷ್ಟಾಗ ಬರಲಿಕ್ಕಿಲ್ಲಾ. ಇದರಿಂದಾ ಅವರಿಗೆ ಸುಖ ಬಾರದು, ಯೆಂಬದಂನು ದುಷ್ಟ ಜನರು ತಿಳಿದು, ಈ ಅಲ್ಲದ ನಡತೆ ಬಿಟ್ಟು, ಒಳ್ಳೇ ಮಾರ್ಗದಲ್ಲು ನಡದು, ನಂಮ ದಯಕ್ಕೆ ಪಾತ್ರರಾಗಿ, ನಂಮ ಉಪ್ಪಿಗೆ ಹಲಾಲಾಗಿ, ನಂಮ ಸರಕಾರದ ಖೈರಖಾ ಆಗಿ ಇರ ಬೇಕು. ಅವರಂಥ ಆರೈಕೆ ಮಾಡ ಬೇಕೆಂಬದಾಗಿ, ಅವರ ಸುಖ ದುಃಖ ವಿಚಾರಿಸಿ, ಅವರ ನಡತೆ ಇದ್ದಂತೆ ಆರೈಕೆ ಮಾಡ ಬೇಕೆಂಬದಾಗಿ, ದರಿಯಾಪ್ತು ಮಾಡಲಾಯಿತು. ಅಲ್ಲಿ ಅಮಲು ಮಾಡುವಂಥಾ, ವ[1] ಹಾರುಪತ್ಯ ಮಾಡುವಂಥಾ, ವ ಮೊಕ್ತೇಸರು[2] ಸಹಾ ನಿಂಮ ಸುಖದುಃಖ ದಾದ್‌ಫಿರ್ಯಾದಿ ವಿಚಾರಿಸದೆ, ನಿಮಗೆ ದುಃಖ ಕೊಟ್ಟದ್ದುಂಟಾದರೆ, ಆಲಾ ಆಗಲಿ, ಅದನಾ ಆಗಲಿ, ಆ ಫಿರ್ಯಾದಿ ತೆಗದು ಕೊಂಡು ಬಂದು, ಸಂನಿಧಾನದಲ್ಲಿ ಅರಿಕೆ ಮಾಡಿದರೆ, ಅವನ ಸತ್ಯಸ್ಥಿತಿ ಇದ್ದ ಮೇರೆ, ಮಹಾದೇವ ಮೆಚ್ಚುವಂತೆ, ದರಿಯಾಪ್ತು ಮಾಡಲಾಯಿತು, ಯೆಂಬದ ನಿಶ್ಚಯ ತಿಳಿದು, ನಂಮ ಅಪ್ಪಣೆ ಪ್ರಕಾರ ಕಾಸರ್ಗೋಡ ಸುಬ್ಬೆಯನು ಮೇಲಾದ ವಿವರ ಯಾವತ್ತು ಹೇಳಿ ತಿಳಿಸಲಾಗಿ, ನಿಂಮ ಮನಸಿಗೆ ಸಂತೋಷವಾಯಿತು," ಯೆಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಆ ಬಳಿಕ ಇದೇ ಸಂವತ್ಸರದ ಭಾದ್ರಪದ ೧೨ ನೆ ತಾರೀಕಿನಲ್ಲು ಬಂಗಾಳದ ಲಾರ್ಡ್ ಮಾರ್ಕ್ವಿಸ್ ವೆಲ್ಲೆಜಲಿ ಸಾಹೇಬ ಬಹಾದ್ದರವರಿಗೆ ಮಹಾರಾಜರವರು ಬರೆಸಿ ಕಳುಹಿಸಿದ ಕಾಗದದಲ್ಲಿ: "ದೊಡ್ಡ ಸರಕಾರದಿಂದಾ ನಮಗೆ ಇನಾಯಿತ ಮಾಡಿ ಇರುವ ಹೋಗಿನ ಶೀಮೆ ಲೆಖ್ಖದ ಬಗ್ಯೆ, ವಕೀಲ ಕಪಿತಾನ್ ಮಾಹಿನಿ ಸಾಹೇಬರ ಹಿಫಾರೆ ಮೇರೆ, ನಂಮ ಕಡೆ ಕಾಸರ್ಗೋಡ ಸುಬ್ಬೆಯಿನ ಕೊಡಿಯಾಲದ ಕಡೆಗೆ ರವಾನೆ ಮಾಡಿ ಇದ್ದೆವು. ಅಲ್ಲಿ ಕಲ್ಲೆಕ್ಟರ ಜಾನ್ ರೇವಿನ್‌ಶಾ ಸಾಹೇಬರವರು ಆ ಶೀಮೆ ಲೆಖ್ಖವಂನು ನಂಮ ಕಾಸರ್ಗೋಡ ಸುಬ್ಬೆಯಿಗೆ ದಾಖಲ್ ಬರೆಸಿ ಕೊಟ್ಟು, ಆ ಶೀಮೆ ರೈತ ಮುಂತಾದ ಯಾವತ್ತು ಜನರು ನಂಮ ಹುಕುಮಿನ ಒಳಗೆ ನಡಕೊಳ್ಳ ತಕ್ಕ ಬಗ್ಯೆ ಒಂದು ಇಸ್ತಿಹಾರನಾಮಾ ಬರ ಕೊಟ್ಟು, ಸನ್ ೧೨೪೯ ನೆ ಹಿಜರಿ, ಜಮಾದಿಲ್ ಅವಲ್ ೯ ನೆ ತಾರೀಕಿನಲ್ಲು, ಇಲ್ಲಿಗೆ ಅದರ ನಕಲಂನು ರವಾನೆ ಮಾಡಿ ಇದ್ದರು. ಇದಲ್ಲದೆ ಆ ಶೀಮೆಯಿಂದಾ ಹರಕು ಸಂವತ್ಸರ ವಸೂಲು ಆದ ಹಣವಂನು ನಮಗೆ ಕೊಡುವ ಹಾಗೆ, ಮದರಾಜಿನ ಗವರ್ನರ್ ಸಾಹೇಬರವರು ತಾಕೀತು ಬರೆಸಿ ಇರುವದಂನು ಆ ವಕೀಲ ಸಾಹೇಬರವರ ಮುಖವಚನದಿಂದಾ ತಿಳಿಯ ಬಂತು. ಈ ದೌಲತ್ತು ಕೊಡುವಂಥಾದ್ದು ಸರಫರಾಜ ಮಾಡುವಂಥಾದ್ದು ಯಾವತ್ತು ತಂಮ ಸರಪರಸ್ತ ಮೆಹೆರ್ಬಾನಿಗಿಯಿಂದಾ ಯೆಂಬದು ನಮಗೆ ನಿಶ್ಚಯವಹದೆ. ನಾವು ಯೆಲ್ಲಿತನಕಾ ತಾರೀಫು ಮಾಡಿಯೇವು. ಅದರ ತಾರೀಫು ನಂಮಿಂದಾ ಪೂರ್ತಿ ಆಗುವದಿಲ್ಲಾ ಯೆಂಬದಾಗಿ, ಬರೆಸಿ ಕಳುಹಿಸಿ ಕೊಟ್ಟರು.

ಇದೇ ತಾರೀಕಿನಲ್ಲು ಮದರಾಜಿನ ಗವರನರ್ ಲಾರ್ಡ್ ಉಲಿಯಂ ಬೆಂಟಿಂಗ್ ಸಾಹೇಬ ಬಹಾದ್ದರವರಿಗೆ[3] ಬರೆಸಿ ಕಳುಹಿದ ಕಾಗದದಲ್ಲಿ: "ನವಾಬ ಮಾಲಿವುಲ್ ಅಲಕಾಬ್ ಅಷರಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಜಲಿ ಸಾಹೇಬ ಬಹಾದ್ದರವರ ಹುಕುಂ ಪ್ರಕಾರ, ವಕೀಲ್ ಕಪಿತಾನ್ ದಿವಸ ಮಾಹಿನಿ ಸಾಹೇಬ ಮೆಹೆರ್ಬಾನರವರು ವಕಾಲತ್ತಿನ ಮಾದದ ಮೇಲೆ ಮೊಕರರು ಆಗಿ, ಇಲ್ಲಿಗೆ ಬಂದು, ಆ ಲಾರ್ಡ್ ಸಾಹೇಬರವರ ಇನಾಯತನಾಮೆಯಂನು ಈ ದೋಸ್ತದಾರರಿಗೆ ಕೊಟ್ಟರು. ಅದರ ಕೈಫಿಯತ್ತಿನಿಂದ ಬಹಳ ಸಂತೋಷ ಸರಫರಾಜ ಹಾಸಲಾಯಿತು. ಬಂಗಾಳದ ಲಾರ್ಡ್ ಸಾಹೇಬರವರ ಹುಕುಂ ಪ್ರಕಾರ, ತಾವು ನಮಗೆ ಶೀಮೆ ಹೆಚ್ಚು ಮಾಡಿದ ವಿವರ ಆ ವಕೀಲ ಸಾಹೇಬರವರ ಮುಖವಚನದಿಂದಾ ತಿಳಿಯ ಬಂತು. ಅವರ ಹಿಫಾರೆ ಮೇಲೆ ವಕಾಲತನಾಮೆಯಂನು ನಂಮ ಕಾಸರ್ಗೋಡ ಸುಬ್ಬೆಯನ ಕೇಲಿ ಕೊಟ್ಟು, ಕೊಡಿಯಾಲದ ಕಡೆಗೆ ರವಾನೆ ಮಾಡಿದಲ್ಲಿ, ಅಲ್ಲಿ ಕಲ್ಲೆಕ್ಟರ್ ಜಾನ್ ರೇವಿನ್‌ಶಾ ಸಾಹೇಬರವರಂನು ಕಂಡು, ನಂಮ ಕಡೆ ಶೇರಿದ ಹೋಗಿನ ಶೀಮೆ ಲೆಕ್ಕ ಹಾತಕ ಯಾವತ್ತು ಬರ ಕೊಂಡು, ಇಸ್ತಿಹಾರುನಾಮೆ ತೆಗದು ಕೊಂಡು, ಮುತಕೂರಿಗೆ ಬಂದು ಇದ್ದಾನೆ. ಆ ಇಸ್ತಿಹಾರ್ನಾಮೆಯಿಂದಾ ಇಷ್ಟು ಶೀಮೆ ಕುಂಪನಿ ಸರಕಾರದ ಕಡೆಯಿಂದಾ ಕೊಡಗಿನ ಸಂಸ್ಥಾನಕ್ಕೆ ಶೇರಿತು, ಯೆಂಬದಾಗಿ ಯಾವತ್ತು ಜನರಿಗೂ ತಿಳಿಯ ಬಂತು. ಇದಲ್ಲದೆ ಈ ಹೋಗಿನ ಶೀಮೆ

1 ವ Hindusthani for and. 2 ಮುಖ್ತೇಸರು. 3 Lord William Bentinck.

ಯಿಂದಾ ಪರಾಕು ಸಂವತ್ಸರದ ವಸೂಲು ಆದ ಹಣವಂನು ನಂಮ ಸರಕಾರಕ್ಕೆ ಕೊಡುವಂತೆ, ತಾವು ಹುಕುಂ ಕೊಟ್ಟು ಇರುವಂಥಾದ್ದು ವಕೀಲ ಸಾಹೇಬರ ಮುಖಾಂತರದಿಂದಾ ತಿಳಿಯ ಬಂದು, ಬಹಳ ಸಂತೋಷವಾಯಿತು. ಈ ಹಣ ಪರಾಕು ಸಂವತ್ಸರದಲ್ಲಿ ದೊಡ್ಡ ಸರಕಾರದ ಖಜಾನೆಗೆ ದಾಖಲಾದಂಥಾದ್ದು, ಆ ದೊಡ್ಡ ಸರಕಾರದ ಖಜಾನೆಯಿಂದಾ ತೆಗದು ನಮಗೆ ಕೊಟ್ಟು ಇದ್ದೀರಿ. ಇದು ಬಹಳ ದೊಡ್ಡ ಮಾತು. ಈ ಮೆಹರಬಾನಿಗೆ ತಾರೀಫು ಯಷ್ಟು ಮಾಡಿದಾಗ್ಯೂ ತೀರಲಿಕ್ಕಿಲ್ಲಾ. ಅದುಕಾರಣ ಬರದು ಇದ್ದೇವೆ" ಯಂಬದಾಗಿ ದೊರೆಗಳು ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ ಅವರು ಬರೆಸಿ ಕಳುಹಿದ ಕಾಗದದಲ್ಲಿ: "ತಾವು ಕುಂಪನಿ ಸರಕಾರಕ್ಕೆ ಒಳ್ಳೇ ಹರಯಿತನ ಮಾಡಿ ಇರುವದರಿಂದಾ, ನವಾಬ ಮುಸ್ತತಾಬ್ ಮೊಲಿವುಲ್ ಅಲ್ಕಾಬ ಅಷ್ರಫುಲ್ ಅಷರಾಫ್ ಗವರ್ನರ್ ಜನರಾಲ್ ಸಾಹೇಬರವರ ಹುಕುಂ ಪರಕಾರ, ಕೊಡೆಯಾಲದ ತಾಲೂಕಿನಲ್ಲಿ ಕೆಲವು ಸೀಮೆಯಂನು ತಮಗೆ ಕೊಡುವ ಹಾಗೆ, ನಾವು ಒಂದು ತಾಕೀತು ಬರೆಸಿ ಕಳುಹಿಸಿ ಇದ್ದದ್ದು, ಅದು ಯಾವತ್ತು ತಮಗೆ ಪಸಂದು ಆದ್ದರಿಂದಾ, ನಂಮ ಮನಸಿಗೆ ಖುಷಿ ಆಯಿತು. ತಾವು ಬಹಳ ದ್ಯಾನತಿಯಿಂದ ಹಮ್ಮೇಶ ಇಂಗ್ರೇಜ ಸರಕಾರದ ಆಶ್ರಯ ಕಬೂಲು ಮಾಡಿ, ಕುಂಪನಿ ಸರಕಾರದ ಸಂಗಡ ಸಹಾಯವಾಗಿ ಇದ್ದದ್ದು, ಸರಕಾರದ ಸಹಾಯ ಬಹಳ ಸರಗರಮಿನಿಂದಾ[1] ಮಾಡಿದ್ದು ಯಾವತ್ತು ನಾವು ಕೇಳಿ, ನಂಮ ಮನಸಿನಲ್ಲಿ ತಾವು ತಂಮ ಪುತ್ರಪೌತ್ರರು ಸುಖದಿಂದಾ ಇರ ಬೇಕು ಯಂತಾ ಬೇಡಿ ಕೊಳ್ಳುತ್ತಾ ಇದ್ದೇವೆ. ತಾವು ಸಂತೋಷದಲ್ಲಿ ಇರುವಂಥಾದ್ದು ನಂಮ ಮನಸಿಗೆ ಬಹಳ ಖುಷಿ ಇದೆ" ಯಂಬದಾಗಿ, ಮದುರಾಜಿನ ಗವರ್ನರ್ ಸಾಹೇಬರವರು ಬರೆಸಿ ಕಳುಹಿಸಿ ಇದ್ದರು.

ಆ ಮೇಲೆ ಕೆಲವು ದಿವಸ ಕಳದ ಬಳಿಕ, ಸಂನ್ ೧೨೧೯ ನೆ ಹಿಜರಿ, ರಂಮಜಾನ್ ತಿಂಗಳಲ್ಲಿ, ಮೈಸೂರ ದರ್ಬಾರದಲ್ಲು ವಕೀಲರಾಗಿ ಇರುವ ಮಾರ್ಕ ಉಲ್ಕಿಸ್ ಸಾಹೇಬರವರು[2] ಬರದ ಕಾಗದದಲ್ಲಿ: "ಸರಹದ್ದಿನ ವಿಷಯದಲ್ಲಿ ತಮಗೆ ಸ್ವಲ್ಪ ಅಂದೇಶವಿದೆ ಯಂಬದಾಗಿ, ನಾವು ಕೇಳಿ ಇದ್ದೇವೆ. ಇದರ ಕಾರಣ ಸಾಹೇಬ ಮೆಹರಬಾನ್ ದ್ಯಾನತ್ವಾನ್ ಪೀಲ್ ಸಾಹೇಬ್[3] ಬಹಾದ್ದರವರಿಗೆ ತಂಮ ಬಳಿಗೆ ರವಾನೆ ಮಾಡ ಬೇಕೆಂಬದಾಗಿ, ಯೋಚನೆ ಮಾಡಿ ಇದ್ದೇವೆ. ಆ ಸಾಹೇಬರ ಕಂಡು ದ್ಯಾನತಿಯಿಂದಾ ಸರಹದ್ದಿನ ನ್ಯಾಯ ತೀರಿಸ ಬೇಕು. ತಾವು ಇರುವ ಜಾಗಾ ತಿಳಿಸ ಬೇಕು. ಈ ಕಾಗದದ ಜವಾಬು ಬರುತ್ತಲೆ, ಪೀಲ್ ಸಾಹೇಬರಂನು ರವಾನೆ ಮಾಡುತ್ತೇವೆ" ಯಂಬದಾಗಿ ಬರೆಸಿ ಕಳುಹಿಸಿದಲ್ಲಿ, ಅದಕ್ಕೆ ಜವಾಬಾಗಿ: ಸಂನ್ ೧೨೧೯ ನೆ ಹಿಜರಿ, ರಂಮಜಾನ್ ತಿಂಗಳು, ೧೭ ನೆ ತಾರೀಖಿನಲ್ಲು ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಸರಹದ್ದಿನ ವಿಷಯದಲ್ಲಿ ನಮಗೆ ಅಂದೇಶ ಇರುವದರಿಂದಾ, ಆ ನ್ಯಾಯ ತೀರಿಸುವದಕ್ಕೆ ಪೀಲ್ ಸಾಹೇಬ್ ಬಹಾದ್ದರವರ ಕಳುಹುತ್ತೇವೆ ಯಂಬದಾಗಿ, ತಾವು ಬರೆಸಿ ಇರುವದ ನ್ನೋಡಿದಲ್ಲಿ, ನಂಮ ಮನಸಿಗೆ ಬಹಳ ಸಂತೋಷವಾಯಿತು. ಕೆಲ ಸಬಬಿನಿಂದಾ ಸರಹದ್ದಿನಲ್ಲಿ ನಮಗೆ ಅಂದೇಶ ಇತ್ತು. ಇದಕಾರಣ ಜನರಾಲ್ ವಸಲಿ[4] ಸಾಹೇಬರಿಗೆ ಜಾಹೀರು ಮಾಡಿ ಇದ್ದೆವು. ತಮಗೆ ಮಾಲುಂ ಆಗಿ ಇದ್ದೀತು. ಈಗ ಪೀಲ್ ಸಾಹೇಬ ಮೆಹರಬಾನರವರು ಬರುತ್ತಾರೆ ಯಂಬದಾಗಿ, ಇಷಾರೆ ಮಾಡಿದರಿಂದಾ, ಬಹಳ ಖುಷಿ ಆಯಿತು. ಈ ದ್ಯಾನತ್ದಾರರು ಮಡಿಕೇರಿ ಕೋಟೆಯಲ್ಲಿ ಇರುತ್ತೇವೆ" ಯಂಬದಾಗಿ, ಬರೆಸಿ ಕಳುಹಿಸಿದರಿಂದಾ, ಅದಕ್ಕೆ ದರ ಜವಾಬಾಗಿ, ಶವಾಲು ತಿಂಗಳು, ೫ ನೆ ತಾರೀಖಿನಲ್ಲು, ಮಾರ್ಕ ಉಲ್ಕಿಸ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ. "ಸಾಹೇಬ ಮೆಹರಬಾನ ಪೀಲ್ ಸಾಹೇಬರವರು ಬರುತ್ತಾರೆಂಬದಾಗಿ, ತಂಮ ಮನಸಿಗೆ ಸಂತೋಷವಾದ ವರ್ತಮಾನವು, ಖೈರಿಯತ್ತಿನಿಂದಾ ಮಡಿಕೇರಿ ಕೋಟೆಯಲ್ಲಿ ಇರುವ ವರ್ತಮಾನವು, ಬರೆಸಿ ಇದ್ದದ್ದು ತಿಳಿಯ ಬಂತು. ಮಹಾದೇವನ ಅಪ್ಪಣೆಯಿಂದಾ ಆ ಸಾಹೇಬರು ಮೂರು ದಿವಸದಲ್ಲಿ ಇಲ್ಲಿಂದಾ ರವಾನೆ ಆಗುತ್ತಾರೆ; ತಂಮ ಮಿಲಾಕತ್ತು ಆಗಿ, ಖುಷಿ ಆಹಾರು" ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬಾಗಿ ಮಹಾರಾಜರು ಬರೆಸಿ ಕಳುಹಿದ ಕಾಗದಲ್ಲಿ: "ಪೀಲ್ ಸಾಹೇಬರು ಬರುವ ವರ್ತಮಾನ ಬರೆಸಿದ್ದು ತಿಳಿಯ ಬಂತು. ಅದರಿಂದಾ ನಂಮ ಮನಸಿಗೆ ಬಹಳ ಖುಷಿ ಆಯಿತು. ನಂಮ ಕಡೆ ಕರ್ಣೀಕ ಸುಬಬೋಯನಂನು, ಇದರುಗೊಂಡು ಕರತರುವ ಬಗ್ಗೆಯ, ಕಳುಹಿ ಇದ್ದೇವೆ. ಅವನು ಅವರ ಖಿದ್ಮತ್ತಿನಲ್ಲಿ ಹಾಜರಾಗಿ, ಅವರಿಗೆ ಬೇ

---

1 ಉತ್ಸಾಹದಿಂದಾ. 2 Mark Wilks. 3 Mr. Peile. 4 General Wellesley.

ತದ ಹಾಗೆ ತಿದ್ದುತಕ್ಕು ನೀತಿ ಫಾಯದಾ ಹಾಸಲ್ ಮಾಡ್ಯಾನು. ಆ ಸಾಹೇಬರು ಇಲ್ಲಿಗೆ ಬಂದಲ್ಲಿ, ಅವರ ಮಿಲಾಖತಿನ ಫಾಯಿದೆಯಿಂದಾ ಖುಷಿ ಆದ್ಯೇವು" ಯಂಬದಾಗಿ, ಬರೆಸಿ ಕಳುಹಿದರು.

ಆ ಬಳಿಕ ಮೈಸೂರ ದರ್ಬಾರದಲ್ಲಿ ಇರುವ ಪೀಲ್ ಸಾಹೇಬರವರು, ಕಲಿಸಂದ ೪೯೦೫ ನೆ ರಕ್ತಾಕ್ಷಿ ಸಂವತ್ಸರದ ಪುಷ್ಯ ಬ ೪ ಲು, ಮಡಿಕೇರಿಗೆ ಬಂದು, ಮಹಾರಾಜರವರ ಮಿಲಾಕತ್ತು ಆಗಿ, ಜನರಾಲ್ ಪವಲಿ ಸಾಹೇಬರವರು ರಾಜರವರಿಗೆ ಬರದು ಇದ್ದ ಕಾಗದವಂನು ಕೊಟ್ಟರು. ಆ ಕಾಗದದಲ್ಲಿ: "ಮೊದಲು ಸರಹದ್ದಿನ ಅಖಿಪರಾಯವಾಗಿ ತಾವು ಬರೆಸಿ ಕಳುಹಿಸಿ ಇದ್ದದದ್ದು ಜ್ಞಾಪಕ ಇದ್ದೀತು. ಸರಹದ್ದಿನ ವ್ಯಾಜ್ಯ ತೀರಿಸುವ ಬಗ್ಯೆ, ಈ ವರಿಗೆ ತಾಮಸವಾದ ಕಾರ್ಣಾವ್ಯೇನು ಯಂದರೆ: ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದಾ ಯಾರಿಗಾದರೂ ಸರದಾರರಿಗೆ ಕಳುಹಿಸುವ ಬಗ್ಯೆ ಸಂದರ್ಭ ಆಗಲಿಲ್ಲಾ. ಈಗ ಸಾಹೇಬ ಮೆಹೆರ್ಬಾನ್ ದೋಸ್ತಾನ್ ಪೀಲ್ ಸಾಹೇಬ್ ಬಹಾದ್ದರವರ, ಸರಹದ್ದಿನ ವ್ಯಾಜ್ಯ ತೀರಿಸುವ ಬಗ್ಯೆ, ಕಳುಹಿಸಿ ಇದ್ಧೇವೆ. ಆ ಸಾಹೇಬರು ಈ ಕಾಗದವಂನು ತಮಗೆ ತಲಪಿಸ್ಯಾರು. ಅವರು ಬಹಳ ಉಂಮದಾ ಸಾಹೇಬರು, ಸತ್ಯದಿಂದಾ ನಡವಂಥಾ ದೋಸ್ತದಾರರಿದ್ಧಾರೆ. ಯಲ್ಲಾ ಬಗೆಯಲ್ಲು ತಾರೀಫು ವುಳ್ಳಂಥವರು. ತಾವು ಇತಬಾರಿ ಮಡಗುವಂಥಾ ಲಾಯಖಿನವರಿದ್ಧಾರೆ[1]. ಈಗ ಸರಹದ್ದಿನ ತಕರಾರು ಪೀಲ್ ಸಾಹೇಬರು ತೀರಿಸುವಲ್ಲಿ, ಉಭಯ ಕಡೆಯಿಂದಲೂ ಉಂಮದಾ ಜನರು ಬೇಕಿಲ್ಲಾ. ಇಲ್ಲಿ ಜನರು ಮನಸಿನ ದೋಸ್ತಿಯಿಂದಾ ಹೇಳುತ್ತಾರೆ: ಮನಸಿನಲ್ಲಿ ಇರುವ ಮೊದಲಿನ ಕಪಟ ದೂರ ಮಾಡ ಬೇಕು, ದೋಸ್ತಿ ಹಾಸಲ್ ಮಾಡ ಬೇಕು, ಇದರಿಂದಾ ಉಭಯ ಕಡೆಗೂ ಸುಖವಿದೆ, ಉಭಯ ಕಡೆ ರೈತರಿಗೂ ಫಾಯದೆ ಉಂಟು, ಇಲ್ಲಿ ಜನರು ಹೇಳುತ್ತಾರೆ. ಇದು ಹೊರತು ಇಂನಾಂದು ಯೋಚನೆ ಮನಸಿನಲ್ಲು ಇಲ್ಲಾ. ತಾವು ಸತ್ಯದಿಂದಾ ನಡಿಯುವಂಥವರು, ಬುದ್ಧಿ ದೊಡ್ಡದ್ದಾಗಿ ಇರುವಂಥವರು, ಮೇಲೆ ಬರದ ಮೇರೆ ಅಮಲು ಮಾಡಿಸ್ಯಾರಿ. ಈ ದೋಸ್ತುದಾರರು ಈ ಬರದು ಇರುವ ವಿವರ ದೊಡ್ಡದು ಮಾಡ ಬಾರದು. ತಾವು ನಿಶ್ಚಯವಾಗಿ ತಿಳಿಯ ಬೇಕು: ಮೈಸೂರ ಅರಸುಗಳ ಸರಕಾರವೂ ತಂಮ ಸರಕಾರವೂ ತಂಮೊಳಗೆ ಯೈಕ್ಯತರವಾಗಿ ದೋಸ್ತಿಯಿಂದಾ ಕೂಡಿ ಇರ ಬೇಕು ಯಂಬದಾಗಿ, ನವಾಬ ಮೂಲಿವುಲ್ ಅಲ್ಕಾಬ್, ಅಷರಫುಲ್ ಅಷರಾಫ್ ಗವರ್ನರ್ ಜನರಾಲ್ ಸಾಹೇಬ್ ಬಹಾದ್ದರವರ ಮನಸಿನಲ್ಲಿ ಈ ಮೇರೆ ಇದೆ" ಯಂಬದಾಗಿ ಬರೆಸಿ ಇದ್ದರು.

ಇದಕ್ಕೆ ದರ ಜವಾಬಾಗಿ ವೀರರಾಜ್ಯೇಂದ್ರ ವಡೆಯರವರು ಪುಷ್ಯ ಬ ೧೦ ಲು ಬರೆಸಿ ಕಳುಹಿದ ಕಾಗದದಲ್ಲಿ: "ಸಾಹೇಬ ಮೆಹೆರ್ಬಾನ್ ಜಾನ ಹಾನಿ ಪೀಲ್ ಸಾಹೇಬರವರು[2] ಬಂದು, ತಂಮ ಮೆಹೆರ್ಬಾನಗಿ ಕಾಗದ ನಮಗೆ ಕೊಟ್ಟರು. ಅದಂನು ನೋಡಿದಲ್ಲಿ ಪೀಲ್ ಸಾಹೇಬರವರು ಸರಹದ್ದಿನ ವ್ಯಾಜ್ಯ ತೀರಿಸಿ, ಮೈಸೂರ ಅರಸುಗಳ ಸರಕಾರಕ್ಕೂ ತಂಮ ಸರಕಾರಕ್ಕೂ ದೋಸ್ತಿ ಪಾಯಾ ಸಾಬೂತು ಮಾಡುವದರಿಂದಾ, ಉಭಯ ಕಡೆ ರೈತರಿಗೂ ಸುಖವೂ, ಫಾಯಿದೆಯೂ ಸಹಾ ಇದೆ ಯಂಬದಾಗಿ, ಬರೆದಿದ್ದು ತಿಳಿಯ ಬಂತು. ನಂಮ ಮನಸಿಗೆ ಸಂತೋಷವಾಯಿತು. ಮೊದಲು ಟೀಪು ಸುಲ್ತಾನರಿಗೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಸಲ್ಲಾ ಆದ ಸಮಯದಲ್ಲಿ, ಇಂಗ್ರೇಜ ದೊಡ್ಡ ದೊಡ್ಡ ಸರದಾರರು ಕೊಡಗಿನ ಶೀಮೆ ಸರಹದ್ದು ಮೊಕರರು ಮಾಡಿ, ಅದರ ವಿವರ ಯಾವತ್ತು ತಮಶೀಲಲ್ಲು ಬರದು, ಮಲಿವಾರಿ ಕಮೀಶನರ ಬಳಿಗೆ ತಲಪಿಸಿ, ಬಹಳ ಕಾಗದಗಳು ಈ ಸರಹದ್ದಿನ ವಿಷಯವಾಗಿ ಬರದದ್ದು, ಸಂನದಿನ ಮೇರೆ ನಂಮ ಬಳಿಯ ಹಾಜರು ಇತ್ತು. ಅದಂನು ಈಗ ಪೀಲ್ ಸಾಹೇಬರಿಗೆ ತೋರಿಸಿ ಇದ್ಧೇವೆ. ಇದಲ್ಲದೆ ಮಲಿವಾರಿಯಿಂದಾ ಬಂದಿರುವ ತಮಶೀಲು ಹಾಜರು ಇದೆ. ಈ ವಿವರ ಯಾವತ್ತು ಪೀಲ್ ಸಾಹೇಬರವರ ಮುಖವಚನದಿಂದಾ ತಂಮ ತಿದ್ದುಮತಕ್ಕೆ ಜಾಹೀರು ಆದೀತು. ಇದಲ್ಲದೆ ನವಾಬ ಮುಸ್ತತಾಬ್ ಮೂಲಿವುಲ್ ಅಲ್ಕಾಬ್ ಅಷರಫುಲ್ ಅಷರಾಫ್ ಗವರ್ನರ್ ಜನರಾಲ್ ಸಾಹೇಬ್ ಬಹಾದ್ದರವರ ಮನಸಿನಲ್ಲಿ ಮೈಸೂರ ಸರಕಾರವೂ ನಂಮ ಸರಕಾರವೂ ದೋಸ್ತಿಯಿಂದಾ ಯೈಕ್ಯತರವಾಗಿ ಇರ ಬೇಕು ಯಂತಾ ಇದೆ ಯಂಬದಾಗಿ ತಾವು ಬರೆಸಿ ಇರುವದು ಸರಿಯಾಷ್ಟೆ. ಈ ಬಗ್ಯೆ ಈ ದೋಸ್ತುದಾರರು ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರಕಾರದ ಆಶ್ರಯ ಪರವರಿಷ್ಟಿಯೂ[3] ವಳ್ಳೇ ದೋಸ್ತುದಾರರ ದೋಸ್ತಿಯೂ ಹೊರತು, ಯರಡನೇ ಅಪೇಕ್ಷೆ ನಂಮ ಮನಸಿನಲ್ಲು ಇಲ್ಲಾ. ಈ ಮಾತು ತಂಮ ಮನಸಿನಲ್ಲಿ ಚಿತ್ರ ಬರದ ಹಾಗೆ ಇದ್ದೀತು. ಈ ದೋಸ್ತುದಾರರು ಯಲ್ಲಾ

1 ಯೋಗ್ಯರಿದ್ದಾರೆ. 2 John Henry Peile. 3 ಸಂರಕ್ಷಣೆಯೂ.

ಬಗೆಯಿಂದಲೂ ಕುಂಪನಿ ಸರಕಾರದ ತಾಬೆ ಆಗಿ, ನವಾಬ ಮುಸ್ತತಾಬ್ ಮೂಲಿವುಲ್ ಅಲ್ಕಾಬ್ ಅಷರಫುಲ್ ಅಷ ರಾಫ್ ಗವರ್ನರ್ ಜನರಾಲ್ ಬಹಾದ್ದರವರ ಹುಕುಮಿನ ಒಳಗೆ ಇದ್ಧೇವೆ. ಈ ಯಾವ ಕಾರ್ಯಕ್ಕೂ ದೊಡ್ಡ ಸರಕಾರದ ಮರ್ಜಿಯೂ ತಂಮ ಮರ್ಜಿಯೂ ಯಾವ ಮ್ಯೇರೆ ಇದೆಯೋ, ಆ ಮ್ಯೇರೆ ಹಾಜರು ಇದ್ಧೇವೆ" ಯಂಬದಾಗಿ, ಬರೆಸಿ, ಪೀಲ್ ಸಾಹೇಬರವರ ಕೈಯಿ ಕೊಟ್ಟರು.

ಆ ಬಳಿಕ ಜಾನ್ ಹಾಮಿ ಪೀಲ್ ಸಾಹೇಬರವರ ಸಂಗಡ: "ನೀವು ಇಲ್ಲಿಗೆ ಬಂದ ಮೂವಾಹ್ಹಿತರ ಯೇನು ಯಂತಾ ಬರದು ಕೊಡ ಬೇಕು" ಯಂಬದಾಗಿ, ವೀರರಾಜೇಂದ್ರ ಒಡೆಯರವರು ಕೇಳಿದಲ್ಲಿ, ಅವರು ಬರ ಕೊಟ್ಟ ಕಾಗದದ ವಿವರಾ: "ಮೈಸೂರ ಅರಸುಗಳ ಸರಕಾರಕ್ಕೂ ತಮಗೂ ಬಹಳ ದಿವಸದಿಂದಾ ಸರಹದ್ದಿನ ವ್ಯಾಜ್ಯ ಇದೆ. ಇದರಿಂದಾ ವ್ಯವಸಾಯಕ್ಕೆ ಅಡ್ಡಿ ಆಗಿ, ಫಾಯದೆ ಇಲ್ಲದೆ ಹೋಗಿ, ಉಭಯ ಸರಕಾರಕ್ಕೂ ಖುಷಿ ಇಲ್ಲದೆ, ವಿರುದ್ಧವಾಗುತ್ತಾ ಇದೆ. ಯರಡು ಸರಕಾರವೂ ಕುಂಪನಿ ದೊಡ್ಡ ಸರಕಾರದ ಇಲಾಖೆ ಒಳಗೆ ಇದ್ದು, ಒಂದಾಕೊಂದು ಜಿದ್ದು ಮಾಡುವಂಥಾದ್ದು ವಿಹಿತವಲ್ಲಾ. ಈ ನ್ಯಾಯ ತೀರಿಸಿ, ಕಲ್ಲುಗಳ ನಿಲ್ಲಿಸಿದರೆ, ಉಭಯ ಸರಕಾರಕ್ಕೂ ದೋಸ್ತಿ ಜಾಹೀರು ಆದೀತು. ಇದೇ ಮಾತಿನ ಬಗ್ಗೆ ನಾವು ಬಂದು ಇದ್ಧೇವೆ. ಈ ನ್ಯಾಯ ತೀರಿಸಿ, ಕಲ್ಲುಗಳ ನಿಲ್ಲಿಸ ಬೇಕು ಯಂಬದಾಗಿ, ತಮಗೆ ತಿಳ್ಯ ಪಡಿಸುತ್ತೇವೆ. ಕೆಲವು ಕಾರಣಾದಿಂದಾ, ಮೈಸೂರ ಅರಸುಗಳ ಸರಕಾರ ಸಿದ್ಧೇಶ್ವರನ ಬೆಟ್ಟದಿಂದಾ ಸಿದ್ಧಾಪುರದ ಕಡಂಗ ಪರಿಯಂತರ ಭೂಮಿ ನಂಮದು ಯಂತಾ ಹೇಳುತ್ತಾರೆ. ಈ ಮಾತಿನ ಬಗ್ಗೆ ಹಳೆ ಸಾಕ್ಷಿ ಮಾತುಗಳ ತೆಗೆಯುತ್ತಾರೆ. ಬೇರೆ ಒಂದು ಕಾಗದದಲ್ಲಿ ಪಟ್ಟಿ ಬರದು ಇದೆ. ಅದ ನೋಡಿದಲ್ಲಿ ತಿಳಿಯ ಬಂತು. ಇಂಥಾ ಸಾಕ್ಷಿ ಮಾತುಗಳ ಮೇಲೆ ದೃಷ್ಟಿ ಮಡಗ ಬೇಕೆಂಬದು ನಮಗೆ ಜರೂರು ಇಲ್ಲಾ. ಯಾತರಿಂದಾ ಯಂದರೆ: ಬಹಳ ಕಾಲ ದಾಟಿ ಹೋದ ಮೇಲೆ, ಇದು ಸಹಜ, ಇದು ಅಸಹಜ, ಯಂಬದು ತಿಳಿ ಬರುವದಿಲ್ಲಾ. ಆದಾಗ್ಯೂ ಈ ಕಳೆದ ಹೋದ ವರುಷಗಳಲ್ಲಿ ಒಂದು ವರುಷ ಮೊಹರು ಮಾಡ ಬೇಕು; ಆ ವರುಷದಲ್ಲಿ ಈ ಭೂಮಿ ಯಾವ ಕಡೆ ಸೇರಿ ಇತ್ತು ಯಂತಾ, ದಸ್ತಾವೇಜ ತೆಗದು ಕೊಂಡು, ಸರಹದ್ದು ಮೊಹರು ಮಾಡ ಬೇಕು. ಈ ಮಾತು ತೀರಿಸುವ ಬಗ್ಗೆ ಮೊದಲು ಲಾರ್ಡ್ ಕಾರ್ನವಾಲೀಸ್ ಸಾಹೇಬ ಬಹಾದ್ದರವರು ಟೀಪುಸುಲ್ತಾನ ಬಹಾದ್ದರವರ ಕೈಯಿಂದಾ ಕೊಡಗಿನ ಸೀಮೆ ತೆಗದು ಕೊಂಡು, ಕೆಲವು ಕರಾರು ನಾಮೆ ಬರದು ಇದ್ದರು. ಸನ್ ೧೭೯೨ ನೆ ಇಸವಿ ವರುಷ ಮೊಹರು ಮಾಡ ಬೇಕು, ಇದಲ್ಲದೆ ಮೈಸೂರ ಅರಸುಗಳ ಇರಾದಾ[1] ಭೂಮಿ ಹೆಚ್ಚು ಮಾಡ ಬೇಕೆಂಬದು ಇಲ್ಲಾ. ಸರಹದ್ದುಗಳ ಕಲ್ಲುಗಳ ನಿಲ್ಲಿಸಿದರೆ, ಈ ಭೂಮಿ ಯಲ್ಲರಿಗೂ ತಿಳಿಯುತ್ತಾ ಇದೆ. ಮುಂದೆ ವ್ಯಾಜ್ಯ ತಕರಾರು ಬರಲಿಕ್ಕೆ ಇಲ್ಲಾ, ಯಂಬ ಇರಾದೆ ಇದೆ. ತಾವು ನಿಶ್ಚಯವಾಗಿ ತಿಳಿಯ ಬೇಕು. ಆ ಅರಸುಗಳು ತಂಮ ದೋಸ್ತಿ ಮೇಲೆ ದೃಷ್ಟಿ ಮಡಗಿ, ಈ ತಕರಾರಿನ ಭೂಮಿ ಅವರ ರಜಾವಂದಿಯಿಂದಾ ಬಿಟ್ಟಾರು. ಉಭಯ ಸರಕಾರಕ್ಕೂ ದೋಸ್ತಿ ಮಾಡ ಬೇಕೆಂಬದಾಗಿ, ನಾವು ಬರೆದು ಇದ್ಧೇವೆ. ಆ ಅರಸುಗಳ ಇರಾದಾ, ನಂಮ ಇರಾದಾ ಸಹಾ, ಈ ದೋಸ್ತಿ ಹೊರತು ಮತ್ತೊಂದಿಲ್ಲಾ, ತಂಮ ಮನಸಿನಲ್ಲೂ ಈ ನ್ಯಾಯ ತೀರಿಸ ಬೇಕೆಂತಾ, ಕಾಗಿ ಬಂದೀತು. ಇದಲ್ಲದೆ ನವಾಬ ಮುಸ್ತತಾಬ್ ಮೂಲಿವುಲ್ ಅಲ್ಕಾಬ ಅಷರಫುಲ್ ಅಷರಾಫ್ ಮಾರ್ಕವೀಸ್ ವಲ್ಲೆಜಲಿ ಗವರ್ನರ್ ಜನರಾಲ್ ಬಹಾದ್ದರವರ ಇರಾದೆಯು ಯರಡು ಸರಕಾರವು ದೋಸ್ತಿಯಿಂದಾ ನಡೆಯ ಬೇಕೆಂಬದಾಗಿ ಇದೆ" ಯಂತಾ ಬರದು, ಇದರ ಸಂಗಡ ಆ ಬಗೆ ಮೈಸೂರು ಅರಸುಗಳು ಬರದ ಪಟ್ಟಿ ಸಹಾ ಮಹಾರಾಜರವರಿಗೆ ಕೊಟ್ಟರು.

ಆ ಪಟ್ಟಿಯಲ್ಲಿ ಬರದು ಇದ್ದ ವಿವರಾ: "ಪರಾಕು ಕೊಡಗಿನ ಸೀಮೆ ಸರಹದ್ದು ಸಿದ್ಧಾಪುರದ ಕಂದಕ ಪರಿಯಂತರ ಇದೆ. ಆ ಕಂದಕದ ಹೊರಗೆ ಕೊಡಗಿನ ರಾಜರ ಇಲಾಖೆ ಇತ್ತಿಲ್ಲಾ. ಕೊಡಗು ತೆಗದು ಕೊಳ್ಳುವದಕ್ಕೆ ಮೊದಲು, ಆ ಕಂದಕದ ಸಮೀಪದಲ್ಲಿ ಪಿರಿಯಾಪಟ್ಟಣದ ತಾಲೂಕಿನ ಬಂಡೆಯ ಕ್ಯಾಟೆ ಹೋಬಳಿಯದು ಇಪ್ಪತ್ತೇಳು ಗರಾಮ ಆಕಲ್ಷಯಹಾರವರಿಗೆ ಜಹಾಗೀರು ಇತ್ತು. ತೀರಿ ಹೋದ ಹೈದರಲ್ಲೀ ಖಾನರು ವಿಜಯ ಸಂವತ್ಸರದಲ್ಲಿ ಕೊಡಗು ತೆಗದು ಕೊಂಡರು. ಅಪ್ಪಾಜಿ ರಾಜರಿಗೆ ಅಲ್ಲಿ ಅಮಲು ಕೊಟ್ಟರು. ಆವಾಗ್ಯೆ ಕೊಡಗಿನ ಸರಹದ್ದು ಅದೇ ಸಿದ್ಧಾಪುರದ ಕಂದಕ ಪರಿಯಂತರ ಇತ್ತು. ಆ ಗರಾಮಗಳು ಪಿರಿಯಾಪಟ್ಟಣದ ಇಲಾಖೆ ಒಳಗೆ

[1] ಇರಾದೆ.

ಇತ್ತು. ಶುಭಕೃತು ಸಂವತ್ಸರದಲ್ಲಿ ಹೈದರಲ್ಲೀ ಖಾನರು ತೀರಿ ಹೋದರು. ಉತ್ತೆನಾಯಕನು ಜಗಳ ಮಾಡಿ, ಕೊಂಡು, ಕೊಡಗ ಶೀಮೆಯನ್ನು ತನ ಸ್ವಾಧೀನ ಮಾಡಿ ಕೊಂಡು, ಆ ಗ್ರಾಮಗಳನ್ನು ಸುಟ್ಟು, ಹಾಳು ಮಾಡಿದ. ಅಲ್ಲಿ ರೈತರು ಹಾಲಾಗಿ ಕಿಸುತ್ತೇರಾ ಆಗಿ ಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲ. ಹಾಳು ಬಿದ್ದು ಹೋಯಿತು. ಕ್ರೋಧಿ ಸಂವತ್ಸರದಲ್ಲಿ ಟೀಪುಸುಲ್ತಾನರು ಕೊಡಗಿಗೆ ಹೋಗಿ, ಉತ್ತೆನಾಯಕನನ್ನು ಕೊಂದು ಹಾಕಿ, ಸರಕಾರದ ಠಾಣ್ಯೆಯು ಕಾಯಂ ಮಡಗಿ, ಅಮಲುದಾರ ಕಿಲ್ಲೆದಾರರ ಸಹಾ ಕೊಡಗಿನಲ್ಲಿ ಮೊಕರರು ಮಾಡಿದರು. ಆವಾಗ್ಯೂ ಕೊಡಗಿನ ಸರಹದ್ದು ಆ ಸಿದ್ಧಾಪುರದ ಕಂದಕವಾಗಿ ಇತ್ತು. ಆ ತಲ್ಘಾಪಾರವರ ಜಹಾಗೀರು ಮೊಖೂಪು ಮಾಡಿದರು. ಆ ಗ್ರಾಮಗಳನ್ನು ಸಾಗು ಮಾಡಿಸುವ ಹಾಗೆ, ಪಿರಿಯಾಪಟ್ಟಣದ ಅಮಲುದಾರಗೆ ತಾಕೀತು ಮಾಡಿದರು. ಆದಾಗ್ಯೂ ರೈತರು ಜಮಾ ಆಗದ್ದರಿಂದಾ, ಆ ಗ್ರಾಮಗಳು ಸಾಗು ಆಗಲಿಲ್ಲ. ಕೀಲಕ ಸಂವತ್ಸರದಲ್ಲಿ ವೀರರಾಜೇಂದ್ರ ಸಾಹೇಬರವರು ಪಿರಿಯಾಪಟ್ಟಣದ ಕೋಟೆ ವಳಗೆ ಇದ್ದರು. ಅಲ್ಲಿಂದಾ ಕೊಡಗಿಗೆ ಹೋಗಿ, ಮಡಿಕೇರಿ ಕೋಟೆ ವಳಗೆ ಠಾಣ್ಯೆಯು ಇದ್ದಂತೆ, ಕೊಡಗಿನ ಜನರ ಜಮಾಯಿಸಿ ಕೊಂಡು, ಕೊಡಗಿನ ಶೀಮೆಯನ್ನು ಅವರ ಸ್ವಾಧೀನ ಮಾಡಿ ಕೊಂಡರು. ಮಡಿಕೇರಿ ಕೋಟೆ ವಳಗೆ ಇದ್ದ ಠಾಣ್ಯೆಯು ಅದ್ಯೇ ಮೇರೆ ಕಾಯಂ ಆಗಿ ಇತ್ತು. ಲಾರ್ಡ ಕಾರ್ನವಾಲೀಸ್ ಸಾಹೇಬ ಬಹಾದ್ದರವರು ಬೆಂಗಳೂರಿಗೆ ಬಂದಾಗ್ಯೆ, ಟೀಪುಸುಲ್ತಾನರು ಠಾಣ್ಯೆಯು ಇದ್ದ ಜನರ ಕರಸಿ ಕೊಂಡರು. ಆ ಲಾರ್ಡು ಸಾಹೇಬರವರು ವಿರೋಧಿಕೃತು ಸಂವತ್ಸರದ ಕಡೆಗಾಲದಲ್ಲಿ ಶ್ರೀರಂಗಪಟ್ಟಣಕ್ಕೆ ಬಂದು, ಕೊಡಗಿನ ಶೀಮೆಯನ್ನು ವೀರರಾಜೇಂದ್ರ ಸಾಹೇಬರವರಿಗೆ ಮೆಹರಬಾನಗಿ ಮಾಡಿ ಕೊಟ್ಟರು. ಕಾಳಾಯುಕ್ತಿ ಸಂವತ್ಸರದ ವರಿಗೆ ವೀರರಾಜೇಂದ್ರ ಸಾಹೇಬರವರ ಅಮಲು ಸಿದ್ಧಾಪುರದ ಕಂದಕ ಪರಿಯಂತರ ಇತ್ತು. ಈಗ ಶ್ರೀರಂಗಪಟ್ಟಣವನ್ನು ಇಂಗರೇಜ ಬಹಾದ್ದರ ಕುಂಪನಿ ಸರಕಾರದವರು ತೆಗದು ಕೊಂಡ ಮೇಲೆ ಸಿದ್ಧಾರ್ಥಿ ಸಂವತ್ಸರದಿಂದಾ ವೀರರಾಜೇಂದ್ರ ಸಾಹೇಬರವರು ಪಿರಿಯಾಪಟ್ಟಣದ ಇಲಾಖೆ ಬಂಸಿನ ಕೋಟೆ ಹೋಬಳಿ ಇಪ್ಪತ್ತೇಳು ಗ್ರಾಮವು ಅವರ ತಾಬೆ ಮಾಡಿ ಕೊಂಡು, ಅದರ ಸಂಗಡ ಈ ಕಡೆ ಸಿದ್ಧಾಪುರದ ಕಂದಕ ಪರಿಯಂತರ ಅಗಲದಲ್ಲಿ ಪೂರ್ವ ಪಶ್ಚಿಮಕ್ಕೆ ಮೂರು ಅರೆ ಹರದಾರಿ ಉದ್ದದಲ್ಲಿ, ಉತ್ತರ ದಕ್ಷಿಣಕ್ಕೆ ನಾಲ್ಕು ಹರದಾರಿ ಭೂಮಿ ಸಹಾ, ಆ ಇಪ್ಪತ್ತೇಳು ಗ್ರಾಮ ಯಾವತ್ತೂ ಆಬಾದು ಮಾಡಿ ಇದ್ಧಾರೆ. ಈ ವಿಷಯದಲ್ಲಿ ಬೇರೆ ವಂದು ಪಟ್ಟಿ ಬರಸಿ ಇದ್ಧೇವೆ. ಅದರಿಂದಲೂ ತಿಳಿಯ ಬಂದೀತು” ಯೆಂಬದಾಗಿ, ಬರದ ಪಟ್ಟಿ.

ಇದಕ್ಕೆ ಜವಾಬಾಗಿ ಪೀಲ್ ಸಾಹೇಬರವರಿಗೆ ಬರದು ಕೊಟ್ಟ ವಿವರ: “ಮೈಸೂರ ಅರಸುಗಳು ಸಿದ್ಧೇಶ್ವರನ ಬೆಟ್ಟದಿಂದಾ ಸಿದ್ಧಾಪುರದ ಪ್ಯಾಟೆ ಕಂದಕ ಪರಿಯಂತರ ಭೂಮಿ ತಂಮ ಇಲಾಖೆ ಯೆಂಬದಾಗಿ ತಿಳಿದು, ಹಳೆ ಸಾಕ್ಷಿ ಮಾತಿನಿಂದಾ ವಿಂಗಡವಾಗಿ ವಂದು ಪಟ್ಟಿಯನ್ನು ಬರಸಿ ಇದ್ದದ್ದು ಸರಿಯಷ್ಟೆ. ಅದು ತಂಮ ಕಾಗದದ ಸಂಗಡ ಬಂದು ಮುಟ್ಟಿತು. ಅದರ ವಿವರ ತಿಳಿಯ ಬಂತು. ಸರಹದ್ದಿನ ಮಾತು ತೀರಿಸುವ ಬಗ್ಯೆ, ಹಳೆ ಮಾತಿನ ಮೇಲೆ ದೃಷ್ಟಿ ಮಡಗುವದಿಲ್ಲ. ಯಾತರಿಂದಾ ಯೆಂದರೆ: ಬಹಳ ವರುಷ ಕಳದು ಹೋದ ಕಾರಣ ಸಹಜ, ಅಸಹಜ ಯೆಂತಾ, ತಿಳಿಯುವದಿಲ್ಲ. ಅದರಿಂದಾ ಕೊಡಗಿನ ಶೀಮೆ ಟೀಪುಸುಲ್ತಾನರ ಹುಕುಮತ್ತಿನಿಂದಾ ತೆಗದು ಹೋಗಿ, ನವಾಬ ಲಾರ್ಡು ಕಾರ್ನವಾಲೀಸ ಸಾಹೇಬರವರ ಹುಕುಮತ್ತಿನ ವಳಗೆ ಬಂದು ಇರುವ ವರುಷ ಸರಹದ್ದು ಮೊಕರರು ಮಾಡ ಬೇಕೆಂಬದಾಗಿ ಇಷಾರೆ ಮಾಡಿ ಇರುವದು ಸರಿಯಷ್ಟೆ. ಅಂಥಾ ಹಳೆ ಸಾಕ್ಷಿ ಮಾತುಗಳು ಬಹಳ ಇತ್ತು. ಅದೆಲ್ಲಾ ಬಿಟ್ಟು, ನಾವು ಯಾವಾಗ್ಯೆ ಪಿರಿಯಾಪಟ್ಟಣ ಬಿಟ್ಟು, ನಂಮ ಕದೀಂ ಕೊಡಗಿನ ಶೀಮೆಗೆ ಬಂದಂಥಾ ಕೀಲಕ ಸಂವತ್ಸರದಿಂದಾ ರುಧಿರೋದ್ಗಾರಿ ಸಂವತ್ಸರದ ವರಿಗೆ ಹದಿನಾರು ವರುಷವಾಯಿತು. ಇದರ ವಳಗೆ ಕೊಡಗಿನ ಶೀಮೆ ಸರಹದ್ದಿನ ಬಂದುಬಸ್ತು ಇದ್ದದ್ದನ್ನು ಮಾಡಿದೆವು. ಆ ಹಕೀಕತ ಯಾವತ್ತು ವಿವರವಾಗಿ ಬರದು, ಇಜಾರನಾಮೆ ಯೆಂತಾ ಅದರ ಹೆಸರು ಮಡಗಿ, ಆ ಇಜಾರನಾಮೆಯನ್ನು ತಂಮ ಬಳಿಗೆ ರವಾನೆ ಮಾಡಿ ಇದ್ಧೇವೆ. ಅದ ನ್ಯೋಡಿದಲ್ಲಿ, ತಂಮನಸಿಗೆ ಜಾಹೀರಾದೀತು. ಅದು ಮೂಲಂ ಆದ ಮೇಲೆ, ಯಾವ ಕಡೆ ಮಾತು ನಿಜವಾಗುತ್ತದಾ, ಆಗ್ಯೆ ಹಳೆ ಸಾಕ್ಷಿ ಮಾತು, ಹೊಸ ಮಾತು ಯೆಲ್ಲಾ ನಿಜ ಯೆಂತಾ ತಿಳಿಯ ಬೇಕು. ಯಾವ ಕಡೆ ಮಾತು ನಿಜವಾಗುತ್ತದೋ, ಅವರಿಗೆ ಈ ಸರಹದ್ದಿನ ನ್ಯಾಯ ತೀರಿಸಿ, ಆ ಸರ

ಹದ್ದಂನು ಅವರಿಗೆ ಕೊಡ ಬೇಕು. ಇದಲ್ಲದೆ ಮೈಸೂರ ಅರಸುಗಳು ದೋಸ್ತಿ ಮೇಲೆ ನಜರು[1] ಮಡಗಿ, ಕರಾರು ಇರುವ ಭೂಮಿಯಂನು ಬಿಟ್ಟಾರು ಯಂತಲೂ, ನಾವು ಬಂದದ್ದು ಉಭಯ ಸರ್ಕಾರಕ್ಕೂ ದೋಸ್ತಿ ಮಾಡಿಸುವ ಬಗ್ಯೆ ಯಂಬದಾಗಿಯೂ, ನವಾಬು ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರ್ಫುಲ್ ಅಷರಾಫ್ ಮಾರ್ಕ್ವಿಸ್ ವೆಲ್ಲೆಜಲಿ ಗವರ್ನರ್ ಬಹಾದ್ದರವರ ಇರಾದೆಯೂ, ಯರಡು ಸರ್ಕಾರಕ್ಕೂ ದೋಸ್ತಿ ಮಾಡಿಸುವದರ ಮೇಲೆ ಇದೆ ಯಂಬದಾಗಿ ಸಹಾ, ತಾವು ಬರೆಸಿ ಇರುವದು ಸರಿಯಷ್ಟೆ. ತಾವು ನಿಶ್ಚಯವಾಗಿ ತಿಳಿಯ ಬೇಕು: ಈ ದೋಸ್ತು ದಾರರು ಯಲ್ಲಾ ಬಗೆಯಿಂದಲೂ ಇಂಗ್ರೇಜ ಬಹಾದ್ದರ ಕುಂಪನಿ ದೊಡ್ಡ ಸರ್ಕಾರ ನಂಬಿ ಇದ್ಧೇವೆ. ಆ ದೊಡ್ಡ ಸರ್ಕಾರದ ಪರವರ್ತಿಯೂ ನೇಕ್ಯವುಳ್ಳಂಥಾ ದೋಸ್ತರ ದೋಸ್ತಿಯೂ ಹೋಗದು, ಮತ್ಯಾರದಾದರೂ ವಡವೆ ತೆಗದು ಕೊಳ್ಳ ಬೇಕೆಂಬ ಅಪೇಕ್ಷೆ ನಾವು ಮಡಗುವದಿಲ್ಲಾ. ಯವದೊಂದು ಕಾರ್ಯಕ್ಕೂ ಆ ಇಂಗ್ರೇಜ ಬಹಾದ್ದರ ಕುಂಪನಿ ಮುಬಾರಕ ಮರ್ಜಿ ಯಾವ ಮೇರೆ ಇದೆಯೋ, ಅದರಲ್ಲಿ ಈ ದೋಸ್ತುದಾರರಿಗೆ ಆಬ್ರು ಕೀರ್ತಿ ದೊಡ್ಡದಾದೀತು ಯಂತಾ, ತಿಳಿದು ಇದ್ಧೇವೆ" ಯಂತಾ ಬರದು ಕೊಟ್ಟರು.

ಇದರ ಸಂಗಡ ಟೀಲ್ ಸಾಹೇಬರವರಿಗೆ ಬರದು ಕೊಟ್ಟ ಇಜಹಾರನಾಮೆ ವಿವರ: "ವಿಕೃತು ಸಂವತ್ಸರದ ಆರಭ್ಯ ನವಾಬು ಹೈದರಲ್ಲೀಖಾನ್ ಬಹಾದ್ದರವರಿಗೂ ನಂಮ ತಂದೆಯವರಾದ ಲಿಂಗರಾಜೇಂದ್ರ ವಡೆಯರವರಿಗೂ ತಂಮ ವಳಗೆ ದೋಸ್ತಿ ಪರಾರಂಭವಾಗಿ, ಕೀಲಕ ಸಂವತ್ಸರದ ವರಿಗೆ ಹತ್ತೊಂಬತ್ತು ವರುಷ ದೋಸ್ತಿ ಕಾಯಂ ಆಗಿ ಇತ್ತು. ಅದರ ವಳಗೆ ಆ ನವಾಬ ಸಾಹೇಬರವರ ದೌಲತ್ತಿನಲ್ಲು, ಅವರ ಮಗ ಟೀಪುಸುಲ್ತಾನರ ದೌಲತ್ತಿನಲ್ಲಿ ಸಹಾ, ನಾವು ವೀರರಾಜೇಂದ್ರ ವಡೆಯರವರು, ನಂಮ ಹಿರಿಯವರು ಸಹಾ, ಗುಜರಾನು[2] ಮಾಡಿದೆವು.

ಕೀಲಕ ಸಂವತ್ಸರದಲ್ಲಿ ಕೆಲವು ಕಾರ್ಯ ಕಾರಣದಿಂದಾ ನಾವು ವೀರರಾಜೇಂದ್ರ ವಡೆಯರವರು ಟೀಪುಸುಲ್ತಾನರ ದೋಸ್ತಿಯಿಂದಾ ಕೈ ತೆಗದು, ಹಿರಿಯಾಪಟ್ಟಣದಿಂದಾ ಕೊಡಗಿನ ಶೀಮೆ ಸರಹದ್ದಿನ ವಳಗೆ ಬಂದು ದಾಖಲಾಗಿ, ಸರಹದ್ದು ಸಿದ್ಧೇಶ್ವರನ ಬೆಟ್ಟದ ಬೆಂವಿನ ಆಶ್ರಯದಲ್ಲಿ ಮೂರು ವರುಷ ಪರಿಯಂತರ ಇದ್ದೆವು. ಅಲ್ಲಿ ಇರ ಬೇಕಾದ ಕಾರಣವೇನು ಯಂದರೆ: ಟೀಪುಸುಲ್ತಾನರು ಕೊಡಗಿನ ಶೀಮೆ ಜನರ ಬೇರು ಸಹಿತ ಕಿತ್ತು, ಮೈದಾನ ಶೀಮೆಗೆ ಬಿಸಾಡಿ ಬಿಟ್ಟು, ಅದರ ಬದಲಿಗೆ ಮಹಾಮದಜಾಖಾನನ ದಸ್ತೆಯವರು, ನೂರುಲ್ ಆಷರಖಾನನ ದಸ್ತೆಯವರು ಲಷ್ಕರ ಕಚೇರಿಯವರು ಶೇಖು, ಸೈಯದ, ಮೊಗಲ್, ಪಠಾಣ, ಈ ನಾಲ್ಕು ಜಾತಿ ಮುಸಲ್ಮಾನರ ಮಂದಿ ಆದ್ಮಿ ಶಿಪಾಯಿಗಳ ಬೇರು ಕೊಡಗಿನ ಶೀಮೆ ವಳಗೆ ನೆಟ್ಟು, ಕೊಡಗ ಶೀಮೆ ವಳಗೆ ಆರಂಬ ವ್ಯವಸಾಯದ ಬಗ್ಯೆ, ಆಧವಾನಿ ಶೀಮೆ ರೈತರಂನು ಮಡಗಿ, ಈ ಶೀಮೆಯಂನು ಜಹಾಗೀರು ಇನಾಮಾಗಿ ನಿಮಗೆ ಕೊಟ್ಟು ಇದ್ಧೇವೆ; ನಿಂಮ ಕಬ್ಜೆನ ವಳಗೆ ಮಾಡಿ ಕೊಳ್ಳುವದು, ಖುಷಿಯಿಂದಾ ಇರುವದು. ನಾವು ಕೊಡಗಿನ ಶೀಮೆ ಜನರ ಬೇರು ಕಿತ್ತು ಬಿಸಾಡಿ ಇದ್ಧೇವೆ. ಅದರಲ್ಲಿ ಯಾರಾದರೂ ವಂದು ಅರೆ ಓಡು ಕೊಂಡು ಇದ್ದರೆ, ಪತ್ತೆ ಹಾಕಿಸಿ ಹಿಡಿದು, ಅವರಂನು ಕಡಿದು ಹಾಕುವದು. ಅವರ ಹೆಂಗಸರಂನು ನೀವು ಮಡಗಿ ಕೊಳ್ಳುವದು. ಆ ಹೆಂಗಸರ ಹೊಟ್ಟೆಯಲ್ಲಿ ಮಕ್ಕಳು ಹುಟ್ಟಿದರೆ, ಆ ಮಕ್ಕಳು ಈ ಶೀಮೆಯಲ್ಲಿ ಕಾಯಂ ಇರ ಬೇಕು. ನಾವು ಈ ಹಿಂದು ಧಾರೆಗಳ ದೌಲತ್ತು ತೆಗದು ಕೊಂಡು, ಮಡಿಕೇರಿ ಯಂಬ ಹೆಸರಿಗೆ ಬದಲು ಜಫ್ರಾಬಾದು; ತಲಕಾವೇರಿ ತೀರ್ಥದ ಜಾಗ ಹಿಂದು ಜನದ ಯರಡನೆ ಕಾಶಿ ಇದೆ, ಅದರ ಹೆಸರು ಅಬಜಲಾಬಾದು; ಇದಲ್ಲದೆ ಮುಳ್ಳುಸೋಗೆ ಗ್ರಾಮದ ಬಳಿಯಲ್ಲಿ ವಂದು ಕ್ವಾಟೆ ಕಟ್ಟಿಸಿ, ಅದರ ಹೆಸರು ಖುಷಾಲನಗರ ಯಂತಾ ಮಡಗಿ ಇದ್ಧೇವೆ. ಈ ಜಾಗ, ಮುಸಲ್ಮಾನರು ಇರುವ ಬಗ್ಯೆ, ವಳ್ಳೇ ಲಾಯಖಿನ ಜಾಗ. ಈ ಶೀಮೆಯಲ್ಲಿ ಯಾವಾಗ್ಯೂ ಮುಸಲ್ಮಾನ ದೀನ್ ಇಸಲಾಮರ ಜಾಂಡೆ ಹಾರ ಬೇಕು. ಈ ಹುಕುಂ ಮೇರೆ ನೀವು ನೌಕರಿ ಮಾಡ ಬೇಕೆಂಬದಾಗಿ, ಟೀಪುಸುಲ್ತಾನರು ಆ ಮುಸಲ್ಮಾನರಿಗೆ ಹುಕುಂ ಕೊಟ್ಟು ಇದ್ದರು.

ಇದೆ ಕಾರಣ ನಾವು ಲಾಚಾರಿಯಿಂದಾ, ವಶೀಲ್[3] ಇಲ್ಲದೆ, ನಂಮ ಕುಟುಂಬ ಮಕ್ಕಳಂನು ಆ ಸಿದ್ಧೇಶ್ವರನ ಬೆಟ್ಟದ ಬೆಂವಿನ ಆಶ್ರಯದಲ್ಲಿ ಮೂರು ವರುಷ ಮಡಗಿ, ರಾತ್ರೆ ಕಾಲದಲ್ಲಿ ಟೀಪುಸುಲ್ತಾನರ ಶೀಮೆಗೆ ಹೋಗಿ, ಬಹಳ ಬಗೆ ಮೆಹನತ್ತು ಮಾಡಿ, ರಾಗಿ ಮುಂತಾದ ಅನಾಜು[4] ತಂದು, ನಮಗೂ ನಂಮ ಮಕ್ಕಳಿಗೂ ಅಂನಾ

---

1 ದೃಷ್ಟಿ. 2 ಕಾಲಕ್ಷೇಪ. 3 ಸಹಾಯ. 4 ಧಾನ್ಯ.

ಮಾಡಿ ಕೊಂಡು, ಹಾಗಲು ಕೊಡಗ ಶೀಮೆಗೆ ಬಂದು, ಆ ಮುಸಲ್ಮಾನರಂನು ಗ್ರಾಮಾನು ಗ್ರಾಮದಿಂದಾ, ಬಹಳ ಜಗಳಾ ಮಾಡಿ, ಹೊರಗೆ ತೆಗದು, ಅವರ ಬದಲಿಗೆ ಕದ್ರಿಂ ರೈತರಂನು, ಶಿಕ್ಕಿದವರಂನು ಆ ಗ್ರಾಮಗಳಲ್ಲಿ ಹಡಗಿ, ನಂಮ ಸಂಗಡ ಇದ್ದ ಕದ್ರಿಂ ಜನರ ತೆಗದು ಕೊಂಡು, ಅದೇ ಸಿದ್ಧೇಶ್ವರನ ಸಂಹಾದ್ದಿನ ಬೆಟ್ಟದ ಬೆಂಸಿನ ಆಶ್ರಯದಲ್ಲಿ ಮೂರು ವರುಷ ಇದ್ದು, ನಂಮ ಗುಜರಾನು ಮಾಡಿದೆವು.

ಅದರ ವಳಗೆ ಆ ಮುಸಲ್ಮಾನರ ಹೋರಡಿಸುವ ಬಗ್ಯೆ, ಆರು ತಿಂಗಳು ದಿವಸವಾಯಿತು. ಬಾಕಿ ಯರಡು ಅರೆ ವರುಷದ ವಳಗೆ ಸದೂರು ಗುಲಾಮಲ್ಲಿ, ಟೀಪುಸುಲ್ತಾನರ ಖಾವಮೇದುನ ಸವಾಬ ಬುರಹಾನುದ್ದೀನ ಶಿಪಾಹಾಲಾರು ಯರಡು ಸಲಾ ಬಂದು ಇದ್ದರು. ಇದಲ್ಲದೆ ಸೈದ ಹಾಮಿದ್ ಶಿಪಾದಾರ, ಶೇಖ್ ಅಸ್ಸರ ಶಿಪಾದಾರ, ಶೇಖ್ ಇಮಾಮು ಶಿಪಾದಾರ, ದ್ಯೇಶಲದ ಫೌಜುದಾರ, ಟಿಶಕಲ ರಾಜರು ಸಹಾ, ಅವರವರ ಫೌಜ ತೆಗದು ಕೊಂಡು, ಆಗಾಗ್ಯೆ ಕೊಡಗಿನ ಶೀಮೆ ವಳಗೆ ಬಂದು, ನಮಗೆ ಬಹಳ ಹಾಲಾಕು-ಮಾಡಿ, ಶ್ರಮ ಪಡಿಸಿದರು. ಅವರ ಮನಸಿನಲ್ಲಿ ನಮಗೆ ಯಾವ ಮೇರೆ ಮಾಡ ಬೇಕೆಂಬ ಅಪೇಕ್ಷೆ ಇತ್ತಾ, ಅದೆಲ್ಲಾ ಅವರ ಮೇಲೆ ಅನುಭವವಾಯಿತು. ಕಡೆಗೆ ಲಟಾರಾಗಿ ತಿರಿಗಿ ಹೋದರು. ಇದಲ್ಲದೆ ಹಾಜಲ್ಖಾನ್ ಶಿಪಾದಾರ, ಹರಾಶೀಸರ ಜಾತಿ ಸರದಾರ ಜಾನ್ ಕಸ್ತೂರಿ ಸಹಾ, ಫೌಜ ಸುದಾ ಬಂದು, ಹೆಗ್ಗಳದ ಗಟ್ಟದ ಮೇಲೆ ಕೆಲು ಜನ ಮುಳುಗಿ ಹೋದರು; ಕೆಲವು ವ್ಯಾಧಿ ಹೋದರು; ಆ ಮೇಲೆ ಖಾದರ್ಖಾನ್ ಕೆಸಗಿ ಶಿಪಾದಾರ ಬಂದು, ಲಡಾಯಿಗೆ ನಿಲ್ಲಲಾರದೆ, ಲಟಾರಾಗಿ ಸಲ್ಲಾ ಮಾಡ ಬೇಕೆಂತಾ ಆಶ್ರಯ ಕೇಳಿದರಿಂದಾ, ಅವನಿಗೆ ಆಬರುಯಿಂದಾ ರವಾನೆ ಮಾಡಿದೆವು. ಈಗ ಆ ಖಾದರ್ಖಾನ್ ಕೆಸಗಿಯು ಇದೇ ಶೀಮೆಯಲ್ಲಿ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಉಪ್ಪು ಉಂಡು ಕೊಂಡು, ಇಲ್ಲೇ ಇದ್ಧಾನೆ. ಇದಲ್ಲದೆ ನಾಯಕಗಾಪಿಂದರಾವು, ಮಲ್ಲಪ್ಪ ನಾಯಕ ಸಹಾ, ಫೌಜ ಸಮೇತ ಮತ್ತೂ ಕೆಲವು ಸರದಾರರು—(ಅವರ ಹೆಸರು ನಮಗೆ ತಿಳಿಯಲಿಲ್ಲಾ)—ಅವರು ಯಲ್ಲಾರು ಬಂದು, ನಮಗೆ ಬಹಳ ಹೆಹಾಸತು ಮಾಡಿಸಿದರು. ಅವರ ಮನಸಿನಲ್ಲಿ ನಂಮೇಲೆ ಯೇನು ಅಪೇಕ್ಷೆ ಹಡಗಿ ಇದ್ದರ್ತಾ, ಅದೆಲ್ಲಾ ಅವರ ಮೇಲೆ ಸಾಬೂತಿಯಿತು. ಕಡೆಗೆ ಲಟಾರಾಗಿ ತಿರಿಗಿ ಹೋದರು. ಇದೇ ಜಗಳದ ತಂಟೆ ವಳಗೆ ಯರಡುಅರೆ ವರುಷ ಕಳದು ಹೋಯಿತು. ಇದರ ವಳಗೆ ಕೊಡಗಿನ ಶೀಮೆ ಕ್ಯಾತೆಗಳು ಯಾವತ್ತು ನಂಮ ಹುಕುಮತ್ತಿನ ವಳಗೆ ಬಂತು. ನಂಮಮನಸಿನಲ್ಲಿ ಇದ್ದ ಮೇರೆ ಅದರ ಬಂದುಬಸ್ತು ಮಾಡಿದೆವು.

ಆ ಮೇಲೆ ಆಲಿಷಾಂ ರಾಬರ್ಟ್ ಟೇಲರು ಸಾಹೇಬರವರು[1] ತಲಚ್ಚೇರಿ ಬಂದರಿಂದಾ ಕಪಿತಾನ್ ಬರಾನ್[2] ಸಾಹೇಬರವರು, ಅವರ ಸಂಗಡ ಯರಡು ಗಾರದಿ[3] ಶಿಪಾಯಿಗಳ ಕೂಡಿಸಿ, ತಂಮ ಸರಕಾರದ ದ್ಯಾಸ್ತಿ ಆಶ್ರಯದ ವಳಗೆ ತೆಗದು ಕೊಳ್ಳುವ ಬಗ್ಯೆ, ನಂಮಂನು ತಲಚ್ಚೇರಿಗೆ ಕರ ಕೊಂಡು ಬರುವ ಬಗ್ಯೆ, ರವಾನೆ ಮಾಡಿ ಇದ್ದರು. ಅದೇ ಕಪಿತಾನ್ ಬರ್ಯಾನ್ ಸಾಹೇಬರ ಸಂಗಡ ಇಬ್ಬರು ಇಂಜನ್ಯೇರು ಸಾಹೇಬರಂನು ಮುಂಬಾಯಿ ಲಷ್ಕರು ಪಟ್ಟಣದ ಕಡೆಗೆ ಹೋಗುವ ಬಗ್ಯೆ, ಕೊಡಗಿನ ಸಂಹಾದ್ದಿನ ಮಾರ್ಗ ನ್ಯಾದಿ ಕೊಂಡು ಬರುವ ಬಗ್ಯೆ, ಕಳುಹಿಸಿ ಇದ್ದರು. ಈ ಮೂರು ಜನ ಸರದಾರರು ಬಂದು, ಕ್ಯಾಪುರದ ಗಟ್ಟದ ಮೇಲೆ ಇದ್ದರು. ಆ ವರ್ತಮಾನ ನಾವು ಕೇಳಿ, ಆ ಮೂರು ಜನ ಸರದಾರರ ಮಿಲಾಖತ್ತು ಮಾಡಿದೆವು. ಆವಾಗ್ಯೆ ಆ ಕಪಿತಾನ್ ಸಾಹೇಬರು ನಂಮ ಕೈ ಹಿಡಿದು ಕೊಂಡು, ತಲಚ್ಚೇರಿ ಬಂದರ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಹುಕುಮತ್ತಿನ ಜಾಗಾ ಇದೆ. ಈಗ ನೀವು ಅಲ್ಲಿಗೆ ಬರ ಬೇಕು. ನಿಂಮಂನು ಸರಕಾರದ ದ್ಯಾಸ್ತಿ ವಳಗೆ ಕಬೂಲು ಮಾಡಿ, ದ್ಯಾಸ್ತಿ ಸಾಬೂತು ಆಗುವ ಬಗ್ಯೆ ಸೂರ್ಯ ಚಂದ್ರರ ಇರುವ ಪರಿಯಂತರ ಕಾಯಂ ಆಗಿ ಇರ ಬೇಕು. ಈ ಮಾತಿನಲ್ಲಿ ಯೇನಾದರೂ ತಫಾವತು ಆಗ ಬಾರದು ಯಂಬದಾಗಿ, ನಿಂಮ ಸರಕಾರವೂ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರವೂ ಹಡಂಬಟ್ಟು, ಖುಷಿಯಿಂದಾ ಮಹಾದೇವನ ಸಾಕ್ಷಿಯಿಂದಾ, ಮೊಹರ ದಸಕತ್ತಿನಿಂದಾ, ಯರಡು ಕರಾರುನಾಮೆ ಬರದು, ಅದರಲ್ಲಿ ಒಂದಂನು ಇಂಗ್ರೇಜ ಕುಂಪನಿ ಸರಕಾರದ ಇಲಾಖೆ ತಲಚ್ಚೇರಿಯಲ್ಲು ಹಡಗಿ, ಮತ್ತೊಂದು ತಂಮ ಸಂಗಡ ಕೊಟ್ಟು, ರವಾನೆ ಮಾಡ ಬಹುದು. ಈ ಕೆಲಸ ನಂಮದು. ಈ ಇಬ್ಬರು ಇಂಜನ್ಯೇರು ಸಾಹೇಬರ ಕೆಲಸವೇನು ಯಂದರೆ: ಮುಂಬಾಯಿ ಲಷ್ಕರು ಪಟ್ಟಣಕ್ಕೆ ಹೋಗುವ ಮಾರ್ಗ ತಂಮ ಕೊಡಗಿನ ಸಂಹಾದ್ದು ಪರಿಯಂತರ ಯತ್ತರವಾದ

1 Robert Taylor Esq. 2 Capt. Brown. 3 Guard.

ಜಾಗಕ್ಕೆ ಹೋಗಿ ನಿಂತು, ಪಿರಿಯಾಪಟ್ಟಣ ಬೆಟ್ಟದ ಹುರದ ಸೀಮೆ ದುರ್ಬೀನಿನಿಂದಾ ನೋಡಿ ವಿಚಾರಿಸಿ, ಆ ವಿವರ ಯಾವತ್ತು ಬರದು, ಅಲ್ಲಿಂದಾ ತಿರುಗಿ, ತಂಮ ಸೀಮೆ ವಳಗೆ ಲಷ್ಕರು ಹೋಗುವ ಮಾರ್ಗವಂನು ನೋಡಿ, ಅದರ ವಿವರವು ಬರದು ಕೊಂಡು, ಹೆಗ್ಗಳದ ಗಟ್ಟಾ ಇಳಿದು ತಲಚ್ಚೇರಿಗೆ ಬಂದಾರು ಯಂಬದಾಗಿ, ಆ ಕಪಿತಾನ್ ಸಾಹೇಬರು ಹೇಳಿದರು. ಅವರು ಹೇಳಿದ ಮೇರೆ, ನಾವು ಆ ಇಂಜನೇರು ಸಾಹೇಬರ ಸಂಗಡ ಕೆಲವು ಜನರಂನು ಕೂಡಿಸಿ ಕೊಟ್ಟು ಸಿದ್ಧೇಶ್ವರನ ಬೆಟ್ಟದ ಕಡೆಗೆ ರವಾನೆ ಮಾಡಿ, ನಾವು ಆ ಕಪಿತಾನ್ ಸಾಹೇಬರ ಸಂಗಡ ಕೊಡಗ ಸೀಮೆಯಿಂದಾ ಹೊರಟು, ಸಾಧಾರಣ ಸಂವತ್ಸರದ ಆಶ್ವೀಜ ತಿಂಗಳಲ್ಲಿ ತಲಚ್ಚೇರಿಗೆ ದಾಖಲಾಗಿ ಇದ್ದೆವು. ಆ ಇಬ್ಬರು ಇಂಜನೇರು ಸಾಹೇಬರು ಸಿದ್ದೇಶ್ವರನ ಬೆಟ್ಟದ ಮೇಲಕ್ಕೆ ಬಂದು, ಮೂರು ತಂಬು ನಿಲ್ಲಿಸಿ, ಅವರ ಮರ್ಜಿ ಮೇರೆ ನೋಡಿ ಬರಕೊಳ್ಳುವ ವಿವರ ಯಾವತ್ತು ಬರ ಕೊಂಡು, ಆ ಸಿದ್ಧೇಶ್ವರನ ಬೆಟ್ಟದಿಂದಾ ತಿರುಗಿ, ನಾವು ತಲಚ್ಚೇರಿಗೆ ತಲುಪಿದ ಯೇಳೆಂಟು ದಿವಸದ ವಳಗೆ ಅವರು ಅಲ್ಲಿಗೆ ಬಂದರು. ಅದೇ ಸಾಧಾರಣ ಸಂವತ್ಸರದ ಆಶ್ವೀಜ ೨೦ನೆ ತಾರೀಖಿನಲ್ಲಿ ಆಲಿಷಾಂ ರಾಬರ್ಟ್ ಟೆಲ್ಯೆರು ಸಾಹೇಬರವರು ಮೇಜರು ಕೊಂವಲದಾರರು[1] ಸಹಾ ಇಂಗ್ರೇಜಿ ಕುಂಪನಿ ಸರಕಾರದ ಕಡೆಯಿಂದಾ ಬಂಗಾಳದ ಗವರ್ನರ್ ಸಾಹೇಬರ ಹೆಸರು, ಮುಂಬಾಯಿ ಗವರ್ನರ್ ಸಾಹೇಬರ ಹೆಸರು, ತಲಚ್ಚೇರಿ ಗವರ್ನರ್ ಸಾಹೇಬರ ಹೆಸರಿನಿಂದಾ ಸಹಾ, ದೋಸ್ತಿ ಕಾಯಂ ಆಗಿ, ಸೂರ್ಯಚಂದ್ರ ಇರುವ ಪರಿಯಂತರ ನಡದು ಬರುವ ಬಗ್ಯೆ, ಉಭಯ ಕಡೆ ಮೋಹರ ದಸ್ತಕತು ಮಾಡಿ, ಯರಡು ಕರಾರುನಾಮೆ ಬರದು, ಅದರಲ್ಲಿ ವಂದಂನು ತಲಚ್ಚೇರಿ ಸರಕಾರದಲ್ಲಿ ಕುಂಪನಿ ಇಂಗ್ರೇಜಿಯವರ ಇಲಾಖೆ ವಳಗೆ ಮಡಗಿ ಕೊಂಡು, ಮತ್ತೊಂದು ವೀರರಾಜೇಂದ್ರ ವಡೆಯರವರ ವಶಕ್ಕೆ ಕೊಟ್ಟು ಕಳುಹಿದರು.

ಆ ಮೇಲೆ ಮೇಜರ ಜನರಾಲ್ ರಾಬರ್ಟ್ ಆಬರಕರಂಬಿ ಸಾಹೇಬ ಬಹಾದ್ದರವರು ಯರಡಾವರ್ತಿ ಮುಂಬಾಯಿ ಲಷ್ಕರು ತೆಗದು ಕೊಂಡು ಬಂದು, ಸಿದ್ಧಾಪುರದ ಬಾಗಿಲ ಹೊರಗಳಿಂದಾ[2] ಸರಹದ್ದು ಸಿದ್ಧೇಶ್ವರನ ಬೆಟ್ಟ ಪರಿಯಂತರ ಯರಡು ಕಂಪು ಫೌಜ ತಂಮ ಸಂಗಡ ಇದ್ದದ್ದಂನು ಇಳಿಸಿ ಇದ್ದರು. ಅದೇ ಸರಹದ್ದು ಸಿದ್ಧೇಶ್ವರನ ಬೆಟ್ಟದ ಮೇಲೆ ಇಂಜನೇರು ಕಪಿತಾನ್ ರೆನೆಲ್ ಸಾಹೇಬ್ ಬಹಾದ್ದರವರು[3] ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಂಮ ಸರಕಾರದ ಫಾಯಿದೆ ಕೆಲಸ ಮಾಡುತ್ತಿದ್ದರು. ಇದೇ ಮೇರೆ ಟೀಪುಸುಲ್ತಾನರ ಸಂಗಡ ಲಡಾಯಿ ಮಾಡುವ ಫಾಯಿದೆ ಕೆಲಸಗಳ ತೆಗೆಯುತ್ತಲೂ, ನಂಮಿಂದಾ ಆಗುವ ನೌಕರಿ ಖಿದ್ಮತ್ತು ಮಂಜೂರು ಮಾಡುತ್ತಲೂ, ಯರಡು ವರುಷ ಸರಿಯಾಗಿ ಕಳದು ಹೋಯಿತು.

ಆ ಮೇಲೆ ಜಯಪ್ರದವಾದ ಮದುರಾಜಿನ ಖಾಸಿ ಫೌಜ ತೆಗದು ಕೊಂಡು, ಬಂಗಾಳದ ಲಾರ್ಡ್ ಕಾರ್ನವಾಲಿಸ್ ಸಾಹೇಬ್ ಬಹಾದ್ದರವರು, ಜನರಾಲ್ ಮೆಡೂಸ್ ಸಾಹೇಬ ಬಹಾದ್ದರವರು ಸಹಾ, ಬಂದರು. ಮುಂಬಾಯಿ ತಾಲೂಕಿನ ಫೌಜ ತೆಗದು ಕೊಂಡು, ಸರ್ ಜನರಾಲ್ ರಾಬರ್ಟ್ ಆಬರಕರಂಬಿ ಸಾಹೇಬ ಬಹಾದ್ದರವರು ಬಂದರು. ಆಲಿಷಾಂ ಈ ಮೂರು ಸರದಾರರು ಬಂದು, ದೊಡ್ಡ ದುಷ್ಮನ ಟೀಪುಸುಲ್ತಾನರ ಸಂಗಡ ಲಡಾಯಿ ಮಾಡಿದಲ್ಲಿ, ಆ ಟೀಪುಸುಲ್ತಾನರು ಲಡಾಯಿದಲ್ಲಿ ಮುರುದ್ದರಿಂದಾ, ಟೀಪುಸುಲ್ತಾನರಿಂದಾ ತಂಮ ಲಷ್ಕರಿನ ಖರ್ಚಿನ ಬದಲಿಗೆ ಬಹಳ ಹಣವು, ಸೀಮೆಯು, ತೆಗದು ಕೊಂಡು, ಅಬ್ದುಲ್ ಖಲಕ್ ಮೊಹಿಜದ್ದೀನ್ ಯಂಬ ಇಬ್ಬರು ಟೀಪುಸುಲ್ತಾನರ ಮಕ್ಕಳಂನು ತೆಗದು ಕೊಂಡು, ಲಾರ್ಡ್ ಕಾರ್ನವಾಲಿಸ್ ಸಾಹೇಬ ಬಹಾದ್ದರವರು ಮದುರಾಜಿನ ಕಡೆಗೆ ಹೋದರು.

ಸರ್ ಜನರಾಲ್ ರಾಬರ್ಟ್ ಆಬರಕರಂಬಿ ಸಾಹೇಬ ಬಹಾದ್ದರವರು ಮುಂಬಾಯಿ ಲಷ್ಕರು ತೆಗದು ಕೊಂಡು, ಈ ಕಡೆ ಕೊಡಗಿಗೆ ಬಂದರು. ಆವಾಗ್ಯೆ ನಾವು ಸಿದ್ಧೇಶ್ವರನ ಸರಹದ್ದಿನ ಬೆಟ್ಟದ ಬಳಿಗೆ ಹೋಗಿ, ಹಾಜರು ಇದ್ದು, ಜಯಪ್ರದವಾದದರ ಶ್ರೇಯಸ್ಸನು ಹಾರೈಸಿ, ಸಲಾಂ ಮಾಡಿದೆವು. ಆವಾಗ್ಯೆ ಆ ಜನರಾಲ್ ಸಾಹೇಬರವರು ಹೇಳಿದರು: ಟೀಪುಸುಲ್ತಾನರ ಸರಕಾರದ ಸಂಗಡ ಸಲ್ಲಾ ಆಯಿತು. ತಾವು ತಂಮ ಕೊಡಗಿನ ಕದೀಂ ಸರಹದ್ದು ಸಿದ್ಧೇಶ್ವರನ ಬೆಟ್ಟದ ಬಳಿಯು ಪಹರಾ ಮಡಗಿ, ತಂಮ ಸರಹದ್ದಿನ ಬಂದುಬಸ್ತು ಮಾಡಿ ಕೊಳ್ಳಬೇಕು. ಸರಹದ್ದು ತಖಾವತು ಮಾಡಿ, ಮುಂದೆ ಹೋಗುವದಕ್ಕೆ ಕುಂಪನಿ ಹುಕುಂ ಇಲ್ಲಾ ಯಂತಾ, ಹೇಳಿದರು.

1 Major Connell. 2 ಹೊರಗಿನಿಂದಾ. 3 Capt. Reynolds.

ಆ ಜನರಾಲ್ ಸಾಹೇಬರವರ ಹಿಷಾರೆ ಪ್ರಕಾರ ತಲೆ ಕೂದಲಷ್ಟು ತಫಾವತು ಮಾಡದೆ, ಸಿದ್ಧೇಶ್ವರನ ಬೆಟ್ಟದ ಬಳಿಯ ಸರಹದ್ದಿನಲ್ಲಿ ಪಹಾರೆ ಮಡಗಿ, ನಂಮ ಸರಹದ್ದಿನ ಬಂದುಬಸ್ತು ಮಾಡಿದೆವು. ಪರಿಧಾವಿ ಸಂವತ್ಸರದ ಮಾರ್ಗಶಿರ ೨೭ನೆ ತಾರೀಖಿನಲ್ಲಿ, ಆಲಿಷಾನ್ ನತೆಯವಾದ ನಡತೆಯಾದ ಇಂಜನೇರು ಇಮಿಲ್ಟನ್ ಸಾಹೇಬರವರು ಬಂದು, ಕೊಡಗಿನ ಶೀಮೆ ಸರಹದ್ದು ತಿಗಿ ನೋಡಿ, ಕೊಡಗಿನ ಶೀಮೆ ಸರಹದ್ದು ಮೊಕರರು ಮಾಡಿ, ಇರುವದಂನು ತಮಸೀಲಲ್ಲು ಬರ ಕೊಂಡು ಹೋಗಿ, ಮುಂಬಾಯಿ ಸರಕಾರದಲ್ಲಿ ಪಾಪ್ತಿಸಿ ಇದ್ಧಾರೆ. ಮುಂದೆ ಸರಹದ್ದಿನಲ್ಲಿ ಯೇನಾದರೂ ತಕರಾರು ಬಂದರೆ, ತೀರಿಸುವ ಬಗ್ಗೆ, ಅದರ ನಕಲಂನು ಮಲೆವಾರಿ ಕಮಿಶನ್ ಸಾಹೇಬರವರ ಬಳಿಯಲ್ಲಿ ಕೊಟ್ಟು ಇದ್ಧಾರೆ. ಕಮಿಶನ್ ಸಾಹೇಬರವರು ಆ ಯಿಂಟು ವರುಷದ ವಳಗೆ ನಾವು ದೋಸ್ತಿಯಿಂದಾ ಯಾವದಾಂದು ನೌಕರಿ ಮಾಡಿ ಇದ್ದೆವೋ, ಅದೆಲ್ಲಾ ಕಬೂಲು ಮಾಡಿ, ಸರಹದ್ದಿನ ವಿಷಯವಾಗಿಯೂ, ಮತಕು ಬರದು ಇರುವಂಥಾ ಮೆಹರ್ಬಾನಗಿ ಕಾಗದಗಳು ಸಂನದಿನ ಹಾಗೆ ಹಾಜರು ಇದೆ. ಆ ಯಿಂಟು ವರುಷ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೂ ಟೀಪುಸುಲ್ತಾನರಿಗೂ ಸಲ್ಲಾದ ವಳಗೆ ಕಳದು ಹೋಯಿತು. ಆ ಯಿಂಟು ವರುಷದ ಮೇಲೆ ನವಾಬ್ ಮುಸ್ತತಾಬ್ ಮಾಲಿವುಲ್ ಅಲ್ಕಾಬ್ ಅಷರಫುಲ್ ಅಷರಾಫ್ ಗವರ್ನರ್ ಜನರಾಲ್ ಮಾರ್ಕ್ವಿಸ್ ವಲ್ಲೆಜಲಿ ಸಾಹೇಬ ಬಹಾದ್ದರವರು ಹಿಂದುಸ್ಥಾನದ ಶೀಮೆ ಬಂದುಬಸ್ತಿನ ಬಗ್ಗೆ, ತಿರಿಗಿ ಬಂದಾಗ್ಗೆ, ಇನಾಯತನಾಮಾ ಕಳುಹಿಸಿ ಇದ್ದರು. ಅದರ ಅಭಿಪ್ರಾಯ: ಟೀಪುಸುಲ್ತಾನಿಗೆ ಸಲ್ಲಾದ ಬೇರು ಕಾಯಂ ಮಡಗ ಬೇಕು ಯಂಬದು ಖುಷಿ ಇಲ್ಲಾ. ಟೀಪುಸುಲ್ತಾನ ನಿಮಗೆ ದೊಡ್ಡ ದುಷ್ಮಾನ. ತಂಮ ಸರಹದ್ದಿನ ರೂಬು ರೂಬು ಇದ್ಧಾನೆ. ಯಲ್ಲಾ ಬಗೆಯಿಂದಲೂ ತಂಮ ಶೀಮೆಗೆ ನಿಗಾವಾನಿ ಮಾಡುವಂಥಾದ್ದು ಜರೂರು ಇದೆ. ಇದು ಕಾರಣ ದೋಸ್ತಿ ಕಲಂಮಿನಿಂದಾ ಬರೆಯುತ್ತೇವೆ. ತಂಮ ಜಮಿಯತ್ತಿನ ಜನರ ಲಡಾಯಿದ ಸಾಮಾನು ಹಾತಯಾರು ತಯಾರು ಮಾಡ ಬೇಕು. ಖಬರ್ದಾರಿಯಿಂದಾ ತಂಮ ಸರಹದ್ದಿನ ಬಂದುಬಸ್ತು ಮಾಡಿ ಕೊಳ್ಳ ಬೇಕು. ಕೆಲವು ದಿವಸದಲ್ಲಿ ಷಹಾಮತ್ ಮಂಜಲತ್ ಮಾಲಿ ಮರ್ತಬತ್ ಕಪಿತಾನ್ ಮಾಹಿನಿ ಸಾಹೇಬರವರಂನು ವಕಾಲತ್ತಿನ ಹುದ್ದೆ ಮೇಲೆ ಮೊಕರರು ಮಾಡಿ, ತಂಮ ಬಳಿಗೆ ರವಾನೆ ಮಾಡಿಯ್ಯೇವು, ಆಲಿಯಕ್ದಾರು[2] ಜನರಾಲ್ ಇಷ್ಟ್ವಾರ್ಟ ಸಾಹೇಬ ಬಹಾದ್ದರವರು ಮೊದಲಿನ ದಸ್ತೂರಿ ಮೇರೆ ಮುಂಬಾಯಿ ಫೌಜ ತೆಗದು ಕೊಂಡು ಬರುತ್ತಾ ಇದ್ಧಾರೆ. ಅವರು ಹೇಳಿದ ಮೇರೆ, ಆ ವಕೀಲ ಕಪಿತಾನ್ ದ್ಯೇನಸ್ ಮಾಹಿನಿ ಸಾಹೇಬ ಬಹಾದ್ದರವರು ತಮಗೆ ಜಾಹೀರು ಮಾಡ್ಯಾರು. ಅದೇ ಮೇರೆ ಅಮಲು ಮಾಡ ಬೇಕು. ಯೇನಾಂದು ಸಹಾಯ ತಂಮಿಂದಾ ಆಗ ತಕ್ಕಂಥಾ ಉಪಕಾರ ಮಾಡ ಬೇಕು ಯಂಬದಾಗಿ, ಬರದು ಇದ್ದರು.

ಅದೇ ಮೇರೆ ಜನರಾಲ್ ಇಷ್ಟ್ವಾರ್ಟ ಸಾಹೇಬ್ ಬಹಾದ್ದರವರು ಧಾರೆಗಳ ಸರಹದ್ದಿನಲ್ಲಿ ಶಿರೀರಂಗಪಟ್ಟಣದ ಕ್ವಾಟೆ ತೆಗದು ಕೊಳ್ಳುವ ಬಗ್ಗೆ, ಮೋರ್ಚೆ ಸಾಮಾನು ತಯಾರು ಮಾಡಿಸುವ ಬಗ್ಗೆ, ಕಪಿತಾನ್ ಜಾನ್ಸಂನ್ ಸಾಹೇಬರಿಗೆ ಮೊಕರರು ಮಾಡಿ ಇದ್ಧೇವೆ. ಆ ಸಾಹೇಬರು ಬಂದಾರು. ಆ ಸರಂಜಾಮು ತಯಾರು ಮಾಡುವ ಬಗ್ಗೆ, ಬೇಕಾದ ಆಳುಗಳಂನು ಧಾರೆಗಳವರ ಸಂಗಡ ತೆಗದು ಕೊಳ್ಳುವದು ಯಂತಾ, ಆ ವಕೀಲ್ ಸಾಹೇಬರಿಗೆ ಹಿಷಾರೆ ಮಾಡಿದರು. ಆ ಮೇರೆ ಆ ವಕೀಲ್ ಸಾಹೇಬರು ಹೇಳಿದರಿಂದಾ, ನಾನೂರು ಜನವಂನು ಕೊಟ್ಟು ಇದ್ದೆವು. ಆ ಜನರಂನು ಜಾನ್ಸಂನ್ ಸಾಹೇಬರವರು ಅವರ ಸಂಗಡ ತೆಗದು ಕೊಂಡು, ಸಿದ್ಧೇಶ್ವರನ ಬೆಟ್ಟದ ಸರಹದ್ದಿನ ಕೆಳಗೆ ಮೂರು ತಿಂಗಳು ಪರಿಯಂತರ ಮೋರ್ಚೆಗೆ ಬೇಕಾದ ಸರಂಜಾಮು ತಯಾರು ಮಾಡಿಸುತ್ತಾ ಇದ್ದರು. ದಿನಾಪ್ರತಿಯಲ್ಲು ವಂದು ವೇಳೆ ಆ ಸಿದ್ಧೇಶ್ವರನ ಬೆಟ್ಟದ ಮೇಲೆ ಹೋತಿ, ದುರ್ಬೀನಿನಿಂದಾ ನೋಡಿ, ಸರಕಾರದ ಫಾಯಿದೆ ಕೆಲಸಗಳ ಬರೆಯುತ್ತಿದ್ದರು. ಆ ಮೇಲೆ ಸಂದಾರ ಇಂಜನೇರು ಕಪಿತಾನ್ ದಿನಸ್ ಮಂಕ್ರಿಫ್[3] ಸಾಹೇಬ್ ಬಹಾದ್ದರವರು ಐನೂರು ಜನ ಪನಿಯರು[4] ಯಂಬ ಕಾಮಾಟಿಯವರಂನು ತೆಗದು ಕೊಂಡು ಬಂದು, ಹೆಗ್ಗಳದ ಗಟ್ಟದ ಕೆಳಗೆ ಇರುವ ಕಲ್ಲು ಹೊಳೆಯಿಂದಾ ಸಿದ್ಧೇಶ್ವರನ ಬೆಟ್ಟದಿಂದಾ ಮುಂದೆ ವಂದು ಗುಂಡಿನ ಯಿಸಿಗೆ ದೂರ ಪರಿಯಂತ್ರ ಮೊದಲು ನಾವು ದುರುಸ್ತು ಮಾಡಿಸಿ ಇದ್ದ ಮಾರ್ಗ ಪೆಂಗಾಡಿ ಮುಂತಾಗಿ ಹೋಗುವ ಬಗ್ಗೆ, ಚಂನಾಗಿ ದುರುಸ್ತು ಮಾಡಿ ಇಲ್ಲಾ ಯಂತಾ, ಅದೇ ಕಲ್ಲು ಹೊಳೆಯಿಂದಾ ಸಿದ್ಧೇಶ್ವರನ ಬೆಟ್ಟದ ಮುಂದೆ ವಂದು ಗುಂಡಿನ ಯಿಸಿಗೆ ದೂರ

1 ನಾಶ. 2 ಪದವುಳ್ಳ. 3 Captain Denys Moncrieff. 4 Pioneer.

ಪರಿಯಂತರ ತಯಾರು ಮಾಡಿ, ಅದೇ ಬೆಟ್ಟದ ಮೇಲೆ ವಂದು ತಂಬು ನಿಲ್ಲಿಸಿ, ಯೆರಡು ಅರೆ ತಿಂಗಳು ಪರಿಯಂತರ ಆ ಜಾಗದಲ್ಲಿ ದುರ್ಬೀನಿನಿಂದಾ ನ್ಯಾಡಿ, ಸರಕಾರದ ಫಾಯಿದೆ ಕೆಲಸಗಳ ಬರೆಯುತ್ತಾ ಇದ್ದರು. ಮತ್ತು ಮೋಟೆಗೆ ಇರುವ ಸರಂಜಾಮು ಆ ಜಾನ್ಸನ್ ಸಾಹೇಬರವರ ಕಾಟೆ ವಳಗೆ ಇತ್ತು. ಆ ಇಬ್ಬರು ಸಾಹೇಬರು ದೊಡ್ಡ ಲಷ್ಕರಿನ ನಿಶಾನಿ ಫಿರಂಗಿ ಅವಾಜ ಕೇಳಿದರೆ, ಅದರ ಜವಾಬು ಕೊಡುವ ಬಗ್ಗೆಯೆ, ಆ ಸಿದ್ಧೇಶ್ವರನ ಸರಹಾದ್ದಿನ ಬೆಟ್ಟದ ಮೇಲೆ ಇರುತ್ತಿದ್ದರು. ಅವರ ಕಿದ್ಮತ್ತು ನೌಕರಿ ಮಾಡುವ ಬಗ್ಗೆಯೆ, ಅದೇ ಸಿದ್ಧೇಶ್ವರನ ಬೆಟ್ಟದ ಸಮೀಪದ ಚಂಬೆನ ಕ್ಯಾಟೆ ಜನರಿಗೆ ತಾಕೀತಿ ಮಾಡಿಸಿ ಇದ್ದೆವು. ಆ ಜನರು ಆ ಸಮಯದಲ್ಲಿ ಆ ಸಾಹೇಬರ ಚಾಕರಿಯನ್ನು ಚನ್ನಾಗಿ ಮಾಡಿ ಇದ್ದಾರೆ.

ಆ ಮೇಲೆ ಬಂಗಾಳದ ನವಾಬ ಸಾಹೇಬರವರ ಶಿಫಾರಿ ಪ್ರಕಾರ, ಜನರಾಲ್ ಇಷ್ಟ್ಯಾರಟ ಸಾಹೇಬ ಬಹಾದ್ದರವರು ಮುಂಬಾಯಿ ಫೌಜ ತೆಗದು ಕೊಂಡು, ಹೆಗ್ಗಳದ ಗಟ್ಟಾ ಹತ್ತಿ ಬಂದರು. ಆ ಜನರಾಲ್ ಇಷ್ಟ್ಯಾರಟ ಸಾಹೇಬರವರ ಬಳಿಗೆ ನಾವು ಹೋಗಿ, ಮಿಲಾಕತ್ತು ಮಾಡಿದೆವು. ಆವಾಗ್ಗೆಯೆ ಆ ಜನರಾಲ್ ಸಾಹೇಬರವರು ಹೇಳಿದರು: ಜನರಾಲ್ ರಾಬರ್ಟ್ ಆಬರಕರಂಬಿ ಸಾಹೇಬರವರ ದಿವಸದಲ್ಲಿ ಇಂಗ್ರೇಜ ಕುಂಪನಿ ಸರಕಾರದ ಕೆಲಸದ ಮೇಲೆ ಬಹಳ ಖೈರಖಾಯಿ ಪ್ರಯತ್ನ ಮಾಡಿ ಇದ್ದೀರಿ. ಆ ವಿವರ ಯಾವತ್ತು ದೊಡ್ಡ ದೊಡ್ಡ ಸರದಾರರ ಮುಖ ವಚನದಿಂದಾ ಕೇಳಿ, ನಮ್ಮ ಮನಸಿನಲ್ಲಿ ಚಿತ್ರ ಬರದ ಹಾಗೆ ಇದೆ. ಈಗಲೂ ಅದೇ ಮೇರೆ ನಾವು ಸಹಾಯ ಮಾಡಿದ್ರೆ, ಯಂಬದಾಗಿ ಉಮ್ಮೇದು ಮಾಡಗುತ್ತೇವೆ. ಯೇನಾಂದು ಕುಮಕು ಮದತ್ತು ಮಾಡುವಂಥಾದ್ದು ಈಗ ಮಾಡಬೇಕು ಯಂತಾ, ಹೇಳಿದರು. ಈ ಮಾತ ನಾವು ಕಬೂಲು ಮಾಡಿ, ಆ ವಕೀಲ ಸಾಹೇಬರವರು ಶಿಫಾರಿ ಮಾಡಿದ ಮೇರೆ, ಯೇನಾಂದು ನೌಕರಿ ನಮ್ಮ ಕೈಯಿಂದಾ ಆಗುವಂಥಾದ್ದನ್ನು ಶಿರಸಾದಿಂದಾ[1] ಮಾಡಿದೆವು. ಆ ಜನರಾಲ್ ಇಷ್ಟ್ಯಾರ್ಟ ಸಾಹೇಬರವರು ಬರುವದಕ್ಕೆ ಹದಿನೈದು ದಿವಸಕ್ಕೆ ಮೊದಲು, ಕರ್ನೇಲ್ ಮಂಟರಿಜಾರು ಸಾಹೇಬ ಬಹಾದ್ದರವರು,[2] ಮೇಜರ ಡಿಜನಿ ಸಾಹೇಬ ಬಹಾದ್ದರವರು[3] ಸಹಾ ಬಂದು, ಯೆರಡು ಪಟಾಲಮಿನ ಬಾರು ಸಿದ್ಧೇಶ್ವರನ ಸರಹಾದ್ದಿನ ಬೆಟ್ಟದ ಕೆಳಗೆ ಇಳಿಸಿ ಇದ್ದರು. ಆ ಸಾಹೇಬರು ನಮ್ಮಿಂದಾ ಆಗ ತಕ್ಕ ನೌಕರಿ ತೆಗದು ಕೊಂಡು ಇದ್ದಾರೆ. ಆ ಮೇಲೆ ಆ ಜನರಾಲ್ ಇಷ್ಟ್ಯಾರಟ ಸಾಹೇಬ ಬಹಾದ್ದರವರು ಹೆಗ್ಗಳದ ಗಟ್ಟದ ಮೇಲೆ ನಾಲಕು ಐದು ದಿವಸ ಮೊಕಾಂ ಮಾಡಿ, ಯಾವತ್ತೂ ಲಷ್ಕರು ಸಂಗಡ ತೆಗದು ಕೊಂಡು ಬಂದು, ಸಿದ್ಧಾಪುರದ ಸುಫದ ಬಾಗಿಲ ಹೊರಗೆ, ಕರಡಿಗ್ಯಾಡಿಂದಾ ಸಿದ್ಧೇಶ್ವರನ ಸರಹಾದ್ದಿನ ಬೆಟ್ಟ ಪರಿಯಂತರ ಲಷ್ಕರಿನ ಬಾಜಾರು ಇಳಿಸಿ ಇದ್ದರು.

ಮತ್ತೆ ಕೆಲವು ದಿವಸದ ಮೇಲೆ ಖಾಸಾ ಟೀಪುಸುಲ್ತಾನರು, ಅವರ ಖಾಸಿ ಫೌಜ ಸಮೇತ ಬಂದು, ಪಿರಿಯಾಪಟ್ಟಣದ ಮೈದಾನದಲ್ಲಲು ಇಳಿದರು. ಆವಾಗ್ಗೆಯೆ ನಾವು, ಆ ವಕೀಲ್ ಕಪಿತಾನ್ ದಿನಸ ಮಾಹಿನಿ ಸಾಹೇಬರು ಮುಂತಾದ ಸರದಾರರು, ಲಷ್ಕರಿನಿಂದಾ ಹೊರಟು, ಸಿದ್ಧೇಶ್ವರನ ಬೆಟ್ಟದ ಮೇಲೆ ಹತ್ತಿ, ಮಂಕರಿಪ್ ಸಾಹೇಬರವರ ತಂಬಿನ ವಳಗೆ ಕುಂತು ಕೊಂಡು, ಪಿರಿಯಾಪಟ್ಟಣದ ಮೈದಾನದ ಕಡೆ ದುರ್ಬೀನಿನಿಂದಾ ನ್ಯಾಡುತ್ತಿದ್ದೆವು. ಆವಾಗ್ಗೆಯೆ ಹಗಲು ಹಾನೆರಡು ಗಳಿಗೆ ಹೊತ್ತು ಆಗಿ ಇತ್ತು. ಅಷ್ಟರಲ್ಲಿ ಯೇಕಾಯೇಕಿ, ಟೀಪುಸುಲ್ತಾನರ ದಂಡಿನ ವಂದು ತಂಬು ನಿಲ್ಲಿಸಿದ್ದು ಕಾಣ ಬಂತು. ಆ ಮೇಲೆ ಮೂರು ಜಾವ[4] ಪರಿಯಂತರ ಯೆಳ್ಳನೂರು ತಂಬು ನಿಲ್ಲಿಸಿದ್ದು ಕಾಣ ಬಂತು. ಅವರ ಫೌಜ ಹದಿನೆಂಟು ಸಾವಿರ ಜನದ ಸುಮಾರು ಬಂದು ಇಳಿತ್ತು. ಆ ವಕೀಲ ಸಾಹೇಬರು ಮುಂತಾದ ಸರದಾರರು, ಟೀಪುಸುಲ್ತಾನರ ಫೌಜಿನ ತಂಬು ಯಾವತ್ತು ನಿಲ್ಲಿಸಿದ್ದನ್ನು ಕಣ್ಣಿಂದಾ ನ್ಯಾಡಿ, ದೊಡ್ಡ ಲಷ್ಕರಿಗೆ ತಿರಿಗಿ ಬಂದು, ಆ ಕಣ್ಣಾರೆ ಕಂಡು ಬಂದಂಥಾ ವಿವರ ಯಾವತ್ತು ಜನರಾಲ್ ಇಷ್ಟ್ಯಾರಟ ಸಾಹೇಬರವರಿಗೆ ಜಾಹೀರು ಮಾಡಿದೆವು.

ಆ ಮಾರ್ನೇ ದಿವಸ ಟೀಪುಸುಲ್ತಾನರು ಅವರ[5] ಫೌಜ ಯಾವತ್ತು ತೆಗದು ಕೊಂಡು ಬಂದು, ತಮ್ಮ ಸರಹಾದ್ದಿನಲ್ಲಿ ಕುಂತು ಕೊಂಡು, ಯೇನೂ ಅಂದ್ಯೇಶ ಮಾಡದೆ, ಕಾಳಾಯುಕ್ತಿ ಸಂವತ್ಸರದ ಫಾಲ್ಗುಣ ಶು ೧ ದಿವಸ, ನಮ್ಮ ಕಾಡಗಿನ ಶೀಮೆ ಸರಹಾದ್ದಿನ ವಳಿ ನುಗ್ಗಿ, ಕರ್ನೇಲ್ ಮಂಟರಿಜಾರು ಸಾಹೇಬರವರು, ಮೇಜರ ಡಿಜನಿ ಸಾಹೇಬರವರು,

1 Double instrumental case, Sanscrit and Canarese. Conf. ಶಿರಸದಿಂದಾ. 2 Colonel Montrisor. 3 Major Disney. 4 ಯಾಮ. 5 ತಾವು.

ಜನರಾಲ್ ಹಾರ್ಟಲಿ ಸಾಹೇಬರವರು ಸಹ, ನಂಮ ಕೊಡಗಿನ ಶೀಮೆ ಸರಹದ್ದಿನಲ್ಲಿ ಹಾಜರು ಇದ್ದರು. ಅವರ ಸಂಗಡ ಲಡಾಯಿ ಶುರು ಮಾಡಿ, ಮೂರು ನಾಲ್ಕು ಜಾವ ಪರಿಯಂತರ ಯರಡು ಕಡೆ ಫೌಜ ಲಡಾಯಿವಾಗುತ್ತಾ ಇತ್ತು. ಆ ಮೇಲೆ ಜನರಾಲ್ ಇಷ್ಟ್ಯಾರ್ಟ ಸಾಹೇಬ್ ಬಹಾದ್ದರವರು ಯರಡು ರಿಜಿಮಿಂಟು ಮ್ಯಾಜರ ಜಮೂಮದ್ ಬಹಾದ್ದರರ ತಂಮ ಸಂಗಡ ತೆಗದು ಕೊಂಡು, ದೊಡ್ಡ ದೊಡ್ಡ ಸರದಾರರು ಸಹಾ ಕುಂಮಕು ಮಾಡುವ ಬಗ್ಯೆ ಬಂದರು. ನಾವು ಆ ವಕೀಲ್ ಸಾಹೇಬರ ಹಿಷಾರೆ ಮ್ಯೆರೆ ನೌಕರಿ ಮಾಡುತ್ತಾ, ಆ ಲಡಾಯಿದ ಸಮಯದಲ್ಲಿ ಅದೇ ಜಾಗದಲ್ಲಿ ಹಾಜರು ಇದ್ದೆವು. ಆ ರಾತ್ರೆ ಯಂಟು ಗಳಿಗೆ ಆದ ಮೇಲೆ, "ಮಂತರಿಜಾರು ಸಾಹೇಬರವರ ಅಗಾಡಿ ತುಕಡಿ ಫೌಜಂನು ಸಂಗಡ ತೆಗದು ಕೊಂಡು, ದೊಡ್ಡ ಲಷ್ಕರಿನ ಬಳಿಯ ಹೋಗಿ ಇಳಿಸ ಬೇಕು. ನೀವು ನಿಂಮ ಜನರಂನು ಸರಹದ್ದಿನಲ್ಲಿ ಚೌಕಿ ಮಡಗಿ; ಖಬರದಾರಿ ಮಾಡ ಬೇಕು" ಯಂತಾ, ಜನರಾಲ್ ಸಾಹೇಬರವರು ಹೇಳಿದರು ಆ ಜನರಾಲ್ ಸಾಹೇಬರು ಹೇಳಿದ ಮೇರೆ, ಸರಹದ್ದಿನಲ್ಲಿ ಆಯಾಯ ಜಾಗದಲ್ಲಿ ಖಬರದಾರಿ ಬಗ್ಯೆ ಪಹರೆ ಮಡಗಿದೆವು.

ಆ ಮೇಲೆ ಟೀಪುಸುಲ್ತಾನರು ಮುರುದು, ಹಿಂದಕ್ಕೆ ಹೋಗಿ, ಪಿರಿಯಾಪಟ್ಟಣದಲ್ಲಿ ಐದು ದಿವಸ ಮೊಕಾಂ ಮಾಡಿ, ಅಲ್ಲಿಂದಾ ಕೂಚು ಮಾಡಿ, ಶ್ರೀರಂಗಪಟ್ಟಣದ ಕಡೆಗೆ ಹೋದರು.

ಯರಡನೆ ಸಲಾ ಮಂತರಿಜಾರು ಸಾಹೇಬರವರ ಅಗಾಡಿ ತುಕಡಿ ಬಂದು, ಮೊದಲಿನ ಹಾಗೆ ಸಿದ್ಧೇಶ್ವರನ ಬೆಟ್ಟದ ಕೆಳಗೆ ಲಡಾಯಿವಾದ ಜಾಗದಲ್ಲಿ ಇಳಿಯಿತು. ಇದಲ್ಲದೆ ಆ ಲಡಾಯಿದ ದಿವಸ ರಾತ್ರೆ, ಜನರಾಲ್ ಸಾಹೇಬರವರು ಹೇಳಿದರು: "ಟೀಪುಸುಲ್ತಾನರು ಗರೂರಿಯಿಂದಾ ಇಂಗ್ರೇಜಿ ಕುಂಪನಿ ಸರಕಾರದ ಇಲಾಖೆ ಕೊಡಗಿನ ಶೀಮೆ ಸರಹದ್ದಿನ ವಳಗೆ ಬಂದು, ಲಡಾಯಿ ಶುರು ಮಾಡಿ, ಸಲ್ಲಾದ ನಡತೆ ತಾವಾಗಿ ಮುರುದು ಇದ್ದಾರೆ. ಯಲ್ಲಾ ಬಗೆಯಿಂದಲೂ ಈ ಮಾತಿನ ತಕ್ಸೀರು ಅವರ ಮೇಲೆ ಸಾಬೂತಾಗಿ ಇದೆ. ಈಗ ನಿಮಗೆ ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ಕಡೆಯಿಂದಾ ಹುಕುಮ್ ಆಗುತ್ತದೆ. ನೀವು ಮಾಡ ಬೇಕು: ನಿಂಮ ಜನರಿಗೆ ತಾಕೀತು ಮಾಡಿ, ಟೀಪುಸುಲ್ತಾನರ ಶೀಮೆಗೆ ನುಗ್ಗಿ, ಲೂಟಿ ಮಾಡಿ ತರ ಬೇಕು. ಅಥಾಪಿ, ಅವರ ಕಡೆ ಶಿಪಾಯಿ ಜನ ಲಡಾಯಿ ಮಾಡಿದರೆ, ನೀವು ಲಡಾಯಿ ಮಾಡ ಬೇಕು. ಈ ಹುಕುಮ್ ನಾವು ರಜಾವಂದಿಯಿಂದಾ ನಿಂಮ್ಮೇಲೆ ಹೇಳಿ ಇದ್ದೇವೆ. ಇದಕ್ಕೆ ನೀವು ಕಬೂಲು ಮಾಡಿ, ಸರಕಾರದ ನೌಕರಿ ಖೈರುಕಾಯಿ ಹರಯತ್ನದಿಂದಾ, ಯಾವತ್ತು ಜನರಿಗೂ ತಿಳಿಯುವ ಹಾಗೆ ಮಾಡ ಬೇಕು" ಯಂಬದಾಗಿ, ನಮಗೆ ಹೇಳಿದರು. ಈ ಮಾತಿಗೆ ಜನರಾಲ್ ಸಾಹೇಬರವರು ಹುಕುಮ್ ಕೊಟ್ಟ ಮೇರೆಗೆ, ನಂಮಿಂದಾ ದೊಡ್ಡ ಸರಕಾರದ ಖೈರುಕಾಯಿ ಹರಯತ್ನ ನೌಕರಿ ಆಗುವಂಥಾದ್ದು ಆಗು ಮಾಡಿದೆವು.

ಈ ಮಾತಿಗೆ ಮುಂಬಾಯಿ ಲಷ್ಕರಿನ ಸರದಾರರು ಅದವಾ ಆಲಾ ಸಮಸ್ತರು ಸಾಕ್ಷಿ ಇದ್ದಾರೆ. ಆ ಜಾಗ ಟೀಪುಸುಲ್ತಾನರ ಫೌಜಿಗೂ ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ಫೌಜಿಗೂ ಲಡಾಯಿವಾದ ಜಾಗಾ ಅದು; ಖಾಸಾ ಸರಹದ್ದು ಸಿದ್ಧೇಶ್ವರನ ಬೆಟ್ಟ ಇದೆ. ಅದು ಕೊಡಗಿನ ಶೀಮೆ ಸರಹದ್ದಿನ ವಳಗೆ ಇದೆ. ಅದಲ್ಲಾ, ಮೈಸೂರ ಶೀಮೆ ಸರಹದ್ದಿನ ವಳಗೆ ಇದೆಯೋ ಯಂತಾ, ದರಿಯಾಪ್ತು ಮಾಡ ಬೇಕು. ಆ ಮೇಲೆ ಆ ಸರಹದ್ದು ಯಾರ ಶೀಮೆ ಇಲಾಖೆ ಇದೆಯೋ, ಅವರಿಗೆ ಕೊಡಿಸ ಬೇಕು. ಈ ಮಾತಿಗೆ ನಾವು ರಜಾವಂದಿಯಿಂದಲೂ, ಖುಷಿಯಿಂದಲೂ ಕಬೂಲು ಮಾಡಿಯೇವು. ಈ ಸದರಿ ಬರದು ಇರುವ ಕೆಲು ವಿವರವಂನು ದರಿಯಾಪ್ತು ಮಾಡ ಬೇಕು. ಶರಮವಾದೀತು ಯಂತಾ, ಬಿಡ ಬಾರದು.

ನಾವು ಕೊಡಗಿನ ಧಾರೆಗಳಾದ ವೀರರಾಜೇಂದ್ರ ವಡೆಯರವರು ಕೀಲಕ ಸಂವತ್ಸರದಲ್ಲಿ ಟೀಪುಸುಲ್ತಾನರ ದ್ಯಾಸ್ತಿಯಿಂದಾ ಕೈ ತೆಗದು, ನಂಮ ಕೊಡಗಿನ ಶೀಮೆ ವಳಗೆ ಬಂದು, ನಂಮ ಶೀಮೆ ಸರಹದ್ದು ಸಿದ್ಧೇಶ್ವರನ ಬೆಟ್ಟವಾದ್ದರಿಂದಾ, ಆ ಬೆಟ್ಟದ ಬೆಂನಿನ ಮರೆಯಲ್ಲಿ ಮೂರು ವರುಷ ಇದ್ದು, ನಂಮ ಹಿರಿಯವರು ಧಾರಕನ ಮಾಡಿದಂಥಾವರು ಬಂದುಬಸ್ತು ಮಾಡಿದ ಮೇರೆ ಆ ಸಿದ್ಧೇಶ್ವರನ ಬೆಟ್ಟದ ಮುಂದೆ, ವಂದು ಕ್ಯಾವಿ ಗುಂಡಿನ ಯಸೆಗೆ ದೂರದಲ್ಲಿ, ನಾವು ಪಹರೆ ಚೌಕಿ ಮಡಗಿ, ಆ ಸರಹದ್ದಿನ ಬಂದುಬಸ್ತು ಮಾಡಿ ಇದ್ದೇವೆ. ಈ ಸರಹದ್ದು ಅಥಾಪಿ ಟೀಪುಸುಲ್ತಾನರ ಶೀಮೆಯದು ಆಗಿ ಇದ್ದರೆ, ಟೀಪುಸುಲ್ತಾನರ ಬಂದುಬಸ್ತಿನ ವಳಗೆ ಇರುತಿತ್ತು. ಇದಲ್ಲದೆ ಮೂರು ವೇಳೆ ಇಂಗ್ರೇಜಿ ಬಹಾದ್ದರರ ಲಷ್ಕರು ಕೊಡಗಿನ ಶೀಮೆ ವಳಗೆ ಬಂದು ಇತ್ತು. ಆ ಲಷ್ಕರು

ಬರುವದಕ್ಕೆ ಯರಡು ಮೂರು ತಿಂಗಳಿಗೆ ಮೊದಲು ಆ ಮಾರ್ಗ ದುರುಸ್ತು ಮಾಡಿಸುತ್ತಾ ಇದ್ದೆವು. ಇದಲ್ಲದೆ ಇಂಗ್ರೇಜಿ ಬಹಾದ್ದರ ಸರದಾರರು ಅದೇ ಮಾರ್ಗವನ್ನು ದುರುಸ್ತು ಮಾಡಿಸುತ್ತಾ ಇದ್ದರು. ಇದಲ್ಲದೆ ಅದೇ ಸಿದ್ಧೇಶ್ವರನ ಬೆಟ್ಟದ ಕೆಳಗೆ ಮೋದಿಖಾನೆ ಕಟ್ಟಿಸಿ, ದರ್ಯಾಬಸ್ತು ಲಷ್ಕರಿನ ಸಾಮಾನು ಆ ಮೋದಿಖಾನೆ ವಳಗೆ ತುಂಬಿಸಿ ಇದ್ದೆವು. ಅಥಾಪಿಸಿ, ಆ ಸರಹದ್ದು ಅವರ ಇಲಾಖೆ ಆಗಿ ಇದ್ದರೆ, ಆ ಲಷ್ಕರು ಹೋಗುವ ಮಾರ್ಗ ಯಾವ ಮೇರೆ ದುರುಸ್ತು ಆಗುತ್ತಿತ್ತು? ಅಲ್ಲಿ ಮೋದಿಖಾನೆ ಯಾವ ಮೇರೆ ಇರುತ್ತಿತ್ತು? ಇದಲ್ಲದೆ ಆ ಸಿದ್ಧೇಶ್ವರನ ಬೆಟ್ಟದ ಕೆಳಗೆ ಕಪಿತಾನ್ ಜಾನ್ಸನ್ ಸಾಹೇಬರವರು ಇದ್ದು, ಮೂರು ತಿಂಗಳು ಪರಿಯಂತರ ಮೋರ್ಚೆಗೆ ಇರುವ ಸಾಮಾನು ತಯಾರು ಮಾಡಿಸುತ್ತಿದ್ದರು. ಅಥಾಪಿಸಿ, ಆ ಸರಹದ್ದಿನ ಸಿದ್ಧೇಶ್ವರನ ಬೆಟ್ಟ ಟೀಪು ಸುಲ್ತಾನರ ಶೀಮೆಗೆ ಕೂಡಿದ್ದಾಗಿ ಇದ್ದರೆ, ಅವರ ಶ್ರೀರಂಗಪಟ್ಟಣ ತೆಗೆದು ಕೊಳ್ಳುವ ಬಗ್ಗೆಯ ಇರುವ ಸಾಮಾನು ಅಲ್ಲಿ ತಯಾರು ಮಾಡುವ ಬಗ್ಗೆಯ, ಟೀಪುಸುಲ್ತಾನರು ಯಾವ ಮೇರೆ ಬಿಡುತ್ತಿದ್ದರು? ಇದಲ್ಲದೆ, ಕರಡಿಗ್ಯಾಡು ಮೈದಾನದಿಂದಾ ಆ ಸರಹದ್ದಿನ ಸಿದ್ಧೇಶ್ವರನ ಬೆಟ್ಟ ಪರಿಯಂತರ ಇಂಗ್ರೇಜಿ ಬಹಾದ್ದರ ಲಷ್ಕರು ಇಳಿವ ಜಾಗವಾಗಿ ಇತ್ತು. ಇಂಗ್ರೇಜಿ ಲಷ್ಕರು ಇಳಿವ ಬಗ್ಗೆಯ, ಆ ಜಾಗ ಟೀಪುಸುಲ್ತಾನರು ಯಾವ ಮೇರೆ ಕೊಡುತ್ತಿದ್ದರು? ಇದಲ್ಲದೆ, ಪರಿಧಾವಿ ಸಂವತ್ಸರದಲ್ಲಿ, ಟೀಪುಸುಲ್ತಾನರ ಸರಕಾರಕ್ಕೂ ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರಕ್ಕೂ ಸಲ್ಲಾ ಮೊಕರರು ಆಯಿತು. ಆವಾಗ್ಯೆ ಸರ್ ಜನರಾಲ್ ರಾಬರ್ಟ್ ಆಬರ್ಕ್ರಂಬಿ ಸಾಹೇಬ್ ಬಹಾದ್ದರವರು ಇಂಜನೇರು ಇಮಿಟ್ ಸಾಹೇಬ್ ಬಹಾದ್ದರವರನ್ನು ರವಾನೆ ಮಾಡಿ, ಕೊಡಗಿನ ಶೀಮೆ ಸರಹದ್ದು ಮೊಕರರು ಆಗಿ ಇರುವ ತಮಶೀಲು ಬರೆಸಿ ಇದ್ಧಾರೆ. ಆ ತಮಶೀಲು ಮಲೆವಾರ ಕಮೀಶನ್ ಸಾಹೇಬರವರ ಬಳಿಯಲ್ಲು ಹಾಜರು ಇದೆ. ದರಿಯಾಪ್ತು ಮಾಡಿಸ ಬೇಕು. ಇದಲ್ಲದೆ ಲಾರ್ಡ ಕಾರ್ನವಾಲೀಸ್ ಸಾಹೇಬ ಬಹಾದ್ದರವರ ಹೊತ್ತಿನಲ್ಲಿ ಉಭಯ ಸರಕಾರಕ್ಕೂ ಸಲ್ಲಾ ಮೊಕರರು ಆಗಿ, ಯಂಟು ವರುಷ ಪರಿಯಂತರ ಆ ಸಲ್ಲಾ ಕರಾರು ಕಾಯಮ್ ಆಗಿತ್ತು. ಅಥಾಪಿಸಿ ಆ ಸಿದ್ಧೇಶ್ವರನ ಬೆಟ್ಟದ ಸರಹದ್ದು ನಾವು ಜಬರ್ದಸ್ತಿಯಿಂದಾ ಹೆಚ್ಚಿಸಿ, ದೊಡ್ಡದು ಮಾಡಿದ್ದಾಗಿ ಇದ್ದರೆ, ಟೀಪುಸುಲ್ತಾನರು ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದಲ್ಲಿ ಫಿರ್ಯಾದಿ ಮಾಡಿ ತೆಗೆದು ಕೊಳ್ಳದೆ ಯಾವ ಮೇರೆ ಬಿಡುತ್ತಿದ್ದರು. ಟೀಪುಸುಲ್ತಾನರು ಹೋತನದಲ್ಲಿ, ತಕ್ತಿಯಲ್ಲಿ, ಕುದರತ್ತಿನಲ್ಲಿ ಸಹಾ ಯ್ಯೆನಾದರೂ ಕಡಿಮೆ ಆಗಿ ಇರಲ್ಲಾ. ಯಾವ ವಿಷಯದಲ್ಲಿ ಆದರೂ ಅವರ ಕಾಯ್ದೆವಾಜಿ ಇಂಗ್ರೇಜಿ ಬಹಾದ್ದರ ಕುಂಪನಿ ಸರಕಾರದ ವಳಗೆ ಫಿರ್ಯಾದಿ ಮಾಡಿ ಇದ್ದರೆ, ಕುಂಪನಿ ಸರಕಾರದ ಹುಕುಮತ್ತು ನಡಸುವಂಥಾ ಸರದಾರರು ಅದನ್ನು ವಿಚಾರಿಸದೆ, ಬರಿದೆ ಯಾವ ಮೇರೆ ಬಿಡುತ್ತಿದ್ದರು? ಟೀಪುಸುಲ್ತಾನರು ಮುಸಲ್ಮಾನರು. ಇಷ್ಟು ಹೋತನ ಮಡಗಿ, ಬದುಕಿ ಇರುವ ಪರಿಯಂತರ ಯಾವ ಸಮಯದಲ್ಲಿ ಆದರೂ ಆ ನಂಮ ಸರಹದ್ದು ಆಗ ಬೇಕು ಯಂತಾ, ಯೋಚನೆ ಮಾಡಲಿಲ್ಲಾ. ಈಗ ನಂಮ ಹಿಂದೂ ಜಾತಿ ದ್ಯೋಸ್ತುದಾರರು ಮೈಸೂರ ಕರಿಷ್ಣ ರಾಜ ಸಾಹೇಬರವರು ಕೊಡಗಿನ ಶೀಮೆ ಸರಹದ್ದನ್ನು ತಂಮ ಶೀಮೆ ಸರಹದ್ದು ಯಂತಾ ತಿಳಿದು, ಯಲ್ಲಾರಿಗೂ ತಿಳಿವ ಹಾಗೆ, ಜಬರ್ದಸ್ತಿಯಿಂದಾ ತಂಮ ಶೀಮೆ ಸರಹದ್ದು ಹೆಚ್ಚಿಸುತ್ತಾ ಇದ್ಧಾರೆ. ಅದರ ತಕ್ಸೀರು ನಂಮ್ಮೇಲೆ ಮಡಗುತ್ತಾರೆ. ಆದ್ದರಿಂದಾ ಯಲ್ಲಾ ತರದಿಂದಲೂ ಲಾಚಾರಾಗಿ ಇದ್ಧೇವೆ. ದರಿಯಾಪ್ತು ಮಾಡ ಬೇಕು.

ಕೀಲಕ ಸಂವತ್ಸರದ ಆರಭ್ಯ ರುಧಿರೋದ್ಗಾರಿ ಸಂವತ್ಸರದ ವರಿಗೆ ಹದಿನಾರು ವರುಷವಾಯಿತು. ಈ ರಕ್ತಾಕ್ಷಿ ಸಂವತ್ಸರದ ಹನ್ನೊಂದನೆ ತಿಂಗಳು, ೨೨ ನೆ ತಾರೀಕು, ಚಂದ್ರವಾರ ದಿವಸ, ವಕೀಲ್ ಕಪಿತಾನ್ ದಿನಸ್ ಮಾಹಿನಿ ಸಾಹೇಬ ಬಹಾದ್ದರವರು ಕರಂಘರ್ಮಾ ಜಾನ್ ಹಾನ್ ಮೀಲ್ ಸಾಹೇಬ ತವಜ್ಜುಗುಸ್ತರ ಮೊಕಲ್ಯಸಾನರವರು ಸಹಾ, ನವಾಬ ಮುಸ್ತತಾಬ್ ಮೋಲಿವುಲ್ ಅಲ್ಕಾಬ್ ಅಫಜಾಲ್ ಅಷರಾಫ್ ಮಾರಕಮೀಸ್ ವಲ್ಲೆಜಲಿ ಸಾಹೇಬ್ ಬಹಾದ್ದರವರ ಹಜೂರಿಂದಾ ಇನಾಯತ ಆಗಿರುವ ಶಮ್ಶೇರನ್ನು ಆ ಇಬ್ಬರು ಸಾಹೇಬರ ಮುಬಾರಕ ಹಸ್ತದಿಂದಾ ನಂಮ ನಡುವಿಗೆ ಕಟ್ಟಿ, ಬಹಳ ಖುಷಿ ಮಾಡಿದರು. ಈ ವರಿಗೆ ನಂಮ ಶೀಮೆ ಸರಹದ್ದು ಹೆಚ್ಚು ಕಡಿಮೆ ಆಗದೆ, ನಂಮ ಹಿರಿಯವರು ಬಂದುಬಸ್ತು ಮಾಡಿದ ಮೇರೆ, ನಾವು ಬಂದುಬಸ್ತು ಮಾಡಿ ಕೊಂಡು, ಇಂಗ್ರೇಜಿ ಬಹಾದ್ದರ ಕುಂಪನಿ ದೊಡ್ಡ ಸರಕಾರದ ಆಶ್ರಯದ ವಳಗೆ ಇದ್ದು, ಆಬರು ಹುರಮತ್ತಿನಿಂದ ಪರ್ವರಿಷ್ ಆಗುತ್ತಾ

ಇದ್ಧೇವೆ. ಆ ಪರವರ್ಕ್ಷಿ ಹೋತ್ತು, ನಾವು ಮಕ್ಕೊಟ್ಟರ ಪಡವೆ ಮ್ಯೇಲೆ ಅಪ್ಯೇಕ್ಷೆ ಮಾಡುಗುವದಿಲ್ಲ. ಈ ಮಾತಿಗೆ ಇದ್ದೇ ಶಮ್ಶೇರು ಶಿವಮಹಾದೇವ, ನನಾಟ ಸಾಹ್ಯೇಬರವರ ಜವಾಬು ದ್ಯಾನತುದಾರರಾದ ಇಂಗ್ರೇಜ ಕುಂಪನಿ ಸರ್ಕಾರದ ದೊಡ್ಡ ದೊಡ್ಡ ಸರ್ದಾರರು ಸಹಾ, ಸಾಕ್ಷಿ ಶಾಯಿದಿ ಇದ್ಧಾರೆ.

ಈ ಕೆಲವು ಮಾತುಗಳಿಂನು ಸರಹದ್ದಿನ ಕರಾರು ಬಂದ ಕಾರಣಾ, ಬರದು ಕೊಟ್ಟು ಇದ್ಧೇವೆ. ಉಳಿಕೆ ನಂಮ ಹಿರಿಯವರ ದಿವಸದ ಕೈಫಿಯತು ಟಿಪ್ಪುಸುಲ್ತಾನರ ದಿವಸದಲ್ಲಿ ಹೋಗಿ ಹೋಯಿತು. ಆದಾಗ್ಯೂ ಅದರಲ್ಲಿ ನೂರಅರುವತ್ತು ವರುಷದ ಈಚೆಗೆ ಕೆಲವು ಕೈಫಿಯತಂನು ಕಂನಡ ಬರಹದಲ್ಲು ಬರದ್ದು ಹಾಜರು ಇದೆ. ಬ್ಯೇಕಾದರೆ ಫಾರ್ಶಿ ಬರಹದಿಂದಾ ನಕಲು ಬರೆಸಿ, ರವಾನೆ ಮಾಡಿಯ್ಯೇವು.

ಸನ್ ೧೨೧೯ ನೆ ಹಿಜರಿ ಶವಾಲು ತಿಂಗಳು, ೨೩ ನೆ ತಾರೀಕು, ರಕ್ತಾಕ್ಷಿ ಸಂವತ್ಸರದ ಪುಷ್ಯ ತಿಂಗಳು, ತಾರೀಕು ೨೩ ಲು ಈ ಪ್ರಕಾರ ಬರದು ಕೊಟ್ಟಲ್ಲಿ, ಜಾನ್ ಹಾಸಿ ಫ್ರೀಲ್ ಸಾಹ್ಯೇಬರವರು ಇಂನು ನಾವು ಗಡಿ ಸರಹದ್ದಂನು ತಿರಿಗಿ ನ್ಯಾಡಿ, ಕಲ್ಲುಗಳ ನಿಲ್ಲಿಸುವ ಬಗ್ಯೆ ಹೋಗ ಬ್ಯೇಕು ಯಂಬದಾಗಿ ಹ್ಯೇಳಿದಲ್ಲಿ, ಮಹಾರಾಜರವರು: “ನಾವು ಮಡಿಕ್ಯೇರಿಯಲ್ಲು ಹೊಸತಾಗಿ ಅರಮನೆ ಕಟ್ಟಿಸಿ ಇದ್ಧೇವೆ. ಈ ಮಾಘ ಶು ೧ ದಿವಸ, ಅರಮನೆ ಗೃಹಪ್ರವ್ಯೇಶ ಆಗ ಬ್ಯೇಕೆಂತಾ ಮಾಡಿ ಇದ್ಧೇವೆ. ಈ ಗೃಹಪ್ರವ್ಯೇಶ ಆಗುವ ಪರಿಯಂತ ತಿರಿಸಿ ಕೊಂಡು ಹೋಗ ಬ್ಯೇಕು” ಯಂತಾ, ಬಹಳ ಬಗೆ ಹ್ಯೇಳಿ, ನಿಲ್ಲಿಸಿ ಕೊಂಡು, ಇಂಗ್ರೇಜ ಸರದಾರರು ಇದ್ದು, ರಕ್ತಾಕ್ಷಿ ಸಂವತ್ಸರದ ಮಾಘ ಶು ೧ ಪ್ರ, ಗುರುವಾರ ದಿವಸ, ರಾತರೆ ಗಳಿಗೆ ೧೯ಕೆ ವೃಶ್ಚಿಕ ಲಗ್ನದಲ್ಲು, ಶುಭ ಮುಹೂರ್ತದಲ್ಲಿ, ಮಹಾಸಂತ್ಯೋಷದಿಂದಾ ವೀರರಾಜ್ಯೇಂದ್ರ ವಡೆಯರವರು ಅರಮನೆ ಗೃಹಪ್ರವ್ಯೇಶವಾದರು.

ಆ ಬಳಿಕ ಮಾಘ ಶು ೭ ದಿವಸ, ಸರಹದ್ದಿನ ಕರಾರು ತಿರಿಸುವ ಬಗ್ಯೆ, ಜಾನ್ ಹಾಸಿ ಫ್ರೀಲ್ ಸಾಹ್ಯೇಬರವರು, ಕರ್ಣೀಕ ಸುಬ್ಬಯ್ಯ, ಮೈಸೂರ ಕಡೆ ತಂಮಾಜಿ ಪಂಥ ಸಹಾ, ಮಡಿಕ್ಯೇರಿಯಿಂದಾ ಹೊರಟು, ಯೆಳುಸಾವಿರ ಶೀಮೆಗೆ ಹೋದರು. ವಕೀಲ ಕಪಿತಾನ್ ದಿನಸ್ ಮಾಹಿನಿ ಸಾಹ್ಯೇಬರವರು ಇದ್ದೇ ದಿವಸ ತಲಚ್ಯೇರಿಗೆ ಹೊರಟು ಹೋದರು.

ಆ ಬಳಿಕ ಇದ್ದೇ ಮಾಘ ಶು ೧೩ ಯೂ ಸ್ಯೋಮವಾರ ದಿವಸ, ಸ್ವಾದೆ ಸಂಸ್ಥಾನದ ಸವಾಯಿ ಬಸವಲಿಂಗ ರಾಜರು ಗ್ಯಾವೆ ಇಲಾಖೆ ಬಾಂದವಾಡಿಯಿಂದಾ ಮಡಿಕ್ಯೇರಿಗೆ ಬಂದು ತಲಪಿದರು.

ಆ ಬಳಿಕ ಇತ್ತಲಾಗಿ ಸರಹದ್ದಿನ ಕಡೆಗೆ ಹೋದಂಥಾ, ಸದರಿ ಸಾಹ್ಯೇಬರು ಮುಂತಾಗಿ ಯೆಳುಸಾವಿರ ಶೀಮೆಯಿಂದಾ ಬಿಸಲೆಗಟ್ಟಕ್ಕಾಗಿ ಗಟ್ಟಾ ಇಳಿದು, ಸುಬ್ರಮಾಣ್ಯಕ್ಕೆ ಹೋಗಿ, ಕೊಡಗಿನ ಸಂಸ್ಥಾನದ ಶೀಮೆ, ಮೈಸೂರ ಶೀಮೆ ಸಹ ಕೂಡಿದ ಗಡಿ ಸರಹದ್ದಿನ ರೈತ ಮೊಕಸ್ತ[1] ಮುಂತಾಗಿ, ಸುಬ್ರಮಾಣ್ಯದಲ್ಲು ಕೂಡಿ, “ಮಂಗಲೂರ ತಾಲೂಕು ಶೀಮೆ, ಮೈಸೂರ ತಾಲೂಕು ಶೀಮೆ, ಕೊಡಗಿನ ಸಂಸ್ಥಾನದ ಶೀಮೆ ಸಹಾ ಕೂಡಿದ ಸರಹದ್ದು ಯಾವದು” ಯಂಬದಾಗಿ ವಿಚಾರಿಸಿ, ಮೂರು ಸರಕಾರದ ಶೀಮೆ ಸರಹದ್ದು ಕೂಡಿದ ಕುಮಾರಧಾರೆ ಹೊಳೆ ಹುಟ್ಟಿದ ಬುಡಾ, ಮುಗ್ಗುಡೆ ಯಂಬ ಸರಹದ್ದಿನಿಂದಾ ಹೆಗ್ಗಡ ದ್ಯೇವನ ಕ್ಯೋಟೆ ಶೀಮೆ ಸರಹದ್ದು, ಬೆಳವಾಡು ಶೀಮೆ ಸರಹದ್ದು, ಕೊಡಗಿನ ಸರಹದ್ದು ಸಹಾ, ಕೂಡಿದ ಕ್ಯೇದಗೆ ಮುಂಡಿಗೆ ಹೊಳೆಯ ಕರೆ ಮುಗ್ಗುಡೆ ಪರಿಯಂತರ, ಜಾನ್ ಹಾಸಿ ಫ್ರೀಲ್ ಸಾಹ್ಯೇಬರು, ಮಕ್ಕಂಜಿ[2] ಸಾಹ್ಯೇಬರು, ಕರ್ಣೀಕ ಸುಬ್ಬಯ್ಯ, ತಂಮಾಜಿ ಪಂಥ, ಉಭಯ ಕಡೆಯಿಂದಲೂ ಗಡಿ ಸರಹದ್ದು ಬಲ್ಲಂಥಾ ರೈತ ಮೊಕಸ್ತ ಮುಂತಾದ ಜನರು ತಿರಿಗಿ ಯಾವತ್ತು ಕರಾರಂನು ತಿರಿಸಿ, ಅತಃ ಪರಾಕಾಷ್ಠೆಯದಿಂದಾ ಕೊಡಗಿನ ಸಂಸ್ಥಾನಕ್ಕೆ ಯಾವ ಸರಹದ್ದು ಮೊಕರರು ಆಗಿ ಇತ್ತೋ, ಆ ಸರಹದ್ದಂನು ಹರಾತು ಸರ್ ಜನರಾಲ್ ರಾಬರ್ಟ್ ಆಬರಕರಂಬಿ ಸಾಹ್ಯೇಬ್ ಬಹಾದ್ದರವರು, ಇಂಜನ್ಯೇರು ಇಮೀಟ್ ಸಾಹ್ಯೇಬರವರ ಕಳುಹಿ, ಅವರು ಬಂದು ಗಡಿ ಸರಹದ್ದಂನು ತಮಶೀಲಲ್ಲು ಬರ ಕೊಂಡು ಹೋಗಿದ್ದರಲ್ಲಾ? ಅದ್ದೇ ಸರಹದ್ದಂನು, ಲ್ಯೇಷಾಂಶ ಹೆಚ್ಚು ಕಡಿಮೆ ಇಲ್ಲದೆ, ಉಭಯ ಕಡೆ ಜನರ ಸಂಮುಖದಿಂದಾ, ಇಂಗ್ರೇಜ ಸರಕಾರದ ಸರದಾರರು ವಾಜಿಬಿ ಆಗಿ ನಿರ್ಣಯ ಮಾಡಿ, ಮ್ಯೇಲೆ ಬರದ ಸರಹದ್ದು ಕುಮಾರಧಾರೆ ಕೊಡಗಿನ ಶೀಮೆ, ಮೈಸೂರ ಶೀಮೆ ಸಹಾ, ಕೂಡಿದ ಮುಗ್ಗುಡೆಯಿಂದಾ ಹಿಡಿದು, ಹೆಗ್ಗಡ ದ್ಯೇವನ ಕ್ಯೋಟೆ, ಬೆಳವಾಡು ಕೊಡಗಿನ ಶೀಮೆ ಸಹಾ, ಕೂಡಿದ

---

[1] ಮುಖ್ಯಸ್ಥ. [2] Mackenzie.

ಕ್ಯೆದಗೆ ಮುಂಡಿಗೆ ಹಾಳ್ಳದ ಕರೆ ಸರಹದ್ದು ಪರಿಯಂತರ ಗಡಿಗಳಲ್ಲಿ ಮುದ್ರೆ ಕಲ್ಲುಗಳ ನೆಡುವ ಬಗ್ಯೆ, ಅಲ್ಲಲ್ಲಿ ವಂದೊಂದು ಗೂಟಗಳ ನಿಶಾನಿ ಬಗ್ಯೆ ನಿಲ್ಲಿಸಿ, ವಂದು ಕಡೆ ಕೊಡಗಿನ ಸಂಸ್ಥಾನದ ಮುದ್ರೆ, ವಂದು ಕಡೆ ಮೈಸೂರ ಸಂಸ್ಥಾನದ ಮುದ್ರೆ, ಕಲ್ಲಿನ ತಲೆ ಮ್ಯಾಲೆ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ಮುದ್ರೆ ಸಹಾ, ಕೆತ್ತಿದಂಥಾ ಮುದ್ರೆ ಕಲ್ಲು ನೂರ ಕೊಂತ್ರಾತಕಾರನು ಅಲ್ಲಲ್ಲಿ ನೆಡಿಸ ತಕ್ಕ ಬಗ್ಯೆ, ಕಂದುಕದ ನಮೂನೆ ತೆಗಸುವಂತೆ ಸಹಾ ಹೇಳಿ ಬಿಟ್ಟು, ಈ ಬಗೆ ಲೆಖ್ಖವನ್ನು ಉಭಯ ಕಡೆ ಸರಕಾರದವರು, ಇಂಗ್ರೇಜ ಸರದಾರರು ಸಹಾ, ಬರ ಕೊಂಡು, ಬಂದುಬಸ್ತು ಮಾಡಿ, ಈ ಸರಹದ್ದಿನ ತಮಶೀಲನ್ನು ಪ್ರೀಲ್ ಸಾಹೇಬರವರು ಬರೆಸಿ, ಧಾರೆಗಳ ಬಳಿಗೆ ಕಳುಹಿಸಿ ಕೊಟ್ಟು, ಆ ಪ್ರೀಲ್ ಸಾಹೇಬರವರು ಬರೆಸಿ ಕಳುಹಿದ ಕಾಗದಲ್ಲಿ: "ಉಭಯ ಕಡೆ ಸರಕಾರದ ಸರಹದ್ದಿನ ಹೆಚ್ಚು ಕಡಮೆಯಿಂದಾ ವ್ಯಾಜ್ಯ ತಕರಾರು ಇದ್ದದ್ದು, ಯರಡು ಕಡೆ ಟಾಕರ ಜನರ ಸಾಕ್ಷಿಯಿಂದಾ ತೀರಿ ಇದೆ. ಆ ಸರಹದ್ದಿನ ತಮಶೀಲನ್ನು, ಮುಂದೆ ವ್ಯಾಜ್ಯ ತಕರಾರು ಬಂದರೆ, ತೀರಿಸುವ ಬಗ್ಯೆ ದಸ್ತೈವಜಿನ ಹಾಗೆ, ಮಕ್ಕಂಜಿ ಸಾಹೇಬರ ಕೈಯಿಂದಾ ಬರೆಸಿ, ಈ ಕಾಗದದ ಸಂಗಡ ಕಳುಹಿಸಿ ಇದ್ಧೇವೆ. ಬಂದು ತಲಪಿದಲ್ಲಿ ಕಬೂಲಾದ್ದೀತು. ಯಾವದೊಂದು ಸರಹದ್ದಿನ ವ್ಯಾಜ್ಯ ಇದ್ದಂಥಾದ್ದು ಮೊಕತಾ ತೀರಿಸಿ ಇದ್ಧೇವೆ. ಸರಹದ್ದು ಮೊಕರು ಆಗುವ ಜಾಗದಲ್ಲಿ ಕಲ್ಲುಗಳು ಇಲ್ಲದ್ದರಿಂದಾ, ಮರದ ಗೂಟಗಳ ನಿಲ್ಲಿಸಿ ಇದ್ಧೇವೆ. ಕಲ್ಲುಗಳು ತಯಾರಾದ ಮ್ಯಾಲೆ, ಆ ಗೂಟಗಳ ಹಾಕಿರುವ ಜಾಗದಲ್ಲಿ ಕಲ್ಲುಗಳ ನಿಲ್ಲಿಸ ಬ್ಯೆಕು. ಆ ಮ್ಯಾಲೆ ವಂದು ಕಲ್ಲಿಂದಾ ಮತ್ತೊಂದು ಕಲ್ಲು ಪರಿಯಂತರ ಕಂದಕ ತೆಗಸುವದು ವಳ್ಳೇ ಕೆಲಸ ಯಂತಾ, ನಂಮನಸಿಗೆ ತೋರುತ್ತಾ ಇದೆ. ಈ ಕೆಲಸ ಮೈಸೂರ ತಾಲೂಕಿನ ಜನರ ಮೊಕತಾ ಮಾಡಿಸ ಬ್ಯೆಕು. ತಂಮ ಕಡೆ ಅಮಲುದಾರ ಮುಂತಾದವರಿಗೆ ತಾಕೀತ ಮಾಡಿ, ವರುಷ ವರುಷಕ್ಕೂ ಕಂದಕಗಳು ಹೆಚ್ಚು ಕಡಮೆ ಆಗುವದರ ಖಬರು ತೆಗದು ಕೊಳ್ಳ ಬ್ಯೆಕು. ಈ ನಿಶಾನಿ ಕಲ್ಲುಗಳ ನಿಲ್ಲಿಸಿ ಆದ ಮ್ಯಾಲೆ, ಉಭಯ ಸರಕಾರಕ್ಕೂ ಸರಹದ್ದಿನ ತಕರಾರು ಬರಲಿಕ್ಕಿಲ್ಲಾ ಯಂತಾ, ನಂಮನಸಿಗೆ ತೋರುತ್ತದೆ" ಯಂಬದಾಗಿ ಬರೆಸಿ ಕಳುಹಿದಲ್ಲಿ: ಅದಕ್ಕೆ ದರ ಜವಾಬಾಗಿ ಮಹಾರಾಜರವರು, ಜಿಲ್ ಕಾಜ ತಿಂಗಳು ೨೨ ನೆ, ಸಂನ್ ೧೨೧೮ ನೆ ಹಿಜರಿಯಲ್ಲು, ಬರೆಸಿ ಕಳುಹಿದ ಕಾಗದದಲ್ಲಿ: "ಉಭಯ ಸರಕಾರದ ಕಡೆ ಟಾಕರ ಜನರ ಸಾಕ್ಷಿಯಿಂದಾ ಸರಹದ್ದಿನ ನ್ಯಾಯ ತೀರಿತು ಯಂಬದಾಗಿ, ಬರೆಸಿ ಇರುವದನ್ನು ನ್ಯಾಡಿದಲ್ಲಿ ಬಹಳ ಸಂತೋಷವಾಯಿತು. ಇಂಜನ್ಯೇರು ಮೇಜರ ಮಕ್ಕಂಜಿ ಸಾಹೇಬರಿಂದಾ ಆ ತಮಶೀಲನ್ನು ಬರೆಸಿ, ಸರಹದ್ದು ಚಂನಾಗಿ ತಿಳಿಯುವ ಹಾಗೆ, ದುರುಸ್ತು ಮಾಡಿಸಿ ಕಳುಹಿಸಿದ್ಧೇವೆ ಯಂತಾ ಬರದ ಮ್ಯೆರೆ, ಅದು ಬಂದು ತಲಪಿತು. ಬಹಳ ದಿವಸ ಯಾದಗಾರಿ[1] ನಿಶಾನಿ ಆಗಿ ಇದ್ದೀತು. ಇದಲ್ಲದೆ ಸರಹದ್ದಿನಲ್ಲಿ ಅಲ್ಲಲ್ಲಿ ನಿಶಾನಿ ಕಲ್ಲುಗಳು ಇಲ್ಲದ್ದರಿಂದಾ, ಮರದ ಗೂಟಗಳ ನಿಲ್ಲಿಸಿ ಇದ್ಧೇವೆ. ಕಲ್ಲುಗಳು ತಯಾರಾದ ಮ್ಯಾಲೆ ಮರದ ಗೂಟಗಳ ನೆಟ್ಟು ಇರುವ ಜಾಗಗಳಲ್ಲಿ ಕಲ್ಲುಗಳ ನಿಲ್ಲಿಸ ಬ್ಯೆಕೆಂಬದಾಗಿ, ಹಿಫಾರೆ ಮಾಡಿ ಇರುವದು ಸರಿಯಷ್ಟೆ. ಈ ಬಗ್ಯೆ ಯಾರಾದರೂ ಗೂಟಗಳ ಕಿತ್ತು ಬಿಟ್ಟು, ಸರಹದ್ದು ಹೆಚ್ಚು ಕಡಿಮೆ ಮಾಡಿದರೆ, ಸರಹದ್ದಿನಲ್ಲಿ ತಫಾವತು ಬಂದೀತು. ಇದಲ್ಲದೆ, ಕಲ್ಲುಗಳು ತಯಾರಾಗುವ ಬಗ್ಯೆ, ನಾಲ್ಕು ಐದು ತಿಂಗಳು ತಾಮಸವಾದೀತು ಯಂತಾ ತೋರುತ್ತದೆ. ಆದ್ದರಿಂದಾ ಉಭಯ ಸರಕಾರದ ಕಾಬೆಯವರಿಗೆ ಹುಕುಂ ಕೊಟ್ಟು, ಗೂಟಗಳ ನೆಟ್ಟು ಇರುವ ಜಾಗಗಳಲ್ಲಿ ನಡುವಿನ ಉದ್ದ ಪರಮಾಣ ಗುಂಡಿಗಳ ತೆಗಸಿದರೆ, ವಳ್ಳೇದು ಯಂತಾ, ನಂಮನಸಿಗೆ ತೋರುತ್ತಾ ಇದೆ. ಇದಲ್ಲದೆ ಕಲ್ಲುಗಳ ನೆಡುವ ಬಗ್ಯೆಯೂ, ಗುಂಡಿ ತೆಗೆಯ ಬ್ಯೆಕಾಗುತ್ತದೆ. ಕಲ್ಲುಗಳು ತಯಾರಾದ ಮ್ಯಾಲೆ, ಅದೇ ಗುಂಡಿಗಳಲ್ಲಿ ನಿಲ್ಲಿಸ ಬಹುದು. ಆ ಗುಂಡಿಗಳಲ್ಲಿ ನಿಶಾನಿ ಕಲ್ಲುಗಳ ನಿಲ್ಲಿಸುವ ಪರಿಯಂತರ, ಕಾಯಂ ಆದೀತು. ಇದಲ್ಲದೆ ಕಲ್ಲಿಂದಾ ಮತ್ತೊಂದು ಕಲ್ಲು ಪರಿಯಂತರ ಕಂದುಕಗಳ ಉಭಯ ಕಡೆಯವರ ಮೊಕತಾ ತಯಾರು ಮಾಡಿಸಿದರೆ, ವಳ್ಳೇದು ಯಂತಾ, ಹಿಫಾರೆ ಮಾಡಿ ಇರುವದು ಸರಿಯಷ್ಟೆ. ಈ ಮಾತು ನಮಗೆ ಪಸಂದು ಆಯಿತು. ತಾವು ಹಿಫಾರೆ ಮಾಡಿ ಇರುವ ಮ್ಯೆರೆ ಕಂದಕಗಳು ತಯಾರಾದರೆ, ಸರಹದ್ದು ಬಹಳ ಬಂದುಬಸ್ತು ಆದೀತು. ಈ ಕಂದಕ ತೆಗವ ಕೆಲಸ ಸುಬ್ರಹ್ಮಣ್ಯದ ಸರಹದ್ದಿನಿಂದಾ ಬೆಟನಾಡು ಸರಹದ್ದು ಪರಿಯಂತರ ಆಗ ಬ್ಯೆಕು. ಈ ಬಗ್ಯೆ ತಂಮ ಹಿಫಾರೆ ಪ್ರಕಾರ ಸರಹದ್ದಿನಲ್ಲಿ ನಿಶಾನಿ ಕಲ್ಲುಗಳ ನಿಲ್ಲಿಸಿ ಆದ ಮ್ಯಾಲೆ, ಕಂದಕ ತಯಾರು

1 ನೆನಪು.

ಮಾಡುವ ಬಗ್ಯೆ, ನಂಮ ತಾಬೆಯವರಿಗೆ ತಾಕೀತು ಮಾಡಿಸಿ ಇದ್ದೇವೆ. ತಾವು ಮೈಸೂರ ಇಲಾಖೆಯವರಿಗೆ, ತಂದತದ ಕೆಲಸ ಜರೂರಾಗಿ ತಯಾರು ಮಾಡುವ ಹಾಗೆ, ತಾಕೀತು ಮಾಡಿಸ ಬೇಕು. ಸರಹದ್ದಿನ ಕಲ್ಲುಗಳ ನಂಮ ಕಡೆ ಜನರು ಹಾಕುತ್ತಾರೆ. ಮೈಸೂರ ಇಲಾಖೆಯವರು ಹಾಕುವ ಹಾಗೆ, ತಾಕೀತು ಮಾಡಿದರೆ, ಮೆಹರಬಾನಗಿ ಆದೀತು. ನಮಗೆ ಈಗ ಹಾಸತಾಗಿ ಸೇರಿ ಇರುವ ಪುತ್ತೂರ ಸೀಮೆಯಲ್ಲಿ ಕಲ್ಲುಕುಟಿಗರ ತಲಾಸು ಮಾಡುವ ಹಾಗೆ, ನಾವು ಹುಕುಂ ಕೊಟ್ಟು ಇದ್ದೇವೆ. ಅಲ್ಲಿಂದಾ ಶಿಕ್ಕಿದಷ್ಟು ಜನರಂನು, ಕಲ್ಲುಗಳ ತಯಾರು ಮಾಡುವ ಬಗ್ಯೆ, ರವಾನೆ ಮಾಡಿ ಯೇವು. ತಾವು ಮೈಸೂರ ಸೀಮೆ ವಳಗೆ ಕಲ್ಲುಕುಟಿಗರ ತಲಾಸು ಮಾಡಿಸಿ, ಕಲ್ಲುಗಳ ತಯಾರು ಮಾಡುವ ಬಗ್ಯೆ, ಕಳುಹಿಸಿ ಕೊಟ್ಟರೆ, ಬಹಳ ಉಪಕಾರವಾದೀತು." ಯಂಬದಾಗಿಯೂ; ಯರಡನೆ ಕಾಗದಲ್ಲಿ: "ತಾವು ಇಲ್ಲಿಗೆ ಬಂದು ಇದ್ದಾಗ್ಯೆ, ನಂಮ ಕೊಡಗಿನ ಸೀಮೆ ಸರಹದ್ದು, ಪರಾಕು ಧಾರೆಶನ ಮಾಡಿದಂಥಾ ನಂಮ ಹಿರಿಯವರ ದಿವಸ ದಲ್ಲಿ ಮೊಕರರು ಆಗಿ ಇರುವದರಲ್ಲಿ, ಪರಾಯಿ ಇಲಾಖೆ ಜನದ ಅಪೇಕ್ಷೆ ಮೇರೆ ಅದರಲ್ಲಿ ಯೇನಾದರೂ ಹೆಚ್ಚು ಕಂಮಿ ಆದರೆ, ನಂಮ ಇತಬಾರಿ ಮತಲಬಿಹಾಯ ಕಡಮೆ ಆದೀತು ಯಂತಾ, ನಂಮಮನಸಿನಲ್ಲಿ ಈ ಮಾತಿನ ಅಂದೇಶ ಉಂಟಾಯಿತು. ಅಥಾಪಿಸಿ, ಸರಹದ್ದು ಯೇನಾದರೂ ಹೆಚ್ಚು ಕಂಮಿ ಆದರೆ, ನಂಮ ಜಿಂಹ್ವೆಯಿಂದಾ ನಾವು ಹೇಳದೆ ಇದ್ದಾಗ್ಯೆಯೂ, ಉಭಯ ಕಡೆ ಜನರು ಹೇಳ್ಯಾರಷ್ಟೆ. ತಾವು ಮಾಮಿಲತ್ತು ತಿಳಿಯುವಂಥಾದ್ದೂ ರಾಸ್ತಿ ತೂಕ ಮಾಡುವಂಥಾದ್ದೂ ತಂಮ ಹಾಸ್ತದ ಆಟವಿದೆ. ಹೀಗೆ ಇರುವಲ್ಲಿ, ಪರಾಯಿ ಜನರ ಇರಾದೆ ಮೇರೆ ಈ ಸರಹದ್ದು ಯಾವ ಮೇರೆ ಹೆಚ್ಚು ಕಡಮೆ ಆದೀತು? ತಾವು ಇಂಜನೇರು ಮತಂಚಿ ಸಾಹೇಬರು ಸಹಾ ಬಹಳ ಹೆರಯತನ ಬಟ್ಟು, ಬೆಟ್ಟ ಗುಡ್ಡದೆಗಳಲ್ಲಿ, ದೊಡ್ಡ ದೊಡ್ಡ ಕಾಡಲ್ಲಿ ಸಹಾ, ವಂದು ತಿಂಗಳು ಪರಿಯಂತರ ತಿರುಗಿ, ನಂಮ ಕೊಡಗಿನ ಸೀಮೆಗೂ ಮೈಸೂರ ಸೀಮೆಗೂ ಸರಹದ್ದು ಮೊಕರರು ಇರುವದಂನು ಯಾವ ಮೇರೆ ಅಳೆದು ಇದ್ದೀರಿ ಯಂದರೆ: ವಂದು ಹಾಚಚೆ ಭೂಮಿ ಆ ಕಡೆಯಿಂದಾ ಈ ಕಡೆ, ಈ ಕಡೆಯಿಂದಾ ಆ ಕಡೆ ತಫಾವತು ಇಲ್ಲದೆ, ಸುಬರಮಹಾಗ್ಯದ ಸರಹದ್ದಿನಿಂದಾ ಬಯನಾಡು ಸರಹದ್ದು ಪರಿಯಂತರ ತರಾಸಿನಲ್ಲಿ ತೂಗಿದ ಮೇರೆ ಅಳೆದು, ಸರಹದ್ದಿನಲ್ಲಿ ನೆಡುವಂಥಾ ಕಲ್ಲಿನ ತಲೆ ಮೇಲೆ ಇಂಗರೇಜ ಬಹಾದ್ದರ ಕುಂಪನಿ ನಿಶಾನಿ, ಆಚೆ ಕಡೆ ಮೈ ಸೂರ ಸರಕಾರದ ನಿಶಾನಿ, ಈಚೆ ಕಡೆ ನಂಮ ಕೊಡಗಿನ ಸರಕಾರದ ನಿಶಾನಿ ತಯಾರು ಮಾಡಿಸಿ, ಅಂಥಾ ಕಲ್ಲುಗಳ ನಿಲ್ಲಿ ಸುವಂಥಾದ್ದು ತಂಮ ಮೆಹರಬಾನಗಿಯಿಂದಾ ಬಹಳ ದುರುಸ್ತು ಆಗಿ ಇದೆ, ಯಂಬ ವಿವರ ನಂಮ ಕರ್ಣೀಕ ಸುಬ್ ಬೇಯನ ಮುಖವಚನದಿಂದಾ ತಿಳಿದು, ನಂಮಮನಸಿಗೆ ಬಹಳ ಸಂತೋಷವಾಯಿತು. ಈ ಹಿಂದುಸ್ಥಾನದ ವಳಗೆ ಇರು ವಂಥಾ ಇಂಗರೇಜ ಬಹಾದ್ದರ ಕುಂಪನಿ ಸರಕಾರದ ದೊಡ್ಡ ದೊಡ್ಡ ಸರದಾರರು ಈ ಸೀಮೆಗೆ ಬಂದು, ನಂಮ ಸೀಮೆ ಸರಹದ್ದಿನ ಬಂದುಬಸ್ತಂನು ಚಂನಾಗಿ ಮಾಡಿ ಇದ್ದಾರೆ. ಈ ವಿವರ ತಮಗೂ ಚಂನಾಗಿ ಜಾಹೇರು ಇದೆ. ಆ ದಾಗ್ಯೆಯೂ ನಂಮ ಸೀಮೆ ಸರಹದ್ದಿನ ಬಂದುಬಸ್ತು ತಂಮ ಹಾಗೆ ಯಾರೂ ಮಾಡಲಿಲ್ಲಾ. ಈ ಬಂದುಬಸ್ತಿನ ವಳಗೆ ದೋಸ್ತಿ ಹಾಯಿ ಶಾಶ್ವತವಾಗಿಯೂ, ಜನರಿಗೆ ಸುಖವು ಬಹಳ ದಿವಸ ಪರಿಯಂತರ ಇದ್ದೀತು." ಯಂಬ, ವಿವ ರಗಳಾಗಿ ಬರೆಸಿ ಕಳುಹಿದರಿಂದಾ; ಇದಕ್ಕೆ ಜವಾಬಾಗಿ, ಹೀಲ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ಮೈ ಸೂರ ಸರಕಾರದ ಚಾಕರ ತಂಮಾಜಿ ಪಂಥನು ನಂಮ ಸಂಗಡ ಅಲ್ಲಿಗೆ ಬಂದದ್ದು ತಾವು ಬಲ್ಲಿರಷ್ಟೆ. ಅವನಂನು ಬಿಸಲೆಗಟ್ಟದ ಕಡೆಗೆ ರವಾನೆ ಮಾಡಿ ಇದ್ದೇವೆ. ತಾವು ಹಿಷಾರೆ ಮಾಡಿ ಇರುವ ಮೇರೆ ಅವನು ಸರಹದ್ದಿನಲ್ಲಿ ಕಲ್ಲುಗಳ ನೆಡುವ ಚಾಕರಿ ಮೇಲೆ ಸರಗರಂ ಆಗಿ ಇದ್ದಾನು. ಅದೇ ಮೇರೆ ತಂಮ ಸರಕಾರದ ಕಡೆಯಿಂದಾ ಅಮಿಲ ಮುತಸಂಗಗೆ ಆ ಕಡೆ ರವಾನೆ ಮಾಡಿಸ ಬೇಕು. ಅವರು ಇಬ್ಬರು ಕೂಡಿ, ಉಭಯ ಸರಕಾರದ ಸರಹದ್ದಿನ ಚಾಕರಿ ಮೇಲೆ ಸರಗರಂ ಆಗಿ ಇದ್ದಾರು. ಕಲ್ಲು ತಯಾರಾಗಿ ಇಲ್ಲದ ಜಾಗದಲ್ಲಿ ನಂಮ ರೂಬ್ ರೂಯಿ ಮರದ ಗೂಟ ಗಳ ನೆಟ್ಟು ಇರುವದರ ಸುತ್ತಾ ಗುಂಡಿ ತೆಗವ ಹಾಗೂ[1], ಮರದ ಗೂಟ ನೆಡದೆ ಇರುವ ಜಾಗದಲ್ಲಿ ಮರದ ಗೂಟ ನೆಟ್ಟು, ಅದರ ಸುತ್ತ ಗುಂಡಿ ತೆಗವ ಹಾಗೂ, ಕಲ್ಲು ತಯಾರಾಗಿ ಇರುವ ಜಾಗದಲ್ಲಿ ಮರದ ಗೂಟ ತೆಗದು ಬಿಟ್ಟು, ಕಲ್ಲು ನಿಲ್ಲಿಸುವ ಹಾಗೆ ಸಹಾ, ತಂಮಾಜಿ ಪಂಥನಿಗೆ ಹುಕುಂ ಕೊಟ್ಟು ಇದ್ದೇವೆ. ಮಳೆಗಾಲ ಸಮೀಪವಾಯಿತು. ಇಂನು ಸ್ವಲ್ಪ ದಿವಸ ಬಾಕಿ ಇದೆ. ಈಗ ತಂದುಕ ತೆಗವದಕ್ಕೆ ಆಗಲಿಕ್ಕಿಲ್ಲಾ. ಇದ ಕಾರಿ ವಂದು ಕಲ್ಲಿಂದಾ

[1] ತೆಗೆಯುವ ಹಾಗೂ.

ಹತ್ತಾಂದು ಕಲ್ಲಿಗೆ ಮಧ್ಯೆ ಹಂದೆರಡು ಜಾಗದಲ್ಲಿ ನಾಲ್ಹತ್ತು ಐವತ್ತು ಗಜದ ಮೇರೆ ಕಂದಕ ತೆಗೆಸುವದು; ಮಳೆಗಾಲ ದಾಟಿದ ಮೇಲೆ ಆ ಕೆಲಸ ತೀರಿಸುವದು ಯಂಬದಾಗಿ, ಈ ಮೇರೆ ನಾವು ತಂಮಾಜಿ ಪಂಥನಿಗೆ ಹೇಳಿ ಇದ್ದೇವೆ. ತಾವು ಇದೇ ಮೇರೆ ಅಮಿಲ ಮುತ್ತಂಗಾನಿಗೆ ಹುಕುಂ ಕಾಡ ಬೇಕು. ಇವರು ಇಬ್ಬರು ಸರಹದ್ದಿನ ಚಾಕರಿ ಒಳಗೆ ಕೂಡಿ ಇದ್ದಾರು" ಯಂಬದಾಗಿ ಬರಸಿ ಕಳುಹಿದ್ದರಿಂದಾ, ಅದಕ್ಕೆ ಜವಾಬಾಗಿ ಸಂನ್ ೧೨೫೦ ನೆ ಹಿಜರಿ, ಮೊಹರಮ್ ೨೦ ನೆ ತಾರೀಖಿನಲ್ಲಿ, ಮಹಾರಾಜರು ಬರೆಸಿ ಕಳುಹಿದ ಕಾಗದದಲ್ಲಿ: "ಉಭಯ ಸರಕಾರದ ಸರಹದ್ದಿನ ಬಂದೂಬಸ್ತಿನ ಬಗ್ಯೆ, ಮೈಸೂರ ಸರಕಾರದ ಚಾಕರ ತಂಮಾಜಿ ಪಂಥನಂನು ಬಿಸಲೆಗಟ್ಟದ ಕಡೆಗೆ ರವಾನೆ ಮಾಡಿ ಇದ್ದೇವೆ ಯಂಬದಾಗಿ, ಬರೆಸಿ ಇರುವದು ಸರಿಯಷ್ಟೆ. ತಾವು ಹಿಷಾರೆ ಮಾಡಿ ಇರುವ ಮೇರೆ ಅಮಿಲ್ ಮುತ್ತಂಗಾನಿಗೆ ಹುಕುಂ ಕಾಟ್ಟು, ಮದೇ ಆದ್ಮಿ ತಂಮಾಜಿ ಪಂಥತನ ಸಂಗಡ ಕೂಡಿ ಇದ್ದು, ಸರಹದ್ದಿನ ಕೆಲಸದ ಒಳಗೆ ತಕರಾರು ಬಾರದ ಹಾಗೆ ನಡದು ಕಾಂಡು, ಚಾಕರಿ ಮಾಡುವ ಹಾಗೆ, ತಾಕೀತ ಮಾಡಿ, ತಂಮ ಕಾಗದದ ನಕಲಂನು ಬರೆಸಿ, ಈ ಮುತ್ತಂಗಾನ ಕೈಯ ಕಾಟ್ಟು, ರವಾನೆ ಮಾಡಿ ಇದ್ದೇವೆ. ತಾವು ಬರೆಸಿ ಇರುವ ಮೇರೆ ಕೂದಲಷ್ಟು ತಫಾವತು ಹಾಡದೆ, ಸರಹದ್ದಿನ ಕೆಲಸದಲ್ಲಿ ಸಾಗರಂ ಆಗಿ ಇದ್ದಾನು" ಯಂಬದಾಗಿ ಬರೆಸಿ ಕಳುಹಿದರು.

ಆ ಬಳಿಕ ಕೆಲವು ದಿವಸದ ಮೇಲೆ ರಬಿಯುಲ್ ಅವಲ್ ಹಂತ್ತತನೆ ತಾರೀಖಿನಲ್ಲಿ ಪೀಲ್ ಸಾಹೇಬರಿಗೆ ಮಹಾರಾಜರು ಬರೆಸಿ ಕಳುಹಿದ ಕಾಗದಲ್ಲಿ: "ಮೊದಲು ತಾವು ಸುಬ್ರಹ್ಮಣ್ಯದ ಕಡೆಯಿಂದಾ ಬಯನಾಡು ಹರಿಯಂತರ ತಿರಿಗಿ ಕಾಡಗಿನ ಶೀಮೆ ಮೈಸೂರ ಶೀಮೆ ಸರಹದ್ದಿನಲ್ಲಿ ಅಲ್ಲಿ ಅಲ್ಲಿ ನಿಶಾನಿ ಕಲ್ಲುಗಳ ನಿಲ್ಲಿಸುವ ಬಗ್ಯೆ, ತಯಾರು ಮಾಡಿ, ಉಭಯ ಸರಕಾರದ ಮನಸಿನ ಅಂದೇಶ ದೂರ ಮಾಡಿ, ಸರಹದ್ದಿನ ಹಾತರ ಇರುವಂಥ ಹರಿಗೆ ಸುಖ ಉಂಟು ಮಾಡಿ, ಈ ಸರಹದ್ದಿನಲ್ಲಿ ನಿಶಾನಿ ಕಲ್ಲುಗಳ ನಿಲ್ಲಿಸುವ ಬಗ್ಯೆ, ಆ ಕಡೆಯಿಂದಾ ಹುರದೆ ಆದ್ಮಿ ತಂಮಾಜಿ ಪಂಥನಿಗೂ, ಈ ಕಡೆಯಿಂದಾ ಅಮಿಲ್ ಮುತ್ತಂಗಾನಿಗೂ ಮೊಕರರು ಮಾಡಿ ಇದ್ದೀರಿ. ಮಹಾದೇವನ ಕಟಾಕ್ಷದಿಂದಾ ಸಂನ್ ೧೨೫೦ ನೆ ಹಿಜರಿ ಸಫರ್ ತಿಂಗಳು ೩೦ ನೆ, ಹೆಸಾಬು ೮ ೩೦ ಹರಿಗೆ ಉಭಯ ಕಡೆಯಲ್ಲು ಇರುವ ಮಾತಬರ್[1] ಮನುಷ್ಯರ ಸಾಕ್ಷಿಯಿಂದಲೂ ಹಡಂಬಡಿಕೆಯಿಂದಲೂ ಸುಬ್ರಹ್ಮಣ್ಯದ ಸರಹದ್ದು ಮೊದಲುಗಾಂಡು, ಬಯನಾಡು ಆಖೈರು ಸರಹದ್ದು ಹರಿಯಂತರ, ತಾವು ಮೊಕರರು ಮಾಡಿಸಿ ಇರುವ ಮೇರೆಗೆ ಯರಡು ಕಡೆಯಲ್ಲು ಯರಡು ಸರಕಾರದ ನಿಶಾನಿ, ತಳೆ ಮೇಲೆ ಇಂಗ್ರೇಜ ಬಹಾದ್ದರ ಕುಂಪನಿ ಸರಕಾರದ ನಿಶಾನಿ ಕಲ್ಲುಗಳಂನು ತಾವು ಮೊಕರರು ಮಾಡಿ, ಅಲ್ಲಲ್ಲಿ ಮರದ ಗೂಟಗಳ ನಿಶಾನಿ ಬಗ್ಯೆ ನಿಲ್ಲಿಸಿದ್ದ ಜಾಗಗಳಲ್ಲಿ ನಿಲ್ಲಿಸಿ ಆಯಿತು. ನಿಶಾನಿ ಕಲ್ಲುಗಳ ನಮೂನೆ—ಮೊದಲು ಮಹಲಲ್ಲಿ ಮಾಡಿ ಇದ್ದದ್ದಂನು, ತಮಗೆ ತಿಳಿಯ ಬೇಕೆಂಬದರಿಂದಾ, ರವಾನೆ ಮಾಡಿ ಇದ್ದೇವೆ. ಬಹಳ ದಿವಸದಿಂದಾ ಈ ಮೊಕರರು ಆಗಿ ಇಧುವಂಥಾ ಸರಹದ್ದು ದರಿಯಾಪ್ತು ಮಾಡದ್ದರಿಂದಾ ಅಂದೇಶವಾಗಿ ಇತ್ತು. ಸರಕಾರದ ಅದಲ್ ಇನ್ಸಾಫಿನಿಂದಲೂ ತಂಮ ಮೆಹೆರ್ಬಾನಗಿಯಿಂದಲೂ ಉಭಯ ಸರಕಾರದ ಸರಹದ್ದು ಬಹಳ ಚಂನಾಗಿ ಬಂದೂಬಸ್ತು ಆಯಿತು. ಆಕಾಶ ಭೂಮಿ ಇರುವ ಪರಿಯಂತರ ಈ ಸರಹದ್ದಿನ ಕಲ್ಲು ಇರುತ್ತದೆ. ಆಹರಿ ಹರಿಯಂತರ ತಂಮ ಹೆಸರು ನಡದೀತು" ಯಂಬದಾಗಿ, ಬರೆಸಿ ಕಳುಹಿದಲ್ಲಿ, ಇದಕ್ಕೆ ಜವಾಬಾಗಿ ಪೀಲ್ ಸಾಹೇಬರವರು ಬರದ ಕಾಗದದಲ್ಲಿ: "ಇದು ಬಹಳ ಒಳ್ಳೇ ಕೆಲಸವಾಯಿತು. ನಂಮ ಮನಸಿಗೆ ಬಹಳ ಸಂತ್ತೋಷವಾಯಿತು" ಯಂಬದಾಗಿ, ಕರ್ರಾಧನ ಸಂವತ್ಸರದ ಜ್ಯೇಷ್ಠ ಶು ೧೩ ಲು ಬರೆಸಿ ಕಳುಹಿದರು.

ಮೇಲಾಗಿ ವೀರರಾಜೇಂದ್ರ ಒಡೆಯರವರು ಹಿರಿಯಾಪಟ್ಟಣದಲ್ಲು ಇರುವಾಗ್ಯೆ, ಇವರ ತಂಮನಾದ ಅಪ್ಪಾಜಿಯ ಯಂಬವನು ನಾನಾ ಪರಕಾರದಲ್ಲು ಅನ್ಯಾಯದ ನಡತೆಗಳ ನಡದು, ಮಾಡ ಬಾರದಂಥಾ ಅಕ್ರುತ್ಯಗಳ ಮಾಡಿ, ಸ್ವಾಮಿದ್ರೋಹತನ ಯೋಚಿಸಿ, ಕದ್ದು ಹ್ಯಾಡಿ ಬಂದು, ಕಾಡಗಿನ ಶೀಮೆ ಒಳತವಾದ ಕಡಿಯತ್ತನಾಡು ಗ್ರಾಮ ಹಲೆಯಲ್ಲಿ ಸೇರಿ ಕಾಂಡು, ಕುಡಿವದಕ್ಕೆ ಗಂಜಿಗೆ ಸಹ ಗತಿ ಇಲ್ಲದೆ ಇರುತ್ತಿದ್ದಲ್ಲಿ, ಆ ಬಳಿಕ ರಾಜರವರು ಈ ಸಂಸ್ಥಾನಕ್ಕೆ ಬಂದು, ಶೀಮೆ ಭೂಮಿ ಬಂದೂಬಸ್ತು ಮಾಡಿ, ಅಪ್ಪಾಜಿಯ ಯಂಬವನು ಹಿರಿಯಾಪಟ್ಟಣದಲ್ಲು ಮಾಡಿದ ದ್ರೋಹ, ಹ್ಯಾಡಿ ಬಂದಂಥಾದ್ದ ಸಹ ಟಿತ್ತಕ್ಕೆ ಕಾದದೆ, ಹಸಿ, ಗಡಿನಾಡು,

[1] ಹಿಷಾಗಾಂಡ.

ಹಾರಂಗಿ ಬದಲಿ ಸ್ಥಳ ಸಹಾ ಜಹಗೀರು ಕೊಟ್ಟು, ಗರವಲೆಯಲ್ಲು ಮಡಗಿ, ಮದುವೆ ಮಾಡಿಸಿ, ಬೇಕಾದ್ದು ಕೊಟ್ಟು, ಇಂವಾದರೂ ಅನ್ಯಾಯದ ನಡತೆ ಮಾಡದೆ, ಹಾಲು ಅಂನ ಉಂಡು ಕೊಂಡು, ಸವಸ್ಥದಲ್ಲು ಇರು ಯೆಂತ, ಅಪ್ಪಣೆ ಕೊಟ್ಟು, ರಕ್ಷಣೆಯ ಮಾಡಿ, ಮಡಗಿ ಇದ್ದರು.

ಹೀಗೆ ಕೆಲವು ದಿವಸ ಇದ್ದವನು, ಮತ್ತೂ ತಂನ ಕೆಟ್ಟ ಬುದ್ಧಿ ಬಿಡದೆ, ಇಲ್ಲಿಂದ ಫರಾರಿ ಆಗಿ ಹೋಗ ಬೇಕೆಂಬದಾಗಿ, ಮನಸುಬಾ ಮಾಡಿದರಿಂದ, ಆ ವಿವರ ರಾಜರು ತಿಳಿದು, ಕರಸಿ; ಮೊದಲು ನೀನು ಮಾಡಿದಂಥಾ ದ್ರೋಹಗಳ ಚಿತ್ತದಲ್ಲು ಮಡಗದೆ, ಬೇಕಾದ್ದು ಕೊಟ್ಟು, ಮಡಗಿ ಇರುವಲ್ಲಿ, ಸುಂಮನೆ ಇರದೆ, ಮತ್ತೂ ಇಂಥಾ ಬುದ್ಧಿ ಯಾಕೆ ಯೋಚಿಸುತ್ತೀಯೆ? ಯೆಂತ ಹೇಳಿ, ಯಥಾಪ್ರಕಾರ ಮಡಗಿದರು. ಮತ್ತು ಕೆಲವು ದಿವಸದ ಮೇಲೆ, ದೊರೆಗಳಿಗೆ ದಗಾ ಮಾಡ ಬೇಕೆಂಬದಾಗಿ ಯೋಚಿಸಿ, ಈ ಬಗ್ಯೆ ಕಳ್ಳರು ಬಂದು, ತುಂಟತನ ಮಾಡುತ್ತಾರೆಂಬದಾಗಿ, ಸುದ್ದಿ ಹುಟ್ಟಿಸ ಬೇಕು. ಹಾಗಾದರೆ ತಾನು ಯೋಚಿಸಿದಂಥಾ ದ್ರೋಹ ಸಾಧ್ಯವಾದಾಗ್ಯೂ, ಈ ಕೆಲಸ ಕಳ್ಳರು ಮಾಡಿದ್ದು ಯೆಂತ, ಯೆಲ್ಲರಿಗೂ ತಿಳಿಯುತ್ತದೆ ಯೆಂಬದಾಗಿ, ತಂನ ಮನಸಿನಲ್ಲು ಗ್ರಹಿಸಿ ಕೊಂಡು, ಕಲಿ ಸಂದ ೪೯೨೫ ನೆ ರುಧಿರೋದ್ಗಾರಿ ಸಂವತ್ಸರದ ಪುಷ್ಯ ಬ ೭ ಲು ಅಪ್ಪಾಜೀಯನು ಮಹಾರಾಜರಿಗೆ ಬರದು ಕಳುಹಿದ ಬಿಂನಪತ್ತಳೆಯಲ್ಲಿ: "ಮೊಂನೆ ಸೋಮವಾರ ರಾತ್ರೆ ಗಳಿಗೆ ೧೪ಕೆ, ಇಲ್ಲಿ ಚಾಕರಿ ಮಾಡುವ ಹೊಂಗ್ಲು ಜನ ಹೊರಗೆ ಬಂದಲ್ಲಿ, ಗರಡಿ ಮನೆ ಹಾರಸೂರಿನಲ್ಲಿ ಬೆಂಕಿ ಉರಿ ಯೆದ್ದದ್ದ ಕಂಡು, ಹುಕಾರು ಮಾಡಿದ್ದರಿಂದ, ಬೆಂಕಿ ಹಾಕಿದವನು ಕಾಡ ವಳಗೆ ಹೋಡಿ ಹೋದಾ. ನಾವು ಯೆಲ್ಲಾ ಕೂಡಿ ಹೋಗುವದರ ವಳಗೆ ಉರಿ ಹೆಚ್ಚಾದ್ದರಿಂದ, ನೀರು ಹುಯಿದು,[1] ಕೆಡಿಸಿ ಬಿಟ್ಟೆವು. ನಿಂನೆ ಮಂಗಳವಾರ ರಾತ್ರೆ, ಗಳಿಗೆ ವಂದರಲ್ಲಿ, ಕೊಂಡದ ಗುಂಡಿ ಕೆರೆ ಕೆಳಗಣ ಹಾಲಸಿನ ಮರದ ಬಳಿಯಲ್ಲಿ ಮೂರು ಜನ, ಕಂಬಳಿ ಗುಬ್ಬೆ ಕಂಬಳಿ ಟೊಪ್ಪಿ ಸಹಾ ಹಾಕಿ ಕೊಂಡು, ಕೈಲಿ ಕೋವಿ ಹಿಡು ಕೊಂಡು, ಪಿಸಿ ಮಾತು ಆಡುತ್ತಿದ್ದಲ್ಲಿ, ಶಿವಾಚಾರದ ನಂಜಪ್ಪ ಯೆಂಬ ಚಾವಡಿಕಾರ ಕಂಡು, ಬಂದು ಹೇಳಿದರಿಂದ, ಜನರ ಕಳುಹಿ ಸೋದಿಸುವದರ ವಳಗೆ, ಅವರು ಇತ್ತಿಲ್ಲಾ. ಈ ಬುಧವಾರ ಬೆಳಿಗ್ಯೆ ಆ ಜಾಗ ಸೋದಿಸಿದಲ್ಲಿ, ಜನರು ಕುಂತಿದ್ದ ಜಾಡು ಕಂಡಿತು. ಅಲ್ಲಿ ಯೆರಡು ಬಾಳೆಕಾಯಿ ಬಿದ್ದು ಇತ್ತು. ಈ ರಾತ್ರೆ ಗಳಿಗೆ ಯೆರಡರಲ್ಲಿ ಗರಡಿ ಮನೆ ಹತ್ತರ ಶಬ್ದ ಕೇಳಿದರಿಂದ, ಯೆರಡು ಜನ ಪಹರೆದವರ ಚೋರು ಪಹರೆ ಇಟ್ಟಲ್ಲಿ, ಅಗಳದ ಬೇಲಿ ಕೊರ ಕೊಂಡು, ಯೆರಡು ಜನ ದುಷ್ಮಾನರು ಬಂದಲ್ಲಿ, ಪಹರೆದವರು ಅಟಕಾಯಿಸುವಾಗ್ಯೆ, ದುಷ್ಮಾನರು ಪಹರೆದವರ ಮೇಲೆ ಗುಂಡು ಹಾರಿಸಿದಲ್ಲಿ, ವಂದು ಗುಂಡು ಹಾರಿ, ನಾನು ಮಲಗುವ ಕಾಮರೆ ಗ್ವಾಡೆಗೆ ಬಿದ್ದಿತು. ಮತ್ತೊಂದು ಕೋವಿ ರಂಜಕ ಮಾತ್ರ ಹತ್ತಿ, ಈ ಪಹರೆದವರು ಯೆದೆಗೆ ಕಟ್ಟಿ ಕೊಂಡು ಇದ್ದ ಕೆಂ ರುಮಾಲಿಗೆ ಆ ರಂಜಕದ ಕಿಡಿ ಹಾರಿ ಸುಟ್ಟಿತು. ಅಗಳದ ಕೆಳಗೆ ಯೆಷ್ಟು ಜನ ಇದ್ದರೋ, ಗೊತ್ತು ಇಲ್ಲಾ. ಇಲ್ಲಿ ಮದ್ದು, ಗುಂಡು, ಚರು, ಕೋವಿ ಸಹಾ ಇಲ್ಲವಾಗಿದೆ. ಅಪ್ಪಣೆ ಆಗ ಬೇಕು" ಯೆಂತ, ಬರ ಕೊಂಡು ಇದ್ದಲ್ಲಿ; ಜಮೇದಾರ ಯೆಡೂರ ಚೆರಿ ಗೌಡ ಸಹಾ, ವಂದು ಪಹರೆದ ಚಾವಡಿಕಾರರಂನು, ಮದ್ದು ಗುಂಡು, ಚರು ಕೋವಿ ಸಹಾ ಕೊಟ್ಟು, ಆ ಕಳ್ಳರಂನು ಬೇವು ಸೋಮಿನಿಂದ ಘಾತೆ ಹತ್ತಿಸಿ ಹಿಡಿಯುವಂತೆ, ಅಪ್ಪಣೆ ಕೊಟ್ಟು, ಗರವಲೆಗೆ ಕಳುಹಿಸಿ ಕೊಟ್ಟರು.

ಆ ಬಳಿಕ ಇದೇ ಪುಷ್ಯ ಬ ೯ ಲು ಅವನು ಬರದು ಕಳುಹಿದ ಬಿನ್ನಪತ್ತಳೆಯಲ್ಲಿ: "ಗುರುವಾರ ದಿವಸ ರಾತ್ರೆ ಅಗಳದ ಹಿಂದ್ಗಾ ಕಾಡ ವಳಗೆ ಮೂರು ವೇಳ್ಯ ಕೊಕ್ಕಲೆ ಕಡ್ಡಿ ಮೆಟ್ಟುವ ಶಬ್ದ ಕೇಳಿದ್ದೇ ಹೊರತು, ಇಂಥಾದ್ದು ಯೆಂತ ತಿಳಿಯಲಿಲ್ಲಾ. ದುಷ್ಮಾನರು ಈ ಮೇರೆ ಮಾಡ ಬೇಕಾದರೆ, ನಾಡ ಜನರ ಸಹಾಯವಿಲ್ಲದೆ ಮಾಡಲಿಕ್ಕಿಲ್ಲಾ ಯೆಂಬದಾಗಿ, ನಂನ ಮನಸಿಗೆ ಕಾಣುತ್ತಾ ಇದೆ" ಯೆಂತ ಬರದು ಕೊಂಡು ಇದ್ದಾ.

ಇದೇ ಪುಷ್ಯ ಬ ೧೦ ಲು ಬರದು ಕಳುಹಿದ ಬಿಂನಪತ್ತಳೆಯಲ್ಲಿ: "ಮೊದಲು ಸೋಮವಾರ ದಿವಸ ಗರಡಿ ಮನೆಗೆ ಬೆಂಕಿ ಹಾಕಿದ್ದು ಯಾರೋ ಹೊಂಗ್ಲು ಹುಡುಗ್ರ ಕೆಲಸ ಯೆಂಬದಾಗಿಯೂ, ಮಾರನೆ ಮಂಗಳವಾರ ರಾತ್ರೆ ಕೆರೆ ಕೆಳಗಣ ಹಾಲಸಿನ ಮರದ ಬುಡದಲ್ಲಿ ನಿಂತು ಇದ್ದು, ಬಾಳೆಕಾಯಿ ಬಿಸಾಟು ಹೋದವರು ಯಾರೋ ಹಾಲೆಯರ ಕೆಲಸ ಯೆಂಬದಾಗಿಯೂ, ಆ ಮಾರನೆ ಬುಧವಾರ ಅಸ್ತಮಾನದಲ್ಲಿ ಗರಡಿ ಮನೆ ಹಿಂದ್ಗಾ ಕಾಡಲ್ಲಿ ಕೊಕ್ಕಲೆ

[1] ಹೊಯಿದು.

ಕದ್ದಿ ಮೆಟ್ಟಿದ ಶಬ್ದ ಕೇಳಿದ್ದು, ಮೃಗಜಾತಿಗಳ ಕೆಲಸ ಯಂಬದಾಗಿಯೂ, ಉದಾಸೀನದಲ್ಲಿ ಇದ್ದೆ. ಯಾವಾಗ ಬುಧವಾರ ದಿವಸ ರಾತ್ರೆ ಯರಡು ಗಳಿಗೆ ವಳಗೆ ಬಂದು ಗುಂಡು ಹೊಡೆಯುವದು ಇದ್ಯನ್ನಾ ತುಂಟರ ಕೆಲಸ ಯಂಬದಾಗಿ ತಿಳಿದು, ಪಹರೆ ಬಂದುಬಸ್ತು ಮಾಡಿ ಇದ್ದೇನೆ, ಚತುರ್ಯಾಪಾಯದಿಂದಾ ಹ್ಯಾವು ಬೇವು ಮಡಗಿ, ಘಾತೆ ಹಾಕಿಸಿ, ಶಿಕ್ಕಿದರೆ, ಆ ತುಂಟರಂನು ಹಿಡಿದು ಕಳುಹುತ್ತೇನೆ" ಯಂಬದಾಗಿ ಬರ ಕೊಂಡು ಇದ್ದನು.

ಈ ಮೇರೆ ಈ ಅಪ್ಪಾಜೀಯನು ದ್ರ್ಯಾಹಗಳ ಯೋಚಿಸಿ, ಕಳ್ಳರು ಬಂದು ತರಾರತ್ತು ಮಾಡುತ್ತಾರೆ ಯಂತಾ ಇಲ್ಲದ ಸುಳ್ಳು ಸುದ್ದಿ ಹುಟ್ಟಿಸಿ, ಇಂಥಾ ತುಂಟ ಕೆಲಸಗಳಂನು ತಂನ ಬಳಿಯ ಚಾಕರಿ ಮಾಡಿ ಕೊಂಡು ಇರುವ ಹುಡುಗರಿಂದಾ ಮಾಡಿಸುತ್ತಾ, ದಿನವತ್ತಳೆ ಬರ ಕಳ್ಳುತ್ತಾ ಇದ್ದಂಥಾದ್ದ ಸಹಾ, ಆ ಗಡಿನಾಡ ತಾಲೂಕಿನಲ್ಲಿ ಹಾರುಪತ್ಯ ಮಾಡಿ ಕೊಂಡು ಇದ್ದಂಥಾ ಶೀರು ಗೌಡನ ಬೀರೆ ಗೌಡ ಯಂಬವನು ಅರಮನೆ ಉಪಾಲಿಗೆ ಸರಿಯಾದವನಾದ್ದರಿಂದಾ, ತಿಳಿದು, ಧಾರೆಗಳ ಬಳಿಗೆ ಬಂದು, ರಕ್ತಾಕ್ಷಿ ಸಂವತ್ಸರದ ಚೈತ್ರ ಶು ೧೦ ಲು ಅರಿಕೆ ಮಾಡಿದ ವಿವರ:

"ತಾವು ಮಹಾದೇವಪುರದಲ್ಲು ದಾತಡ ಧಾರೆಗಳ ಗದ್ದಿಗೆ ಮಂಟಪವಂನು ಹೊಸ್ತಾಗಿ ಕಟ್ಟಿಸುತ್ತಾ ಇದ್ದಂಥಾದ್ದ ನ್ಯಾಡುವ ಬಗ್ಯೆ, ದಯ ಮಾಡಿ ಬಂದು ಇದ್ದಾಗ್ಯೆ, ಚಾವಡಿಕಾರರ ಮುಂತಾಗಿ ಯಲ್ಲರಂನು ಹಿಂದೆ ಬಿಟ್ಟು, ತಾವು, ತಂಮ ಸಂಗಡ ಮೂರು ನಾಲ್ಕು ಜನ ಊಳಿಗದವರು ಸಹಾ ಕುದುರೆಯಂನು ಹ್ಯಾಡಿಸಿ ಕೊಂಡು, ಮುಂದೆ ಮಹಾದ್ಯೇವಪುರಕ್ಕೆ ಬಂದು, ಅಲ್ಲಿಂದಾ ಗರಗಂದೂರಿಗೆ ಅದೇ ಮೇರೆ ಕುದರೆ ಮ್ಯಾಲೆ ಸವಾರಿ ಆಗಿ ಹ್ಯಾಡಿಸಿ ಕೊಂಡು, ಹಾಕಿ ಬ್ಯೇಟೆಗೆ ದಯ ಮಾಡಿದಲ್ಲಿ; ಅಲ್ಲಿಂದಾ ಅಪ್ಪಾಜೀಯನಿಗೂ ಇಲ್ಲಿಗೆ ಬರುವದಿದ್ದರೆ, ಕಾದು ಕೊಂಡು ಬಂನಿ ಯಂತಾ, ಚಾವಡಿಕಾರರಂನು ಕಳುಹಿಸಿ ಕರೆಸಿ ಕೊಂಡು, ವಂದು ದಿವಸ ರಾತ್ರೆ ಮಹಾದ್ಯೇವಪುರದಲ್ಲು ಇದ್ದು, ಮಾರನೆ ದಿವಸಾ ಮಧ್ಯಾನ್ಹದ ಮ್ಯಾಲೆ ಅಲ್ಲಿಂದಾ ಸ್ವಾಮಿಯವರು ಮಡಿಕ್ಯೇರಿ ಅರಮನೆಗೆ ದಯ ಮಾಡಿ ಬರುವಾಗ್ಯೆ, ಸಂಗಡ ಅಪ್ಪಾಜೀಯನು ಕುರಂಬಳ್ಳಿ ಗದ್ದೆಗೆ ಬಂದು ಇಳಿಯುವಲ್ಲಿ ತಂಮ ಸಂಗಡ ಅಪ್ಪಣೆ ತೆಗದು ಕೊಂಡು, ಅಲ್ಲೆಯ್ಯೇ ವಂದು ಗಳಿಗೆ ಪರಿಯಂತರ ನಿಂತು ಕೊಂಡು, ತಂಮ ಖಾಸಾ ಸವಾರಿ ಆ ಹಾದಲು ದಾಟಿ ಟಿಕಹಿಸುವಾಗ್ಯೆ, ಆ ಹಾದಲು ದಾಟಿ ಕಾಡು ಮರೆ ಆಗುವ ಪರಿಯಂತರಕ್ಕೂ, ಅಪ್ಪಾಜೀಯನು ಬಿಟ್ಟ ಕಂಣು ಮುಚ್ಚದ ಹಾಗೆ ನ್ಯಾಡುತ್ತಲೆ ನಿಂತು ಇದ್ದು, ಆ ಬಳಿಕ ತಾವು ಮುಂದೆ ದಯ ಮಾಡಿದ ಮ್ಯಾಲೆ, ಅಲ್ಲಿಂದಾ ಬಂದು, ಗರವಲೆಗೆ ಹೋಗಿ, ಧಾರೆಗಳು ಪಟ್ಟ ಪಟ್ಟರೆ ಕುದರೆ ಮ್ಯಾಲೆ ಸವಾರಿ ಆಗಿ ಹ್ಯಾಡಿಸಿ ಕೊಂಡು ಬರುತ್ತಾರೆ, ಅವರಿಗೆ ದಗಾ ಮಾಡ ಬೇಕು ಯಂಬದಾಗಿ ಮನಸಿನಲ್ಲಿ ನಿಶ್ಚೈಸಿ, ಇಂನು ಗರವಲೆಗೆ ಕಳ್ಳರು ಬಂದು ಮನೆಗೆ ಹೊಯಿದರು, ಇಂಥಾ ತಾವಾ ಬ್ಯೇಲಿ ಕಾರದು, ಕಂನಾ ಮಾಡಿ, ಬಂದು ಹೋಗಿದ್ಧಾರೆ ಯಂತಾ, ವಂದಲ್ಲಾ, ನಾಲ್ಕು ಸಲಾ ಕಳ್ಳರು ಬಂದು ಹೋಗಿದ್ಧಾರೆ ಯಂತಾ, ಸುದ್ದಿ ಹುಟ್ಟಿಸಿ, ಈ ಮೇರೆ ಈ ಮೇರೆ ಯಂತಾ ತಂಮ ಸಂನಿಧಾನಕ್ಕೆ ದಿನವತ್ತಳೆಯಂನು ಇಲ್ಲದ ಸುಳ್ಳು ಮಾತು ಬರ ಕೊಂಡು ಇದ್ಧಾನೆ. ಇಂಥಾ ಆಗದಂಥಾ ಅನ್ಯಾಯದ ಮಾತ್ಯೇ ಹೋತ್ತು, ವಂದಾದರೂ ತಂಮ ಜೀವಕ್ಕಾಗಲಿ, ತಂಮ ಮಕ್ಕಳಿಗಾಗಲಿ, ತಂಮ ದವಲತ್ತಿಗಾಗಲಿ, ಆಗದ್ದ ಹಾರೈಸುವದಲ್ಲದೆ, ವಳ್ಳೇದು ಹಾರೈಸಿ, ವಳ್ಳೆ ಮಾತು ಈ ವರಿಗೂ ಅವನ ಬಾಯಿಂದಾ ಹೊರಡುವಂಥಾದ್ದು ಕ್ಯೇಳಲಿಲ್ಲಾ; ಯಾವಾಗ ನ್ಯಾಡಿದಾಗ್ಯಯೂ, ಇಂಥಾ ಸಹಮಿ ದ್ರ್ಯಾಹದ ಮಾತು ಹೇಳುವದ ಕ್ಯೇಳುವದ್ಯೇ ಹೋತ್ತು, ತಮಗೆ ಶ್ರೇಯಸ್ಸು ಹಾರೈಸುವಂಥಾದ್ದ ಈ ವರಿಗೂ ನಾನು ಕ್ಯೇಳಲಿಲ್ಲಾ. ಆದ್ದರಿಂದಾ ನನಿಗೆ ಬಹಳ ಸಂಶಯವಾಗಿ ಆ ಮೇರೆ ಯೋಚಿಸಿದ್ದಂನು ನನಗೆ ಸ್ವಲ್ಪ ಸುಳು ಶಿಕ್ಕಿದರಿಂದಾ, ಈ ಮಾತು ನಿಜವ್ಯಾ ಸುಳ್ಳ್ಯಾ, ಯಂಬದಂನು ಚಂನಾಗಿ ತಿಳಿಯ ಬೇಕೆಂತಾ ನಾನು ಯಾವಾಗ್ಯಯೂ ಹೋಗುವ ಮೇರೆ ಹೋದಲ್ಲಿ, ಇಲ್ಲಿಗೆ ಯಾರ್ಯಾ ಕಳ್ಳರು ಬಂದು, ಗುಂಡು ಇಟ್ಟು, ಈ ಮೇರೆ ಮಾಡಿದರು ಯಂತಾ, ಅಪ್ಪಾಜೀಯನು ಹೇಳಿದಲ್ಲಿ, ಆವಾಗ್ಯೆ ನಾನು ಹೇಳಿದ್ದು: ಮಹಾರಾಜರ ರಾಜ್ಯದ ಸುತ್ತಾ ಬಹಳ ಬಂದುಬಸ್ತಾಗಿ ಪಹರೆ ಚೌಕಿ ಉಂಟು; ಇದರ ವಳಗೆ ಕಳ್ಳರು ಬಂದರು ಯಂದರ್ಯೇನು? ಗುಂಡು ಇಟ್ಟರು ಯಂದರ್ಯೇನು? ಇಲ್ಲಿಗೆ ಕಳ್ಳರು ಯಾರೂ ಬರಲಿಲ್ಲಾ. ಈ ಮೇರೆ ಗುಂಡು ಇಟ್ಟು ತುಂಟಾಟ ಮಾಡಿದ್ದು ನಿಂಮ ಬಳಿಯ ಇರುವ ಹುಡುಗರ ಕೆಲಸವ್ಯೇ ಸರಿ ಯಂತಾ ನಾನು ಹ್ಯೇಳುವಾಗ್ಯೆ, ಅಪ್ಪಾಜೀಯನು: ಈ ಶೀರು ಗೌಡನ ಬೀರೆ ಗೌಡನು ಈ ಸುಳು ತಿಳಿದಾ, ಇವನು

ಹಿಂದಕ್ಕೆ ದೊಡ್ಡ ಧೊರೆಗಳ ಉಪ್ಪು ಉಂಡವ, ಈಗಲೂ ಧೊರೆಗಳ ಉಪ್ಪು ಉಣ್ಣುತ್ತಾನೆ. ಇಂಥಾ ಸ್ವಾಮಿ ದ್ರೋಹಿ ಇವನು ತಿಳಿದ ಮೇಲೆ, ಸ್ವಾಮಿ ಪಾದಕ್ಕೆ ಅರಿಕೆ ಮಾಡದೆ ಇರುವದಕ್ಕಿಲ್ಲಾ ಯಂಬದಾಗಿ ತಿಳಿದು, ಈ ಮಾತು ಧೊರೆಗಳ ಸಂಗಡವಾಗಲಿ, ಮತ್ತೊಬ್ಬರ ಸಂಗಡವಾಗಲಿ, ಹೇಳ ಬೇಡ ಯಂಬದಾಗಿ, ನಂನ ಕೂಡೆ ವೀರಭದ್ರ ದೇವರ ಗುಡಿ ತಾವ ಗಂಧಪ್ರಸಾದ ಮುಟ್ಟಿಸಿ, ಭಾಷೆ ಮಾಡಿಸಿದರು. ಇಂನು ಖಾಸಾ ಸವಾರಿ ಮಹಾದೇವಪುರಕ್ಕೆ ದಯ ಮಾಡ ಬೇಕಾದರೆ, ವಂದು ಗುಂಡಿನ ಯಸಿಗೆ ಯಡಬಲಕ್ಕೆ ಶೋಧನೆ ಮಾಡಿಸಿ, ದಯ ಮಾಡ ಬೇಕು.” ಯಂತಾ, ತೀರು ಗೌಡನ ಬೀರೆ ಗೌಡನು ಅರಿಕೆ ಮಾಡಿದಲ್ಲಿ, ಈ ಮಾತು ನಿಜವೋ, ಈಗಲೇ ಹೊದಿದು ವಿಚಾರಿಸುತ್ತದೆ ಯಂಬದಾಗಿ, ಮಹಾರಾಜರು ಅಪ್ಪಣೆ ಕೊಟ್ಟಲ್ಲಿ, ನಾನು ಇಂನು ಚೆನ್ನಾಗಿ ಹಿಕ್ಮತ್ತಿನಿಂದಾ ವಿಚಾರಿಸಿ ಕೊಂಡು, ಇಂನು ಹದಿನೈದು ಇಪ್ಪತ್ತು ದಿವಸದ ವಳಗೆ ಇದೆಲ್ಲಾ ಚೆನ್ನಾಗಿ ತಿಳು ಕೊಂಡು ಬರುತ್ತೇನೆ ಯಂತಾ, ಬೀರೆ ಗೌಡನು ಹೇಳಿ, ಅಪ್ಪಣೆ ತೆಗದು ಕೊಂಡು, ಗರವಲೆಗೆ ಹೋದನು.

ಆ ಬಳಿಕ ಅಪ್ಪಾಜಿಯನು ಮಾಡಿದಂಥಾ ಸ್ವಾಮಿದ್ರೋಹವಾದ ಯೋಚನೆಯಂನು ತೀರು ಗೌಡನ ಬೀರೆ ಗೌಡನು ತಿಳುಕೊಂಡು, ಮಹಾರಾಜರಿಗೆ ಅರಿಕೆ ಮಾಡ ಬೇಕೆಂಬದಾಗಿ, ಮಡಿಕೇರಿಗೆ ಬಂದಲ್ಲಿ, ಅಷ್ಟು ಹೊತ್ತಿಗೆ ಮಹಾರಾಜರು ನಾಲ್ಕುನಾಡ ಅರಮನೆಗೆ ದಯ ಮಾಡಿ ಇದ್ದದರಿಂದಾ, ಸುಬೇದಾರ ಮಾದೈಯ, ಕಾರಕಾರ ಬೋಪು ಸಹಾ ಕಂಡು, ಯಾಕೆ ಬಂದೆ ಬೀರೆ ಗೌಡಾ, ಯಂತಾ ಕೇಳಿದದಲ್ಲಿ: ಧೊರೆಗಳ ಪಾದಾ ಕಾಣುವ ಬಗ್ಯೆ ಬಂದೆ ಯಂತಾ ಹೇಳಿದನು. ಆವಾಗ್ಯೆ: ದೊರೆಗಳು ನಾಲ್ಕುನಾಡ ಅರಮನೆಗೆ ದಯ ಮಾಡಿ ಇದ್ದಾರೆ. ಅಲ್ಲಿಗೆ ಹೋಗುತ್ತೀಯೋ? ಯಂತಾ ಅವರು ಕೇಳುವಾಗ್ಯೆ, ಅಲ್ಲಿಗೆ ಹೋಗುತ್ತೇನೆ ಯಂತಾ ಹೇಳಿ, ಆ ದಿವಸ ಸಾಯಂಕಾಲವಾದ್ದರಿಂದಾ ಮಡಿಕೇರಿ ಪೇಟೆಯಲ್ಲಿ ಬೀರೆ ಗೌಡನು ಇಳು ಕೊಂಡನು.

ಅಷ್ಟರ ವಳಗೆ ಅಪ್ಪಾಜಿಯನು: ನಾನು ಈ ಪ್ರಕಾರ ಸ್ವಾಮಿಯವರಿಗೆ ದಗಾ ಮಾಡ ಬೇಕೆಂಬದಾಗಿ ಯೋಚಿಸಿ ಮನಸುಬಾ ಮಾಡಿ ಇರುವಂಥಾದ್ದು, ಈ ಬಗ್ಯೆ ಕಳ್ಳರು ಬಂದು, ಗುಂಡು ಇಟ್ಟರು, ಮನೆಗೆ ಹೊಂಮಿದರು ಯಂಬದಾಗಿ, ಸುಳ್ಳು ಸಮಾಚಾರ ಹುಟ್ಟಿಸಿದ್ದು ಸಹಾ, ಬೀರೆ ಗೌಡ ಚೆನ್ನಾಗಿ ತಿಳಿದು ಅರಿಕೆ ಮಾಡುವ ಉದ್ದಿಶಯ ಹೋಗಿ ಇದ್ದಾನೆ. ಇಂನು ನಂನ ಪ್ರಾಣದ ಮೇಲೆ ಬರುತ್ತದೆ ಯಂತಾ ಯೋಚಿಸಿ, ತಂನ ಕಡೆ ಸಾಹಾರವಾಗಿ ಇದ್ದ ಮೂದಗುನಾಡು ದೀವರ ಹುಡುಗ ಯಂಬವನ ಕರದು, ಈ ಮೇರೆ ಬೀರೆ ಗೌಡನು ಹೋಗಿ ಇದ್ದಾನೆ; ನೀನು ಮಡಿಕೇರಿಗೆ ಹೋಗಿ ನೋಡು, ಅಲ್ಲಿ ಅವನು ಇದ್ದರೆ, ಮೂಡ ಶೀಮೆ ಹೋಗುವಂಥಾ ಜನಗೆ ರಹದಾರಿ ಚೀಟು ಕಾಡ ಬೇಕು, ಆದ್ದರಿಂದಾ ನಿಂನಂನು ವಂದು ಸಲಾ ಜರೂರು ಬಂದು ಹೋಗುವದಕ್ಕೆ ಹೇಳಿದ್ದಾರೆ ಯಂತಾ ಹೇಳಿ, ಕರಕೊಂಡು ಬಾ, ಅವನು ಅಲ್ಲಿ ಇಲ್ಲದೆ, ನಾಲ್ಕುನಾಡ ಅರಮನೆಗೆ ಹೋಗಿ ಇದ್ದರೆ, ನೀನು ಹೋಗ ಬೇಡ. ಮಡಿಕೇರಿಯಿಂದಲೇ ತಿರುಗಿ ಬಾ, ಯಂಬದಾಗಿ ಹೇಳಿ ಕಳುಹಿದಲ್ಲಿ, ಅದೇ ಮೇರೆ ಆ ದೀವರ ಹುಡುಗನು ಬಂದು, ಮೇಲೆ ಬರದ ಪ್ರಕಾರ ಹೇಳಿ ಕರದಲ್ಲಿ, ಈಗ ಮೂಡ ಶೀಮೆಯಿಂದಾ ವಿದಳ ಸದಳ ತರುವ ಬಗ್ಯೆ ಹೋಗುವ ಜನಗೆ ರಹದಾರಿ ಕಾಡುವ ಬಗ್ಯೆ, ಅಲ್ಲಿ ಯಾರೂ ಇಲ್ಲಾ; ಆದ್ದರಿಂದಾ ನಂನಂನು ಕರೆವದಕ್ಕೆ ಬಂದು ಇದೆ. ಈಗ ನಾನು ಹೋಗಿ, (ಸ್ವಾಮಿಯವರ ಖಾಸಾ ಸವಾರಿ ದಯ ಮಾಡುವದು.) ಬರುತ್ತೇನೆ ಯಂತಾ, ಸುಬೇದಾರ ಮಾದೈಯನ ಸಂಗಡ ಹೇಳಿ, ಉಂಡಿಗೆ ತೆಗದು ಕೊಂಡು, ಗರವಲೆಗೆ ಹೋದನು.

ಆ ಬಳಿಕ ಅಪ್ಪಾಜಿಯನು ತಂನ ಮನಸುಬಕ್ಕೆ ಕೂಡಿದಂಥಾ ಚೌಕನ ಮಂದು ಯಂಬವನ ಸಂಗಡ: “ಈ ಬೀರೆ ಗೌಡನ ಇಂನು ಬಿಡ ಬಾರದು. ನೀನು ದಾರಿಲಿ ಕಾಡ ವಳಗೆ ಕುಂತು ಇದ್ದು, ಬೀರೆ ಗೌಡನು ಅವನ ಮನೆಗೆ ಹೋಗುವಾಗ, ಗುಂಡಲ್ಲಿ ಇಟ್ಟು ಬಿಡು.” ಯಂತಾ ಹೇಳಿದಲ್ಲಿ, ತನಗೆ ಕೈ ಊನವಾಗಿದೆ, ಭಯವು ಆಗುತ್ತಾ ಇದೆ, ನಾನು ಗುಂಡು ಇಟ್ಟು, ಅವನು ಸಾಯದೆ ಉಳಿದರೆ, ನಂನ ಸಂತಾನ ಹೋದೀತು ಯಂತಾ ಹೇಳಿದಲ್ಲಿ, ಆವಾಗ್ಯೆ ನಿಂನ ಕೆಲಿ ಹಾರಿಯದು, ನೀನು ಬೇಡ ಯಂತಾ ಹೇಳಿ, ತಂನ ಚಾಕರಿ ಮಾಡಿ ಕೊಂಡು ಇದ್ದ ಶಿವಾಚಾರದ ಚೆಂನವೀರ ಯಂಬ ಹುಡುಗನ ಸಂಗಡ ಕೇಳುವಾಗ್ಯೆ, ತಾನು ಗುಂಡು ಇಡುತ್ತೇನೆ ಯಂತಾ ವಪ್ಪಿದರಿಂದಾ, ಬಡಗಿ ಕೊಯನ ಮನೆ ಹಿತ್ತಟ್ಟಿನ ಕಾಲ್ಲಿ ಬಳಿಯಲ್ಲಿ, ಕಾಡ ವಳಗೆ ಉಳ್ಳಿ ನಿಲ್ಲುವ ಪ್ರಕಾರ, ಜಾಗಾ ಮಾಡಿ, ಅಲ್ಲಿ ಅಪ್ಪಾಜಿಯನು, ಅವನ ಕಡೆ ಚೆಂನವೀರ ಯಂಬವನು ಸಹಾ, ಕಾದು ಕುಂತು ಇದ್ದದ್ದು, ಈ ಹೊತ್ತು ಹೊಗುರು

ವಾರ ದಿವಸ, ಈ ಬೀರೆ ಗೌಡನು ತಂನ ಮನೆಗೆ ಹೋಗುವಾಗ, ಗುಂಡಲ್ಲಿ ಇಟ್ಟು, ಕೊಂದು ಹಾಕಿ, ಅವನ ಮೇಲಿ ಇದ್ದಂಥಾ ಕೊಡಂಗ ಕತ್ತಿ, ಕ್ಯಾಪಿ, ಬಳೆ, ಸಂಪಗೆ ಮುಂತಾಗಿ ತೆಗದು ಕೊಂಡು, "ಈ ಮೇರೆ ಬೀರೆ ಗೌಡನು ಗರವಲೆಗೆ ಬಂದು, ತಂನ ಮನೆಗೆ ಹೋಗುತ್ತಿದ್ದಲ್ಲಿ, ನಡು ದಾರಿಯಲ್ಲಿ ಕಾಡ ವಳಗೆ ಯಾರೋ ಕಳ್ಳರು ಗುಂಡಲ್ಲಿ ಇಟ್ಟು, ಅವನ ಕೈ ಮೇಲಿ ಇದ್ದಂಥಾ ವಡವೆ ವಸ್ತಂನು ತೆಗದು ಕೊಂಡು ಹೋದರು, ಇಂಥಾವರು ಯಂಬದು ಗೊತ್ತು ಇಲ್ಲಾ. ಇಲ್ಲಿ ಕಳ್ಳರ ಉಪದ್ರ ಬಹಳವಾಗಿ ಇದೆ" ಯಂಬದಾಗಿ, ಮರೆಕನಡವಾಗಿ ಧೊರೆಗಳ ಸಂನಿಧಾನಕ್ಕೆ ಅಪ್ಪಾಜೀಯನು ಬಿಂನಪತ್ತಳೆಯಂನು ಬರದು ಕಳುಹಿದನು.

ಇದ ನ್ಯಾಡಿ, ಬೀರೆ ಗೌಡನು ಮೊದಲು ದಾಡದ ಧೊರೆಗಳ ದಿವಸದಲ್ಲು ಆಪ್ತನಾ, ಅರಮನೆ ಉಪ್ಪಿಗೆ ಸರಿಯಾಗಿ ಚಾಕರಿ ಮಾಡಿದಂಥವಾ, ಬಹಳ ದಿವದ ಹಳಬನಾಗಿ ಇದ್ದಾ. ಅದರಿಂದಾ ಅವನಿಗೆ ಆ ನಾಡ ಪಾರುಪತ್ಯವಂನು ಕೊಟ್ಟು ಮಡಗಿ ಇತ್ತು. ಈ ಅಪ್ಪಾಜೀಯನು ನಮಗೆ ದಗಾ ಮಾಡ ಬೇಕೆಂತಾ, ಯೋಚಿಸಿದ್ದು, ಕಳ್ಳರು ಬಂದರು ಯಂತಾ, ಇಲ್ಲದ ಸಟೆ ಸುದ್ದಿ ಹುಟ್ಟಿಸಿದ್ದ ಸಹ, ಈ ಬೀರೆ ಗೌಡನು ಮೊದಲು ಬಂದು ನಂಮ ಸಂಗಡ ಅರಿಕೆ ಮಾಡಿ, ಇಂನೂ ಚೆಂನಾಗಿ ವಿವರ ತಿಳಿದು ಕೊಂಡು ಬರುತ್ತೇನೆ, ಯಂತಾ ಹೇಳಿ, ಹೋಗಿ ಇದ್ದನಷ್ಟೆ. ಇಂಥಾವನ ಕಳ್ಳರು ಬಂದು ಗುಂಡಲ್ಲಿ ಇಟ್ಟು, ಹ್ಯಾಗೆ ಕೊಂದರು? ಕಳ್ಳರು ಕೊಂದಂಥಾದ್ದೇ ಸಟೆ. ಈ ಅಪ್ಪಾಜೀಯನ ಕಡೆಯಿಂದಲೇ ಅವನ ಪ್ರಾಣಘಾತವಾಗಿ ಇದೆ ಯಂತಾ, ಧೊರೆಗಳವರು ಚಿತ್ತದಲ್ಲು ತಿಳಿದು, ಈ ಅಪ್ಪಾಜೀಯನ ಬಳಿಯಲ್ಲಿ ಚಾಕರಿ ಮಾಡಿ ಕೊಂಡು ಇದ್ದಂಥಾ ಚ್ಯಾಕನ ಮಂದು ಜನ ವಂದು, ಶಿವಾಚಾರದ ಚೆಂನವೀರ ಜನ ವಂದು, ಗರಗಂದೂರು ಶಿವಾಚಾರದ ಪುಟ್ಟ ಜನ ವಂದು ಸಹ, ಈ ಮೂರು ಜನಂನು ವಿಂಗಡ ವಿಂಗಡವಾಗಿ ಕರೆಸಿ ಕೇಳಿದಲ್ಲಿ, ಕರ್‍ಯಾಧನ ಸಂವತ್ಸರದ ಜ್ಯೇಷ್ಟ ಶು ೮ ಲು, ಚ್ಯಾಕನ ಮಂದು ಯಂಬವನು ಹೇಳಿದ ತಲಿಮಿನ ವಿವರಾ:

"ಈಗ ಆರು ತಿಂಗಳಿನ ಸುಮಾರಿನಲ್ಲಿ ಅಪ್ಪಾಜೀಯನು ನಂನಂನು, ಚೆಂನವೀರನ ಪುಟ್ಟನ ಸಹಾ, ಅವರು ಮಲಗುವ ಕ್ಯಾಮರೆಗೆ ಕರದು, ಹೇಳಿದ ಮಾತು: ಧೊರೆಗಳು ಮಹಾದೇವಪುರಕ್ಕೆ ಶಿವಯೋಗಕ್ಕೆ ಬರುವಾಗ್ಯೆ, ನೀವು ಮೂವರು ಪಟ್ಟಿ ಬಾಕೆ ಹಾಳೆ ತಾವ ಹೋಗುವ ಕಾಡ ವಳಗೆ ಮಾಗೋಡ ಸಮೀಪದಲ್ಲಿ ಕಾದು ಕುಂತು ಇದ್ದು, ಅವರ ಮೇಲೆ ಗುಂಡು ಹಾಕಿರ್ರಿ ಯಂತಾ ಕೇಳಿದರು. ಅದು ಯಾಕೆ ಬೇಕು? ಯಂತಾ, ನಾನು ಹೇಳಿದೆ. ಆವಾಗ್ಯೆ ಅಪ್ಪಾಜೀಯನು ಹೇಳಿದ್ದು: ಅವರು ಧೊರೆ ಮಗನಾದರೆ, ನಾನು ಧೊರೆ ಮಗ ಇದ್ದೇನೆ. ಅವರು ಧೊರೆತನ ಮಾಡಿದರೆ, ನನಗೆ ಧೊರೆತನ ಮಾಡುವದಕ್ಕೆ ಕೂಡದ್ಯೋ? ನಾನು ಧೊರೆ ಹೊಟ್ಟೆಲಿ ಹುಟ್ಟಲಿಲ್ಲ್ಯೋ? ಹಂದಿಗೆ ಹತ್ತು ಮರಿ, ಹುಲಿಗೆ ವಂದು ಮರಿ; ಆ ಪ್ರಕಾರ ಧೊರೆಗಳಿಗೆ ಹತ್ತು ಮಕ್ಕಳು ಇದ್ದಾರೆ. ನನಗೆ ಇಬ್ಬರು ಮಕ್ಕಳು ಇರುವಂಥಾದ್ದು ಹುಲಿ ಮರಿಯಂಥಾ ಮಕ್ಕಳು ಇದ್ದಾರೆ. ನ್ಯಾಡ ಬೇಕು. ನೀನು ಕೇಳಿ ಹಾರಿ ಯದ ಮಾತು ಯೇನಂತಾ ಹೇಳುತ್ತೀಯೇ? ಸುಂಮನೆ ಇರು ಯಂತಾ ಹೇಳಿದರು. ಆವಾಗ್ಯೆ ಚೆಂನವೀರ ಯಂಬವನು, ಪುಟ್ಟೆ ಗೌಡ ಸಹಾ, ಅದೇ ಮೇರೆ ನಾವು ಮಾಡಿಯೇವು ಯಂತಾ, ಹೇಳುವಾಗ್ಯೆ; ವಳ್ಳೇದು, ಆಟಿಗ್ಯೆಲ್ಲಾ ನಾನು ವಿವರಾ ಮಾಡಿ ಕೊಟ್ಟೇನು ಯಂತಾ, ಹೇಳಿದರು. ಬೀರೆ ಗೌಡನ ಕೊಲ್ಲುವದಕ್ಕೆ ಕೆಲವು ತಿಂಗಳಿಗೆ ಮೊದಲು ಹಾಗೆತಾರೆ ಹಾಗೆತ್ತು ಕಾಮರ್‍ಯಲಿ ಕರದು ಹೇಳಿದ ಮಾತು: ಶೀರು ಗೌಡನ ಬೀರೆ ಗೌಡನು ಮಡಿಕ್ಯೇರಿ ಅರಮನೆಗೆ ಹೋಗಿ, ಅಪ್ಪಾಜೀಯ ಅಂಥವ ಇಂಥವ, ತಮಗೆ ದಗಾ ಮಾಡುವದಕ್ಕೆ ಯೋಚಿಸಿ ಇದ್ದಾನೆ ಯಂಬದಾಗಿ, ತಿಳಿದ ಹಾಗೆ ಯಲ್ಲಾ ಬಾಯಿಗೆ ಬಂದಂತೆ ನಿಂದನೆ ಮಾಡಿ, ಅಪ್ಪಾಜೀಯ ಧೊರೆಗಳ ಹೊಟ್ಟೆಯಲ್ಲಿ ಯೇನಂತಾ ಹುಟ್ಟಿದಾ? ತಾವು ಪಿರಿಯಾಪಟ್ಟಣದಿಂದಾದಯ ಮಾಡದಿದ್ದರೆ, ಇವ ಯೇನಾಗುತ್ತಿದ್ದನಾ ಯಂಬದಾಗಿ, ಅರಿಕೆ ಮಾಡಿದನಂತೆ; ಈ ವಿವರವಂನು ಅವನೇ ಗರಗಂದೂರ ಪುಟ್ಟೆ ಗೌಡನ ಸಂಗಡ ಈ ಮೇರೆ ಅರಿಕೆ ಮಾಡಿದೆ ಯಂತಾ, ಹೇಳಿದನಂತೆ; ಬೀರೆ ಗೌಡನು ಈ ಮೇರೆ ಹೇಳುತ್ತಾನೆ ಯಂತಾ, ಆ ಪುಟ್ಟೆ ಗೌಡನು ನಂಮ ಸಂಗಡ ಹೇಳಿದಲ್ಲಿ, ನಾವು ಧೊರೆಗಳಿಗೆ ದಗಾ ಮಾಡುವದಕ್ಕೆ ಮನಸುಬಾ ಮಾಡಿದಂಥಾದ್ದಂನು ಅವನು ತಿಳಿದು ಇದ್ದಾನೆ. ಅದಕ್ಕಾಗಿ ಬೀರೆ ಗೌಡನು ಈ ಮೇರೆ ಹಾರಿ ಆಡುತ್ತಾನೆ. ಆ ಲೌಡಿ ಮಗನ ಕೊಲ್ಲ ಬೇಕು. ನಾವು ನಿಂನ ಕೈಲಿ ವಿಷಾ ಕೊಡುತ್ತೇವೆ. ನೀನು ಅವನಂನು ನಿಂನ ಮನೆಗೆ ಕರ ಕೊಂಡು ಹೋಗಿ, ಊಟಾ ಮಾಡುವಾಗ್ಯೆ, ಯಾತರಲ್ಲಿಯಾದರೂ

ಬೆರಸಿ ಹೋಗಿ, ಕೊಂದು ಬಿಡು" ಯಂತಾ, ನಂನ ಸಂಗಡ ಹೇಳಿದರು. ಆ ಮೇರೆ ಮಾಡುವದಕ್ಕೆ ನಂನ ಕೈಲಿ ಕೂಡದು. ಹೆದರಿಕೆ ಆಗುತ್ತದೆ. ಯಲ್ಲಾದರೂ ತಿಳಿದರೆ, ನಂನ ಜೀಟು ಹಾಟು ಯಲ್ಲಾ ಹೋದೀತು ಯಂತಾ ಹೇಳಿದೆ. ಆವಾಗ್ಯೆ ನಂನ ಸಂಗಡಲೂ ಚಂನುವೀರನ ಸಂಗಡಲೂ ಹೇಳಿದ ವಿವರ: ಬೀರೆ ಗೌಡನ ಹೆಂಮೆ ಮುರಿವದಕ್ಕೆ ವಂದು ಉಪಾಯ ಉಂಟು. ಅಲ್ಲಿ ಹೇಳಿ ಬಂದ ಈಟಿಗೆ ನಂಮ ಕಂಡರೆ, ಬಹಳ ಹೆಂಮೆಯಿಂದಾ ಗರ್ವದಲ್ಲಿ ಇದ್ಧಾನೆ. ಈ ಬಗ್ಯೆ ಈಗ ಇಲ್ಲಿ ರಾತ್ರೆ ವಳಗೆ ಯಾರ್‍ಯ ಹೆಂಗಸರು ಮಕ್ಕಳು ಗರಡಿ ಮನೆಗೆ ಬೆಂಕಿ ಹಾಕಿ, ನಾವು ಹಾಕಲಿಲ್ಲಾ ಯಂತಾ, ಹೇಳುತ್ತಾರೆ. ಈ ಸಮಯದಲ್ಲಿ ಕುಂನ್ಯ ಬಂಟ ಯಂಬವನು ಗಟ್ಟದ ಕೆಳಗೆ ಊಟ ಮಾಡುತ್ತಾನೆ. ಅಪ್ಪಗಳದ ಹಂಗ್ಯೆಯಕ್ಕೂ ಯಾರ್‍ಯ ಬೆಂಕಿ ಹಾಕಿ ಇದಧಾರೆ. ಈ ಸಮಯದಲ್ಲಿ ಕಳ್ಳರು ಬಂದರು ಯಂತಾ, ಸುಂಮಗೆ ಗುಂಡು ಇಟ್ಟರೆ, ಧಿಟವಾಗುತ್ತದೆ ಯಂಬದಾಗಿ, ಸುಂಮನೆ ಗುಂಡು ಇಟ್ಟು ಕೂಗಿ ಯಂತಾ, ಚಂನುವೀರ ಮೊಂತನಿಗೆ ಸಹಾ ತಾಕೀತಿ ಮಾಡಿದಲ್ಲಿ, ಮುಂದೆ ಚಂನುವೀರ ಗುಂಡು ಇಟ್ಟಾ, ಅದರ ಮೇಲೆ ಮೊಂತ ಗ್ಯಾಡೆಗೆ ಇಟ್ಟಾ. ಚಂನಬಸವ ಯಂಬವನು, ಬಾಳ ಸುಬ್ಬಾ, ಮತ್ತು ಯರಡು ಜನ ಹುಡುಗರು ಗುಂಪಿನಲ್ಲಿ ನಿಂತು ಕೊಂಡು, ಗುಂಡು ಇಟ್ಟು, ಕಳ್ಳರು ಬಂದು, ಈ ಪ್ರಕಾರ ಮಾಡಿದರು ಯಂಬದಾಗಿ, ಹುಕಾರು ಮಾಡಿ, ಆ ವಿವರಕ್ಕೆ ಅಪ್ಪಾಜೀಯನು ದಾರೆಗಳಿಗೆ ಬಿಂನವತ್ತಳೆ ಬರದು ಕಳುಹಿದಾ. ಆ ಬಳಿಕ ಬೀರೆ ಗೌಡನು ಅಪ್ಪಾಜೀಯನ ಬಳಿಗೆ ಬಂದಲ್ಲಿ, ಯಾರ್‍ಯ ಕಳ್ಳರು ಬಂದು, ಈ ಪ್ರಕಾರ ಗುಂಡು ಇಟ್ಟು, ಗರಡಿ ಮನೆಗೆ ಬೆಂಕಿ ಹಾಕಿ ಇದ್ಧಾರೆ ಯಂತಲೂ, ಇಂಥಾ ಬಳಿಯ ಬೇಲಿಯಲ್ಲಿ ಕಂಡಾ ಕಾರದು, ನುಸ್ತು[1] ಬಂದಿದ್ಧಾರೆ ಯಂತಾ, ಬೀರೆ ಗೌಡನ ಸಂಗಡ ಅಪ್ಪಾಜೀಯನು ಹೇಳಿದಲ್ಲಿ, ಬೀರೆ ಗೌಡನು ಆ ಬೇಲಿ ಬಳಿಗೆ ಹೋಗಿ, ಕಂಡಾ ಕಾರದಂಥಾದ್ದ, ಗ್ಯಾಡೆಗೆ ಗುಂಡು ಇಟ್ಟಂಥಾದ್ದ ಸಹಾ ನ್ಯಾಡಿ, ಇದು ಕಳ್ಳರು ಬಂದು ಇರುವ ಹಾಗೆ ಕಂಡಾ ಕಾಣುವದಿಲ್ಲಾ, ಗುಂಡು ಇಟ್ಟದ್ದು ಕಳ್ಳರು ಬಂದು ಇಟ್ಟ ಹಾಗೆ ಕಾಣುವದಿಲ್ಲಾ, ಚಂನುವೀರ ಚಂನಬಸವಾ ಯಂಬ ಹುಡುಗರು ಸಹಾ ಮಾಡಿದ ಹಾಗೆ ಕಾಣುತ್ತದೆ ಯಂತಾ, ಅಪ್ಪಾಜೀಯನ ಸಂಗಡ ಹೇಳಿದಲ್ಲಿ, ಕಳ್ಳರು ಬಂದಂಥಾ ಹೇಳ್ಯದಲ್ಲಿ ನಂಮ ಹರಾಗಿ ತಾದಂಥಾ, ಹರಾಗಿ ಆಪತ್ತಾದಂಥಾ ಹುಡುಗರ ಮೇಲೆ ಇಲ್ಲದ ಮಾತು ಹೇಳಿ, ಅವರಂನ ಕೆಡಿಸುವ ಬಗ್ಯೆ ನೀನು ಈ ಮೇರೆ ಇಲ್ಲದದ್ದ ಹೇಳುವಂಥಾದ್ದು; ಕಳ್ಳರು ಬಂದು, ಈ ಮೇರೆ ಯಲ್ಲಾ ಮಾಡಿದರು ಯಂತಾ, ನಾವು ಮಡಿಕೇರಿಗೆ ಬಿಂನವತ್ತಳೆ ಬರ ಕೊಂಡಂಥಾದ್ದ ಹುಸಿ ಮಾಡುವ ಬಗ್ಯೆ ನೀನು ಈ ಮೇರೆ ಹೇಳುವದು ಯಂತಾ ಹೇಳಿ, ಇವನು ಮಡಿಕೇರಿಗೆ ಹೋಗಿ, ಅರಿಕೆ ಮಾಡ್ಯಾನು ಯಂತಾ, ಗರಡಿ ಮನೆ ಹೊತ ಕಾಳ್ವ ಜಾಗಕ್ಕೆ ಕರ ಕೊಂಡು ಹೋಗಿ, ಕಳ್ಳರು ಮಾಡಿದ್ದೇ ಸರಿ. ಹುಡುಗರು ಈ ಮೇರೆ ಮಾಡಿದ್ದು ಯಂತಾ, ಹೇಳುವದಿಲ್ಲಾ ಯಂಬದಾಗಿ, ಭಾಷೆ ಮಾಡು ಯಂತಾ, ಅಪ್ಪಾಜೀಯನು ಹೇಳಿದಲ್ಲಿ, ನಾನು ಯಾಕೆ ಹೇಳಲಿ? ಹೇಳುವದಿಲ್ಲಾ! ಯಂತಾ, ಬೀರೆ ಗೌಡ ಹೇಳುವ ಹಾಗಾತ್ತಿಗೆ, ಗರಗಂದೂರ ಪುಟ್ಟಿ ಗೌಡನು ಹೇಳಿದ್ದು: ಗಂಧ ಪರಸಾದ ಮುಟ್ಟಿಸಿ, ಭಾಷೆ ಮಾಡಿಸಿ ಕೊಳ್ಳ ಬೇಕು. ಹಾಗೆ ಬಾಯಿ ಮಾತಿನ ಮೇಲೆ ಬಿಡ ಬಾರದು, ಯಂತಾ ಹೇಳಿದಾ. ಅದೇ ಮೇರೆ ವೀರಭದ್ರ ದೇವರ ಗಂಧಪರಸಾದವಂನು ತರಿಸಿ, ಈ ಮೇರೆ ಹುಡುಗರು ಗುಂಡು ಇಟ್ಟಾದಿದ್ದು, ನಾನು ಯಾರ ಸಂಗಡಲೂ ಹೇಳುವದಿಲ್ಲಾ ಯಂಬದಾಗಿ, ಸತ್ಯ ಮಾಡಿಸಿದರು. ಆ ಬಳಿಕ ಯೆಳೆಂಟು ದಿವಸದ ಮೇಲೆ ಬೀರೆ ಗೌಡನು ಮಡಿಕೇರಿ ಅರಮನೆಗೆ ಬಂದಲ್ಲಿ, ಆವಾಗ್ಯೆ ಧಾರೆಗಳು ನಾಲ್ಕುನಾಡ ಅರಮನೆಗೆ ದಯಾ ಮಾಡಿ ಇದ್ದರು. ಆವಾಗ್ಯೆ ಅಪ್ಪಾಜೀಯನು ಈ ಗುಂಡು ಇಟ್ಟಾದಿ ಚದಿ ಮಾಡಿದ ಪೂರ್ವೋತ್ತರ ಅರಿಕೆ ಮಾಡುವ ಬಗ್ಯೆ, ಬೀರೆ ಗೌಡನು ಅರಿಕೆ ಮಾಡುವ ಬಗ್ಯೆ ಹೋಗಿರುವದೇ ಸರಿ ಯಂತಾ ತಿಳಿದು, ಆ ಬೀರೆ ಗೌಡನು ಮಡಿಕೇರಿಯಲ್ಲಿ ಇದ್ದರೆ, ಮೂಡಲಾಗಿ ದೀವಾನು ಹಾವನು ತರುವದಕ್ಕೆ ಹೋಗುವಂಥವರಿಗೆ ರಹಾದಾರಿ ಕಾಡುವ ಜಂಬರವಿದೆ; ಬೇಗ ವಂದಂತರ ಬಂದು, ಹೋಗ ಬೇಕಂತೆ ಯಂಬದಾಗಿ ಹೇಳಿ, ಕರ ಕೊಂಡು ಬಾ; ಅವನು ನಾಲ್ಕುನಾಡ ಅರಮನೆಗೆ ಹೋಗಿ ಇದ್ದರೆ, ನೀನು ಸುಂಮನೆ ಬಾ ಯಂಬದಾಗಿ ಹೇಳಿ, ಮೂಡಗ್ಯೇರಿ ನಾಡಲ್ಲಿ ಹಕ್ಕಲುತನ ಇರುವ ದೀವಾನ ಹುಡುಗನ ಕಳುಹಿದರಿಂದಾ, ಅವನು ಮಡಿಕೇರಿಗೆ ಬಂದಲ್ಲಿ, ಬೀರೆ ಗೌಡನು ಇದ್ದದರಿಂದಾ ಸದರಿ ವಿವರ ಅವನಿಗೆ ಹೇಳಿ, ಮಾರನೆ ದಿವಸ ಕರ ಕೊಂಡು ಬಂದದರಿಂದಾ, ಇವನಿಗೆ ನೀನು ಗುಂಡಲ್ಲಿ ಇಟ್ಟು,

[1] ನುಸುಳು.

ಕೊಂದು ಹಾಕಿ ಬಿಡು ಯಂತಾ, ನಂನ ಸಂಗಡ ಹೇಳಿದಲ್ಲಿ, ನನಗೆ ಹೆದರಿಕೆ ಆಗುತ್ತದೆ. ನಂನ ಕೈಯ್ಯೂ ದುರುಸ್ತು ಇಲ್ಲಾ ಯಂತಾ ಹೇಳಿದೆ. ಆವಾಗ್ಯೆ ಅಪ್ಪಾಜೋಯನು ಹೇಳಿದ್ದು: ನಿಂನ ಸಂಗಡ ಯೇನು ಹೇಳಿದರೂ ಹೀಗೆ ಹೇಳುತ್ತೀಯ್ಯೇ? ಬ್ಯಾಟೆಗೆ ಹರ ಕೊಂದು ಹೋಗ್ಯದ ಹಾಗೆ, ಹರ ಕೊಂದು ಹೋಗ್ಯಾ, ಗುಂಡಲ್ಲಿ ಇಟ್ಟು ಕೊಂದು ಹಾಕಿ ಬಿಡ ಬೇಕು ಯಂತಾ, ಪುಟ್ಟೆ ಗೌಡ ಹೇಳುವಾಗ್ಯೆ, ಈಗ ಕಳ್ಳರು ಬಂದು ಗುಂಡು ಇಟ್ಟು ಇದ್ಧಾರೆ ಯಂತಾ ಬಿಂನವತ್ತಳೆ ಬರ ಕೊಳ್ಳುವ ಹಾಗೆ, ಮದ್ದು, ಗುಂಡು, ಕ್ಯಾಪಿ, ಕತ್ತಿ ಯಲ್ಲಾ ಅರಮನೆಯಿಂದಾ ಕಳು ಹಿಸಿ ಕೊಟ್ಟರು. ಬ್ಯಾಟೆಗೆ ಯಂತಾ, ಕರದು ಕೊಂಡು ಹೋಗ್ಯಾ, ಇಟ್ಟು ಹಾಕಿ ಬಿಡು ಯಂತಾ ಹೇಳಿದರು. ನಂನಿಂದಾ ಆದದ್ದಲ್ಲಾ ಯಂಬವಾಗಿ ನಾನು ಹೇಳಿದೆ. ಆ ಬಳಿಕ ತೀರು ಗೌಡನ ಬೀರೆ ಗೌಡನು ಮನೆಗೆ ಹೋಗುವಾಗ್ಯೆ, ಹೋಗುವದಲ್ಲು ಗುಂಡಲ್ಲಿ ಇಡುವದಕ್ಕೆ ಉಕ್ಕಿ ಕಟ್ಟುವ ಉದ್ದಿಶ್ಯ ಬ್ಯಾಟೆಗೆ ಹೋಗ್ಯದವರ ಹಾಗೆ ಹೋಗ್ಯಾ, ಚಿಂನುವೀರನಿಗೂ ಜಾಗಾ ತೋರಿಸಿ, ಮರು ದಿನ ಅವರೇ ಬಂದು, ನಂಮಿಬ್ಬರ ಕೂಡೆ ಕುಂತು ಕೊಳ್ಳುವ ಹಾಗೆ, ಮಳೆ ಸಮನಿಸಿ, ಮಳೆ ಒಳಗೆ ಬಂದು ಕ್ಯಾಲಂನು ಕ್ಯಾಪಿ ಹೋರಿ ಕೊಳ್ಳುವ ಬಗ್ಯೆ ಕಟ್ಟಿ, ಅದರ ಮೇಲೆ ನನಗೂ ಚಿಂನುವೀ ರನಿಗೂ ಯರಡು ಪಲಾ ತಿರುಗಿಸಿ, ಯದೆ ಸಮಕ್ಕೆ ಮಟಾರ ಕಟ್ಟಿ ಬಂದು, ನನಗೂ ಚಿಂನುವೀರಗೂ, ಅಕ್ಕಸಾಲೆ ನಂಜ, ಚಿಂನಬಸವ, ಮೋಹನ ಕೂಡೆ ಸಹಾ, ಯರಡೆರಡು ಚಿಲ್ಲು ಗುಂಡು ಗುರಿ ಇಡಿಸಿದಲ್ಲಿ, ಚಿಂನುವೀರ, ಅಕ್ಕ ಸಾಲೆ ನಂಜ, ಇವರಿಬ್ಬರು ಗುರಿಗೆ ಇಟ್ಟದ್ದು ತಗಲಿತು. ಉಳಿಕೆ ಮೂರು ಜನ ಇಟ್ಟದ್ದು ತಪ್ಪಿ ಹೋಯಿತು. "ಈ ಹುಡುಗರಿಗೆ ಚಿಕ್ಕಂದಿನಾರಭ್ಯಯದಿಂದಾ ಗುರಿ ಇಡುವ ಬಗ್ಯೆ ಕಲಿಸಿ ತರಬೇಯತ್ತು ಮಾಡಿದ್ಧೇವೆ. ಚಿಂನುವೀ ರನಂನು ನಂಮ ಸಂಗಡ ಕರದು ಕೊಂಡು, ನಾವು ಹೋಗ್ಯಾ ಗುಂಡಲ್ಲಿ ಇಟ್ಟು, ಕೊಂದು ಹಾಕಿ ಬಿಡುತ್ತೇವೆ. ಆ ಬೀರೆ ಗೌಡನ ಸಂಗಡ ಇರುವ ಹುಡುಗನು ಹಿಂದಕ್ಕೆ ವ್ಯಾಡಿ ಬಂದರೆ, ನೀನು ಸ್ವಲ್ಪ ಹೊತ್ತು ತಡಾ" ಯಂತಾ, ನಂನ ಸಂಗಡ ಹೇಳಿದರು. ಆದೀತು ಯಂತಾ, ನಾನು ಹೇಳಿದೆ. ಆ ಮೇಲೆ ಬೀರೆ ಗೌಡನು ಅಪ್ಪಾಜೋಯನ ಮನೆಗೆ ಬೆಳಿಗ್ಯೆ ಬಂದು ಇದ್ದಂಥಾವನಿಗೆ ಅಪ್ಪಾಜೋಯನು ಹೇಳಿದ್ದು: "ಸಾಯಂಕಾಲಕ್ಕೆ ನಾಲ್ಕು ಐದು ಗಳಿಗೆ ಹೊತ್ತು ಇದ್ದ ಹಾಗೆ ಹೋಗ್ಯ ಬಹುದು, ಆವಾಗ್ಯೆ ನಾವು ಹೊರಗೆ ಬಂದರೂ ಸರಿ; ಅಷ್ಟು ಹೊತ್ತಿಗೆ ಹೊರಗೆ ಬಾರದೆ ಇದ್ದರೂ ಸರಿ. ನೀನು ನಿಂನ ಮನೆಗೆ ಹೋಗು" ಯಂತಾ, ಅಪ್ಪಾಜೋಯನು ಹೇಳಿದನು. ಆ ಮೇರೆ ಬೀರೆ ಗೌಡನು ಸಾಯಂಕಾಲಕ್ಕೆ ಐದು ಗಳಿಗೆ ಹೊತ್ತು ಇದ್ದ ಹಾಗೆ, ಇಂನು ಅವರು ಹೊರಗೆ ಬರಲಿಲ್ಲಾ. ನಾನು ಹೋಗುತ್ತೇನೆ" ಯಂತಾ ಹೇಳಿ, ಬೀರೆ ಗೌಡನು ತಂನ ಮನೆಗೆ ಹೋಗುವ ಬಗ್ಯೆ ಹೊರಟು ಹೋಗ್ಯಾ. ಅವನು ಹೋಗುವ ದಕ್ಕೆ ಮೊದಲ್ಯೆ ಅಪ್ಪಾಜೋಯನು ತಂನ ಸಂಗಡ ಚಿಂನುವೀರನಂನು ಕರದು ಕೊಂಡು, ಹಿತ್ತಲ ಬಾಗಲಿಗಾಗಿ, ಕೊಂಬಾ ರದ ಹಿಂದಟ್ಟಿಗಾಗಿ, ಅಗಳ ಇಳಿದು, ತ್ರಾವಿ ಮನೆ ಅಗಳದ ಅಡ್ಡಲಾಗಿ, ಕೆರೆ ಬಾಗಲಿಗಾಗಿ ನುಗ್ಗಿ, ಹಾಟ್ಟೆ ಅಡಿ ಮೇಗೆ ಆಗಿ ಹೋಗ್ಯಾ, ಬಡಗಿ ಕರಿಯನ ಮನೆ ಕಿತ್ತಟ್ಟಿನ ಕಾಲ್ಲಿಯಲ್ಲು ಮೊದಲು ಉಕ್ಕಿ ಕಟ್ಟಿ ಇದ್ದ ಜಾಗ ದಲ್ಲಿ ಕದ್ದು ಕೂತು ಇದ್ದು, ಆ ಬೀರೆ ಗೌಡನು ಅದೇ ಮಾರ್ಗದ ವ್ಯಾಗಿಗಾಗಿ ಬರುವದು, ಮೊದಲಾಗಿ ಅಪ್ಪಾ ಜೋಯನು ಬೀರೆ ಗೌಡನ ಯದೆಗೆ ಗುಂಡಲ್ಲಿ ಹೊಡದಾ. ಅದರ ಕೂಡೆ ಚಿಂನುವೀರನು ಯದೆಗೆ ಗುಂಡಲ್ಲಿ ಹೊಡದಾ. ಇವರು ಇಬ್ಬರೂ ಹೊಡದ ಗುಂಡು ಯದೆಗೆ ತಾಗುವದು, ಕೂಗುತ್ತಾ ಪಟ್ಟಾಗಿ ಮಗ್ಗುಲಾಗಿ ಬಿದ್ದಾ. ಆ ಯರಡು ಕ್ಯಾಪಿಯಲ್ಲು ಅವರೊಳಗಿನ ಗಾಂತರದ ಸಂಣ ಗುಂಡು ಮೂರು ಮೂರು, ದೊಡ್ಡ ಗುಂಡು ಒಂದೊಂದು ತುಂಬಿ ಇತ್ತು. ಅದರಲ್ಲಿ ಇಡುವದು ಬೀರೆ ಗೌಡನ ಸಂಗಡ ಇದ್ದ ಹುಡುಗನು, ಯಾರ್ಯಾ ಕಳ್ಳರು ಹಾಳುಪತ್ಯ ಗಾರನಿಗೆ ಗುಂಡಲ್ಲಿ ಇಟ್ಟರು ಯಂತಾ ಅಲ್ಲಿಂದಾ ಹಿಂದಕ್ಕೆ ವ್ಯಾಡಿ ಬಂದಾ. ಬರುವದು ಯೇನಾ! ಹಿಂದಕ್ಕೆ ಯಾಕೆ ವ್ಯಾಡಿ ಬಂದೆ ಯಂತಾ, ಹೆಬ್ಬಾಗಿಲ ಮುಂದೆ ಇರುವ ಕಾಡೆ ಗದ್ದೆ ತಾವ ತಡ ಕೊಂಡು, ನಾನು ಕೇಳಿದೆ. ಈ ಮೇರೆ ಯಾರ್ಯಾ ಕಳ್ಳರು ಗುಂಡಲ್ಲಿ ಇಟ್ಟರು, ಯಂತಾ, ಹೇಳಿದಾ. ಅಷ್ಟು ಹೊತ್ತಿಗೆ ಅಪ್ಪಾಜೋಯನೂ ಚಿಂನು ವೀರನೂ ಕೂಡಿ, ಆ ಬೀರೆ ಗೌಡನ ಕೊಲಿದ್ದ ಬಿಂನದ ಬಳೆ ಯರಡು, ಕಾಡಂಗದ ಸರಪಳಿ, ಬೆಳ್ಳಿ ಕಟ್ಟಿದ ಚೂರಿ, ಪರೆ ಚೂರಿ, ಇದಂನು ಅವನ ಮೈಯಿಂದಾ ತೆಗದು, ಇಬ್ಬರೂ ಕೂಡಿ ತಂದು, ಅಂಬಲದ ಕಾಡಲ್ಲಿ ಕಾಕಲೆ ಮುಚ್ಚಿ ಮಡಗಿ ಬಂದರು. ಆ ಮೇಲೆ ಯಂಟು ಹತ್ತು ದಿನ ಕಳಿದ ಮೇಲೆ, ಕತ್ತಿ ಚೂರಿ ಕಾಡಂಗ ಸಹಾ ಮೂರು ನಾಗ ವಂನು ಅಲ್ಲ್ಯೆ ನಾನು, ಚಿಂನುವೀರನು ಕೂಡಿ, ಹೂಳಿ ಬಿಟ್ಟು, ಕಾಡಂಗದ ಸರಪಳಿ, ಬಳೆಯಂನು ತಂದು, ಅವರು

ಹೇಳಿದ ಮೇರೆ ಖಾಸಿ ಮನೆಯಲ್ಲಿ ಕರಗಿಸಿ ಗಟ್ಟಿ ಮಾಡಿ, ವಂದು ಬಳೆ ಚಿಂನವಂನು ಚಿಂನುವೀರ ತೆಗದು ಕೊಂಡಾ; ಮತ್ತೊಂದು ಬಳೆ ಚಿಂನವಂನು ನನಗೆ ಕೊಟ್ಟಾ; ಬೆಳ್ಳಿ ಸರಪ್ಣಿ ಕರಗಿಸಿದ ಗಟ್ಟಿಯಂನು ಚಿಂನುವೀರನು ಅಪ್ಪಾಜಿಯನ ಬಳಿಗೆ ತೆಗದು ಕೊಂಡು ಹೋದಾ. ಈ ಮೇರೆ ಖುಲ್ಲಾ ಮಾಡಿ, ಕಳ್ಳರು ಇಟ್ಟರು ಯಂತಾ, ಸುದ್ದಿ ಹುಟ್ಟಿಸಿ, ಅಪ್ಪಾಜಿಯನು ಸ್ವಾಮಿ ಪಾದಕ್ಕೆ ಬಿಂನವತ್ತಳೆ ಬರದು ಕಳುಹಿದನು ಯಂಬದಾಗಿ ಹೇಳಿದಾ,

ಆ ಮೇಲೆ ಚಿಂನುವೀರಗೂ ಮುಟ್ಟೆ ಗೌಡಗೂ ಬೇರೆ ಬೇರೆ ವಿಚಾರಿಸಿದಲ್ಲಿ, ಇವರಿಬ್ಬರು ಸದರಿ ಬರದ ವಿವರ ಒಂದೇ ಹೇಳಿದರಿಂದಾ, ಆ ಚಾಕರನ ವಂದು ಯಂಬುವನ ಕೈಗೆ ಬೇಡಿ ಹಾಕಿ, "ಆ ಬೀರೆ ಗೌಡನ ಕಾಡಂಗ ಚೂರಿ ಕತ್ತಿ ಸಹಾ, ಯಾವ ಬಳಿಯ ಹೂಳಿ ಇದ್ಧೀರಿ? ಅದಂನು ತೋರಿಸಿ ಕೊಡು," ಯಂತಾ ಹೇಳಿ, ಇವನ ಸಂಗಡ ಖಾಸಾ ಸಂನಿಧಿ ಊಳಿಗದ ಜಮಾದಾರ ಹೊಂಗೀಯ, ತಿಂತರೆಯ, ಕರ್ಣೀಕ ಸುಬ್ಬಯ್ಯ, ನಾಲ್ಕುನಾಡ ಅರಮನೆ ಕಚೇರಿ ತಾಲೂಕಿನ ಶೀಮೆ ೨ನೆ ಸುಭೆದಾರ ಹೊಂಬಾಳೆ ನಾಯಕ, ಚಾವಡಿ ಜಮೆದಾರರು, ಚಾವಡಿಕಾರರ ಸಹಾ ಕೂಡಿಸಿ, ಗರಹಳ್ಳಿಗೆ ಕಳುಹಿಸಿದಲ್ಲಿ, ಇವರೆಲ್ಲರು ಆ ವಂದುವಂನು ಕರಕೊಂಡು ಹೋಗಿ, ಆ ಗಡಿನಾಡ ರೀತಿಯಲ್ಲಿ ಮನೆ ವಂದಕ್ಕೆ ವಂದೊಂದು ಜನ, ಆ ಶೀರು ಗೌಡನ ಬೀರೆ ಗೌಡನ ಹೆಂಡರು ಮಕ್ಕಳು ಮುಂತಾದ ಅವನ ಮನೆ ಯಾವತ್ತೂ ಜನರ ಕರಸಿ ಕೊಂಡು, "ಆ ಶೀರು ಗೌಡನ ಬೀರೆ ಗೌಡನಂನು ಯಾರ್ಯಾರು ಕಳ್ಳರು ಗುಂಡಲ್ಲಿ ಇಟ್ಟು ಕೊಂದು, ಅವನ ಮೈ ಕೈಯಲ್ಲಿ ಇದ್ದದ್ದಂನು ತೆಗದು ಕೊಂಡು ಹೋದರೆಂತಾ ಸುದ್ದಿ ಆಗಿ ಇದೆಯಷ್ಟೆ." ಈ ವಿವರವಂನು ಸ್ವಾಮಿಯವರು ತಲಾಸು ಮಾಡಿ ವಿಚಾರಿಸಿದಲ್ಲಿ, ಕಳ್ಳರು ಮಾಡಿದಂಥಾ ಕೆಲಸವಲ್ಲಾ, ಈ ಗರಹಳ್ಳಿಯಲ್ಲಿ ಇರುವಂಥಾ ಅಪ್ಪಾಜಿಯನು, ಈ ಚಾಕರನ ವಂದು ಮುಂತಾದ ಜನರ ಸಂಗಡ ದಗಾ ಮಾಡ ಬೇಕೆಂಬದಾಗಿ ಯೋಚಿಸಿ, ಈ ಮೇರೆ ಮಾಡಿದ್ದಾನೆ. ಈ ಖಬರ ನೀವು ಸರ್ವರು ತಿಳಿಯಲಿ ಯಂತಾ, ಅಪ್ಪಣೆ ಆಗಿ ಬಂದು ಇದ್ಧೇವೆ ಯಂತಾ, ಸದರಿ ಬರದ ವಿವರ ಯಾವತ್ತೂ ಚಾಕರನ ವಂದು ಬಾಯಲ್ಲಿ ಹೇಳಿಸಿ, ಯಲ್ಲರಿಗೂ ತಿಳಿಸಿ, ಆ ಮೇಲೆ ಇಲ್ಲಿಂದಾ ಹೋಗಿದ್ದಂಥಾವರು ಆ ನಾಡ ಜನರ ಯಾವತ್ತು ಕರಕೊಂಡು ಹೋಗಿ, ಗುಂಡು ಇಟ್ಟ ಜಾಗದಲ್ಲಿ ಹೂಳಿ ಕಟ್ಟಿದಂಥಾದ್ದು, ಬೀರೆ ಗೌಡ ಸತ್ತ ಜಾಗಾ ಸಹಾ ತೋರಿಸಿ, ಅಲ್ಲಿಂದಾ ಕಾಡಂಗ ಕತ್ತಿ ಚೂರಿ ಸಹಾ ಹೂಳಿ ಇದ್ದಂಥಾ ಅಂಬಲದ ಕಾಡಿಗೆ ಕರದು ಕೊಂಡು ಹೋಗಿ, ಯಾವತ್ತು ಜನರ ನಿಲ್ಲಿಸಿ, ಯಾವ ಬಳಿಯ ಹೂಳಿ ಇದೆ, ತೋರಿಸು ಯಂತಾ, ವಂದುಗೆ ಕೇಳಿದಲ್ಲಿ, ಮೊದಲು ತಂದು, ಈ ಜಾಗದಲ್ಲಿ ಕಾಕಿಲೆ ಮುಟ್ಟಿ ಮಡಗಿ ಇತ್ತು. ಅಲ್ಲಿಂದಾ ತೆಗದು ಈ ಬಳಿ ಹೂಳಿ ಇದ್ಧೇವೆ ಯಂತಾ, ಹೂಳಿದ ಜಾಗಾ ತೋರಿಸಿದಲ್ಲಿ, ಆ ಬಳಿ ಅಗೆಯುವಾಗ್ಯೆ, ಬೀರೆ ಗೌಡನ ಕಾಡಂಗ ಕತ್ತಿ, ಚೂರಿ ಸಹಾ ಸಿಕ್ಕಿತು. ಆ ಬಳಿಕ ನಾಡ ಜನ ಯಾವತ್ತು, "ಮಹಾಸ್ವಾಮಿ ವಿಚಾರದಿಂದಾ ಇದು ಗೊಂತು ಸಿಕ್ಕಿದ್ದು ಹೋಯಿತು, ಇಲ್ಲದಿದ್ದರೆ ಇದು ಯಾರಿಗೆ ತಿಳಿಯುತ್ತಿತ್ತು?" ಯಂತಾ, ಬಹಳ ದುಃಖ ಬಟ್ಟು, "ಈ ಅಪ್ಪಾಜಿಗೆ ಬೇಕಾದ್ದು ಕೊಟ್ಟು ಮಡಗಿರುವಲ್ಲಿ, ಮತ್ತು ಇಂಥಾ ದ್ರೋಹಗಳ ಯೋಚಿಸಿ, ಮಾಡ ಬಾರದ ಕೆಲಸ ಮಾಡಿದಾ," ಯಂತಾ ಹೇಳಿದರು. ಆ ಬಳಿಕ ಬೀರೆ ಗೌಡನ ಬಳೆ, ಸರಪ್ಣಿ ಸಹಾ, ಕರಗಿಸಿ ಗಟ್ಟಿ ಮಾಡಿದಂಥಾದ್ದಂನು ತರಸಿ, ಅವನ ಹೆಂಗಸರು ಮಕ್ಕಳಿಗೆ ಕೊಡಿಸಿ, ನಾಡವರಂನು ಅವರವರ ಮನೆಗೆ ಕಳುಹಿಸಿ ಕೊಟ್ಟು, ಆ ಕತ್ತಿ, ಕಾಡಂಗ ಚೂರಿ ಸಹಾ ಮಡಿಕೇರಿಗೆ ಧಣಿಗಳ ಬಳಿಗೆ ತಂದು ಒಪ್ಪಿಸಿದರು. ಅದಂನು ನೋಡಿ, "ಈ ಮೇರೆ ಮಾಡ ಬಾರದ ಅಕಾರ್ಯದ ಕೆಲಸ ಮಾಡಿ ಇದ್ಧಾನೆ," ಯಂತಾ, ಸರ್ವ ಜನರಿಗೂ ತೋರಿಸಿ, ತಿಳಿಸಿ, ಅದಂನು ಅಮಾನತಾಗಿ ಕಟ್ಟಿ ಮಡಗಿಸಿ ಇದ್ಧಾರೆ.

ಈ ಮೇರೆ ಇರುತ್ತಿದ್ದಲ್ಲಿ ತಸ್ವೀರು ಬರೆಯುವಂಥಾ ಸ್ಸಾಹೇಬರವರು ಮಡಿಕೇರಿಗೆ ಬಂದು ಇದ್ದಲ್ಲಿ, ಮಹಾರಾಜರು ಸಿಂಹಾಸನ ನೋಡ ಬೇಕೆಂಬ ಅಪೇಕ್ಷೆ ಇದೆ ಯಂತಾ, ಪ್ರಸ್ತಾಪ ಮಾಡಿದಲ್ಲಿ, ಈ ಸಾಹೇಬರು ಮುಂಬಾಯಿಗೆ ಹೋಗಿ, ಗವರ್ನರ್ ಡಾಂಕಿನ್ ಸಾಹೇಬರ ಸಂಗಡ ಈ ವಿವರ ಹೇಳಿದಲ್ಲಿ, "ಆ ಪ್ರಕಾರ ರಾಜರಿಗೆ ಸಿಂಹಾಸನ ನೋಡ ಬೇಕೆಂಬ ಖುಷಿ ಇದ್ದರೆ, ನಂಮಲ್ಲಿ ವಂದು ಸಿಂಹಾಸನ ಇದೆ. ಅದಂನು ಕೊಟ್ಟೇವು," ಯಂತಾ ಹೇಳಿ ಇದ್ದರು.

ಆ ಬಳಿಕ ಕೆಲವು ದಿವಸದಲ್ಲಿ ಮಹಾರಾಜರವರ ಖಾಸಾ ಸಂನಿಧಿ ಊಳಿಗದ ಜಮಾದಾರ ಹೊಂಗೀಯ, ತಿಂತರೆಯನ ಸಹಾ, ಮುಂಬಾಯಿಗೆ ಸರಕಾರದ ಕೆಲಸ ಉದ್ದಿಶ್ಯ ಕಳುಹಿದಲ್ಲಿ, ಆವಾಗ ಡಾಂಕಿನ್ ಸಾಹೇಬರು ಇವರ

ಸಂಗಡ "ನಿಂಮ ದೊರೆಗಳು ಸಿಂಹನ ನೋಡ ಬೇಕೆಂಬವಾಗ, ಸನ್ ಸಾಹೇಬರವರ ಸಂಗಡ ಮಾತಾಡಿ ಇದ್ಧಾರಂತೆ, ಆದ್ದರಿಂದಾ ಈಗ ನಾವು ವಂದು ಸಿಂಹನ ಕೊಡುತ್ತೇವೆ. ಇದಂನು ಸಾಗಿಸಿ ಕೊಂಡು ಹೋಗಿ, ನಿಂಮ ಧೊರೆಗಳಿಗೆ ಒಪ್ಪಿಸ್ಸಿ" ಯಂತಾ ಹೇಳಿ, ವಂದು ಸಿಂಹನಂನು ಕೊಟ್ಟಲ್ಲಿ; ಅದಂನು ಜೋಪಾನದಿಂದಾ ಸಾಗಿಸಿ ಕೊಂಡು ಬಂದಲ್ಲಿ, ತಲಕಾವೇರಿ ಹೊಳೆ ಬೇತರಿ ಕಡವಿಗೆ ಬರುವ ತನಕ ಚಂನಾಗಿ ಬಂತು. ಅಲ್ಲಿಗೆ ಬರುಹದು, ಸಂಕಟ ತೊಡಗಿ, ಆ ಬೇತರಿ ಕಡಾ ದಾಟಿ, ಸ್ವಲ್ಪ ದೂರ ಬರುವದು, ಪ್ರಾಣ ಬಿಟ್ಟಿತು. ಈ ಸಮಾಚಾರ ಮಹಾರಾಜರು ಕೇಳಿ, ಬಹಳ ತರತರೆ ಮಾಡಿ ಕೊಂಡು, "ಆ ಸಿಂಹ ಮೃತವಾದರೂ ಚಿಂತೆ ಇಲ್ಲಾ, ಅದರ ರೂಪವಂನಾದರೂ ನೋಡ ಬೇಕು; ಆ ಶವ ಸಾಗಿಸಿ ಕೊಂಡು ಬಂನಿ" ಯಂತಾ, ಅಪ್ಪಣೆ ಕೊಟ್ಟು, ಅದಂನು ತರಿಸಿ, ನೋಡಿ, ಸರ್ವಜನಕ್ಕೂ ತೋರಿಸಿ, ಈ ಸಿಂಹ ಮೃಗವು ಈ ರಾಜ್ಯಕ್ಕೆ ಯಂದೂ ಬಂದಂಥಾದ್ದು ಅಲ್ಲಾ. ಬಹಳ ಅಪರೂಪವಾದಂಥಾದ್ದು ಯಂಬದರಿಂದಾ, ನಿಶಾನಿ ಉದ್ದಿಶ್ಯವಾಗಿ ಆ ಸಿಂಹನ ಶರೀರದ ಚರ್ಮ, ಹಲ್ಲು, ಉಗರು ಸಹಾ, ತೆಗಿಸಿ ಮಡಗಿ ಇದ್ಧಾರೆ.

ಹೀಗೆ ಇರುತ್ತಾ ಇದ್ದಲ್ಲಿ, ಸ್ವಾದೆ ಬಸವಲಿಂಗ ರಾಜರ ಪಟ್ಟದ ರಾಣಿಯವರಾದ ರಾಜಂಮಾಜಿಯವರು ಕಲಿ ಸಂದ ೪೯೦೭ ನೆ ಕ್ರೋಧನ ಸಂವತ್ಸರದ ಪುಷ್ಯ ಶು ೧೩ ಯೂ, ಗುರುವಾರ ರಾತ್ರೆ ಗಳಿಗೆ ಹತ್ತೊಂಭತ್ತು ಮುಕ್ಕಾಲಿಗೆ, ಶುಭಲಗ್ನದಲ್ಲಿ, ಕುಮಾರರ ಜನಿಸಿದರು. ಈ ಕುಮಾರರ ಹೆಸರು ಸದಾಶಿವ ರಾಜರು ಯಂಬದಾಗಿ ಮಡಗಿದರು. ಈ ಕುಮಾರರು ಸ್ವಾದೆ ರಾಜರ ದೌಲತ್ತಿಗೆ ಬಾಧ್ಯರಿದ್ಧಾರೆ. ಇವರಂನು ಇವರ ಪುತ್ರ ಪೌತ್ರ ಪಾರಂಪರ್ಯವಾಗಿ ಪರ್ವರಿಷಿ ಮಾಡಿ, ಆರೈಕೆ ಮಾಡುವಂಥಾ ಭಾರ ಇಂಗ್ರೇಜ ಬಹಾದ್ದರ ಕುಂಪನಿ ಸರ್ಕಾರಕ್ಕೆ ಕೂಡಿ ಇದೆ.

ಈ ಮೇರೆ ಇರುತ್ತಾ ಇರಲಿಕ್ಕಾಗಿ, ತಲಚೇರಿಯಿಂದಾ ಮೆಸ್ತರ ರಿಚಿಟ್ ಟೋರಿಯಂನ್[1] ಸಾಹೇಬರು, ಮೆಸ್ತರ ಭೆಲ್[2] ಸಾಹೇಬರು, ತುರುಪು ಸವಾರ ಪಾರ್ಸಂನ್[3] ಸಾಹೇಬರು, ಶ್ರೀರಂಗಪಟ್ಟಣದಿಂದಾ ಬಂದ ಜನರಾಲ್ ಮಕಡಾಲ್ ಸಾಹೇಬರ ತಂಮ ಕಪಿತಾನ್ ಮಕಡಾಲ್[4] ಸಾಹೇಬರು, ಕಪಿತಾನ್ ಕಿಂಗ್[5] ಸಾಹೇಬರು, ಇವರ ಸಂಗಡ ಮತ್ತೂ ಯರಡು ಜನ ಸರದಾರರು ಸಹಾ, ಇಂತಿಷ್ಟು ಸಾಹೇಬರು ಧೊರೆಗಳವರ ಮಿಲಾಖತಿಗೆ ಬಂದು ಇದ್ದಲ್ಲಿ, "ಹೊರ ಮಲೆನಾಡು ಕೋಟೆನಾಡು ಯಂಬ 'ಆರಣ್ಯಕ್ಕೆ ಯರಡು ಆನೆ ಬಂದು ಇದೆ. ರೈತರ ಹೇರು ಹಟ್ಟಿ ಕೆರಡು ಮಾಡುತ್ತದೆ" ಯಂತಾ, ಕೇಳಿದರಿಂದಾ, ಮಹಾರಾಜರು ಸ್ವಾದೆ ಬಸವಲಿಂಗ ರಾಜರ, ಸದರಿ ಸಾಹೇಬ ಜನರ ಸಹಾ ಕರದು ಕೊಂಡು, ಆ ಆರಂಣ್ಯಕ್ಕೆ ಹೋಗಿ, ಅದರ ಸುತ್ತಾ ಜನರ ನಿಲ್ಲಿಸಿ, ಕೆಲವು ಜನರ ಆ ಕಾಡ ವಳಗೆ ಕೂಡಿಸಿ, ಅಟ್ಟಿಸಿದಲ್ಲಿ, ವೀರರಾಜೇಂದ್ರ ವಡೆಯರವರ ಬಳಿಗೆ ಯರಡು ಆನೆಯೂ ಬಂದದರಿಂದಾ, ಅದಂನು ತಂಮ ಖಾಸಾ ಹಸ್ತದಿಂದಾ ರೈಫಲ್[6] ತೋವಿಂದಾ ಹೊಡದಲ್ಲಿ, ವಂದಾಂದು ಗುಂಡಿಗೆ ಆ ಯರಡು ಆನೆಯೂ ಅಲ್ಲಿಯೇ ಬಿದ್ದು ಹೋಯಿತು. ಆ ಬಳಿಕ ಆ ಸರದಾರರು ಯಾವತ್ತು ನೋಡಿ, ಬಹಳ ಆಶ್ಚರ್ಯ ಪಟ್ಟು, ಸಂತೋಷವಾಗಿ, ಆ ಆನೆಗಳಂನು ಮೆಸ್ತರ ಬೆಲ್ ಸಾಹೇಬರ ಕೈಯಿಂದಾ ಅಳದಲ್ಲಿ, ವಂದು ಆನೆ ಯೇಳುಕಾಲು ಮೊಳ ಯತ್ತರ ಇತ್ತು. ಮತ್ತಾಂದು ಆನೆ ಆರುಅರೆ ಮೊಳ ಯತ್ತರ ಇತ್ತು. ಆ ಬಳಿಕ ಧೊರೆಗಳು, ಆ ಸರದಾರ ಸಾಹೇಬರು ಸಹಾ, ಅರಮನೆಗೆ ಬಂದು ಇರುತ್ತಿದ್ದಲ್ಲಿ, ಯೇವತ್ತು ಸಾಹೇಬರು ತಂಮ ಸರಕಾರದ ಕೆಲಸದ ಮೇಲೆ ಹೊರಟು ಹೋದರು. "ಇಂನು ಬೇಟೆ ನೋಡ ಬೇಕು" ಯಂಬದಾಗಿ, ತುರುಪು ಸವಾರ ಪಾರ್ಸನ್ ಸಾಹೇಬರು ನಿಂತರು. ಹೀಗೆ ಇರುವಾಗ್ಯೆ, ಕೆಲವು ದಿವಸದಲ್ಲಿ, ಯಡವನಾಡು ಯೇಳುಸಾವಿರ ಶೀಮೆ ಕಡೆಯಲ್ಲಿ, ಮೃಗ ಜಾತಿಗಳು ಹೆಚ್ಚಿ, ಹೇರು ಹಟ್ಟಿ ಬಹಳ ಕೇಡು ಮಾಡುತ್ತದೆ ಯಂತಾ, ಸಮಾಚಾರ ಕೇಳಿದ್ದರಿಂದಾ, ಮಹಾರಾಜರವರು ಸ್ವಾದೆ ಧೊರೆಗಳ, ತುರುಪು ಸವಾರ ಪಾರ್ಸನ್ ಸಾಹೇಬರ ಸಹಾ, ಕರದು ಕೊಂಡು, ಕಲಿ ಸಂದ ೪೯೦೮ ನೇ ಕ್ಷಯ ಸಂವತ್ಸರದ ಚೈತ್ರ ಶು ೭ ಯೂ, ಬುಧವಾರ ದಿವಸ, ಹೋಗಿ, ಯಡವನಾಡಲ್ಲು ಮೊಕ್ಕಾಮಾಗಿ, ಅಲ್ಲಿಂದಾ ಮಾರನೆ ಶು ೮ ಯೂ, ಗುರುವಾರ ದಿವಸ, ಯೇಳುಸಾವಿರ ಶೀಮೆಗೆ ಹೋಗುವಾಗ್ಯೆ, ಬಾಗೆ ಯಂಬ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದಂಥಾ ಮೃಗಜಾತಿಗಳ ವಿವರ: ಸಾರಂಗ ಇಪ್ಪತ್ತೇಳು, ಕಡವೆ ಹದಿನಾಲ್ಕು, ಹಂದಿ ಮೂರು, ಕರಡಿ ವಂದು, ಕಾಟಿ ಯರಡು, ಹೆಬ್ಬಾವು ವಂದು, ಅಂತೂ ನಾಲ್ವತ್ತಯೆಂಟಕ್ಕೆ; ಸ್ವಾದೆ ರಾಜರು ವಂದು ಕಡವೆ ಇಟ್ಟರು. ಈ ದಿವಸ

1 Mr. Richard Torin. 2 Mr. Bell. 3 Lieut. Parsons of the 19th Dragoons. 4 Capt. Mc'Dowall. 5 Capt. King. 6 Rifle gun.

ಕಣಾಲಿಗೆ ಹೋಗಿ, ಮೊಕ್ಕಾಂ ಮಾಡಿ, ಮೂರು ದಿನ ಇದ್ದಲ್ಲಿ, ಈ ಶು ೮ ಯು, ಶುಕ್ರವಾರ, ಮಾಲಂಬಿ ಬೆಟ್ಟದ ಅರಣ್ಯದಲ್ಲು ಬೇಟೆ ಆಡಿ ಇಟ್ಟ ಮೃಗಜಾತಿಗಳ ವಿವರ: ಸಾರಂಗ ಇಪ್ಪತ್ತೊಂದು, ಕಡವೆ ನಾಲ್ವತ್ತವಂಭತ್ತು, ಹಂದಿ ಯರಡು, ಕರಡಿ ವಂದು, ಕೂರಹಂದಿ ನಾಲ್ಕು, ಕಾಟಿ ಆರು, ಅಂತು ಯಂಬತ್ತಮೂರಕ್ಕೆ; ಕೊಡಗಿನ ಮಹಾರಾಜರು ಇಟ್ಟದ್ದು ಕಡವೆ ವಂದು, ಸಾರಂಗ ವಂದು; ಹಾರ್ಸನ್ ಸಾಹೇಬರು ಇಟ್ಟದ್ದು ಕಡವೆ ಯರಡು; ಸ್ವಾದೆ ರಾಜರು ಇಟ್ಟದ್ದು ಕಾಟಿ ವಂದು. ಈ ಶು ೯ ಯು ಸ್ಥಿರವಾರ,[1] ಮೂರು ಕಲ್ಲು ಬೆಟ್ಟದ ಕಾಡಿನಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರ: ಸಾರಂಗ ನಾಲ್ವತ್ತು, ಕಡವೆ ಮೂವತ್ತು, ಹಂದಿ ವಂದು, ಕೂರಹಂದಿ ಮೂರು, ಮುಳ್ಳು ಹಂದಿ ಯರಡು, ಕಾಟಿ ಹದಿನೈದು, ಅಂತು ತೊಂಭತ್ತ ವಂದಕ್ಕೆ; ವೀರರಾಜೇಂದ್ರ ವಡೆಯರವರು ಇಟ್ಟದ್ದು ಸಾರಂಗ ಮೂರು; ಹಾರ್ಸನ್ ಸಾಹೇಬರು ಇಟ್ಟದ್ದು ಸಾರಂಗ ವಂದು. ಅಲ್ಲಿಂದಾ ತಿರುಗಾ ಕೂಟಾಗಿ ಯಡವನಾಡಿಗೆ ಬಂದು, ನಾಲ್ಕು ದಿವಸ ಮೊಕ್ಕಾಂ ಆದಲ್ಲಿ, ಬೇಟೆ ಆದದ್ದು, ಶು ೧೦ ಯು, ಭಾನುವಾರ, ಜಕ್ಕಿನ ಕಡಮಿನ ಕಾಡು ಬೇಟೆ ಆಡಿದಲ್ಲಿ, ಬಿದ್ದ ಮೃಗಗಳ ವಿವರ: ಸಾರಂಗ ಹದಿನೆಂಟು, ಕಡವೆ ಇಪ್ಪತ್ತು, ಹಂದಿ ವಂದು, ಕುರಂಗಿ ಯರಡು, ಕಾಟಿ ವಂದು, ಅಂತು ನಾಲ್ವತ್ತೆರಡಕ್ಕೆ; ಸ್ವಾದೆ ರಾಜರು ಇಟ್ಟ ಕಡವೆ ವಂದು. ಈ ಶು ೧೧, ಚಂದ್ರವಾರ ದಿವಸ, ಹಾರ್ಸನ್ ಸಾಹೇಬರವರು, ತಮಗೆ ಸರಕಾರದ ಕೆಲಸವಿದೆ, ಹೋಗ ಬೇಕು ಯಂಬದಾಗಿ, ಮಹಾರಾಜರಿಗೆ ಹೇಳಿ ಕೊಂಡು, ಹೊರಟು ಹೋದರು. ಈ ದಿವಸ ನೂರೊಂದು ಬಸವನ ಕಣಿವೆ ಕಾಡಿನಲ್ಲು ಬೇಟೆ ಆಡಿದಲ್ಲಿ ಬಿದ್ದ ಮೃಗಜಾತಿ ವಿವರ: ಸಾರಂಗ ಹತ್ತು, ಕಡವೆ ಇಪ್ಪತ್ತೇಳು, ಹಂದಿ ವಂದು ಕುರಂಗಿ ಯರಡು, ಹೆಬ್ಬುಲಿ ವಂದು, ಅಂತು ನಾಲ್ವತ್ತು. ಈ ಮೇರೆ ಬೇಟೆ ಆಡಿ ಕೊಂಡು, ಧಾರೆಗಳು ತಂಬಿಗೆ ಬಂದಲ್ಲಿ, "ಕುಸಬೂರ ಕಾಡಲ್ಲಿ ಹೇರಳ ಆನೆಗಳು ಇದೆ," ಯಂತಾ ಅರಿಕೆ ಮಾಡಿದರಿಂದಾ: "ಆನೆಗಳು ಬಹಳ ಕೆಲಸಕ್ಕೆ ಬರುತಾ ಇದೆ. ಬೇಟೆ ಬಿಲ್ಲು ವಳಗೆ ಆನೆಗಳು ಸಿಕ್ಕಿದಾಗ್ಯೂ, ವಬ್ಬರು ಗುಂಡು ಹೊಡೆಯ ಬಾರದು" ಯಂಬದಾಗಿ, ಯಾವತ್ತರಿಗೂ ಅಪ್ಪಣೆ ಕೊಟ್ಟು ಇದ್ದಲ್ಲಿ, ಆ ದಿವಸ ಸಾಯಂಕಾಲದಲ್ಲಿ ನೂರೊಂದು ಬಸವನ ಕಣಿವೆ ಕಾಡಿನ ಬೇಟೆಯಲ್ಲು ಬಿದ್ದ ಮೃಗಜಾತಿಗಳ ಮಾಂಸ ಹೊತ್ತು ಕೊಂಡು, ಕುಸಬೂರ ಕಾಡ ಸಮೀಪದ ಮಾರ್ಗದಲ್ಲು ಜನರು ಬರುತಾ ಇದ್ದಲ್ಲಿ, ಕಾಡಿನಿಂದಾ ಮಸ್ತಾಗಿ ಇರುವ ಆನೆಗಳು ಬಂದು, ಈ ಮಾಂಸ ತರುತ್ತಿದ್ದಂಥಾ ಜನ ಬೆಂನಟ್ಟಿ, ಬೆರಸಿ, ವಬ್ಬ ಮನುಷ್ಯರನ ತುಳಿದು, ಕೊಂದು ಹಾಕಿದ್ದರಿಂದಾ, ಈ ಸಮಾಚಾರ ಮಹಾರಾಜರಿಗೆ ಅರಿಕೆ ಮಾಡಿದಲ್ಲಿ, "ಆನೆಗಳಿಗೆ ಗುಂಡು ಇಡ ಕೆಲಸವಿಲ್ಲಾ," ಯಂತಾ ಯಾವತ್ತರಿಗೂ ನಾವು ಅಪ್ಪಣೆ ಕೊಟ್ಟು ಇದ್ದೆವು ಈ ಪ್ರಕಾರ ಸುಂಮನೆ ದಾರಿಲಿ ಬರುತಾ ಇದ್ದಂಥಾ ಮನುಷ್ಯರನ ತುಳಿದು ಕೊಂದ ಮೇಲೆ," ಅದೇ ಪ್ರಕಾರ ಆನೆಗಳ ಕೊಲ್ಲದೆ ಬಿಡ ಬಾರದು; ಯಾವತ್ತೂ ಜನರು ತಯಾರಾಗಿ ಬೆಳಿಗ್ಯೆ ಆ ಆನೆಗಳು ಇರುವ ಕಾಡಿಗೆ ಬೇಟೆ ಆಡ ಬೇಕೆಂತಾ, ಅಪ್ಪಣೆ ಕೊಟ್ಟದರಿಂದಾ; ಅದೇ ಮೇರೆ ಆ ಮಾರನೆ ಶು ೧೨, ಮಂಗಳವಾರ ದಿವಸ, ಬೆಳಿಗ್ಯೆ ಧಾರೆಗಳವರು ಯಾವತ್ತು ಜನರಂನು ಕರದು ಕೊಂಡು ಹೋಗಿ, ಆ ಕುಸುಬೂರ ಕಾಡಿಗೆ ಸುತ್ತಾ ಜನರ ನಿಲ್ಲಿಸಿ, ಹದಿನೈದು ಘಳಿಗ್ಯೆ ಆನೆಗಳಿಗೆ ಗುಂಡು ಇಡುವದಕ್ಕೆ ಶುರು ಆಗಿ ಯೇಳು ಅರೆಗಳಿಗೆ ವಳಗೆ ಆನೆ ಇಪ್ಪತ್ತಾರು, ಕಾಟಿ ಇಪ್ಪತ್ತಮೂರು, ಹಂದಿ ನಾಲ್ಕು, ಕಡವೆ ಹದಿಮೂರು, ಸಾರಂಗ ಆರು, ಕುರಂಗಿ ವಂದು, ಅಂತು ಯಪ್ಪತ್ತಮೂರಂನು ಹೊಡದು ಕೊಂದರು. ಇದರಲ್ಲಿ ವೀರರಾಜೇಂದ್ರ ವಡೆಯರವರು ಇಟ್ಟದ್ದು: ಮನುಷ್ಯರನ ತುಳಿದ ಯೇಳು ಮೊಳ ಯತ್ತರದ ದೊಡ್ಡ ಕೊಂಬಿನ ಆನೆ ವಂದು, ಸಂಗ್ಯ ಆನೆ ವಂದು, ಕಾಟಿ ಯರಡು, ಕಡವೆ ವಂದು. ಸ್ವಾದೆ ರಾಜರು ಇಟ್ಟದ್ದು: ಆನೆ ವಂದು, ಕಡವೆ ವಂದು. ಈ ಪ್ರಕಾರ ಹೊಡದರು. ಶು ೧೪, ಗುರುವಾರ ದಿವಸ, ವಳಗಾರದ ಕಾಡಿನಲ್ಲು ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರ: ಸಾರಂಗ ಹದಿನಾಲ್ಕು, ಕಡವೆ ಇಪ್ಪತ್ತು, ಕುರಂಗಿ ಯರಡು, ಕಾಟಿ ಆರು, ಅಂತು ನಾಲ್ವತ್ತಯರಡಕ್ಕೆ; ಕೊಡಗಿನ ರಾಜರು ಇಟ್ಟದ್ದು: ಸಾರಂಗ ವಂದು, ಸ್ವಾದೆ ರಾಜರು ಇಟ್ಟದ್ದು ಕಡವೆ ವಂದು. ಆ ಮಾರನೆ ದಿವಸ ಶು ೧೫ ಯು, ಶುಕ್ರವಾರ ದಿವಸ, ಬೆಳಿಗ್ಯೆ ಕೂಟಾಗಿ ಹೊರಂಗಿಗೆ ಬಂದು, ಹುಂಡೂರು, ಹುದ್ಗೂರು ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿಗಳ ವಿವರ: ಸಾರಂಗ ಹಂನೊಂದು, ಕಡವೆ ಹತ್ತೊಂಬತ್ತು, ಹಂದಿ ಯರಡು, ಕುರಂಗಿ ವಂದು, ಕೂರ-

[1] ಶನಿವಾರ.

ಹಂದಿ ವಂದು, ಕಾಟಿ ಯೆಂಟು, ಅಂತು ನಾಲ್ವತ್ತಯರಡಕ್ಕೆ; ಕೊಡಗಿನ ರಾಜರು ಇಟ್ಟದ್ದು: ಸಾರಂಗ ವಂದು, ಕಡವೆ ವಂದು. ಈ ಬ ೧ವು ಸ್ಥಿರವಾರ ಕೆಂಗೆರೆಬಾಗೆ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಜಾತಿ ವಿವರ: ಸಾರಂಗ ಇಪ್ಪತ್ತನಾಲ್ಕು, ಕಡವೆ ಹದಿನೈದು, ಕುರಂಗಿ ಯರಡು, ಕೂರಹಂದಿ ವಂದು, ಕಾಟಿ ವಂದು, ಅಂತು ನಾಲ್ವತ್ತ ಮೂರಕ್ಕೆ; ಮಹಾರಾಜರು ಇಟ್ಟದ್ದು ಸಾರಂಗ ಯರಡು, ಕಾಟಿ ವಂದು. ಬಹುಳ ೨ ಯೂ, ಭಾನುವಾರ, ಹಾದರೆ ಬೆಟ್ಟದ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ಧ ಮೃಗಗಳ ವಿವರ: ಸಾರಂಗ ಯರಡು, ಕಡವೆ ಯೇಳು, ಹಂದಿ ಮೂರು, ಕರಡಿ ವಂದು, ಕುರಂಗಿ ವಂದು, ಕೂರಹಂದಿ ವಂದು, ಅಂತು ಹದಿನೈದಕ್ಕೆ; ಕೊಡಗಿನ ಧಾರೆಗಳು ಇಟ್ಟದ್ದು ಕರಡಿ ವಂದು: ಈ ಬ ೩ ಯೂ ಚಂದ್ರವಾರ, ಕಾಜೂರ ಕನಗೆ ಕಾಡಲ್ಲಿ ಬೇಟೆ ಆಡಿದಲ್ಲಿ, ಬಿದ್ದ ಮೃಗಗಳ ವಿವರ: ಸಾರಂಗ ಇಪ್ಪತ್ತೆರಡು, ಕಡವೆ ಮೂವತ್ತೊಂದು, ಹಂದಿ ವಂದು, ಕುರಂಗಿ ಯೇಳು, ಕೂರಹಂದಿ ಐದು, ಕಾಟಿ ಹನ್ನೆರಡು, ಕಾಡ ಹೆಬ್ಬಳಿ ವಂದು, ಅಂತು ಎಪ್ಪತ್ತವಂಬತ್ತಕ್ಕೆ; ಕೊಡಗಿನ ಮಹಾರಾಜರು ಇಟ್ಟದ್ದು: ಸಾರಂಗ ವಂದು, ಕಾಟಿ ವಂದು, ಕಡವೆ ಆರು, ಹೆಬ್ಬಳಿ ವಂದು, ಅಂತು ವಂಬತ್ತು. ಬ ೪ ಯೂ ಮಂಗಳವಾರ ಗಂಜಿಗುಳಿ ಕಾಡಲ್ಲಿ ಬೇಟೆ ಆಡಿದಲ್ಲಿ, ಮೃಗಜಾತಿಗಳು ಬಿದ್ದ ವಿವರ: ಸಾರಂಗ ವಂಬತ್ತು, ಕಡವೆ ಹತ್ತು, ಕೂರಹಂದಿ ವಂದು, ಅಂತು ಇಪ್ಪತ್ತಕ್ಕೆ; ಸ್ವಾದೆ ರಾಜರು ಇಟ್ಟದ್ದು ಕಡವೆ ವಂದು. ಅಂತು ಬೇಟೆ ಹನ್ನೆರಡಕ್ಕೆ ಬಿದ್ದ ಮೃಗಜಾತಿಗಳು, ಆರುನೂರ ಇಪ್ಪತ್ತೆಂಟು ಬಿದ್ದು ಹೋಯಿತು. ಈ ಮೇರೆ ಬೇಟೆ ಆಡಿ ಕೊಂಡು, ಮಹಾರಾಜರು ಅರಮನೆಗೆ ಬಂದರು. ಧಾರೆಗಳವರು ಮೊದಲು ಬೇಟೆ ಆಡಿದ್ದರಲ್ಲಿ ವಂದೊಂದು ಬೇಟೆ ವಳಗೆ ನೂರು ನೂರ ಇಪ್ಪತ್ತೈದು ಪರಿಯಂತರ ಮೃಗಜಾತಿಗಳು, ವಂದೊಂದು ಬೇಟೆ ವಳಗೆ ಯೆಂಟು ವಂಬತ್ತು ಆನೆ, ಮೂರು ನಾಲ್ಕು ಹೆಬ್ಬುಲಿಗಳು ಸಹಾ ಬಿದ್ದು ಇದೆ. ಆದಾಗ್ಯೂ ವಳಗೆ ಬರದ ಮೇರೆ, ವಂದು ಬೇಟೆಯಲ್ಲಿ ಹನ್ನೆರಡು ಗಂಟೆ ಮೇಲೆ ಮೂರು ಗಂಟೆ ವಳಗೆ ವಂದು ಜಾವ ಹೊತ್ತಿನಲ್ಲಿ ಇಪ್ಪತ್ತಾರು ಆನೆ ನಮ್ಮ ಬೇಟೆ ವಳಗೆ ಶಿಕ್ಕಿಯೂ ಇಲ್ಲಾ, ಈ ಮೇರೆ ಶಿಕ್ಕಿದಂಥಾದ್ದು, ಕೇಳಲೂ ಇಲ್ಲಾ. ಇದು ಬಹಳ ಆಶ್ಚರ್ಯವಾದಂಥಾದ್ದು, ಶಿವ ಸಂಕಲ್ಪದಿಂದಾ ಶಿಕ್ಕಿದ್ದೇ ಹೊರತು, ಮನುಷ್ಯಯೋಚನೆಯಿಂದಾ ಆದಂಥಾದಲ್ಲಾ. ಮುಂದು ಶಿಕಾರಿ ಮೇಲೆ ಬಹಳ ಪ್ರೀತಿ ಇರುವಂಥಾವರು ಬೇಟೆ ಆಡಿದರೆ, ವಂದು ಜಾವದ ವಳಗೆ ಇಪ್ಪತ್ತಾರು ಆನೆ ಶಿಕ್ಕಿ ಬಿದ್ದು ಹೋಗುವಂಥಾದ್ದು ಬಹಳ ಪ್ರಯಾಸವಾದ್ದೀತು. ಆದ್ದರಿಂದಾ ಈ ಆನೆಗಳ ತಲೆಗಳನ್ನು ತರಿಸಿ, ಯಡವನಾಡ ಕಲ್ಲೂರಿನ ಸ್ವಾಮಿವಾರ ಪ್ಯಾಟೆ ಮುಂದೆ ಕಟ್ಟೆಯನ್ನು ಕಟ್ಟಿಸಿ, ಆ ಕಟ್ಟೆಯ ಮೇಲೆ ಇಪ್ಪತ್ತಾರು ಆನೆ ತಲೆಗಳನ್ನು ಮಡಗಿಸಿ, ಆನೆತಲೆಕಟ್ಟೆ ಯೆಂಬದಾಗಿ ಹೆಸರು ಮಡಗಿ, ಈ ಇಪ್ಪತ್ತಾರು ಆನೆಗಳ ಬಾಲವನ್ನು, ನಿಶಾನಿ ಕೊಡುವ ಉದ್ದಿಶ್ಯ, ಇಂಗರೇಜ ಸರದಾರರು, ಮೆಸ್ತರ ಟ್ಯೂರಿಯನ್ ಸಾಹೇಬರು, ಬೆಲ್ ಸಾಹೇಬರು, ಹಾರ್ಕಿನ್ ಸಾಹೇಬರು ಸಹಾ ನೋಡುವ ಬಗ್ಯೆ, ವೀರರಾಜೇಂದ್ರ ಪ್ಯಾಟೆಯಲ್ಲೂ ಅವರು ಇಳಿದು ಇದ್ದಲ್ಲಿಗೆ, ಕಳುಹಿಸಿ ಕೊಟ್ಟರು. ಈ ಬೇಟೆಯಲ್ಲಿ ಮಹಾದೇವನ ಅಪ್ಪಣೆಯಿಂದಾ ಈ ಪ್ರಕಾರ ಆದಂಥಾದ್ದು ಯೆಂತಾ ತಿಳಿವ ಬಗ್ಯೆ, ಈ ಸಾಧನದಲ್ಲೂ ಬರಸಿ ಮಡಗಿ ಇದೆ.

ಇಂಥಾ ಸಂತೋಷದಲ್ಲಿ ಮಹಾರಾಜರವರು ಅರಮನೆಯಲ್ಲಿ ಇರುತ್ತಾ ಇರುವಾಗ್ಯೆ, ಸನ್ ೧೨೨೧ನೆ ಹಿಜರಿ ಜಮಾದಿಜ ತಿಂಗಳು ೧೮ನೆ ತಾರೀಖಿನಲ್ಲು, ಬಂಗಾಳದ ಗವರ್ನರ್ ಜನರಾಲ್ ಅಷ್ರಫುಲ್ ಉಮರಾ ಸರ್ ಜಾರಿಜ ಹಿಲರಾ ಬಾಲು ಬಾರಂತು ಸಾಹೇಬ ಬಹಾದ್ದರವರು[1] ಬರಸಿ ಕಳುಹಿದ ಕಾಗದದಲ್ಲಿ: ಮೊದಲು ಇಂಗರೇಜಿಯವರ ವಿಲಾಯಿತಿಯಲ್ಲಿ ಇಂಗರೇಜ ಬಹಾದ್ದರ ಸರಕಾರಕ್ಕೂ, ಫರಾಶೀಸರ ಸರಕಾರಕ್ಕೂ, ಅದರ ಸಂಗಡ ಇರುವ ಇಸ್ಪಾನೆಯುಲ್[2] ಅವರ ಜಾತಿಯವರಿಗೂ, ಕೆಲವು ದಿವಸದಿಂದಾ ಲಡಾಯಿದ ಬೆಂಕಿ ಉರಿಯುವಂಥಾ ವರ್ತಮಾನ ತಮಗೆ ಕೇಳ ಪಟ್ಟು ಇದ್ದೀತು. ಇದು ನಿಶ್ಚಯವಿದೆ. ಈಗ ನಾವು ಬಹಳ ಖುಷಿಯಿಂದಾ ತಮಗೆ ಮಾಲೂಂ ಆಗ ಬೇಕು ಯೆಂತಾ, ಜಾಹೀರು ಮಾಡುತ್ತೇವೆ. ಈ ಸಂತೋಷ ಕೂಡಿ ಇರುವ ದಿವಸಗಳಲ್ಲಿ ಈ ವರ್ತಮಾನ ನಿಶ್ಚಯ ತಲಪಿ ಇದೆ. ಅಕಟೋಬರ ತಿಂಗಳಲ್ಲಿ ಇಸ್ಪಾನೆಯುಲ್ಲರ ಸೀಮೆ ಸಮುದ್ರದ ಕಿನಾರೆ ಕ್ಯಾಪು ಯೆಂಬ ಬೆಟ್ಟದ ಸಮೀಪ, ರೂಮಿನ ಸಮುದ್ರದ ಮುಖದಲ್ಲಿ, ಫರಾಶಿಸ ಇಸ್ಪಾನೆಯುಲ್ಲರದು ಸಹಾ, ಲಡಾಯಿದ ದೊಡ್ಡ

1 Sir G. Barlow. 2 Spaniard.

ಜಹಾಜ ಮೂವತ್ತ ಮೂರರ ಸಂಗಡ ಇಂಗ್ಲಿಸ್ಥಾನದ ಪಾದಷಾಹ ಜಂಜಾಃ ಕೆಂಪಾನೆ ಬಾರಗಾಹಾರವರ ಸರಕಾರದ ಇಪಪತ್ತೆಳು ಜಹಾಜ ಸಮುದ್ರದಲ್ಲಿ ಲಡಾಯಿ ಮಾಡುವಂಥಾ, ನಾದರ ಸರದಾರ ಕೆಲವು ವರುಷದ ಮುಂದೆ ಬಕರ ಬಂದರದಲ್ಲಿ, ರಾಜಕ್ತನ ಷಹರಿನ ಸಮೀಪದಲ್ಲಿ, ನ್ನೀಲ್ ನದೀ ಮುಖದಲ್ಲಿ, ಫರಾಶಿಸರ ಜಹಾಜಗಳ ಮೇಲೆ ಮೊದಲು ಫತ್ತೆ ಮಾಡಿ ಇದ್ದರು. ಅಹಗೂ ಸದರಿ ಫರಾಶೀಸ ಮುಂತಾದವರ ಜಹಾಜಿಗೂ ಲಡಾಯಿದ ಬೆಂಕಿ ಹಾತ್ತಿ, ವಳಗೆ ಯರಡು ಜಾವ ಪರಿಯಂತ್ರ ಭಾರಿ ಲಡಾಯಿವಾಗಿ, ಕಡೆಗೆ ಮಹಾದೇವನ ಮದತ್ತಿನಿಂದಲೂ ಪಾದಷಾಹಾರವರ ದೌಲತ್ತಿನ ಬರಕತ್ತಿನಿಂದಲೂ ದುಷ್ಮನರ ಹಾತ್ತೊಂಬತ್ತು ಜಹಾಜಂನು ಫತ್ತೆ ಮಾಡುವಂಥಾ ಜಮೂಮದ್ದಿ ಜನರ ಕೆಗೆ ಶಿಕ್ಕಿತು. ಮತ್ತೆ ಗಳಿಗೆ ಮೇಲೆ ಐದು ಜಹಾಜ ಮುರಿದು, ಸಮುದ್ರದಲ್ಲು ಮುಳುಗಿ ಹೋಯಿತು. ಇದಲ್ಲದೆ ಮತ್ತೊಂದು ಜಹಾಜಿನಲ್ಲಿ ಬಾರೂದಿಗೆ ಬೆಂಕಿ ಹಾತ್ತಿ ಬೆಂದು ಹೋಯಿತು. ಆ ಫರಾಶೀಸರ ಜಹಾಜಗಳ ಯಾವತ್ತು ಸರದಾರು, ಅವರ ತಾಬೆ ವಳಗೆ ಇರುವ ಇಬ್ಬರು ಸರದಾರರು ಸಹಾ, ಇಂಗ್ರೇಜ ಬಹಾದ್ದರ ಜಮೂಮದ್ದಿ ಜನರ ಕೆಗೆ ಶಿಕ್ಕಿದರು. ಇಸ್ಪಾನೆಯುಲ್ಲರ ಜಹಾಜಿನ ಸರದಾರನಿಗೆ ದೊಡ್ಡ ಜಖಮಿ ಆಗಿ, ಆ ದುಷ್ಮನರ ಜಹಾಜಗಳು ಸರಕಾರದ ಬಹಾದ್ದರ ಜನರ ಕೆಗೆ ಶಿಕ್ಕಿದವು. ಆ ವಂದೊಂದು ಜಹಾಜಗಳಲ್ಲಿ ಯಪ್ಪತ್ತನಾಲ್ಕು ಫಿರಂಗಿಗೆ ಕಡಮೆ ಇರಲಿಲ್ಲಾ. ಅದರಲ್ಲಿ ಮತ್ತು ಇಸ್ಪಾನೆಯುಲ್ಲರ ವಂದು ಜಹಜ ಬಹಳ ದೊಡ್ಡದು. ಅದರಲ್ಲಿ ನೂರಮೂವತ್ತಾರು ಫಿರಂಗಿ ಇತ್ತು. ಆ ಯಾವತ್ತೂ ಜಹಾಜಗಳ ಫಿರಂಗಿಗಳು ಇಂಗ್ರೇಜ ಬಹಾದ್ದರ ಸರಕಾರದ ದೌಲತ್ತಿನ ಪತಹಾಮಂದ ಹಾಯ್ಯೆಬ ಜನರ ಕೆಗೆ ಶಿಕ್ಕಿದ್ದು ಲೆಕ್ಕವಾದಲ್ಲಿ, ಸಾವಿರದ ಆರನೂರ ಹಾದಿನಾಲ್ಕು ಫಿರಂಗಿ ಇತ್ತು. ಈ ಮೇರೆ ಮುರಿದು ಹೋದ್ದರಿಂದಾ, ಫರಾಶೀಸರ ಜಾತಿಯವರಲ್ಲಿ ಜಾಜಗಳ ಫೌಜಿನ ಪರಯತ್ನ ಬಾಕಿ ಇರಲಿಲ್ಲಾ. ಮುಂದೆ ಇಂಗ್ರೇಜ ಬಹಾದ್ದರ ಸರಕಾರದ ಇಲಾಖೆ ದೂರದಲ್ಲಿ ಇರುವ ಶೀಮೆಗೆ ಹೋಗುವ ಅಪೇಕ್ಷೆಗೆ ಅಡ್ಡುಷ್ಟಬಿಲ್ಲದೆ ಹೋಯಿತು. ಬಹಾದ್ದರ ಜನರ ಧೀರತ್ವ ಪರಾಕ್ರಮಪರಯತ್ನ ಜಾಗ್ರತ ಈ ಲಡಾಯಿದಲ್ಲಿ ಫೌಜಗಳಿಂದಾ ಜಾಹೀರಾಯಿತು. ಇದರ ತಾರೀಫು ಹೇಳುವದಕ್ಕೆ ಹೊರೆಟ್ಟಾಗಿ ಇದೆ. ಈ ಜಯಿಪ್ರದ ಪಾದಷಾಹಾರ ದೌಲತ್ತಿನ ಹಾಯ್ಯೆಬ ಜನರಿಗೆ ಜಾಹೀರಾಯಿತು. ಇದು ಮಹಾದೇವನ ಕಟಾಕ್ಷದಿಂದಲೂ ಪಾದಷಾಹಾರ ರುಸ್ತುಂಮಿನ್ನಾಹಾದಿ ಫೌಜಗಳ ಮೆಹನತ್ತಿನಿಂದಲೂ ಆಗಿ ಇದೆ. ಇಂಗ್ರೇಜ ಬಹಾದ್ದರರ ಜಯಪ್ರದವಾದ ಸರಕಾರದ ಯಾವತ್ತೂ ಜನರ ನೇಕುನೀಯತ್ತಿನಿಂದಾ ಆಗಿ ಇದೆ. ಯಾವಾಗ್ಯೂ ಆಗದಂಥಾ ಈ ಆಶ್ಚರ್ಯದ ಜಯವಾದ ಸಂತೋಷದ ವರ್ತಮಾನ ಇಂಗ್ರೇಜ ಬಹಾದ್ದರ ಸರಕಾರದ ಕಷ್ಟೆಮಲಾತ್ತ ಹೋರಸುವಂಥವರಿಗೂ, ತಾವು ಹಾಮೇಷ ಇಂಗ್ರೇಜ ಬಹಾಷದರ ಸರಕಾರದ ಕಾರ್ಯಗಳಂನು ಖೈರಖಾಯಿಯಿಂದಾ ಖೈರು ಅಂದೇಶಿಯಿಂದಾ ತಾವು ಮಾಡಿ ಇರುವಂಥಾದ್ದು ಜಾಹೀರಾಗಿ ಇರುವದರಿಂದಾ, ಈ ವಿವರ ತಿಳಿದು, ಖಾಸಾ ತಮಗೂ ಬಹಳ ಖುಷಿ ಆದೀತು ಯಂಬದರಿಂದಾ, ಈ ಸಂತೋಷದ ವರ್ತಮಾನ ಬರದು ಕಳುಹಿಸಿ ಇದ್ದೇವೆ. ಈ ವರ್ತಮಾನ ಕೇಳಿದಲ್ಲಿ, ತಂಮನಸಿಗೆ ಸಂತೋಷವಾದೀತು„ ಯಂಬದಾಗಿ, ಬರೆಸಿ ಕಳುಹಿಸಿ ಇದ್ದರು.

ಇದಕ್ಕೆ ಜವಾಬು: ಕ್ಷಯ ಸಂವತ್ಸರದ ಚೈತ್ರ ೨೫ನೆ ತಾರೀಕಿನಲ್ಲು ಮಹಾರಾಜರವರು ಬರೆಸಿ ಕಳುಹಿದ ಕಾಗದದಲ್ಲಿ: "ಇಂಗ್ರೇಜ ಬಹಾದ್ದರ ಕುಂಪನಿ ಸರಕಾರಕ್ಕೆ ಆಶ್ಚರ್ಯವಾದಂಥಾ ಜಯಪ್ರದವಾದ ವರ್ತಮಾನ ತಿಳಿದು, ನಂಮನಸಿಗೆ ಬಹಳ ಅತಯಂತ ಹಾರುಷವಾಯಿತು. ಇಂಥಾ ಖುಷಿ ನಮಗೆ ಯಂದಿಗೂ ಆದ್ದಿಲ್ಲಾ. ಇಂನು ಮುಂದೂ ಇದ್ದೇ ಮೇರೆ ದಿನ ದಿನಕ್ಕೆ ಇದಕ್ಕಿಂತಲೂ ದೊಡ್ಡ ದೊಡ್ಡ ಜಯಪ್ರದವಾಗಿ ಕುಂಪನಿ ಇಂಗ್ರೇಜ ಬಹಾದ್ದರ ಸರಕಾರಕ್ಕೆ ದೌಲತ್ತು ವರ್ಧನೆ ಆಗಿ ಬರ ಬೇಕು ಯಂಬದಾಗಿ, ಮಹಾದೇವನಿಗೆ ಕೆಂಪಡ್ಡಿ, ಬೇಡಿ ಕೊಳ್ಳುತ್ತಾ ಇದ್ದೇವೆಂಬದಾಗಿ, ಬಹಳ ವಿವರವಾಗಿ ಬಲು ಚೆಂನಾಗಿ ಬರೆಸಿ ಕುಹಿದರು.

ಆ ಬಳಿಕ ಇದ್ದೇ ಸಂವತ್ಸರದ ಪುಷ್ಯ ಮಾಸದಲ್ಲು, ಹೆಚ್ಚಿ ಅರಸಿನ ಕಡೆ ದೊಡ್ಡ ಕಾರೆಕಾರ ಯಂಮೆನಾಯರು ಯಂಬವನು ಕುಂಪನಿ ಸರಕಾರಕ್ಕೆ ತುಂಟನಾಗಿ ಕಾಡು ಶೇರಿ ಕೊಂಡು, ಜನರ ಪರ್ಜಾ ಹಿಂಸೆ ಮಾಡುತ್ತಾ ಇದ್ದದರಿಂದಾ, ಅವನಂನು ಇಂಗ್ರೇಜ ಬಹಾದ್ದರ ಸರಕಾರದ ಶಿಪಾಯಿಗಳು ಹುಡಿಕಿದಾಗ್ಯೂ, ಶಿಕ್ಕದೆ ಇದ್ದದರಿಂದಾ, ಈ ವರ್ತಮಾನ ಮಹಾರಾಜರು ಕೇಳಿ, ಆ ಯಂಮೆನಾಯರು ಯಂಬವನು ನಂಮ ಕೊಡಗಿನ ಶೀಮೆ ಸರಹಾದ್ದಿನ ವಳಗೆ ಬಂದರೆ, ಅವನಂನು ಹಿಡಿದು ಕಳುಹುವದು ಯಂಬದಾಗಿ, ತಂಮ ಶೀಮೆ ಗಡಿ ಸರಹಾದ್ದಿನ ಉಕ್ಕಡದ ಹವಾರೆ

ದವರಿಗೆ ಅಪ್ಪಣೆ ಕೊಟ್ಟು ಇದ್ದಲ್ಲಿ, ಕೊಡಗಿನ ಸೀಮೆ ಬೇನಾಡು ಸೀಮೆ ಕೂಡಿದ ಸರಹದ್ದಿನ ಬಳಿಯ ಆ ಯಂಮೆನಾಯರು, ಒಂದು ಹೆಂಗಸು ಸಂಗಡ ನಾಯರು ಜನ ಮೂರು ಸಹಾ ಬಂದು ಇದ್ದಲ್ಲಿ, ಆ ಉಕ್ಕಡದ ಪಹರೆದವರು ಹಿಡಿದು, ಪುಷ್ಯ ಮಾಸದಲ್ಲಿ ಮಹಾರಾಜರ ಬಳಿಗೆ ತಂದು ಒಪ್ಪಿಸಿದ್ದರಿಂದಾ, ಅವನ ಕಾಲಿಗೆ ಬೇಡಿ ಹಾಕಿ, ಪಹರೆದಲ್ಲು ಮಡಗಿಸಿ, ಮಲೆಯಾಳಿ ಕಮೀಶಂನ್ ವಾರಡಿನ್ ಸಾಹೇಬರವರಿಗೆ[1] ಬರೆಸಿ ಕಳುಹಿದ ವಿವರ: "ಯಂಮೆನಾಯರು ಯಂಬವನು ಸಿಕ್ಕಿದರಿಂದಾ, ಅವನ ಕಾಲಿಗೆ ಬೇಡಿ ಹಾಕಿಸಿ, ಪಹರಾದಲ್ಲು ಇಟ್ಟು ಇದ್ದೇವೆ. ಅವನ ಸಾಗಿಸಿ ಕೊಂಡು ಹೋಗುವ ಬಗ್ಯೆ, ಸಿಪಾಯಿಗಳ ಕಳುಹ ಬೇಕೆಂಬದಾಗಿ," ಬರೆಸಿ ಕಳುಹಿದಲ್ಲಿ, ಅದಕ್ಕೆ ಜವಾಬಾಗಿ ಆ ಕಮೀಶಂನ್ ಸಾಹೇಬರವರು ಬರೆಸಿ ಕಳುಹಿದ ಕಾಗದದಲ್ಲಿ: "ಯಂಮೆ ನಾಯರನು ಒಂದು ಹೆಂಗಸು ಸಂಗಡ ಇರುವ ಮೂರು ಜನರ ಸಹಾ, ಹಿಡಿಯ ಬೇಕು ಯಂಬದಾಗಿ, ಹಲವು ಮಾಡಿ, ಪ್ರಯತ್ನ ಪಟ್ಟು ಇರುವಲ್ಲಿ, ಈ ವರೆಗೂ ಸಾಧ್ಯವಾಗದ ಕಾರ್ಯ, ಕುಂಪನಿ ಸರಕಾರಕ್ಕೆ ಪರಮ ಅಂತಃಕರಣ ಪೂರ್ವಕವಾಗಿ ಶ್ರೇಯಸ್ಸನ್ನು ಹಾರೈಸುವಂಥಾ ಪರಮ ಮಿತ್ರ ಶಿರೋಮಣಿಗಳಾದ್ದರಿಂದಾ, ಈ ಕಾರ್ಯ ತಮ್ಮಿಂದಾ ಸಾಧ್ಯವಾಯಿತು. ಇದೇನೂ ನೂತನವಲ್ಲಾ. ಇದಕ್ಕೂ ವಿಶೇಷವಾಗಿ ಪೂರ್ವೋತ್ತರ್ಯವಾಗಿ ಕುಂಪನಿ ಸರಕಾರಕ್ಕೆ ಸಾಭಿಮಾನವಾದಂಥಾ ಅನೇಕ ಕಾರ್ಯಗಳೆಲ್ಲಾ ತಮ್ಮ ಮಿತ್ರತ್ವದಿಂದಾ ಜಯಪ್ರದವಾಗಿ ಬರುವ ಕಾರಣ, ಕುಂಪನಿಯಲ್ಲು ತಮ್ಮ ಯಶಸ್ಸು ಗುಣವರ್ಧನೆಗಳು ದಿನೇ ದಿನೇ ಅಭಿವೃದ್ಧಿ ಆಗಿ ಬರುವದೆ ಅನುಮಾನವಿಲ್ಲಾ. ಮದುರಾಜಿನ ಜನರಾಲ್ ಗವರ್ನರ್ ಬೆಂಟಿಂಗ್ ಸಾಹೇಬರವರಿಗೂ ಶ್ರುತವಾಗಿ ಇರುವ ಕಾರಣ, ಈ ಸಂತೋಷದ ವರ್ತಮಾನಗಳಂನು ಬರೆಸಿ ಕಳುಹಿಸಿ ಇದ್ದೇವೆ. ಈ ವರ್ತಮಾನವೆಲ್ಲಾ ಸರಕಾರ ಕುಂಪನಿಯಲ್ಲು ದಾಖಲಾದಾಕ್ಷಣ ತಮ್ಮ ಪ್ರಕಾಶಗಳು ಅಧಿಕಾನು ಅಧಿಕವಾಗಿ ಇರುವದು. ಈ ಯಂಮೆನಾಯರವನ ತರುವ ಬಗ್ಯೆ, ಗಾರದಿ ಪಹರೆದ ಜನವಂನು ಕಲ್ಲು ಹಾಳೆ ಬಳಿಗೆ ಕಳುಹಿಸಿ ಇದ್ದೇವೆ. ಈ ಜನರ ಸಂಗಡ ಕೂಡಿಸಿ ಕಳುಹಿಸಿ ಕೊಡ ಬೇಕು." ಯಂಬದಾಗಿ, ಬರೆಸಿ ಕಳುಹಿಸಿದ್ದರಿಂದಾ, ಆ ಯಂಮೆನಾಯರು, ಅವನ ಹೆಂಡತಿ, ಆ ಮೂರು ಜನ ನಾಯಿಮಾರರ ಸಹಾ, ಆ ಗಾರದಿ ಸಿಪಾಯಿಗಳ ಸಂಗಡ ಕೂಡಿಸಿ, ವಾರಡಿನ್ ಸಾಹೇಬರವರ ಬಳಿಗೆ ಕಳುಹಿಸಿದರು.

ಈ ಮೇರೆ ಈ ಸಾಧನದಲ್ಲಿ ಬರದು ಇಟ್ಟಂಥಾದಂನು ಕಾಲಾನು ಕಾಲಕ್ಕೂ ಮಹಾರಾಜರವರು ಆಲ್ ಅವಲಾದ್ ತಿಳಿಯುವ ಬಗ್ಯೂ, ಈ ವಿವರಗಳು ಶಾಶ್ವತವಾಗಿ ಇರುವ ಬಗ್ಯೆ, ಬರೆಸಿ ಕಾಹಿದ್ರೀ ಬಗ್ಯೆ, ಖಾಸಾ ದಸ್ತಕತು ಮೋಹರ ಮಾಡಿ, ಮಡಗಿ ಇದೆ. ಈ ಸಾಧನದಲ್ಲಿ ಕಲಿ ಸಂದ ೪೯೧೩ ನೆ ಆಂಗೀರಸ ಸಂವತ್ಸರದಾರಭ್ಯ, ಕಲಿ ಸಂದ ೪೯೩೪ ನೆ ವಿಜಯ ಸಂವತ್ಸರದ ಜ್ಯೇಷ್ಟ ಶು ೭ ಯೂ ಶುಕ್ರವಾರದ ವರೆಗೆ, ವರುಷ ನೂರ ಯಿಪ್ಪತ್ತೊಂದು, ತಿಂಗಳು ಯರಡು, ದಿವಸ ಯೇಳು, ಆಗುತ್ತದೆ. ಇದರ ಒಳಗೆ ಕೊಡಗಿನ ಸಂಸ್ಥಾನದಲ್ಲಿ ಧಾರತನ ಮಾಡಿ ಬಂದಂಥಾದರ ವೃತ್ತಾಂತ ಪರಾಕು ಸಾಧನದ ದಾಖಲೆಯಿಂದಲೂ, ತಮ್ಮ ದಿವಸದಲ್ಲಿ ಈ ವರೆಗೆ ನಡದಂಥಾ ವೃತ್ತಾಂತ ಯಾವತ್ತಂನು, ವೀರರಾಜೇಂದ್ರ ಒಡೆಯರವರು ಅಪ್ಪಣೆ ಕೊಟ್ಟು, ಬರಸಿ ಮಡಗಿ ಇದ್ದಾರೆ, ಯಾಗಿ:—

---

[1] Mr. Warden.

ಸಮಾಪ್ತಿ.

PRINTED BY G. PLEBST, GERMAN MISSION PRESS, MANGALORE.

# RÁJÉNDRANÁMÉ,

OR

# HISTORY OF COORG,

COMPILED BY ORDER OF VÍRARÁJÉNDRA VO*D*EYA,

WITH AN ENGLISH TRANSLATION

BY

LIEUT. R. ABERCROMBIE,

DATED MANGALORE 10TH AUGUST 1808.

PRINTED FOR THE GOVERNMENT OF FORT ST. GEORGE.



MANGALORE:
PRINTED BY G. PLEBST, GERMAN MISSION PRESS.
1857.

The Rájéndranáme, an autobiography of the so called Great Víraráj́éndra Vo*d*eya of Coorg, composed under the chief's own superintendence, and translated for him by Lieut. R. Abercromby at Mangalore in the year 1808, is a Canarese prosework of considerable merit. It is published at the expense of the Government of Fort St. George, from an Original preserved in the Superintendent's Office at Mercara, and kindly lent to the Editor by the Commissioner for the Affairs of Mysore and Coorg, Lieut. General Sir Mark Cubbon K. C. B. The original of the English translation was obtained from the Records of the Commissioner's office at Bangalore. Though it is neither exact* nor elegant, it will greatly assist the student in his progress through the Canarese text.

The style of the Rájéndranáme is generally simple, often lively, sometimes forcible and pathetic, and throughout far superior to the language used in Courts and Cutcherries. The student will be rewarded for the diligent perusal of the book by an extensive knowledge and comparative mastery of the Canarese language in its present phasis.

The orthography of the original has been purified of evident blunders committed by the copyist, but left unaltered in the main. Short notes have been added for the assistance of beginners.

The historical value of the work is not great. The author takes care to omit every fact likely to damage his reputation, such as his conversion to Mohammadanism, his tributary dependence on the Mysore rulers, his cruelties against his subjects and his own relatives, and forgets nothing which is calculated to raise his character in the eyes of his European friends. Towards the close of the book the poor Rajah strongly displays his increasing anxiety to secure the succession to the musnud, the life and the property of his favorite daughter Dévammáji. He died trusting to the faithfulness of the East India Company's Government for the fulfilment of his last wishes; alas! in vain. The musnud, the property and the life of the unfortunate princess were gradually abandoned by successive Governors Generals to the perfidy and rapacity of usurpers. She was robbed of a treasure worth one lac of pagodas and afterwards strangled, with a sister of hers, in the Fort of Mercara, a short time before the occupation of Coorg by the Company. The present Exrajah now claims the property invested in Company's paper by the old Víraráj́éndra as a legacy to his ill-fated daughter, and has raised a chancery suit against the Court of Directors, which would have no chance of success whatever, did not the grossest ignorance still prevail at home upon the facts of the case. A comparison, of the last paper of Abercromby's authentic version and the Canarese text, which has been tampered with by Lingaraja or the present Exrajah, (while the English translation, has escaped corruption and represents Víraráj́éndra's own text,) would clear up every doubt on the subject.

The distance of the Editor's residence from the press has been a serious hindrance to the business of publication. The Rev. Dr. H. Gundert and the Rev. H. A. Kaundinya residents at Mangalore have kindly lent their assistance, or the book might have remained unfinished.

A new system of Canarese printing as will be seen at first glance, has been adopted with the permission of the Madras Government.

---

*One mistake, ought to have been corrected: [illegible] (poor people) are set down as Adóni people, as if they had been brought from Adóni, some northern district, now belonging to the Ballary Collectorate.

Every one at all familiar with the mechanism of printing, will see the manifold advantages which are gained by discarding the subscribed or compound characters. The number of types is considerably reduced, the process of composing simplified, and a possibility given of printing much more closely (that is, of putting a greater number of lines on one page);—a threefold saving in type, labor, and paper being thus effected, the difficulties and charges of printing will be less than they have hitherto been.

But—it may be objected, "that nobody writes Canarese in this manner." This we do not deny but we deny the necessity of printing exactly in those characters which happen to be in use at the time when a language first becomes the subject of typography. It is well known that the early European typographers sought the models of their types not in the forms to which the XIVth century had become accustomed, but in those more elegant ones which were to be found in manuscripts of the XIIth; and that the expulsion of all the abbreviations and monograms which abounded in later manuscripts and in the early prints has greatly increased the elegance and intelligibility of books, especially in the Greek language. In a similar manner it is hoped, that, when once the eye is accustomed to the change, those who are familiar with Canarese reading, will find the new system at least as convenient as the old, while those who have to begin, whether Europeans or Natives, will certainly find it easier to learn how to read on the new plan than on the old.

But, from the examples adduced our case differs greatly in this, that the Canarese Alphabet, like most of the Alphabets of this country, is essentially syllabic; that is, its fundamental plan is to express each syllable by one sign or group of signs, the vowel always terminating the syllable and all preceeding consonants being heaped together in vertical order.—Yet, even the Sanscrit Alphabet, which is the most perfect specimen of the class to which the Canarese belongs, does not strictly adhere to this vertical accumulation of consonant signs. In such combinations as pp, py, shm, and very many others, the letters are ranged together horizontally, an arrangement which is much better suited for typography; while the Tamil Alphabet abandons the syllabic composition in so far as the shapes of consonants are affected by it, and, with the exception of a few vowels still attached to the consonants, is printed almost in the same manner as European languages.

The simplicity of the Tamil Alphabet arises partly from the greater purity and completeness with which this language has preserved its antebrahmanical stock of words, and partly from the consistency with which the Sanscrit and other foreign words have been drávidized.

Now, it must be admitted that the Canarese language of the present day is not so well adopted, as the Tamil, for being written or printed in the European way; but we may surely appeal to the precedent of the Sanscrit and its cognate alphabets. What is practicable in these, must likewise be possible in Canarese—and if some of them, the Gujaráthee for instance, have in a great measure abolished the compound letters, and completely freed themselves of all those which exceed the line, at a time when no considerations of typographical expediency could have influenced them, it will surely be justifiable for us to attempt the same thing, when so great advantages are to be gained in typography, seeing that the inconvenience to the reading public is so trifling, that any one who can read will overcome it after an hour's practice.

Mercara 4th February 1858.

H. Moegling.

